ಬಿಸಿಲ
# ಬದುಕು

ದೀಪಾವಳಿ ವಿಶೇಷಾಂಕ '99

ನವೆಂಬರ್ 1999 ಸಂಪುಟ 3 ಸಂಚಿಕೆ 5

## ದೀಪಾವಳಿ ವಿಶೇಷ



## ವಿವಿಧ ಸ್ಪರ್ಧೆಗಳು







## ಓದುಗರ ಅಂಕಣ



## ಹಾಸ್ಯ / ಪ್ರಬಂಧ







## ವಿಶೇಷ ಲೇಖನಗಳು




ಸಂಪಾದಕ : **ಚಂದ್ರಕಾಂತ ವಡ್ಡು**

ಕಾರ್ಯನಿರ್ವಾಹಕ ಸಂಪಾದಕ : **ಎಂ.ಎಲ್. ದೇಶಿಕರ್**

ಸಹಕಾರ : ಲಿಂಗರಾಜು

ಕಲಾವಿದ : ಎಂ.ಎಸ್.ಮೂರ್ತಿ

'ಬದುಕು' ಬಳಗ

ಮಹಿಪಾಲ್ ರೆಡ್ಡಿ, ಗಣಪತಿ ಕೊಡ್ಲೆಕೆರೆ, ಪ್ರಕಾಶ ಬಾಳಕ್ಕನವರ, ಅಶ್ವಥ್, ಸಂಗಮೇಶ ಸುಣಗಾರ, ಚಂದ್ರಕಾಂತ ವಗ್ಗಾ, ಸಿದ್ದಲಿಂಗಸ್ವಾಮಿ, ಎಸ್.ಬಿ.ಮಲ್ಲೂರ, ಗೋಪಾಲಕೃಷ್ಣ ವಂಡ್ಸೆ, ಕೋಕಿಲಾ ವಿ., ಎಚ್.ಆರ್.ವಸ್ತ್ರದ, ಸಿ.ಪಿ. ಸುರೇಶ್, ಪ್ರಕಾಶ ಎಂ. ವಾಲಿ, ರಮೇಶ್ ವಿಟ್ಲಾಪುರ, ಸುಮತಿ ಹಿರೇಮಠ

## ಹೊರನಾಡ ಕನ್ನಡಿಗರ ಬದುಕು







## ಕಥೆಗಳು



## ಕವನಗಳು







## ವ್ಯಂಗ್ಯಚಿತ್ರಕಾರ ಕನ್ನಡಿಗರು







## ಸಿನಿಮಾ





Printed, Published and Owned by Chandrakanta Vaddu, 473, I Cross, I Block, III Stage, Near Water Tank Bus Stop, Basaveshwaranagar, Bangalore - 560 079. Tel : 080 3307810 Pager:9622 738638 Mobile:98440 87433 Editor:Chandrakanta Vaddu

ದೀಪಗಳ ಹಬ್ಬ ನಾಡಿನ ಎಲ್ಲೆಡೆ ಆಚರಿಸುವ ಸಂಭ್ರಮದ ಹಬ್ಬ. ಈ ಆಚರಣೆ ಒಂದೊಂದೆಡೆ, ಒಂದೊಂದು ವರ್ಗ - ಸಮುದಾಯದಲ್ಲಿ ಬೇರೆ ಬೇರೆ ರೀತಿ. ಅಂಥ ಹಲವು ವೈವಿಧ್ಯಮಯ ಆಚರಣೆಗಳ ಪರಿಚಯ ಇಲ್ಲಿದೆ.

# ಕಾಡುಗೊಲ್ಲರ ದೀವಳಿಗೆ



ಸಾಂಪ್ರದಾಯಿಕ ಉಡುಗೆಯಲ್ಲಿ ಗೊಲ್ಲ ದಂಪತಿ

**ಕಾಡುಗೊಲ್ಲರ ಸಂಸ್ಕೃತಿ :** ಕಾಡುಗೊಲ್ಲರು ಕರ್ನಾಟಕದ ಪ್ರಮುಖ ಬುಡಕಟ್ಟುಗಳಲ್ಲಿ ಒಂದು ವಿಶಿಷ್ಟ ಪರಂಪರೆ ಹೊಂದಿದ್ದಾರೆ. ಇವರು ಕರ್ನಾಟಕದಾದ್ಯಂತ ಚದುರಿದಂತೆ ನೆಲಸಿದ್ದರೂ, ಮಧ್ಯ ಕರ್ನಾಟಕದ ಪೂರ್ವದಂಚಿನ ಜಿಲ್ಲೆಗಳಾದ ನೆರೆಯ ಆಂಧ್ರಪ್ರದೇಶಕ್ಕೆ ಅಂಟಿಕೊಂಡಂತಿರುವ ಚಿತ್ರದುರ್ಗ, ತುಮಕೂರು ಭಾಗಗಳಲ್ಲಿ ಅತಿದಟ್ಟವಾಗಿ ನೆಲಸಿದ್ದಾರೆ. ಇಂದಿನ ಅತ್ಯಾಧುನಿಕ ನಾಗರಿಕತೆಯಲ್ಲೂ ತಮ್ಮ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಂಡಿರುವ ಇವರು ಬೇರೆಲ್ಲ ಜನವರ್ಗಗಳಿಗಿಂತಲೂ ಭಿನ್ನರಾಗಿದ್ದಾರೆ.

ಭಾರತದ ಅತ್ಯಂತ ಭವ್ಯವಾದ ಪಶುಪಾಲಕ ಸಂಸ್ಕೃತಿಯ ಹಿನ್ನೆಲೆಯಲ್ಲಿ ಅರಳಿದ ಇವರ ಸಂಸ್ಕೃತಿ ಇಂದಿಗೂ ಒಂದು ಜೀವಂತ ಪಳೆಯುಳಿಕೆಯಾಗಿಯೇ ಉಳಿದಿದೆ. ಇವರ ಸಂಪ್ರದಾಯ, ನಂಬಿಕೆ ಮತ್ತು ಆಚರಣೆಗಳಲ್ಲಿ ಪಶುಪಾಲಕ ಸಂಸ್ಕೃತಿಯೇ ಹಾಸು ಹೊಕ್ಕಾಗಿರುವುದನ್ನು ಗುರುತಿಸಬಹುದು. ಹೀಗಾಗೇ ತಮ್ಮನ್ನು 'ಗೋಕುಲ'ದವರು ಎಂದು ಕರೆದುಕೊಳ್ಳುತ್ತಾರೆ. ತಮ್ಮ

## ಹಾವು ಹಾಲು ಕುಡಿದ ಮೇಲಿಲ್ಲಿ ಹಬ್ಬ ಪ್ರಾರಂಭ!

**ಗೋರಕ್ಷಕ ಸಂತತಿಯ ಪಳೆಯುಳಿಕೆ ನಮ್ಮ ಕಾಡುಗೊಲ್ಲರು. ಅವರು ದೀಪಾವಳಿ ಆಚರಿಸುವ ರೀತಿಯೂ ವಿಶಿಷ್ಟ, ವೈವಿಧ್ಯಮಯ. ಅದನ್ನಿಲ್ಲಿ ಪರಿಚಯಿಸಿದ್ದಾರೆ ಚಳ್ಳಕೆರೆಯ ವಿದ್ವಾಂಸ ಡಾ. ಮೀರಾಸಾಬಿಹಳ್ಳಿ ಶಿವಣ್ಣ**

ಎತ್ತಿನ ಹಬ್ಬಕ್ಕೆ ಅಲಂಕೃತಗೊಂಡ ಬಸವ



ಗೋವುಗಳೊಂದಿಗೆ ಕಾಡುಗಳ ಅಂಚುಗಳಲ್ಲೇ ವಾಸಿಸುವ ಇವರನ್ನು 'ಕಾಡುಗೊಲ್ಲರು' ಎಂದು ಕರೆಯಲಾಗಿದೆ. ಅತ್ಯಂತ ಪವಿತ್ರವಾದ ಗೋಪಾಲನೆಯ ಕಾಯಕ ಮಾಡುವ ಇವರು ತಮ್ಮ ಪಾವಿತ್ರ್ಯವನ್ನು ಕಾಪಾಡಿಕೊಳ್ಳುವ ಸಲುವಾಗೇ 'ಗ್ರಾಮದ್ಬಹಿವಾಸಿ'ಗಳಾಗಿ, ತಮ್ಮದೇ ಜನಗಳಿಂದ ಕೂಡಿದ ಪ್ರತ್ಯೇಕ ಹಟ್ಟಿಗಳಲ್ಲಿ ವಾಸಿಸುತ್ತಿದ್ದಾರೆ. ಅಪರಿಚಿತರ ಪ್ರವೇಶದಿಂದ ಅಪವಿತ್ರವಾಗಬಹುದೆಂದೇ ಹಟ್ಟಿಯ ಸುತ್ತ ಕಳ್ಳಿ ಬೇಲಿಯ 'ಕಂಟಕಾವರಣ'ವನ್ನು ನಿರ್ಮಿಸಿಕೊಂಡಿದ್ದಾರೆ. ಹಟ್ಟಿಯ ಒಳಗೇ ಇರುವ ದೇವರ 'ಗುಖ್ಬ'ಗಳಿಗೂ ಬೇಲಿಯ ರಕ್ಷಣೆ! ಅನೇಕ ಚಿತ್ರವಿಚಿತ್ರಗಳಿಂದ ಗಮನ ಸೆಳೆಯುವ ಕಾಡುಗೊಲ್ಲರ ಜನಪದ ಸಾಹಿತ್ಯ ಮಾತ್ರ ಸಮೃದ್ಧವಾದದ್ದು. ಕನ್ನಡ ಮಾತೃಭಾಷೆಯ ಈ ಬುಡಕಟ್ಟು ಜಾನಪದದ ಒಂದು ಜೀವಂತ ಕೋಶ. ಪಶುಪಾಲಕ ಸಂಸ್ಕೃತಿಯನ್ನು ಚಿತ್ರಿಸುವ ಈರಗಾರರ ನೂರಾರು ಖಂಡ ಕಾವ್ಯಗಳು, ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಎತ್ತಪ್ಪ-ಜುಂಜಪ್ಪನವರನ್ನು ಕುರಿತ ಎರಡು ಜನಪದ ಮಹಾಕಾವ್ಯಗಳ ಮಹಾಕೊಡುಗೆಯೊಂದಿಗೆ, ಈ ಜನಾಂಗದ ಸಂಸ್ಕೃತಿಯ ಸಂಕೇತದಂತಿರುವ ಗಣೆ ಎಂಬ ಸಾಂಸ್ಕೃತಿಕ ವಾದ್ಯವನ್ನೂ ಕೊಟ್ಟ ವಿಶೇಷತೆ ಕಾಡುಗೊಲ್ಲರದು.

ಇಂತಹ ವಿಶಿಷ್ಟ ಸಂಸ್ಕೃತಿಯ ಹಿನ್ನೆಲೆಯಿಂದ ಬಂದ ಕಾಡುಗೊಲ್ಲರು ಆಚರಿಸುವ ಕೆಲವು ಹಬ್ಬಗಳು ಮಾತ್ರ ಅತ್ಯಂತ ವಿಶಿಷ್ಟ (ಉದಾ : ಎತ್ತಪ್ಪನ ಹಬ್ಬ, ಕ್ಯಾತಪ್ಪನ ಪರಿಸೆ ಇತ್ಯಾದಿ). ಬೇರೆಲ್ಲ ಜಾತಿಯ ಜನಗಳು ಮಾಡುವ ಎಲ್ಲ ಹಬ್ಬಗಳನ್ನು ಇವರು ಮಾಡಿದರೂ, ಇವರು ಆಚರಿಸುವ 'ದೀವಳಿಗೆ' ಮಾತ್ರ ಹಲವು ಹತ್ತು ದೃಷ್ಟಿಗಳಿಂದ ವಿಭಿನ್ನವಾದುದು. ಶಿಷ್ಟ ಜನರು ಆಚರಿಸುವ ಕಿವಿಗಡಚಿಕ್ಕುವ ಪಟಾಕಿ ಆರ್ಭಟದ 'ದೀಪಾವಳಿ'ಗೂ, ಪಶುಪಾಲಕ ಸಂಸ್ಕೃತಿಯ ಹಿನ್ನೆಲೆಯಿಂದ ಕೂಡಿದ ಇವರ 'ದೀವಳಿಗೆ'ಗೂ ಅಜಗಜಾಂತರವಿದೆ.

ಕರ್ನಾಟಕದ ಬೇರೆಲ್ಲ ಜನಪದ ಸಾಂಸ್ಕೃತಿಕ ವೀರರಿಗಿಂತ ಭಿನ್ನವಾದ, ಅತ್ಯಂತ ವಿಶಿಷ್ಟವಾದ, ಭಾರತದ ಪ್ರಾಚೀನ ಗೋಸಂಸ್ಕೃತಿಯ ಪಳೆಯುಳಿಕೆಯೆಂಬಂತೆ ಕಾಣುವ ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಎತ್ತಪ್ಪ, ಜುಂಜಪ್ಪನವರ ಸಾಂಸ್ಕೃತಿಕ ನೆಲೆಗಳಲ್ಲಿ 'ದೀವಳಿಗೆ'ಯನ್ನು ಆಚರಿಸುವ ಪರಿಯಲ್ಲಿ ಪಶುಪಾಲಕ ಸಂಸ್ಕೃತಿಯ ಸಾರವೇ ಅಡಗಿರುವುದನ್ನು ಕಾಣಬಹುದು.

**ಗೂಡಿನ ಹಬ್ಬ :** ಕಾಡುಗೊಲ್ಲರ ಸಂಸ್ಕೃತಿಯನ್ನು ರೂಪಿಸಿದ, ಕಾಡುಗೊಲ್ಲರ ಮೊಟ್ಟ ಮೊದಲ ಸಾಂಸ್ಕೃತಿಕ ವೀರನಿಂದ ಎತ್ತಯ್ಯನ ನೆಲೆಯೊಂದರಲ್ಲಿ (ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಯಲಗಟ್ಟೆ ಗೊಲ್ಲರ ಹಟ್ಟಿ) ನಡೆಯುವ ಹಬ್ಬದ ಮೂಲಕ ಪರಿಶೀಲಿಸಬಹುದು.

'ಗೂಡು' ಅಂದರೆ ರೊಪ್ಪ. ಕಳ್ಳಿ ಬೇಲಿಯ ರಕ್ಷಣೆಯೊಳಗೆ ಇರುವ ಪ್ರಾಣಿಗಳ ಸಮೂಹವನ್ನೇ ಗೂಡು ಎನ್ನುತ್ತಾರೆ. ಆ ಗೂಡಿನೊಳಗಿರುವ

---

# ಕೊಡಗು:

## ಇಲ್ಲಿ ದೀಪಾವಳಿಯೇ ಇಲ್ಲ!

**ಕೊಡಗಿನ ಕವಯಿತ್ರಿ-ಉದ್ಯಮಿ ಮಂಡೀರ ಜಯಾ ಅಪ್ಪಣ್ಣ ಅವರು ನೀಡಿದ ಟಿಪ್ಪಣಿ ಇಲ್ಲಿದೆ.**





"**ಕೊ**ಡಗು" ಎಂಬ ಶಬ್ದ ಕಿವಿಗೆ ಬಿದ್ದ ತಕ್ಷಣ ನಮ್ಮ ಕಣ್ಮುಂದೆ ಕುಣಿದಾಡುವ ಮೊದಲನೇ ದೃಶ್ಯ ಅಲ್ಲಿಯ ಪ್ರಕೃತಿ ಸೌಂದರ್ಯ. ದಟ್ಟಕಾಡುಗಳು (ಈಗ ಈ ದಟ್ಟ ಪದದ ಅವಶ್ಯಕತೆ ಇಲ್ಲವಾಗಿದೆ) ಅದರಲ್ಲಿ ಬಣ್ಣ ಬಣ್ಣದ ಹೂ-ಲತೆಗಳು, ವಿವಿಧ ಬಣ್ಣದ ವಿವಿಧ ಜಾತಿಯ ಪಕ್ಷಿ ಸಂಕುಲಗಳ ಗಾನಮೇಳ, ನಾಡು ಹಾಗೂ ಅರಣ್ಯ ಮೃಗಗಳು; ಕಾವೇರಿಯ ವೈಯ್ಯಾರ ನಾಟ್ಯ ನಿನಾದ ಸಹಿತ ಹರಿದಾಟ. ಕಾಫಿ, ಕಿತ್ತಳೆ, ಜೇನಿನ ಸುಗಂಧ ಕಾಡುಹೂಗಳ ಸಹಿತ ಬೀಸಿ ಬರುವ ತಂಗಾಳಿಯ ನಡುವೆ ಅದೊಂದು ಸುಂದರ ಪ್ರದೇಶ. ಪ್ರಪಂಚದ ಯಾವ ಮೂಲೆಯ ಸಂದರ್ಶಕ ಅಥವ ಆಳದಾಲೋಚನೆಯ ವಿಜ್ಞಾನಿಯ ಮನದಲ್ಲಿ ಸದಾ ಅಚ್ಚಳಿಯದೆ ಸವಿನೆನಪಾಗಿ ಉಳಿಯುವ ಚಿತ್ರ. ವಿಶೇಷವಾಗಿ ಅಲ್ಲಿಯ ಹೆಂಗಸರಿಗೆ ಕಾವೇರಿ ಮುಡುಪಾಗಿ ಬಂದ ಸೀರೆ ಉಡುಪು. ಸಂದರ್ಭೋಚಿತವಾಗಿ ಗಂಡಸರ ವೀರ ವೇಷಭೂಷಣ, ಠಾಕುಠೀಕು ಹಾಗೂ ಇಲ್ಲಿಯ ವಿಶೇಷ ಸಂಸ್ಕೃತಿ (Rich Culture) ಕೊಡಗಿನ ಸಮಾಜದಲ್ಲಿ ಕಡ್ಡಾಯ ಸಂಪ್ರದಾಯಗಳು, ರೀತಿ ರಿವಾಜು, ಪುರಾಣಗಳ ಶ್ರುತಿ ಸ್ಮೃತಿಗಳ ಸುಳಿವೇ ಇಲ್ಲದಿರುವಿಕೆ. ತಿಂಗಳು, ವಾರ, ದಿನವೆಂದು ನೂರಾರು ಹಬ್ಬಗಳು ಇಲ್ಲಿಲ್ಲ. ಅದರಲ್ಲೂ ಭಾರತದಲ್ಲೆಲ್ಲಾ ಪ್ರಖ್ಯಾತ ಪಟಾಕಿ ಹಬ್ಬವಾದ ದೀಪಾವಳಿಯಂತೂ ಈ ಜಿಲ್ಲೆಯಲ್ಲಿಲ್ಲವೆಂದರೆ ಆಶ್ಚರ್ಯವಲ್ಲವೇ? ಕೊಡಗಿನ ಕುಲದೇವಿ ಕಾವೇರಿ ಹುಟ್ಟಿ ಹರಿದ ದಿನ ಪ್ರತಿವರ್ಷ ಅಕ್ಟೋಬರ್ 17ಕ್ಕೆ ತುಲಾ ಸಂಕ್ರಮಣ "ಕಾವೇರಿ ಚಂಗ್ರಾಂದಿ, ಮತ್ತೆ ಭತ್ತ ಪೈರು ನಾಟಿ ಕೆಲಸವಾದ ಹಾಗೆ ಚೀಟಿ (ಈಗ ಇಲ್ಲ) ಹಾಗೂ ಮಾಂಸದೂಟದ ಆಯುಧ ಪೂಜೆ ಸಹಿತ ಹಬ್ಬ "ಕೈಲುಪೊದ್" ನಂತರ ಹೊಂಭತ್ತಕ್ಕೆ ತಿರುಗಿದ ಧಾನ್ಯಲಕ್ಷ್ಮಿಯನ್ನು ಮನೆ ತುಂಬಿಸುವ ಹಬ್ಬ ಹುತ್ತರಿ ("ಪುತ್ತರಿ") ಈ ಮೂರುಹಬ್ಬ ಬಿಟ್ಟರೆ, ಲಿಂಗಾಯಿತ ರಾಜ್ಯಾಡಳಿತಕ್ಕೆ ಹಲವಾರು ವರ್ಷ ಒಳಗಾಗಿದ್ದದರ ಫಲವಾಗಿ ಕೊಡವೇತರರು ಆಚರಿಸುವ ಯುಗಾದಿ, ಗಣೇಶ, ದಸರಾ ಹಬ್ಬಗಳು. ಗ್ರಾಮಾಂತರಗಳಲ್ಲಿ ದೀಪಾವಳಿಯ ವಾಸನೆಯೇ ಇಲ್ಲ. ಪೇಟೆಗಳಲ್ಲಿ ಕೆಲವು ಶೆಟ್ಟಿಗಳು, ಹಾಗೂ ಬ್ರಾಹ್ಮಣರು ಮೂರು ಅಥವ ಐದು ದಿನ ಹೊರಗೆ ದೀಪ ಇಡುವರು. ಇವರಿಗೆಲ್ಲಾ ಪಟಾಕಿ ಗೌಜು ಬರೀ ಹುತ್ತರಿಯಲ್ಲಿ ಮಾತ್ರ. ಈಗ ಹತ್ತಾರು ವರ್ಷಗಳಿಂದ ಅಲ್ಲಿ ಇಲ್ಲಿ ಸ್ವಲ್ಪ ಶಬ್ದ ಬರುತ್ತಿದೆ. ಹೀಗಾಗಿ "ಕೊಡಗಿನಲ್ಲಿ ದೀಪಾವಳಿ" ಎಂಬ ಶಿರೋನಾಮೆ ಇಲ್ಲಿಗೆ ಸರಿ ಹೊಂದುವುದೇ ಇಲ್ಲ. ಕೊಡಗಿನಲ್ಲಿ ಹುಟ್ಟಿ ಬೆಳೆದು ವಿದ್ಯೆಕಲಿತ ಹಾಗೂ ಕಲಿಸಿದ ನನ್ನ ಗುರುಗಳಾದ ಮಕ್ಕಿ ತಿಮ್ಮಪ್ಪಯ್ಯನವರ ಮಗ ರಾಂ ಪ್ರಕಾಶ್‌ರವರು ಹೇಳುತ್ತಾರೆ, (ಬೆಂಗಳೂರಿನ ಕರ್ನಾಟಕ ಬ್ಯಾಂಕ್ ಮ್ಯಾನೇಜರು) "ನಾನು ಚಿಕ್ಕವನಿದ್ದಾಗ ನಾಪೋಕ್ಲಿನಲ್ಲಿ ಬೆಳೆದೆ. ನಮ್ಮ ತಾಯಿ ನರಕ ಚತುರ್ದಶಿಗೆ ಮೊದಲಿನ ರಾತ್ರಿ ಹಂಡೆ ತೊಳೆದು ಹೊಸನೀರು ತುಂಬಿಸಿ ಯಾವುದೋ (ಹೆಸರು ಗೊತ್ತಿಲ್ಲ) ಒಂದು ಬಳ್ಳಿಯನ್ನು ಹಂಡೆಗೆ ಸುತ್ತಿ ನೀರು ಕಾಯಿಸಿ ಮಾರನೆ ದಿನ ಬೆಳಿಗ್ಗೆ ನಾಲ್ಕು ಗಂಟೆಗೆ ಕಡ್ಡಾಯ ಸ್ನಾನ ಹಾಗೂ ಬೆಳಿಗ್ಗೆ ಪಾಯಸ ಇದಿಷ್ಟೇ ದೀಪಾವಳಿಯ ನೆನಪು. ದೀಪ ಪಟಾಕಿಗಳ ರಭಸ ನಮಗೆ "ಪುತ್ತರಿ"ಯಲ್ಲಿ ಮಾತ್ರ ಅನ್ನುತ್ತಾರೆ.

ಇರಲಿ; ರಾಜಕಾರಣಿಗಳ ಅಸಡ್ಡೆಗೀಡಾದ ಕೊಡಗಿಗೆ ಅಭಿವೃದ್ಧಿ ಕಾರ್ಯಗಳು ಬೇಕಾದರೆ ಕರ್ನಾಟಕ ಸರ್ಕಾರದ ಕಿವಿಹಿಂಡಬೇಕಾಗಿದೆ. ಇಡೀ ವಿಶ್ವದಲ್ಲೇ ಅತ್ಯಂತ ಸಂಪದ್ಭರಿತ ವನರಾಶಿಯುಳ್ಳ ಕೊಡಗು ಆರ್ಥಿಕವಾಗಿ ತುಂಬಾ ಶ್ರೀಮಂತ. ವರ್ಷಕ್ಕೆ 600 ಕೋಟಿ ತೆರಿಗೆ ಕೊಡುವ ಈ ಚಿಕ್ಕ ಜಿಲ್ಲೆ ಇಂದು ಸಾವಿರಾರು ಗೊಂದಲಗಳ ತವರೂರಾಗಿದೆ. ಪ್ರತ್ಯೇಕ ರಾಜ್ಯ ಬೇಕೆಂಬ ಹೋರಾಟ. ವಿಶೇಷ ಸಾಂಸ್ಕೃತಿಕ ಬದ್ಧತೆಯ ಮೇಲೆ ಬಿದ್ದ ಕಲ್ಕಿದಾಳಿ, ದಟ್ಟ ಕಾಡಿಗೆ ಕೊಡಲಿ, ಕಾಫಿ ಬೆಲೆ ಏರಿಕೆಯಿಂದಾಗಿ ಐಷಾರಾಮ ಇದರ ಸ್ವರೂಪ ತೀರಾ ಬದಲಾಗಿದೆ. ಹಿಂದೆ ಕೊಡಗು ಸರಕಾರದ ಹುಣ್ಣಿಮೆಯ ದಿನಗಳು ಇಂದು ಅಮವಾಸ್ಯೆಯಾಗಿವೆ. ಕೊಡಗಿನ ಪಾಲಿಗೆ ಕರ್ನಾಟಕ ಸರಕಾರ ಸತ್ತಂತಿದೆ. ಹೀಗಾಗಿ ಕೊಡಗು ಪ್ರತ್ಯೇಕತೆಗಾಗಿ ಕೂಗುತ್ತಿದೆ. ಇದರಿಂದ ಯಾರಿಗೆ ಲಾಭವೋ ಯಾರಿಗೆ ನಷ್ಟವೋ ಅದು ಜನರೇ ಚರ್ಚಿಸಬೇಕಾಗಿದೆ. ಈ ರಾಮಾಯಣ ಇಲ್ಲೇಕೆ ಎಂದು ನೀವು ಕೇಳಬಹುದು. ಹೌದು ಅಂತು. ಇಂತು ದೀಪಾವಳಿ ಹಬ್ಬ ಕೊಡಗಿನಲ್ಲಿ ಯಾವುದೊಂದೂ ಗದ್ದಲ ಮಾಡಿಲ್ಲ ಹಾಗೂ ಮಾಡುತ್ತಿಲ್ಲ. ■

ದನ-ಕುರಿ, ಹಸು-ಕರುಗಳು 'ಹಿಂಡು ಹೆಚ್ಚಲಿ' ಎಂದು ನಡೆಸುವ ಫಲಸಮೃದ್ಧಿಯ ಹಬ್ಬ ಇದು. ಹಳ್ಳಿಗರು ಇದನ್ನು 'ಎತ್ತಿನ ಹಬ್ಬ' ಎಂದೇ ಕರೆಯುತ್ತಾರೆ. ಬೇಸಾಯದ ಬೆನ್ನೆಲುಬಾದ ಎತ್ತನ್ನು ಆರಾಧಿಸುವ ಹಬ್ಬವೇ ಇದಾಗಿದೆ. ಇಂಥ ಎತ್ತುಗಳನ್ನು ಕಾಯುವ ಕಾಯಕದಲ್ಲಿ ನಿರತನಾದವನನ್ನು ಎತ್ತಿನ ಅಪ್ಪ > ಎತ್ನಪ್ಪ > ಎತ್ತಪ್ಪ ಎಂದು ಕರೆದಿದ್ದಾರೆ.

ಗೂಡಿನ ಹಬ್ಬ ಎತ್ತಯ್ಯನ ನೆಲೆಗಳಿರುವ ಎಲ್ಲಾ ಊರುಗಳಲ್ಲಿ ನಡೆಯದಿದ್ದರೂ ಇದೇ ಹಬ್ಬವನ್ನು ಆಯಾ ನೆಲೆಗಳಲ್ಲಿ ಎತ್ತಪ್ಪನ ಜಾತ್ರೆ ಮಾಡಿದಾಗಲೇ 'ಹಾಲು ಹೊಯ್ಯುವ ಹಬ್ಬ'ವೆಂದೂ (ಗೂಡುಗಳಲ್ಲಿ ಸಗಣಿಯ-ಕಟ್ಟೆ ಕಟ್ಟಿ ಅದರಲ್ಲಿ ಹಾಲು ಹೊಯ್ಯುವ ಹಬ್ಬ) ಎತ್ತಪ್ಪನ ಗುಡ್ಡಕ್ಕೆ ತೆಗೆದುಕೊಂಡು ಹೋಗುವ 'ಹಾಲು ಮಿಾಸಲು' ಸಂಪ್ರದಾಯವೆಂದೂ ಆಚರಿಸುವುದುಂಟು.

**ಮೊದಲ ದಿನ :** ಈ ಹಬ್ಬವನ್ನು ವಿಜಯದಶಮಿಯಾದ ಒಂಭತ್ತು ದಿನಗಳ ನಂತರ ಬರುವ ಶುಕ್ರವಾರ ಆಚರಿಸುತ್ತಾರೆ. ಈ ಹಬ್ಬದ ದಿನ 'ಎತ್ತಯ್ಯನ (ಹಾಲು ಹೊರುವ ದಂಡಿಗೆ) ಕಂಬಿ', ನಾರುಕಲ್ಲಿ (ನಾರಿನಿಂದ ಮಾಡಿದ ಬುತ್ತಿ ಕೊಂಡೊಯ್ಯುವ ಉದ್ದನೆಯ ಚೀಲ), ಚಿಪ್ಪುಕೊಡಲಿ, ಉಳಿಬಾಳೆಕೋಲು (ಬಿದಿರ ಕೋಲು)ಗಳನ್ನು ಹೊರತೆಗೆದು ವಿದ್ಯುಕ್ತ ಪೂಜೆ ಮಾಡುತ್ತಾರೆ. ಈ ವಸ್ತುಗಳೆಲ್ಲ ಕಾಡುಗೊಲ್ಲರ ಪಶುಪಾಲಕ ಸಂಸ್ಕೃತಿಯ ಆಧಾರ ಸ್ತಂಭಗಳೇ ಆಗಿವೆ. ಗೋಪಾಲಕ ಸಂಸ್ಕೃತಿಯ ಸಂಕೇತಗಳಾದ ಇವುಗಳಿಗೆ ಗೌರವ ಸಲ್ಲಿಸುವ ಹಬ್ಬವೂ ಇದಾಗಿದೆ. ಇದೆಲ್ಲವನ್ನೂ ಅಲಂಕಾರ ಮಾಡಿಕೊಂಡು ಊರ ಹೊರಗಿನ ಬಯಲಿನಲ್ಲಿ ಹಾಕಿರುವ ಗೂಡಿನ ಬಳಿಗೆ ವಿಜೃಂಭಣೆಯಿಂದ ತೆಗೆದುಕೊಂಡು ಹೋಗುತ್ತಾರೆ. ಇವನ್ನು ಅಲ್ಲಿಗೆ ತೆಗೆದುಕೊಂಡು ಹೋಗುವ ಹಿಂದಿನ ದಿನದ ಮಧ್ಯಾಹ್ನವೇ ಕಳ್ಳೆ ಕಡಿದು, ಸಾಂಕೇತಿಕವಾದ ಪುಟ್ಟ ಪುಟ್ಟದಾಗಿರುವ 'ಕರುವಿನ ಗೂಡು', 'ದನವಿನ ಗೂಡು' ಹಾಕುತ್ತಾರೆ. ಗೂಡಿಗೆ 'ಮೂಡ' (ಪೂರ್ವ), 'ಪಡುವ' (ಪಶ್ಚಿಮ) ಎರಡೂ ಕಡೆ 'ಉದಿಬಾಗಿಲು' (ಪ್ರವೇಶ ದ್ವಾರ) ಬಿಟ್ಟಿರುತ್ತಾರೆ. (ಒಟ್ಟು ಏಳುಕಡೆ ಉದಿಬಾಗಿಲು ಬಿಟ್ಟರಬೇಕೆಂಬ ನಿಯಮವಿದೆ. ಕಾಡುಗೊಲ್ಲರು ವಾಸಿಸುವ ಹಟ್ಟಿಯ ಸುತ್ತಲೂ ಇರುವ ಕಳ್ಳೆಬೇಲಿಯಲ್ಲೂ ಏಳು ಕಡೆ ಉದಿಬಾಗಿಲು ಬಿಡಬೇಕೆಂಬ ನಿಯಮ ಇದ್ದರೂ ಇಂದು ಇದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿಲ್ಲ. ಹಟ್ಟಿಯ ಸುತ್ತ ಇರುವ ಬೇಲಿಯೂ ಕಾಟಾಚಾರಕ್ಕೆಂಬಂತೆ ಸಾಂಕೇತಿಕವಾಗಿ ಇರುವುದನ್ನು ಗಮನಿಸಬಹುದು)

ಹಬ್ಬದ ಹಿಂದಿನ ದಿನದ ಸಂಜೆಯೇ 'ಕರುವಿನ ಗೂಡಿ'ನಲ್ಲಿ ಕರು ಕೂಡಿರುತ್ತಾರೆ. 'ದನವಿನ ಗೂಡಿ'ನಲ್ಲಿ ಮಾತ್ರ ದನ ಕೂಡುವುದಿಲ್ಲ, ದನವಿನ ಗೂಡು ಎಂದು ಸಾಂಕೇತಿಕವಾದ 'ತೋರುಗೂಡು' ಹಾಕಿರುತ್ತಾರೆ; ದನಗಳೆಲ್ಲ ಬಯಲಲ್ಲಿ ಇರುತ್ತವೆ.

ಹಿಂದಿನ ದಿನ ರಾತ್ರಿಯೇ ಹಟ್ಟಿಯಲ್ಲಿ - ಮನೆಗಳ 'ನೆಲಕಾರಣೆ' (ಸಗಣಿ ಮತ್ತು ಗೋಗಂಜಳದಿಂದ ನೆಲ ಸಾರಿಸುವುದು) ಮಾಡಿರುತ್ತಾರೆ. ಬೆಳಿಗ್ಗೆ ನಡೆಯುವ 'ಪರುವು'ಗಾಗಿ ಅಕ್ಕಿ, ಬೆಲ್ಲ, ರಾಗಿಹಿಟ್ಟು, ಸುಚ್ಚು, ಉಪ್ಪು, ಬದನೆಕಾಯಿ,ಹಸಿಮೆಣಸಿನಕಾಯಿ, ಊದಿನಕಡ್ಡಿಗಳನ್ನು 'ಮಿಾಸಲು' ಗೊತ್ತು ಮಾಡಿದ ಮನೆಗೆ ಕೊಡುತ್ತಾರೆ.

ಅಂದು ರಾತ್ರಿ ಊರ ಹೊರಗಡೆ ವಿಶಾಲ ಬಯಲಿನಲ್ಲಿ ಹಾಕಿರುವ ದನವಿನ ಗೂಡಿನ ಬಳಿ ಜನ ಸೇರುತ್ತಾರೆ. ರಾತ್ರಿಯೆಲ್ಲಾ ಹೆಂಗಸರು ಸೋಬಾನ ಹಾಡುತ್ತಾರೆ. ಕೋರಿ ಹುಡುಗರು ಕೋಲಾಟ ಹಾಕುತ್ತಾರೆ. ಕಷ್ಟ ಕರ್ಮ ಇರುವ ಜನ ಗೂಡಿನ ಬಳಿಗೆ ಹೋಗಿ ರಾತ್ರಿಯೆಲ್ಲಾ ಜಾಗರಣೆ ಮಾಡುತ್ತಾ ಕಾಲ ಹಾಕುತ್ತಾರೆ. ಬೆಳಗಾಗ ಎದ್ದು, 'ಕಷ್ಟ' ಎಂದು ಗೂಡಿನ ಬಳಿಗೆ ಹೋದ ಜನ ಒಂದೊಂದು ತೆಪ್ಪೆ ಸೆಗಣಿ ತೆಗೆದು ಕರುವಿನ ಗೂಡಿನ ಹತ್ತಿರ ಗುಡ್ಡೆ ಹಾಕುತ್ತಾರೆ, ಬರುವಾಗ ಗೂಡಿಗೆ 'ಪಾರಣೆ' (ಕೈಮುಗಿದು) ಮಾಡಿ ಬರುತ್ತಾರೆ.

ಹಿಂದಿನ ರಾತ್ರಿ ಹಸುಗಳ ಹಾಲು ಕರೆದಿರುವುದಿಲ್ಲ. ಬೆಳಿಗ್ಗೆ ಎದ್ದಾಗ ಕರುವಿನ ಗೂಡಿನಲ್ಲಿ ಕೂಡಿದ್ದ ಕರುಗಳಿಗೆ ಕುಡಿದುಕೊಳ್ಳಲು ಬಿಡುತ್ತಾರೆ.

**ಎರಡನೆ ದಿನ :** ಎರಡನೆ ದಿನ ಶನಿವಾರ ಹಟ್ಟಿಯಿಂದ ಎತ್ತಯ್ಯನ ಕಂಬಿಯನ್ನು ಹೂವಿನಿಂದ ಅಲಂಕಾರ ಮಾಡಿಕೊಂಡು ಗೂಡಿನ ಬಯಲಿಗೆ ತೆಗೆದುಕೊಂಡು ಹೋಗುತ್ತಾರೆ. ಹಟ್ಟಿಯಿಂದ ತೆಗೆದುಕೊಂಡು ಹೋಗುವ ಈ ಕಂಬಿಯಲ್ಲಿ 'ಹಾಲು-ನೀರಿನ ಬುಡ್ಡಿ' (ಮಣ್ಣಿನ ಕುಂಭ)ಗಳನ್ನು, ಹಿಂದೊಂದು-ಮುಂದೊಂದು ಇಟ್ಟುಕೊಂಡು ಹೋಗುತ್ತಾರೆ. ಎತ್ತಯ್ಯನ ಕಂಬಿಯೊಂದಿಗೆ ಹಟ್ಟಿಯ ದೇವರುಗಳಾದ ಕದಿರಿ ನರಸಿಂಹ ಮತ್ತು ಸಿರಿಯಣ್ಣ ದೇವರುಗಳೂ ಹೋಗುತ್ತವೆ.

ಎತ್ತಯ್ಯನ ಕಂಬಿ ಹೊರುವವರು ಗೂಡಿನ ಬಯಲಲ್ಲಿ 'ದಾಸೋಹ' ಆಗುವವರೆಗೂ 'ಒಂದೊತ್ತು' ಇರಬೇಕು. ಹೆಂಗಳೆಯರು ಹಾಡು ಹೇಳುತ್ತಾ ಕಂಬಿ ಹೊರುವವರನ್ನು ಈ ರೀತಿ ಆಹ್ವಾನಿಸುತ್ತಾರೆ -

**ಕಂಬಿ ಹೊರು ಬಾರೋ ಲಿಂಗವಂತರ ಮಗನೆ**
**ನಿಂಬೇಯ ಹಣ್ಣು ಬಲಗೈಲಿ। ದ್ಯಾವರಟ್ಟೀರ**
**ಕಂದಮ್ಮ ಕಂಬಿ ಹೊರುಬಾರೋ.**

ಇಲ್ಲಿ 'ಲಿಂಗವಂತ' ಎಂಬ ಹೆಸರು ಬಳಸಿದರೂ ಈ ಕಂಬಿಯನ್ನು ಹೊರುವವರು ಗೊಲ್ಲರೇ ಆಗಿರುತ್ತಾರೆ. ಬಹುಶಃ ಕಂಬಿ ಹೊರುವ ಗೊಲ್ಲ 'ಲಿಂಗವಂತ'ನ ಹಾಗೆ ಪವಿತ್ರವಾದವನು ಎಂಬ ಆಶಯ ಇಲ್ಲಿದೆ!

ಹಟ್ಟಿಯಿಂದ ದೇವರು ಗೂಡಿನ ಬಯಲಿಗೆ ತಲುಪುವುದು ಮಧ್ಯಾಹ್ನ ನಡು ಹೊತ್ತು ಮಿಾರಿರುತ್ತದೆ. ಅಷ್ಟುಹೊತ್ತಿಗೆ ಕರುವಿನ ಗೂಡಿನ ಬಳಿ ಕೂಡಿ ಹಾಕಿದ ಸಗಣಿಯಿಂದ ಕರುವಿನ ಗೂಡು, ದನವಿನ ಗೂಡು ಕಟ್ಟಿ; ಅದರಲ್ಲಿ ಬಟ್ಟಣ್ಣ, ಮೈಲಣ್ಣ, ಗೊಡ್ಡುಗಾಳಿ ಅಕ್ಕರಂಭೆ, ಚಿಕ್ಕರಂಭೆ ಎಂಬ ದನಗಳ ಆಕಾರ ಮಾಡಿ, ಅವುಗಳನ್ನು ಸಗಣಿಯಿಂದ ಸಾಂಕೇತಿಕವಾಗಿ ಕಟ್ಟಿರುವ ಒಂದೊಂದೇ ಗೂಡಿನೊಳಗೆ ಇಡುತ್ತಾರೆ. ಇವುಗಳಿಗೆ ಒಂದೊಂದು 'ಎಡೆ' (ಎಲೆ-ಅಡಿಕೆಯಲ್ಲಿ, ಚಿಗುಳಿ-ತಂಬಿಟ್ಟಿನ ಮಿದಿಕೆಗಳನ್ನು ಇಡುತ್ತಾರೆ) ಹಾಕುತ್ತಾರೆ.

ದೇವರು ಬಯಲು ಗೂಡಿಗೆ ಹೋಗುವಷ್ಟರಲ್ಲಿ ಹಟ್ಟಿಯ ಜನಗಳಿಂದ ಸಂಗ್ರಹಿಸಿದ ಬತ್ತೇವಿನಲ್ಲಿ ರಾಗಿಮುದ್ದೆ, ಬದನೆಕಾಯಿಬಜ್ಜಿಯನ್ನು 'ಬಾಯಿಬತ'ದ ಮೂಲಕ ಮಾಡುತ್ತಾರೆ. ಈ ಅಡಿಗೆ ಮಾಡುವಾಗ ಬಾಯಲ್ಲಿ ಒಲೆಯನ್ನು ಊದುವಂತಿಲ್ಲ, ಬಾಯಿಂದ ಉಗುಳು ಬಿದ್ದರೆ ಅಪವಿತ್ರವಾಗುತ್ತದೆ ಎಂದು ಬಾಯಿಗೆ ಬಟ್ಟೆ (ಟವಲ್) ಕಟ್ಟಿಕೊಂಡೇ, ಕಾಳು ಕೇರುವ ಮೊರಗಳಿಂದ ಗಾಳಿ ಬೀಸುತ್ತಾ, ಒಲೆ ಉರಿಸುತ್ತಾ ಅಡಿಗೆ ಮಾಡುತ್ತಾರೆ. ಹಟ್ಟಿಯಿಂದ ತೆಗೆದುಕೊಂಡು ಹೋದ 'ಮಿಾಸಲುಹಾಲಿ'ನಲ್ಲಿ ಮೂರು ಮಗಿ (ಸಣ್ಣಬುಡ್ಡಿ) ಹಾಲು ಹಾಗೇ ಇಟ್ಟರುತ್ತಾರೆ. ಇವನ್ನು 'ಒಂದೊತ್ತು' (ಉಪವಾಸ) ಬಿಡುವ ಎತ್ತಪ್ಪನ ಹಾಲು ಕಂಬಿ ಹೊತ್ತ ಪೂಜಾರಿ, ಕದಿರಿ ದೇವರು - ಸಿರಿಯಣ್ಣ ದೇವರ ಪೂಜಾರಿಗಳಿಗೆ ಕೊಡುತ್ತಾರೆ.

ಈ ಗೂಡಿನೊಳಕ್ಕೆ ಹಟ್ಟಿಯಿಂದ ತೆಗೆದುಕೊಂಡು ಹೋದ ಕಂಬಿ, ಕಲ್ಲಿ, ಕೊಡಲಿ, ಉಳಿಬಾಳೆಕೋಲು ಇಟ್ಟು ಅವಕ್ಕೆ ಪೂಜೆ ಸಲ್ಲಿಸಿ 'ದಾಸೋಹ' ನಡೆಸುತ್ತಾರೆ. ಎತ್ತಪ್ಪ ಸಂಪೂರ್ಣ ಶಿವಾಂಶ ಸಂಭೂತ ದೇವರಾಗಿದ್ದರೂ, ಎತ್ತಪ್ಪನ ಜೊತೆಗೆ ಬಂದಿರುವ ಕದಿರಿ ದೇವರಿಂದ ಕೆಲವು ನಡಾವಳಿಗಳು ವೈಷ್ಣವೀಕರಣಗೊಂಡಿವೆ.



## ಸಂಪಾದಕಿ ಹೇಮಾಮಾಲಿನಿ

'ಕನಸಿನ ಕನ್ಯೆ' ಎನಿಸಿಕೊಂಡಿದ್ದ ಹೇಮಾ ಮಾಲಿನಿ ಈಗ 'ನ್ಯೂ ವುಮನ್' ಪತ್ರಿಕೆಯ ಸಂಪಾದಕಿ. ಇದರ ಹಿಂದಿ ಆವೃತ್ತಿಯ ಹೆಸರು 'ಸಹೇಲಿ'. ಕನ್ನಡದಲ್ಲಿ ಪತ್ರಿಕೋದ್ಯಮದ ನಂಟು ಬೆಳೆಸಿಕೊಂಡ ಜನಪ್ರಿಯ ತಾರೆಯರು ಅಪರೂಪ. ನಟಿ ಜಯಮಾಲಾ ಕೆಲವು ಕಾಲ ಸಿನಿಮಾ ಪತ್ರಿಕೆಯೊಂದಕ್ಕೆ ಅಂಕಣಕಾರರಾಗಿದ್ದರು. ಆದರೆ ಅವರು ಬರೆಯುತ್ತಿದ್ದುದು ಸೌಂದರ್ಯ ಸಲಹೆ ಕುರಿತು. ಇತ್ತೀಚೆಗೆ ನಟಿ ತಾರಾ ಖ್ಯಾತ ಪತ್ರಿಕೆ ಒಂದರ ದೀಪಾವಳಿ ವಿಶೇಷಾಂಕಕ್ಕೆ ಹೊಸ ನಟಿ ಅನು ಪ್ರಭಾಕರ್ ಸಂದರ್ಶನ ನಡೆಸಿಕೊಟ್ಟಿದ್ದಾರೆ.

ಇಷ್ಟೆಲ್ಲ ಕಾರ್ಯಗಳು ನಡೆಯುವ ಹೊತ್ತಿಗೆ, ಹಟ್ಟಿಯ ಜನಗಳೆಲ್ಲ ತಮ್ಮ ದನಗಳನ್ನು ಇಲ್ಲಿಗೆ ತರಿಮಿಕೊಂಡು ಬಂದಿರುತ್ತಾರೆ. ಸಮಿಪದಲ್ಲೇ ಹಾಕಿರುವ 'ಈಡು'ಗೆ (ಉರಿಸಲು ಬಳಸುವ ಹುಲ್ಲು) ಬೆಂಕಿ ಹಚ್ಚಿದ ನಂತರ, ದನಗಳನ್ನು 'ಕಿಚ್ಚು ಹಾಯಿಸಿ', ಗೂಡನ್ನು ಮೂರು ಸಾರಿ ಪ್ರದಕ್ಷಿಣೆ ಮಾಡಿಸಿದ ನಂತರ ಒಂದು ಕಡೆ ತಡೆದು ನಿಲ್ಲಿಸುತ್ತಾರೆ. ಹಟ್ಟಿಗೌಡ, ಪೂಜಾರಿ, ದಾಸಯ್ಯ, ಒಕ್ಕಲುಕೊಟ್ಟ 'ಸಾಸೇವು ಅಕ್ಕಿ' ತೆಗೆದು ದನಗಳ ಮೇಲೆ ಸೂರುತ್ತಾರೆ (ಚೆಲ್ಲುತ್ತಾರೆ), ಅಲ್ಲಿಗೆ ಅವುಗಳಿಗೆ ಎಲ್ಲ ರೋಗ-ರುಜಿನಗಳಿಂದ ರಕ್ಷಣೆ ದೊರೆತಂತೆ ಎಂದು ನಂಬುತ್ತಾರೆ. ದನಗಳನ್ನು ರೊಪ್ಪ ಕೂಡಲು ಚೆದುರಿಸುತ್ತಾರೆ.

ಯಲಗಟ್ಟ ಗೊಲ್ಲರ ಹಟ್ಟಿಗೆ ಉತ್ತರ ದಿಕ್ಕಿನಲ್ಲಿರುವ 'ಎತ್ತಪ್ಪನ ಗುಡ್ಡ' (ತಳಕಿನ ಗುಡ್ಡ)ದ ಕಡೆಗೆ ಮುಖಮಾಡಿ ಕಂಬಳಿ 'ಜಾಡಿ' ಹಾಸಿ ಪೂಜೆ ಮಾಡುತ್ತಾರೆ. ನಂತರ ಮತ್ತೊಂದು ದನಗಳ ದೇವರಾದ ಕಾಟಂದೇವರಿಗೂ ಜಾಡಿ ಹಾಸಿ ಕಾಯಿ ಒಡೆದು ಪೂಜೆ ಮಾಡುತ್ತಾರೆ. ದಕ್ಷಿಣಕ್ಕೆ 'ಹಿರೇದೇವರಿಗೆ' ಜಾಡಿ ಹಾಸಿ ಕಾಯಿ ಒಡೆದ ನಂತರ ಪೂಜಾರಿ, ದಾಸಯ್ಯಗಳು 'ಒಂದೊತ್ತು' ಬಿಟ್ಟು, ಗೂಡಿನೊಳಗೇ ದೇವರ ಮುಂದೆ ಊಟಕ್ಕೆ ಕೂರುತ್ತಾರೆ. ಉಳಿದ ಜನ ಗೂಡಿನಿಂದ ಹೊರಗಿರುತ್ತಾರೆ. ಆಗ ಗೂಡಿನೊಳಗೆ ಬಾಯಿಬತದಲ್ಲಿ ಮಾಡಿದ ಉಗ್ಗಿ(ಪಾಯಸ), ಮುದ್ದೆ, ಬದನೆಕಾಯಿಬಜ್ಜಿಯನ್ನು ನೆರೆದ ಜನಕ್ಕೆ 'ಪ್ರಸಾದ'ವೆಂದು ಕೊಡುತ್ತಾರೆ.

ಈ ಎಲ್ಲ ಪ್ರಕ್ರಿಯೆಗಳ ಉದ್ದಕ್ಕೂ ಹೆಂಗಳೆಯರು ಎತ್ತಪ್ಪನನ್ನು ಕುರಿತ ಸೋಬಾನೆ ಪದ ಹಾಡುತ್ತಿರುತ್ತಾರೆ.

ಹರಕೆ ಮಾಡಿಕೊಂಡ ಜನ ಗೂಡಿನ ಸುತ್ತ ಉಂಡೆ-ಮಂಡೆ, 'ಎದ್ದಂಗೆ ನಡಿಯೋದು' (ದೀರ್ಘಂಡ ಬಿದ್ದ ನಂತರ, ಎದ್ದು ಮತ್ತೆ ದೀರ್ಘಂಡ ನಮಸ್ಕಾರ ಬೀಳುವುದು - ಹೀಗೆ ಗೂಡಿನ ಸುತ್ತ ನೀರು ಚಿಮುಕಿಸಿಕೊಳ್ಳುತ್ತಾ ಮಾಡುವ ಕ್ರಿಯೆ) ಮಾಡುತ್ತಾ ಗೂಡಿನ ಸುತ್ತಲಿನ ಕಳ್ಳೆಮುಳ್ಳುಗಳಲ್ಲಿ ಹೆಗ್ಗಿಲ್ಲದೆ ಹೊರಳುತ್ತಾರೆ. ಆ ದೇವರ ಒಕ್ಕಲಿನವರು, ಕಾಯಿಲೆ-ಕಸಾಲೆಯಾದವರು, ಮಕ್ಕಳಿಲ್ಲದವರು ಮಕ್ಕಳ ಫಲಬೇಡಿ ಈ ರೀತಿಯ ಹರಕೆ ಒಪ್ಪಿಸುತ್ತಾರೆ.

**ಹಾಲಿಗೆ ತುಪ್ಪ, ಜೇನುತುಪ್ಪ ಬೆರೆಸಿ, ಬಂಗಾರದ ಬಟ್ಟಲಲ್ಲಿ ಇಟ್ಟುಕೊಂಡು, ಕಣ್ಣಿಗೆ ಬಟ್ಟೆ ಕಟ್ಟಿಕೊಂಡು, ಉಡುದಾರವೂ ಇಲ್ಲದೆ ಹುಟ್ಟುಡುಪಿನಲ್ಲಿ ಕುಳಿತ ಪೂಜಾರಿ, ಹಾಲು ಕುಡಿಯುವ ಸರ್ಪಕ್ಕಾಗಿ ಕಾಯುತ್ತಾನೆ.**

ದೇವರನ್ನು ಹಟ್ಟಿಗೆ ಹೊರಡಿಸಿಕೊಂಡು ಹೋಗಿ ಗುಡಿದುಂಬಿಸುತ್ತಾರೆ.

**ಉಳಿದ ದಿನ :** ಭಾನುವಾರ - ಇಡೀ ಹಟ್ಟಿ ಜನ ನೇಮದಲ್ಲಿ ಹೋಗಿ ದೇವರ ಗುಡಿಗೆ ಬೇಕಾದ ಕಳ್ಳೆಯನ್ನು ಕಡಿದುಕೊಂಡು ಬಂದು ರಾಶಿ ಹಾಕುತ್ತಾರೆ.

ಸೋಮವಾರ - ತಂದು ರಾಶಿ ಹಾಕಿದ ಕಳ್ಳೆಯನ್ನು ಒಂದೊತ್ತಿನಲ್ಲಿ ಗುಡಿಯ ಸುತ್ತ, ಹಟ್ಟಿಯ ಸುತ್ತ ಬಡಿಯುತ್ತಾರೆ. 'ಪರವು' ಮಾಡಲು ಅಕ್ಕಿ ಅಳೆಯುತ್ತಾರೆ.

ಮಂಗಳವಾರ - ಚಿತ್ರ ದೇವರು, ಸಿರಿಯಣ್ಣ, ಕದಿರಿ ನರಸಿಂಹ ದೇವರುಗಳ 'ದಾಸೋಹ' ನಡೆಯುತ್ತದೆ. ಇದರಲ್ಲಿ ಎತ್ತಪ್ಪ - ಜುಂಜಪ್ಪ ದೇವರುಗಳ ಒಕ್ಕಲಿನವರ ಕೈಗಲೆತಿರುತ್ತದೆ, ಅಂದು ಹೊಸ ಮುಚ್ಚಳದಲ್ಲಿ ಹತ್ತಿಕಾಳು ಹಾಕಿ, ಅದರಲ್ಲಿ ಎಣ್ಣೆ ಹೊಯ್ದು 'ದೀಪ ಏರಿಸುತ್ತಾರೆ' - ಮೂರೂ ದೇವರುಗಳಿಗೆ ಬೆಳಗಿನ ನಂತರ. ಇದಾದ ಮೇಲೆಯೆ ಕಳೋರಳ್ಳಿ ಮತ್ತು ಹಾಗಲವಾಡಿಗಳಲ್ಲಿ ಜುಂಜಪ್ಪನ 'ದೀಪ ಏರುವುದು'

ಈ ಐದೂ ದಿನ ನಡೆಯದ ಹಬ್ಬ ಪಶುಪಾಲಕ ಸಂಸ್ಕೃತಿಯನ್ನು ನಾಟಕೀಯವಾದ ರೀತಿಯಲ್ಲಿ ಪುನರಭಿನಯಿಸಿದಂತೆ ನಡೆಯುವ ಪ್ರಕ್ರಿಯೆಯಾಗಿ ಕಾಣುತ್ತದೆ. ಇದು ಗೋಸಂಸ್ಕೃತಿಯನ್ನು ಕೊಟ್ಟ ಎತ್ತಪ್ಪನನ್ನು ನೆನೆಯುವ, ತಮ್ಮ 'ಹಿಂಡೆಚ್ಲಿ' (ಗೋಸಂಪತ್ತು ಹೆಚ್ಚಲಿ) ಎಂದು ಹಾರೈಸುವ ಹಬ್ಬವೇ ಆಗಿದೆ.

**ಬೆಳಕಿನ ಹಬ್ಬ :** ಜುಂಜಪ್ಪನ ಅನೇಕ ನೆಲೆಗಳಲ್ಲಿ ಕಾರ್ತಿಕ ಮಾಸದಲ್ಲಿ 'ದೀಪ ಏರಿಸುವ' ಆಚರಣೆ ಒಂದು ವಿಧಿಯಂತೆ ನಡೆಯುತ್ತದೆ. ಒಂದೊಂದು ನೆಲೆಯಲ್ಲಿ ಒಂದೊಂದು ರೀತಿಯಲ್ಲಿ ನಡೆಯುವ ಈ ಆಚರಣೆಗಳು ಕುತೂಹಲಕರವಾಗಿವೆ.

★ ★ ★

ಜುಂಜಪ್ಪ ಹುಟ್ಟಿ ಬೆಳೆದು, ಬಾಳಿಬದುಕಿ ಮಣ್ಣಾದ ಭೂಮಿ ಕಳುವೋರಳ್ಳಿ, ಇದು ತುಮಕೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಶಿರಾದಿಂದ ಪೂರ್ವಕ್ಕೆ ಸುಮಾರು 20 ಕಿಮೀ ದೂರದಲ್ಲಿದೆ. ಇಲ್ಲಿ ಜುಂಜಪ್ಪನ ಸಮಾಧಿ ಇದೆ.

ಕಳುವೋರಳ್ಳಿಯ ಕುಂಚಿಟಿ ವಕ್ಕಲಿಗರು ದೀಪಾವಳಿಯ ಅಮವಾಸೆಯ ದಿನವೇ ಬಂದು ಜುಂಜಪ್ಪನ ಗುಡ್ಡೆಯ ಮುಂದೆ ನಿಲ್ಲಿಸಿರುವ ಗರುಡಗಂಬದಲ್ಲಿ ದೀಪ ಏರಿಸುತ್ತಾರೆ. ದೀಪ ಏರಿಸಿದ ನಂತರದ ಮುಂದಿನ ಸೋಮವಾರ ಜನ ಸೇರುತ್ತಾರೆ, ಉತ್ಸವ ನಡೆಯುತ್ತದೆ; ಅದೇ ದಿನ ದೀಪ ಇಳಿಸುತ್ತಾರೆ.

ಇಲ್ಲಿ ಶಿವರಾತ್ರಿ, ಯುಗಾದಿಗಳಲ್ಲೂ ದೀಪ ಏರಿಸುವ ಪರಿಪಾಠವಿದ್ದರೂ, ಕಾರ್ತಿಕ ಮಾಸದಲ್ಲಿ ಎತ್ತುವ ದೀಪ ಅತ್ಯಂತ ಮಹತ್ವದ್ದು.

★ ★ ★

ಜುಂಜಪ್ಪನ ಗುಡ್ಡೆಗೆ ಅತ್ಯಂತ ಹತ್ತಿರದ ಇನ್ನೊಂದು ನೆಲೆ ಬೇವಿನಹಳ್ಳಿ. ಇಲ್ಲೂ ಕಾರ್ತಿಕ ಮಾಸದಲ್ಲಿ ಅಮವಾಸೆ ಹಿಂದೆ - ಮುಂದೆ ಬರುವ ಸೋಮವಾರ ಅಥವಾ ಗುರುವಾರ ದೀಪ ಎತ್ತುತ್ತಾರೆ. ತಮ್ಮ ಹಟ್ಟಿಯಲ್ಲಿಯ ಜುಂಜಪ್ಪನ ಗುಬ್ಬ (ಗುಡಿ)ದ ಮುಂದೆ ದೀಪ ಎತ್ತುವುದಕ್ಕಿನ್ನ ಮುಂಚೆ 'ಒಂದೊತ್ತಿ'ನಲ್ಲಿ ಜುಂಜಪ್ಪನ ಗುಡ್ಡೆಗೆ ತಮ್ಮ ಜುಂಜಪ್ಪ ' ದೇವರನ್ನೂ ಕರೆದುಕೊಂಡು ಎತ್ತಿ 'ಒಂದೊತ್ತು' ಬಿಡುತ್ತಾರೆ. ಅಲ್ಲಿಂದ ಮುಂದೆ ಸಮಿಾಪದಲ್ಲಿರುವ ಕಲ್ಲನ ಕುಂಟೆ (ಬೇಚರಕ್ ಗ್ರಾಮ) ಚಿತ್ರದೇವರ ಪೌಳಿಗೂ ಹೋಗಿ ಅಲ್ಲಿಯೂ ದೀಪ ಎತ್ತಿ ರಾತ್ರಿಗೆ ಬೇವಿನಹಳ್ಳಿಗೆ ಬರುತ್ತಾರೆ. ಜೊತೆಯಲ್ಲಿ ಕರೆದುಕೊಂಡು ಹೋದ ಜುಂಜಪ್ಪನನ್ನು ಕರೆದುಕೊಂಡು ಬೇವಿನಹಳ್ಳಿಗೆ ಬರುವಷ್ಟರಲ್ಲಿ, ಇತ್ತ ಹಟ್ಟಿಯಲ್ಲಿದ್ದ ಕರಿಯಮ್ಮ ದೇವರನ್ನು ಹೊರಹೊರಡಿಸಿಕೊಂಡು ಬಂದು 'ಭೇಟಿ' ಮಾಡಿಸುತ್ತಾರೆ. ಇದನ್ನು 'ಅಣ್ಣ-ತಂಗಿ ಭೇಟಿ' ಎಂದು ಕರೆಯುತ್ತಾರೆ. ಮತ್ತೆ ರಾತ್ರಿಯೆಲ್ಲಾ 'ಒಂದೊತ್ತಿ'ನಲ್ಲಿ ಇರುತ್ತಾರೆ. ಮರುದಿನ ಬೆಳಿಗ್ಗೆ ಗುಬ್ಬಕ್ಕೆ ಕಂಚಿನ ಬಾಗಿಲವಾಡ ಹಾಕಿ, ಕಂಚಿನ ಕರಿಬಾನ ಏರಿಸಿ, ದೀಪ ಏರಿಸುತ್ತಾರೆ. ದೀಪಕ್ಕೆ ಎಣ್ಣೆ ಹಾಕಿದ ನಂತರ 'ಒಂದೊತ್ತು' ಬಿಡುತ್ತಾರೆ. ಜನ ದೀಪಕ್ಕೆ ದುಡ್ಡು, ಬುರುಗು (ಮಂಡಕ್ಕಿ ಪುರಿ) ಹಾಕುತ್ತಾರೆ. ದೀಪಕ್ಕೆ ಹಾಕುವ ಪುರಿಯನ್ನು ಜನ ಪವಿತ್ರ ಭಾವನೆಯಿಂದ ತಿನ್ನುತ್ತಾರೆ.

ದೇವಸ್ಥಾನದಲ್ಲಿ ದೀಪ ಹಚ್ಚಿದಾಗಿನಿಂದ ದೀಪ ಇಳಿಸುವವರೆಗೂ ಎಲ್ಲ ಭಕ್ತರ ಮನೆಯಲ್ಲಿ ದೀಪ ಸದಾ ಉರಿಯುತ್ತಲೇ ಇರುತ್ತದೆ. ಇದನ್ನು 'ತಾವಿನ ದೀವಿಗೆ' ಎಂದು ಕರೆಯುತ್ತಾರೆ. ಜಾಂಡೇವು (ಹಬ್ಬದ ಪ್ರಾರಂಭವನ್ನು ಸಾರುವ ಧ್ವಜ) ಎತ್ತಿದಾಗಿನಿಂದ ಇಳಿಸುವವರೆಗೂ ಹಟ್ಟಿಯಲ್ಲಿ ಯಾರೂ ಮಾಂಸವನ್ನು ತಿನ್ನುವಂತಿಲ್ಲ. ಹಬ್ಬ ನಡೆಯುವ ಏಳೂದಿನ ಕೆಚ್ಚಲಿಗೆ ಕೈಹಚ್ಚುವುದಿಲ್ಲ, ಹಾಲು ಕರೆಯುವುದಿಲ್ಲ. ಎಲ್ಲವನ್ನೂ ಕರ-ಮರಿಗಳೇ ಕಂಠಪೂರ್ತಿ ಕುಡಿಯಲು ಬಿಡುತ್ತಾರೆ. ಅವು ಕುಡಿದು ಹೆಚ್ಚಾದ ಹಾಲನ್ನು ಕರೆದು ಹುತ್ತದ ಕೋಮೆಗೆ ಸುರಿದುಬಿಡುತ್ತಾರೆ, ಇಲ್ಲವೆ

93ನೇ ಪುಟ ನೋಡಿ

ಮೊದಲ ಬಹುಮಾನ ಪಡೆದ 'ನಿಸರ್ಗ' ಚಿತ್ರ

'ಗುಟುಕು' ಶ್ರೀಕೃಷ್ಣರಾಜ್, ಮೈಸೂರು.



## ಛಾಯಾಚಿತ್ರ ಸ್ಪರ್ಧೆ; ತೀರ್ಪುಗಾರರ ಟಿಪ್ಪಣಿ

ಛಾಯಾಗ್ರಹಣ ಕಲೆ; ಸೃಜನಶೀಲತೆ ಮತ್ತು ವಿಜ್ಞಾನದ ಸಂಕರದಿಂದ ಜನಿಸಿದಂತಹುದು. ಇಲ್ಲಿ ವಿಜ್ಞಾನ ನೀಡಿದ ಲೆನ್ಸ್, ಫಿಲ್ಮ್, ಮೊದಲಾದ ಸಲಕರಣೆಗಳು ಎಷ್ಟು ಮುಖ್ಯವೋ, ಅಷ್ಟೇ ಮುಖ್ಯ ಅದರ ಹಿಂದಿರುವ 'ಮನಸ್ಸು', 'ಮೆದುಳು'!

ಛಾಯಾಗ್ರಹಣ ಪ್ರಕ್ರಿಯೆ ವಿಷಯದ ಆಯ್ಕೆ, ಆಯ್ದಕೋನ, ಸಂಯೋಜನೆ ಇತ್ಯಾದಿಯಾಗಿ, ಮೆದುಳಿನಲ್ಲಿ ಆರಂಭ ಆಗುತ್ತದಾದರೂ ಬಳಸಲ್ಪಡುವ ಉಪಕರಣ, ಸಂಸ್ಕರಣ, ಸಂಸ್ಕರಣದ ವಿಧಾನ, ಪ್ರಿಂಟ್‌ಗೆ ಬಳಸಿದ ಕಾಗದ ಮೊದಲಾದವುಗಳು ಮುಖ್ಯವಾಗಿ ಅದರ ಉತ್ಕೃಷ್ಟತೆ ನಿರ್ಧರಿಸುವಲ್ಲಿ ಪಾತ್ರವಹಿಸುತ್ತವೆ.

ಓದುಗನಲ್ಲಿ ಹುದುಗಿರಬಹುದಾದ ಸುಪ್ತ ಪ್ರತಿಭೆಯನ್ನು ಗುರುತಿಸಿ ಗರಿಗೆದರಿಸಿ, ಪ್ರೋತ್ಸಾಹಿಸುವುದು ಛಾಯಾಚಿತ್ರ ಸ್ಪರ್ಧೆಯ ಮೂಲ ಉದ್ದೇಶ. ಜತೆಗೆ ಆಸಕ್ತರು ಛಾಯಾಗ್ರಹಣವನ್ನು ಇನ್ನಷ್ಟು ಗಂಭೀರವಾಗಿ ಧ್ಯಾನಿಸುವಂತೆ ಮಾಡುವುದು. ಹಾಗಾಗಿ, ತಾಂತ್ರಿಕತೆಗಿಂತಲೂ ಹೆಚ್ಚಾಗಿ, ಚಿತ್ರದ ಹಿಂದಿರಬಹುದಾದ 'ಮನಸ್ಸನ್ನು' ಮುಖ್ಯವಾಗಿರಿಸಿಕೊಂಡು ನಮ್ಮ ಆಯ್ಕೆ ನಡೆಸಿದ್ದೇವೆ.

■ ಎಚ್.ಎಂ.ರಾಮಚಂದ್ರ, ಸಿನಿಮಾಟೋಗ್ರಾಫರ್

# ಒಂದು ಟೈಂ ಪಾಸ್ ಜಗಳ

■ ಭುವನೇಶ್ವರಿ ಹೆಗಡೆ



ಸ್ತ್ರೀಕುಲದ ಮೇಲಿರುವ ಸಿವಿಲ್ ಆರೋಪಗಳು ಬಿಡಿ, ಕ್ರಿಮಿನಲ್ ಪಟ್ಟಿಯಲ್ಲಿ ಎಂಥೆಂಥ ಆರೋಪಗಳಿವೆ ಗೊತ್ತಾ? ಈ ಹೇಳಿಕೆಗಳು ಹುಟ್ಟಲು ಪುರುಷರ ಮಾನಸಿಕ ದೌರ್ಬಲ್ಯವೇ ಕಾರಣ ಎಂದು ಮಂಗಳೂರಿನ ಹಾಸ್ಯ ಲೇಖಕಿ ಭುವನೇಶ್ವರಿ ಹೆಗಡೆ ಪತ್ತೆ ಹಚ್ಚಿದ್ದಾರೆ.

If a man makes a stupid mistake men say "what a fool that man is!" If a woman does the same; men say "what fools women are!"

**- Mark Twain**

ಈ ಬಾರಿ ರಜೆಯಲ್ಲಿ ಚಿಕ್ಕಪ್ಪನ ಮನೆಗೆ ಹೋಗುತ್ತಲೇ ಒಂದು ಬಿಳಿ ಹಾಳೆಯಲ್ಲಿ ಬರೆಯಲಾಗಿದ್ದ ಮಾರ್ಕ್‌ಟ್ವೈನ್ ಮಹಾಶಯನ ಈ ಹೇಳಿಕೆಯನ್ನು ಚಿಕ್ಕಮ್ಮ ನನ್ನ ಕೈಗೆ ನೀಡಿ ಚಿಕ್ಕಪ್ಪನೆಡೆಗೆ ಒಂದು ಚೂಪಾದ ನೋಟ ಬೀರಿ ಒಳನಡೆದರು. ನನ್ನ ಚಿಕ್ಕಪ್ಪ ಹಾಗೂ ಚಿಕ್ಕಮ್ಮ ಪ್ರವೃತ್ತಿಯಲ್ಲಿ ಗಂಡ ಹೆಂಡಿರು. ಆದರೆ ವೃತ್ತಿಯಲ್ಲಿ ಚಿಕ್ಕಮ್ಮ ನ್ಯಾಯವಾದಿ. ಚಿಕ್ಕಪ್ಪ ವ್ಯಂಗ್ಯಚಿತ್ರಕಾರ. ಆ ವೃತ್ತಿಗಳನ್ನೇ ಎತ್ತಿ ಜಗಳಾಡುವುದು ಅವರ ಇಷ್ಟದ ವ್ಯಂಗ್ಯಚಿತ್ರಕಾರ. ಆ ವೃತ್ತಿಗಳನ್ನೇ ಎತ್ತಿ ಜಗಳಾಡುವುದು ಅವರ ಇಷ್ಟದ ಟೈಂ ಪಾಸ್.

ನಾನು ಅವರ ಮನೆಗೆ ಹೋದಾಗೆಲ್ಲ ಯಾವುದಾದರೊಂದು ವಿಷಯವಾಗಿ ಗಂಭೀರವಾಗಿ ಜಗಳವಾಡುತ್ತ ಟೈಂ ಪಾಸ್ ಮಾಡಿ ಹಬ್ಬದೂಟ ಮಾಡಿ ಉಂಡು ಚಿಕ್ಕಪ್ಪನ ಕಾರ್ಟೂನುಗಳನ್ನು ನೋಡಿ ನಕ್ಕು ವಸ್ತು ಸಿಕ್ಕದಿದ್ರೆ, ನಮ್ಮನೆಗೆ ಬನ್ನಿ ಚಿಕ್ಕಪ್ಪ ನಮ್ಮ ಯಜಮಾನರ ಮೇಲೆ ಪುಂಖಾನುಪುಂಖ ವ್ಯಂಗ್ಯ ಚಿತ್ರ ರಚಿಸಬಹುದು ಎಂದೆಲ್ಲ ಆಹ್ವಾನ ನೀಡಿ ಬರುತ್ತೇನೆ. ಎಷ್ಟಾದರೂ ನೀನು ಚಿಕ್ಕಪ್ಪನ ಪಾರ್ಟಿ. ನಿನಗೆ ನ್ಯಾಯ ಅನ್ನೋದೇ ಗೊತ್ತಿಲ್ಲ ಎಂದು ಲಾಯರ್ ಚಿಕ್ಕಮ್ಮನಿಂದ ಬೈಸಿಕೊಳ್ಳುವುದೂ, ಗುಟ್ಟಾಗಿ ಚಿಕ್ಕಪ್ಪನ ಬಳಿ ಪಿಸಿ ಪಿಸಿ ಮಾತಾಡಿ ಚಿಕ್ಕಮ್ಮನಿಂದ ಮತ್ತಷ್ಟು ಬೈಸಿಕೊಳ್ಳುವುದೂ ರೂಢಿ.

ಈ ಬಾರಿ ಹೋದ ಕೂಡಲೇ ಕೈಗೆ ಬಂದ ಮಾರ್ಕ್‌ಟ್ವೈನ್ ಹೇಳಿಕೆ ಓದಿಯೇ ಊಹಿಸಿಕೊಂಡೆ. ಸಖತ್ ವಾದವಿವಾದ ನಡೆದಿದೆ ಎಂದು.

''ಜಗತ್ತಿನಾದ್ಯಂತ ಸ್ತ್ರೀಕುಲಕ್ಕೆ ಅಂಟಿಸಲಾದ ಅನೇಕ ಕಳಂಕಗಳಿಗೆ ಗಂಡಸರ ಈ ಸುಡುಗಾಡು ಸಾರ್ವತ್ರಿಕ ಬುದ್ಧಿಯೇ ಕಾರಣ ಅನ್ನೋದನ್ನು ಹೇಗೆ ಸಂಶೋಧಿಸಿ ಹೇಳಿದಾನೆ ನೋಡು ಒಬ್ಬ ಗಂಡಸೇ ಆದ ಮಾರ್ಕ್‌ಟ್ವೈನ್'' ಎಂದು ಕೋರ್ಟಿನ ಮೂಡಿನಲ್ಲೇ ಇದ್ದ ಚಿಕ್ಕಮ್ಮ ಹೇಳಿದರು.

''ನನಗೂ ಈ ಹೇಳಿಕೆ ಓದಿ ನಿರಾಳವಾಯ್ತು ಚಿಕ್ಕಮ್ಮ, ನಾನಿನ್ನು 'ಸ್ವಕುಲ ಸಂಬಂಧೀ ಬೇಗುದಿ'ಗೆ ವಿದಾಯ ಹೇಳಿ ನಿಶ್ಚಿಂತೆಯಿಂದ ನಿದ್ದಿಸಲು ಸಾಧ್ಯವಾದೀತು ಚಿಕ್ಕಮ್ಮ'' ಎಂದು ಬಿಟ್ಟೆ.

ಅಲ್ವೆ ಮತ್ತೆ? ಸ್ತ್ರೀಕುಲದ ಮೇಲಿರುವ ಸಾದಾ ಸಿವಿಲ್ ಆರೋಪಗಳ ಪಟ್ಟಿ ನೋಡಿಯೇ ನಾನೂ ನಿದ್ದೆ ಕೆಡಿಸಿಕೊಂಡಿದ್ದೆ. ಇನ್ನು ಕ್ರಿಮಿನಲ್ ಆರೋಪಗಳ ಪಟ್ಟಿ ಬಿಡು. ಸ್ತ್ರೀ ಬುದ್ಧಿ ಪ್ರಳಯಾಂತಕ; ಮೊದಲಾದ ಹೇಳಿಕೆಗಳು ಹುಟ್ಟಿಕೊಳ್ಳಲು ಪುರುಷರ ಈ ಮಾನಸಿಕ ದೌರ್ಬಲ್ಯವೇ ಕಾರಣ ಎಂಬುದು ಗೊತ್ತಾದಾಗ ನನಗೂ ಎಷ್ಟು ಖುಶಿಯಾಯ್ತು ಗೊತ್ತೆ? ಅದಕ್ಕೇ ಸಾಧ್ಯವಾದಲ್ಲೆಲ್ಲ ನಾಲ್ಕು ಜನರೆದುರು ಈ ವಿಚಾರ ಹೇಳಲು ಪ್ರಾರಂಭಿಸಿದ್ದೇನೆ. ಅನೇಕ ಮಹಿಳೆಯರಿಗೆ ಇದರಿಂದ ಅಪಾರ ಸಮಾಧಾನವಾಗಿದೆ. ಅನೇಕ ವಿಲಿಂಗಿ ಬಂಧುಗಳು ಸಮ್ಮತಿ ಸೂಚಕವಾಗಿ ತಲೆ ಅಲ್ಲಾಡಿಸಿದ್ದಾರೆ. ನಿನ್ನ ಚಿಕ್ಕಪ್ಪನಂತಹ ತಲತಲಾಂತರಿಗಳು ಮಾತ್ರ ತಲೆಗೆ ಕೈ ಕೊಟ್ಟಿವೆ ಎಂದರು.

ಚಿಕ್ಕಪ್ಪನತ್ತ ನೋಡಿದೆ. ತಲೆ ಕೆಡಿಸಿಕೊಂಡಂತೆ ಕಾಣಲಿಲ್ಲ. ಚಿತ್ರ ಬಿಡಿಸುತ್ತಲೇ ಇದ್ದರು. ಚಿಕ್ಕಮ್ಮ ವಿಜಯೋತ್ಸಾಹದ ಮೂಡ್‌ನಲ್ಲಿ ಮುಂದುವರಿಸಿದರು. ಸ್ತ್ರೀ ಕುಲಕ್ಕೆ ಅಂಟಿಸಲಾದ ಅನೇಕ ಅವಮಾನಕಾರಿ ಅಪವಾದಗಳನ್ನು ಯಾರೋ ಯಾವಾಗಲೋ ಹುಟ್ಟಿಸಿ ಹಾಕಿದ್ದಾರೆ. ಅವುಗಳನ್ನು ಈ ನಿನ್ನ ಚಿಕ್ಕಪ್ಪನ ಥರಾ ವ್ಯಂಗ್ಯಚಿತ್ರಕಾರರನೇಕರು ಪೋಷಿಸಿಕೊಂಡು ಬಂದಿದ್ದಾರೆ. ನೀನೇ

ನೋಡು ಲೆಕ್ಕ ಹಾಕಿದರೆ ಇವತ್ತಿಗೂ ಲಟ್ಟಣಿಗೆಯಲ್ಲೇ ತಮ್ಮ ಗಂಡಂದಿರಿಗೆ ಬಾರಿಸುವ 'ಟ್ರೆಡಿಶನಲ್ ವೆಪನ್ಸ್' ನಾರಿಯರು ಎಷ್ಟು ಜನ ಸಿಕ್ಕಾರು? ಆದರೆ ನಮ್ಮ ವ್ಯಂಗ್ಯ ಚಿತ್ರಕಾರರು ಇನ್ನೂ 'ಹೆಂಡತಿಯ ಕೈಯಲ್ಲಿ ಒಂದು ಲಟ್ಟಣಿಗೆ ಗಂಡನ ತಲೆಯ ಮೇಲೊಂದು ಬೊಕ್ಕೆ' ಈ ಕಲ್ಪನೆಗೇ ಜೋತು ಬಿದ್ದಿದ್ದಾರಪ್ಪ.... ಚಿಕ್ಕಮ್ಮ ಹೇಳಿದ್ದು ತಪ್ಪಿಲ್ಲವೆನ್ನಿಸಿತ್ತು.

ಎಲ್ಲೋ ಯಾವೂರಲ್ಲೋ ಒಬ್ಬಾಕೆ ಚಪಾತಿ ಲಟ್ಟಿಸಿ ಲಟ್ಟಿಸಿ, ಕೈ ಸೋತು ಬಂದ ಸಮಯದಲ್ಲಿ ಊರು ಸುತ್ತಿ ಬಂದ ಅವಳ ಉಂಡಾಡಿ ಗಂಡ ಈಕೆ ಮಾಡಿಟ್ಟ ಚಪಾತಿಯನ್ನೆಲ್ಲ ತಿಂದು ಮುಗಿಸಿ ತೇಗುತ್ತ ಕೊನೆಯಲ್ಲಿ ''ಥೂ ಇದೇನು ಚಪಾತೀನೊ ರಬ್ಬರ್ ಶೀಟೋ ಎಂದು ವಿಮರ್ಶೆಗಿಳಿದಿರಬೇಕು. ಹತ್ತಿರದಲ್ಲಿ ಇನ್ನೇನೂ ಸಿಗದೇ ಕೈಯಲ್ಲಿದ್ದ ಲಟ್ಟಣಿಗೆಯಲ್ಲೇ ಗಂಡನ ತಲೆಗೆ ಒಂದು ಬಾರಿಸಿರಬಹುದು. ತಲೆಗೊಂದು ಬೊಕ್ಕೆ ಮೂಡಿರಲೂಬಹುದು. ಆ ಖಾಸಗೀ ಹೊಡೆದಾಟವನ್ನು ಯಾವುದೋ ವ್ಯಂಗ್ಯಚಿತ್ರಕಾರ ಕಂಡು ಆ ದೃಶ್ಯದ ಸಮಯ ಸಂದರ್ಭಗಳನ್ನು ಅರಿಯುವ ಗೋಜಿಗೆ ಹೋಗದೇ ಕೇವಲ ಲಟ್ಟಣಿಗೆಯಲ್ಲಿ ಗಂಡನನ್ನು ಬಾರಿಸುತ್ತಿರುವ ಮಾನಿನಿಯ ಚಿತ್ರ ಬಿಡಿಸಿ ಪ್ರಕಟಿಸಿಬಿಟ್ಟ. ಅದನ್ನು ನೋಡಿದ ಸ್ತ್ರೀಯೇತರ ಪ್ರಪಂಚ ''ಎಲ್ಲಾ ಹೆಂಗಸರು ತಮ್ಮ ಗಂಡಂದಿರಿಗೆ ಲಟ್ಟಣಿಗೆಯಲ್ಲೇ ಬಾರಿಸುತ್ತಾರೆ'' ಎಂಬ ದೃಢ ನಂಬಿಕೆಯನ್ನು ತಾಳಿ ಬಿಟ್ಟಿತು. ಮಾರ್ಕ್‌ಟ್ವೈನ್ ಸಂಶೋಧಿಸಿದ್ದು ಪುರುಷರ ಈ ಬಗೆಯ ಜನರಲೈಜೇಶನನ್ನೇ.

ಹಾಗೆ ನೋಡಿದರೆ ಇವತ್ತಿನ 'ನಾಗರಿಕ ಗಂಡಂದಿರಿಗೆ ಬಾರಿಸಲು ಲಟ್ಟಣಿಗೆಯಂಥ ಸಾಂಪ್ರದಾಯಿಕ ಅಸ್ತ್ರಗಳಿಗಿಂತಲೂ ಹೆಚ್ಚು ಸೊಫಿಸ್ಟಿಕೇಟೆಡ್ ಆದ ಸಶಕ್ತವಾದ ಚೂಪಾದ 'ವಾಗಸ್ತ್ರಗಳು ಬಳಕೆಯಲ್ಲಿವೆ. ಹೆಂಡತಿ ಅಲ್ಲಿಲ್ಲವೆಂದು ಭಾವಿಸಿ ಪತಿ ಮಹಾಶಯನೊಬ್ಬ ಮಕ್ಕಳ ಬಳಿ,

''ನೋಡಿದ್ರೇನೋ ನಿಮ್ಮಮ್ಮನ ಕೆಲಸಾನ? ಅವಳು ಮಾಡೋದೆಲ್ಲ ಹೀಗೇ. ನಾನಾಗಿ ದ್ದಕ್ಕೆ....'' ಎಂದೇನಾದ್ರೂ ಪ್ರಾರಂಭಿಸಿದ್ದ ಅಂತಿಟ್ಕೊಳ್ಳಿ ಅಲ್ಲೇ ಇದ್ದ ಹೆಂಡತಿಗೆ ಅದು ಕಿವಿಯ ಮೇಲೆ ಬೀಳುತ್ತದೆ ಆಗ ಅವಳು;

''ಸಾಕು ಸುಮ್ಮನಿರ್ರೀ ಕಂಡಿದೀನಿ''

ಎಂದಷ್ಟು ಹೇಳುತ್ತಾಳೆ. ಗಂಡ ಗಪ್‌ಚಿಪ್. ''ನಿಮ್ಮ ಯೋಗ್ಯತೆಯೇನು ಎನ್ನೋದು ನನಗಲ್ಲದೆ ಬೇರೆ ಯಾರಿಗೆ ಗೊತ್ತು? ಮಹಾ ಬೇರೆಯೋರ ದೋಷ ಕಂಡು ಹಿಡಿಯೋಕೇ ಹುಟ್ಟಿದೋರ ಥರಾ ಆಡಬೇಡಿ'' ಎಂದು ಹೇಳಿ ಪತಿರಾಯನ ಬಾಯಿ ಮುಚ್ಚಿಸಿ ಹೊಲಿದು ಬೀಗ ಹಾಕಿ ಬೀಗದ ಕೈ ತಾನೇ ಸಿಕ್ಕಿಸಿಕೊಂಡು ಒಳ ನಡೆಯುತ್ತಾಳೆ. ಕೆಲ ಸಲ ಒಂದೂ ಪದದ ಅಗತ್ಯವಿಲ್ಲದೆ ಕೇವಲ ಒಂದು ಬಿರು ನೋಟದಿಂದ ಗಂಟಲಲ್ಲಿಯೇ ಮೂಡಿ ಬರುವ ಒಂದು ಬಗೆಯ ಹೂಂಕಾರದಿಂದ ಸಹ ಹೀಗೆ ಬಾಯ್ಮುಚ್ಚಿಸಬಲ್ಲಳು. ಇಂಥ ಅಸ್ತ್ರಗಳನ್ನೆಲ್ಲ ನೀವು ಸೆರೆ ಹಿಡಿಯಬಲ್ಲಿರೆ?'' ಎಂಬ ಚಿಕ್ಕಮ್ಮನ ಪ್ರಶ್ನೆಗೆ ಉತ್ತರಿಸದ ಚಿಕ್ಕಪ್ಪ ತತ್ವಜ್ಞಾನಿಯಂತೆ ಮಾಡು ದಿಟ್ಟಿಸುತ್ತ ಕೂತರು.

''ಹೋಗಲಿ ಇದು ಹೊಡೆದಾಟದಂಥ ಅಪಾಯಕಾರಿ ಸಂಗತಿಯ ಕುರಿತು ಇರುವ ತಪ್ಪು ಅಭಿಪ್ರಾಯವಾದ್ದರಿಂದ ಒತ್ತಟ್ಟಿಗಿಡೋಣ. ಅತ್ಯುಪಯುಕ್ತವಾದ ಆರ್ಥಿಕ ವಿಷಯದಲ್ಲೂ ಇಂಥ ಒಂದು ಜನಜನಿತ ನಂಬಿಗೆಯಿದೆ. ಅದೆಂದರೆ ಹೆಂಡಂದಿರು (ಬಹುವಚನ ಗಮನಿಸಬಹುದು) ತಂತಮ್ಮ ಗಂಡಂದಿರ ಜೇಬುಗಳನ್ನು ದೈನಂದಿನ ತನಿಖೆಗೊಳಪಡಿಸಿ ಅತಿಕ್ರಮಿತ ಕಾರ್ಯಾಚರಣೆ ನಡೆಸುತ್ತಾರೆ ಎಂಬುದು. ಹೀಗೆ ಜೇಬು ಜಾಲಾಟ ನಡೆಸಿ ಮರುದಿನ ಸಿಟಿ ಬಸ್ಸಿಗೆ ಆಗುವಷ್ಟು ದುಡ್ಡನ್ನು ಮಾತ್ರ ಜೇಬಿನಲ್ಲಿಟ್ಟು ಉಳಿದದ್ದನ್ನು ಲಪಟಾಯಿಸಿ ಸಾಸಿವೆ ಡಬ್ಬಿಗೆ ವರ್ಗಾಯಿಸುತ್ತಾರೆ ಎಂಬುದು ಪ್ರಚಲಿತವಿರುವ ಇನ್ನೊಂದು ಸಾರ್ವತ್ರಿಕ ನಂಬಿಗೆ....''

ಚಿಕ್ಕಮ್ಮ ನನ್ನನ್ನೇ ನ್ಯಾಯಾಧೀಶರ ಸ್ಥಾನದಲ್ಲಿರಿಸಿ ವಾದ ಮಂಡನೆ ಭಂಗಿಗಿಳಿದ ವಕೀಲೆಯಾಗಿದ್ದರು.

''ಇಲ್ಲಿ ಎರಡು ಸಂಶಯಗಳೇಳುತ್ತವೆ. ಇಂದಿನ ಆರ್ಥಿಕ ಪ್ರಗತಿಯ ಯುಗದಲ್ಲಿ ದುಡಿದು ತರಬಲ್ಲ ಗಂಡನು ಆಫೀಸು, ಕ್ಯಾಂಟೀನು ಮಾರ್ಕೆಟ್ಟುಗಳನ್ನು ಹಾದು ಮನೆಗೆ ಬಂದ ಮೇಲೂ ಅವನ ಜೇಬಿನಲ್ಲಿ ಏನಾದರೂ ಉಳಿದಿರಲು ಸಾಧ್ಯವೇ ಎಂಬುದು. ಎರಡನೆಯದು ಹೆಂಗಸರು ತಮ್ಮ ಗಂಡಂದಿರ ಜೇಬುಗಳನ್ನು ದೈನಂದಿನ ತನಿಖೆಗೆ ಒಳಪಡಿಸುವುದು ಕೇವಲ ಹಣಕ್ಕಾಗಿ ಮಾತ್ರ ಎಂಬ ಕೀಳು ಅಭಿಪ್ರಾಯವನ್ನು ಹೊಂದುವುದು ತಪ್ಪಲ್ಲವೆ ಎಂಬುದು.

ಹೋಗಲಿ ಬಿಡಿ, ಗಂಡಂದಿರ ಜೇಬನ್ನು ಸ್ವಚ್ಛಗೊಳಿಸೋದು ಧರ್ಮಪತ್ನಿಯರ ಸಾಂಸಾರಿಕ ಭಾಧ್ಯತೆಯಲ್ಲವೆ ಎಂಬ ಉದಾರ ನೀತಿ ತಾಳಲು ಸಾಧ್ಯವಾಗದವರು ಹಾಗೆ ತನಿಖಾ ಕಾರ್ಯದಲ್ಲಿ ಲಪಟಾಯಿಸಲ್ಪಡುವ ಹಣವನ್ನು ಹೆಂಡಂದಿರು ಏನು ಮಾಡುತ್ತಾರೆ ಎಂಬುದನ್ನಾದರೂ ಗಮನಿಸಬೇಕು. ರೈತನು ಬೆಳೆದ ಕಾಳುಗಳನ್ನು ಸ್ವಚ್ಛಗೊಳಿಸಿ ಜಳ್ಳುಕಾಳು ಬೇರ್ಪಡಿಸಿ ಕಾಳುಗಳನ್ನು ಸಂರಕ್ಷಿಸಿಡುವ ಕೆಲಸವನ್ನು ರೈತ ಪತ್ನಿಯರು ಮಾಡುತ್ತಾರೆ. ಅಂತೆಯೇ ಪತಿಯ ಜೇಬಿನಲ್ಲಿ ದಿನನಿತ್ಯ ಸೇರಿಕೊಳ್ಳಬಹುದಾದ ಜಳ್ಳು ಕಾಳುಗಳನ್ನು ಬೇರ್ಪಡಿಸಿ ಇಲಿ ಹೆಗ್ಗಣಗಳ ಪಾಲಾಗದಂತೆ ಸಂರಕ್ಷಿಸಿ ಕಡ್ಡಾಯ ಉಳಿತಾಯಕ್ಕೋ, ಉಪಯುಕ್ತ ವಿನಿಯೋಗಕ್ಕೋ ಪ್ರವರ್ತಿಸುವ ಕೆಲಸವನ್ನು ಹೆಂಡಂದಿರು ತಮ್ಮ ಪವಿತ್ರ ಕರ್ತವ್ಯವೆಂಬಂತೆ ಭಾವಿಸಿ ಮಾಡುತ್ತ ಬಂದಿದ್ದಾರೆ. ವ್ಯರ್ಥವಾಗಿ ಕ್ಲಬ್ಬಿನಲ್ಲೋ ಬಾರಿನಲ್ಲೋ ಜಾರಿ ಹೋಗಬಹುದಾಗಿದ್ದ ಈ ದ್ರವ್ಯರಾಶಿಯ ಪ್ರವಾಹದ ದಿಕ್ಕನ್ನು ಅದೃಶ್ಯ ರೂಪದಲ್ಲೇ ಇರಲಿ, ಅತಿಕ್ರಮಿತ ರೂಪದಲ್ಲೇ ಇರಲಿ ವ್ಯರ್ಥವಾಗದಂತೆ ಎತ್ತಿ ತೆಗೆದು ಸಾಸಿವೆ ಡಬ್ಬಿಯ ಆಪದ್ಧನಕ್ಕೋ 'ಹನಿಯಿಂದ ಹಳ್ಳದ ಕರಡಿಗೆ'ಗೋ ವರ್ಗಾಯಿಸುವ ಆರ್ಥಿಕವಾದ ಸುತ್ತ್ಯ ಕೆಲಸದಲ್ಲಿಯೇ ತೊಡಗಿದ್ದಾರೆ. ಪತ್ನಿಯರು ಕೈಗೊಳ್ಳುವ ಈ ಸಾಂಸಾರಿಕ (ಹಕ್ಕು ಅಥವಾ ಕರ್ತವ್ಯ ಏನೇ ಕರೆಯಿರಿ) ಕೃತ್ಯವೊಂದನ್ನು ಹೆಂಗಸರು ಮಾಡುವ ಕುಕೃತ್ಯಗಳಲ್ಲಿಯೇ ಪ್ರಧಾನವಾದುದು ಎಂಬಂತೆ ನಿಂದೆಗೆ ಗುರಿ ಮಾಡುತ್ತ ಬಂದಿರೋದು ವಿಷಾದನೀಯ. ಅಲ್ಲದೆ ಬೀದಿ ಬದಿ ಹಾವಳಿಯ ಲಾಟರಿ ಲಕ್ಷ್ಮಿಯರನ್ನು ಕಿಸೆ ತುಂಬಿಸಿಕೊಂಡು ಬರುವ ಲಾಟರಿ ಪ್ರಿಯ ಗಂಡಂದಿರ ಜೇಬುಗಳಲ್ಲಿ ಗೃಹಲಕ್ಷ್ಮಿಯರಿಗೆ ಉಳಿಯೋದಾದ್ರೂ ಏನು?

ಮೇಲ್ಭಾಗದ ಕಿಸೆಯಲ್ಲಿ ಸಿಕ್ಕಿಂ ಲಕ್ಷ್ಮಿ, ಪ್ಯಾಂಟಿನ ಕಿಸೆಯಲ್ಲಿ ಭೂತಾನ್ ಲಕ್ಷ್ಮಿ, ಎಡಗಡೆ ಜೇಬ್ನಲ್ಲಿ ಜೈ ಮಾತ್ರ ಭೂಮಿ.... ಇವನ್ನೆಲ್ಲ ತೆಗೆದು ಎಸೆದು ಮಾಡಬೇಕಾದ ಗೃಹಲಕ್ಷ್ಮಿ ಈಗೀಗ ಬರಿಗೈ ಲಕ್ಷ್ಮಿ. ಪಾಪ ಕನಿಕರಕ್ಕೆ ಅರ್ಹಳಾದವಳು ಇವಳೇ ಅಲ್ಲವೆ?

ಎಂದು ಮುಗಿಸಿದಾಗ ನನಗೆ ನಿಜಕ್ಕೂ ನ್ಯಾಯಾಧೀಶನ ಇಕ್ಕಟ್ಟು ಒದಗಿ ಬಂತು. ಪ್ರತಿವಾದಿ ಭಯಂಕರಳಾದ ಚಿಕ್ಕಮ್ಮನ ಏಕಮುಖವಾದಕ್ಕೆ ಪ್ರತಿಯಾಗಿ ಪ್ರತಿವಾದಿಯ ಸ್ಥಾನದಲ್ಲಿ ಸದ್ಯಕ್ಕೆ ಇರುವ ಚಿಕ್ಕಪ್ಪನಿಗೆ ಹೇಳಲೇನಾದರೂ ಇದೆಯೇ? ಎಂದು ಕೇಳಿದೆ. ''ನನಗೆ ಹೇಳಲೇನೂ ಇಲ್ಲ ಮಾಡಲಿದೆ'' ಎಂದಷ್ಟು ಹೇಳಿದ ಚಿಕ್ಕಪ್ಪ ಚಿತ್ರ ಮಾಡಲು ತೊಡಗಿದರು.

ನೀವು ಹೇಳುವುದು ಹೇಳುತ್ತಾ ಇರಿ ಇವರುಗಳು ಮಾಡುವುದು ಮಾಡುತ್ತಾ ಇರುತ್ತಾರೆ'' ಎಂದಷ್ಟು ಹೇಳಿ ನಾನು ಎದ್ದು ಬಂದೆ. ಟೈಂ ಪಾಸ್ ಸಾಕಷ್ಟು ಆಗಿತ್ತು.

■

## ಅಂತರ

ಚುಂಬಕಕ್ಕೂ
ಚುಂಬನಕ್ಕೂ
ಏನಿದೆ ಅಂತರ!
ಚುಂಬಕದ ಗುಣ
ಸೆಳೆತ ಸುಖರಹಿತ!
ಚುಂಬನದ ಗುಣ
ಸುರತ-ಸುಖಸಹಿತ!

■ ಎಂ.ಎನ್.ವ್ಯಾಸರಾವ್

## ಬದುಕು ಬದಲಿಸಿದ

# ಈ ಶತಮಾನದ ವಿಜ್ಞಾನ



ನೂರು ವರ್ಷದ ಹಿಂದೆ.... ಈಗಿನ ಹಾಗೆ ವಿದ್ಯುತ್ ಇರಲಿಲ್ಲ. ಕಾರ್ಖಾನೆಗಳು ನಡೆಯುತ್ತಾ ಇದ್ದುದು ಹೊಗೆಯುಗುಳುವ ಕಲ್ಲಿದ್ದಲು ಉರಿಸಿ. ಸೈನಿಕರ ದೇಹದೊಳಗೆ ಗುಂಡು ಹೊಕ್ಕರೆ ವೈದ್ಯರು ಗಾಯ ಬಗೆದು ಗುಂಡಿಗಾಗಿ ಹುಡುಕಾಡಬೇಕಾದ ಪರಿಸ್ಥಿತಿ. ಈಗ ನಾವು ಎಷ್ಟೊಂದು ಸುಧಾರಿಸಿದ್ದೇವೆ ಅಲ್ಲವೆ !

ಬೆಂಗಳೂರಿನ ಹೆಚ್.ಎ.ಎಲ್.ನಲ್ಲಿ ಸ್ವತಃ ಇಂಜಿನಿಯರ್ ಆಗಿರುವ ನೇಮಿಚಂದ್ರ ಅವರು ಇಪ್ಪತ್ತನೇ ಶತಮಾನವನ್ನು ಒಂದು ಸುತ್ತು ಹಾಕಿದ್ದಾರೆ.

ರೇಡಿಯೋ, ದೂರದರ್ಶನ, ದೂರವಾಣಿ, ಕಂಪ್ಯೂಟರ್‌ಗಳ ನಡುವೆ ಹುಟ್ಟಿ ಬೆಳೆದ ನಮಗಿಂದು ವಿಜ್ಞಾನದ ಈ 'ಅದ್ಭುತ'ಗಳು ಯಾಂತ್ರಿಕವಾಗಿವೆ. ಒಂದು ಕ್ಷಣ ಕಣ್ಮುಚ್ಚಿಕೊಂಡು ಹತ್ತೊಂಭತ್ತನೇ ಶತಮಾನದ ಪೂರ್ವಾರ್ಧಕ್ಕೆ ಹೋಗಿ. ವಿದ್ಯುತ್ ದೀಪವಿಲ್ಲ, ಮಿಣುಗು ಮೋಂಬತ್ತಿಗಳು, ಸೀಮೆ ಎಣ್ಣೆ ಬುಡ್ಡಿಗಳು, ಅಸಹ್ಯದ ವಾಸನೆ ಹೊರಡಿಸುವ ಅನಿಲದ ದೀಪಗಳು, ಕಲ್ಲಿದ್ದಲಿನ ಹೊಗೆಯುಗುಳಿ ನಿಂತ ಕಾರ್ಖಾನೆಗಳು, ರಾತ್ರಿಗಳೆಂದರೆ ಕತ್ತಲೆಯ ಕಾರಾಗೃಹಗಳು, ಅನೇಕಾನೇಕ ಆತಂಕಕಾರಿ ರೋಗಗಳಿಗೆ ಚಿಕಿತ್ಸೆ ತಿಳಿದಿಲ್ಲ. ಒಂದು ಗೀರು ಗಾಯವೂ ಸೆಪ್ಟಿಕ್ ಆಗಿ ಪ್ರಾಣಾಂತಿಕವಾಗಬಲ್ಲದು. ಯುದ್ಧದಲ್ಲಿ ಸಿಡಿದ ಮದ್ದು ಗುಂಡಿನ ಚೂರು ದೇಹದಲ್ಲಿ ಹುಗಿದಿದೆ, ಕ್ಷ-ಕಿರಣ ಕೂಡಾ ಇಲ್ಲದ ವೈದ್ಯರು ಗಾಯಗೊಂಡ ಯೋಧನ ಮಾಂಸವನ್ನು ಬಗೆದು, ಗುಂಡುಗಳಿಗೆ ತಡಕಾಡಬೇಕು. ಸ್ತ್ರೀಯರ ಬದುಕಂತೂ ಕುಟ್ಟಿ, ತಿರುವಿ, ಬೀಸುವ ದಿನದಿನದ ಯಾಂತ್ರಿಕತೆಯಲ್ಲಿ ಕಟ್ಟಿ ಬಿದ್ದಿದೆ. ಹೆರುವ ಆಯ್ಕೆಯಿಲ್ಲ, ಸಂತಾನ ನಿಯಂತ್ರಣದ ಪರ್ಯಾಯಗಳಿಲ್ಲ, ಬಿಡುವಿಲ್ಲದ ಬಸಿರು ಬಾಣಂತನಗಳಲ್ಲಿ ಬಂಧಿತ ಹೆಣ್ಣ ಬದುಕು. ಇಂಥಾ ಬದುಕನ್ನು ಈ ಶತಮಾನದ ವಿಜ್ಞಾನ ಬದಲಿಸಿತು, ಗುರುತು ಸಿಗದಂತೆ.

ಈ ಶತಮಾನದ ವಿಜ್ಞಾನದ ಮನ್ನಡೆ ಬಹುಶಃ ಯಾವುದೇ ಶತಮಾನಕ್ಕೆ ಹೋಲಿಸಲಾರದಷ್ಟು ವಿಪರೀತವಿದೆ. ಇದೇ ಶತಮಾನದಲ್ಲಿ ಮನುಷ್ಯನ ಹಾರುವ ಕಲ್ಪನೆ ವಾಸ್ತವವಾಯಿತು. ಇದೇ ಶತಮಾನದಲ್ಲಿ ಕಂಪ್ಯೂಟರುಗಳು ಬದುಕಿನೆಲ್ಲ ರಂಗಗಳಿಗೆ ಕಾಲಿಟ್ಟು ಸರ್ವಾಂತರ್ಯಾಮಿಗಳಾದವು. ಇದೇ ಶತಮಾನದಲ್ಲಿ ಸಂಪರ್ಕ ವ್ಯವಸ್ಥೆ ಹಿಗ್ಗಿ ಬೆಳೆದು, ಇಡೀ ಭೂಮಿಯನ್ನು ಕುಗ್ಗಿಸಿ ಸಣ್ಣ ಗ್ರಾಮವಾಗಿಸಿತು. ಮಾಹಿತಿಯ ಮಹಾಕ್ರಾಂತಿ ಸಾಧ್ಯವಾಯಿತು. ಇದೇ ಶತಮಾನದಲ್ಲಿ ವಿಜ್ಞಾನಿಗಳು ನಮ್ಮ ಜೀವಕೋಶದ ಡಿ.ಎನ್.ಎ.ಯ ಗುಟ್ಟು ಒಡೆದರು. ಜೆನಿಟಿಕ್ ರಂಗ ಬೆಳೆದು ನಿಂತಿತು. ಇದೇ ಶತಮಾನದಲ್ಲಿ ವೈದ್ಯರಂಗದ ಅದ್ಭುತ ಸಂಶೋಧನೆಗಳು ಜೀವ ಉಳಿಸಿದವು. ಹೊಸ ಹೊಸ ರೋಗಪತ್ತೆಯ ವಿಧಾನಗಳು, ರೋಗ ಚಿಕಿತ್ಸೆಯ ವಿಧಾನಗಳು ಕಂಡು ಬಂದವು. ರಕ್ತದಾನದ ಸಾಧ್ಯತೆಯಷ್ಟೇ ಅಲ್ಲ, ಒಬ್ಬನ ಅಂಗಾಂಗಳನ್ನು ಕಿತ್ತು ಇನ್ನೊಬ್ಬನಿಗೆ ಜೋಡಿಸುವ ಸಾಧ್ಯತೆ ಮೂಡಿಬಂದಿತು.

ಈ ಶತಮಾನ ಎಲೆಕ್ಟ್ರಾನಿಕ್ಸ್ ಮತ್ತು ಕಂಪ್ಯೂಟರ್ ರಂಗದ ಅತಿ ವೇಗದ

ವಿಕಾಸವನ್ನು ಕಂಡಿತು. ಎಲೆಕ್ಟ್ರಾನಿಕ್ಸ್, ಸಂಶೋಧನೆಗೆ ಸಾಧನವಾಗಿ, ನಮಗೆ ಮನೋರಂಜನೆ, ಅನುಕೂಲ, ಆರಾಮ, ಐಶಾರಾಮಗಳನ್ನಷ್ಟೇ ತಂದಿಲ್ಲ, ವೈದ್ಯರಂಗದಲ್ಲಿ ಎಲೆಕ್ಟ್ರಾನಿಕ್ಸ್ ಇಂದು ರೋಗ ಪತ್ತೆಯ ಕೆಲಸದಿಂದ ಹಿಡಿದು, ಅತಿ ಸೂಕ್ಷ್ಮ ಶಸ್ತ್ರಕ್ರಿಯೆಗೆ ರೋಬಾಟ್‌ಗಳ ರೂಪದಲ್ಲಿ ಒದಗಿ ಬಂದಿದೆ. ಎಲೆಕ್ಟ್ರಾನಿಕ್ಸ್ ನಮ್ಮ ಎದೆಯ ಮಿಡಿತವನ್ನು ನಿಯಂತ್ರಿಸಿ ಜೀವ ಉಳಿಸುವ 'ಪೇಸ್ ಮೇಕರ್' ಕೆಲಸವನ್ನೂ ಮಾಡುತ್ತಿದೆ. ರಕ್ತ, ಮೂತ್ರ, ಕೊಲೆಸ್ಟ್ರಾಲ್ ಪರೀಕ್ಷಿಸಿ ತಟ್ಟನೆ ತಿಳಿಸುವ ಎಲೆಕ್ಟ್ರಾನಿಕ್ಸ್ ಸಲಕರಣೆಗಳಿರಲಿ, ದೇಹವನ್ನು ಬಗೆಯದೆಯೇ ದೇಹದೊಳಗಿನದನ್ನೆಲ್ಲ ನೋಡಬಲ್ಲ, ರೋಗವನ್ನು ಗುರುತಿಸಬಲ್ಲ ವೈದ್ಯಕೀಯ ಸಾಧನಗಳನ್ನು ಎಲೆಕ್ಟ್ರಾನಿಕ್ಸ್ ಒದಗಿಸಿಕೊಟ್ಟಿದೆ.

ಕಂಪ್ಯೂಟರುಗಳು ಇಂದು ಬಸ್, ರೈಲು, ವಿಮಾನ ನಿಲ್ದಾಣ, ಬ್ಯಾಂಕ್, ಕಛೇರಿ, ಕಾರ್ಖಾನೆ, ಶಾಲೆ, ಕಾಲೇಜು, ಆಸ್ಪತ್ರೆ, ಅಂಗಡಿ, ಮನೆಗಳಿಗೆ ನುಗ್ಗಿ ಬದುಕಿನೆಲ್ಲ ರಂಗಗಳಿಗೂ ಹೊಕ್ಕು ಸರ್ವಾಂತರ್ಯಾಮಿಗಳಾಗಿವೆ. ಇಂದು ಕಂಪ್ಯೂಟರ್ ಕೇವಲ ಗುಣಿಸುವ ಗಣಕ ಯಂತ್ರವಾಗಿ ಮಾತ್ರ ಉಳಿದಿಲ್ಲ. ನಮ್ಮ ಜೀವನ ಶೈಲಿಯನ್ನೇ ಬದಲಿಸಿರುವ ಹೊಸ ಬದುಕಿನ ಹರಿಕಾರನಾಗಿದೆ. ನಾವು ಕಲಿಯುವ, ತಿಳಿಯುವ, ಕೆಲಸ ಮಾಡುವ, ಜನರನ್ನು ಸಂಪರ್ಕಿಸುವ, ಸ್ನೇಹ - ಸಂಬಂಧಗಳನ್ನು ಕಾಯ್ದುಕೊಳ್ಳುವ ಬಗೆಯಲ್ಲಿಯೇ ಕ್ರಾಂತಿ ತಂದಿದೆ. ನಮ್ಮ ಬೆರಳ ತುದಿಗೆ ಜಗತ್ತನ್ನು ತಂದಿಟ್ಟು 'ಮಾಹಿತಿಯ ಮಹಾ ಹೆದ್ದಾರಿ'ಗೆ ಬಾಗಿಲು ತೆರೆದಿದೆ.

ಇದೇ ಶತಮಾನದಲ್ಲಿ ಮನುಷ್ಯ ಅಂತರಿಕ್ಷವನ್ನೂ ಜಯಿಸಿದ. ಈ ಶತಮಾನದ ಐವತ್ತರ ದಶಕದಲ್ಲಿ ಕೃತಕ ಉಪಗ್ರಹಗಳನ್ನು ಆಕಾಶಕ್ಕೆ ಉಡಾಯಿಸಿದ. 1961ರಲ್ಲಿ ಯೂರಿ ಗಗಾರಿನ್‌ನನ್ನು ಹೊತ್ತ ಅಂತರಿಕ್ಷ ನೌಕೆ ಭೂಮಿಯನ್ನು ಪ್ರದಕ್ಷಿಣೆ ಹಾಕಿ ಬಂದರೆ, 1969ರಲ್ಲಿ ಅಪೋಲೋ 11ರಲ್ಲಿ ಪ್ರಯಾಣಿಸಿದ ನೀಲ್ ಆರ್ಮ್‌ಸ್ಟ್ರಾಂಗ್ ಚಂದ್ರನ ಮೇಲೆ ಕಾಲಿಟ್ಟು ಬಂದ. ಅಂತರಿಕ್ಷ ಶೋಧಕಗಳು ಬುಧ, ಮಂಗಳ, ಶುಕ್ರ, ಗುರು ಗ್ರಹಗಳ ಛಾಯಾಚಿತ್ರಗಳನ್ನು ಕಳುಹಿಸಿಕೊಟ್ಟಿದೆ. 1997ರಲ್ಲಿ ಮಂಗಳನ ಮೇಲಿಳಿದ 'ಪಾತ್ ಫೈಂಡರ್' ಶೋಧಕ ತಾನು ಒಯ್ದಿದ್ದ 'ಸೋಜರ್ನರ್' ರೋಬಾಟ್ ವಾಹನವನ್ನು ಮಂಗಳನ ಮೇಲೆ ಇಳಿಸಿ ಮಣ್ಣು ಪರೀಕ್ಷೆ ಮಾಡಿಸಿತು!

ಆದರೆ ಇಷ್ಟೆಲ್ಲ ಸಾಧನೆಯ ಈ ಶತಮಾನದಲ್ಲಿಯೇ ವಿಜ್ಞಾನದ ಕರಾಳ ಸಾಧ್ಯತೆಯಾದ ಅಣುಬಾಂಬು ಸ್ಫೋಟಿಸಿತು. ಭೈಜಿಕ, ಜೈವಿಕ, ರಾಸಾಯನಿಕ ಯುದ್ಧ ಸಾಧ್ಯತೆಯ ದಟ್ಟ ನೆರಳು, ಸದಾ ಮನುಕುಲದ ಮೇಲೆ ಆವರಿಸಿ ನಿಂತಿತು.

**ವಾಯುಯಾನ** : ಪಕ್ಕೆಗೆರಡು ರೆಕ್ಕೆ ಕಟ್ಟಿಕೊಂಡು ಹಕ್ಕಿಯಂತೆ ಹಾರುವ ಮನುಷ್ಯನ ಆಸೆ ಇತ್ತೀಚಿನದೇನಲ್ಲ. 2500 ವರ್ಷಗಳಾಗಿವೆ ಮನುಷ್ಯ ಹಾರಬಲ್ಲ ತಾಂತ್ರಿಕತೆಯತ್ತ ಚಿಂತಿಸಿ. ಆದರೆ, ಆತ ಕಡೆಗೂ ಹಾರಿದ್ದು, ಈ ಶತಮಾನದ ಆದಿಯಲ್ಲಿ, ಡಿಸೆಂಬರ್ 17, 1903ರ ಕೊರೆವ ಚಳಿಯ ಮುಂಜಾನೆ. ಉತ್ತರ ಕ್ಯಾರೋಲಿನಾದ 'ಕಿಟ್ಟಿ ಹಾಕ್'ನ ಮರಳುದಿಬ್ಬ, ಅದೆಷ್ಟೋ ವರ್ಷಗಳ ಪ್ರಯತ್ನ ಮತ್ತು ಪ್ರಯೋಗಗಳ ಅಂಚಿಗೆ ರೈಟ್ ಸಹೋದರರು ತಮ್ಮ 338 ಕೆ.ಜಿ. ತೂಕದ, 13 ಅಶ್ವಶಕ್ತಿಯ ಇಂಜನ್ ಪಡೆದಿದ್ದ 'ವಿಮಾನ'ವನ್ನು ನಿರ್ಮಿಸಿದ್ದರು. ಅದನ್ನು ಈ ಗುಡ್ಡಕ್ಕೆ ಹೊತ್ತು ಬಂದಿದ್ದರು. ಅದೋ ವಿಮಾನ ಏರಿತು, ಆರಿವಿಲ್ಲೆ ರೈಟ್ ಗಂಟೆಗೆ 13 ಕಿಲೋಮೀಟರ್ ವೇಗದಲ್ಲಿ 12 ಸೆಕೆಂಡುಗಳ ಕಾಲ ಹಾರಿ, 120 ಅಡಿ ದೂರಕ್ಕೆ ಸಾಗಿ ಇಳಿದ. ಐತಿಹಾಸಿಕ ಘಟನೆ ಇದಾಗಿತ್ತು. ಆರಿವಿಲ್ಲೆ ಮನುಷ್ಯನ ಮೊಟ್ಟ ಮೊದಲ ಶಕ್ತಿಚಾಲಿತ ಹಾರಾಟವನ್ನು ಸಾಧಿಸಿ, ಚರಿತ್ರೆ ನಿರ್ಮಿಸಿದ.

ಈ ಶತಮಾನದ ಹಾರಾಟದ ಕತೆ, ಒಂದು ಸಾಹಸಗಾಥೆ, ಅನೇಕ ದಿಟ್ಟ ಜನರ ರೆಕ್ಕೆ ಮುರಿದ ಯತ್ನದಲ್ಲಿ ಮೇಲೇರಿದೆ, ಮುಂದುವರೆದಿದೆ ವೈಮಾನಿಕ ರಂಗ. 20 ನೇ ಶತಮಾನದ ತುತ್ತತುದಿಯಲ್ಲಿ ವೈಮಾನಿಕ ರಂಗ ಭಾರೀ ಅದ್ಭುತಗಳನ್ನು ಸಾಧಿಸಿದೆ. ವಿಮಾನದ ಹಾರಾಟದ ವಿಧಾನವೇ ಗುರುತು ಸಿಗದಂತೆ ಬದಲಾಗಿದೆ. ಮೊದಲು ವಿಮಾನದ ನಿಯಂತ್ರಣ ಪೂರ್ಣ ಚಾಲಕನ ಜವಾಬ್ದಾರಿಯಾಗಿತ್ತು. ಇಂದು ಚಾಲಕನಿಂದ ಸ್ವತಂತ್ರವಾದ, ಯೋಜಿಸಿ ಹೇಳಿದ ರೀತಿಯಲ್ಲಿ ವಿಮಾನ ಹಾರಿಸಲು ಕಂಪ್ಯೂಟರುಗಳನ್ನು ಅಳವಡಿಸಿದ 'ಸ್ವಯಂಹಾರಾಟ ನಿಯಂತ್ರಕ ವ್ಯವಸ್ಥೆ' ಇದೆ. ಯಾಂತ್ರಿಕ ನಿಯಂತ್ರಣಕ್ಕೆ ಬದಲಾಗಿ, ವಿದ್ಯುತ್ ಸಂಕೇತಗಳಿಂದ ನಿಯಂತ್ರಿಸಲ್ಪಟ್ಟ 'ತಂತಿಯಿಂದ ಹಾರಾಟ' (fly by wire) ಸಾಧ್ಯವಾಗಿದೆ. ಇದಲ್ಲದೆ ಬೆಳಕಿನ ತಂತುಗಳನ್ನು ಉಪಯೋಗಿಸಿ 'ಬೆಳಕಿನಿಂದ ಹಾರಾಟ' (fly by light) ಸಾಧ್ಯವಾಗಿದೆ. ಇಷ್ಟು ಸಾಲದೆಂದು, ಇದೀಗ ಬರೀ ಆಲೋಚನೆಯಿಂದಲೇ ವಿಮಾನ ಹಾರಿಸುವ (fly by thought) ಪ್ರಯತ್ನವನ್ನು ಅಮೆರಿಕೆಯ 'ಆರ್ಮ್‌ಸ್ಟ್ರಾಂಗ್ ಏರೋಸ್ಪೇಸ್ ಮೆಡಿಕಲ್ ರಿಸರ್ಚ್ ಲ್ಯಾಬೊರೇಟರಿ' ನಡೆಸುತ್ತಿದೆ.

ಈ ಶತಮಾನ ಭಾರೀ ಜೆಟ್ ವಿಮಾನಗಳನ್ನು, ಶಬ್ದವೇಗವನ್ನು ಭೇದಿಸಿ ಹಾರುವ ವಿಮಾನಗಳನ್ನು ಕಂಡುಹಿಡಿದಂತೆ, ಮೆಲ್ಲನೆ ಸಾಗುವ ಪುಟ್ಟ ಹೆಲಿಕಾಪ್ಟರುಗಳನ್ನೂ ಕಂಡು ಹಿಡಿಯಿತು. 1907ರ ನವೆಂಬರ್ 13ರಂದು ಫ್ರಾನ್ಸಿನ ಪಾಲ್ ಕಾರ್ನೂ ನಿರ್ಮಿಸಿದ ಹೆಲಿಕಾಪ್ಟರ್, ನೆಲದಿಂದ ಒಂದು ಅಡಿ ಮೇಲಕ್ಕೆ ಏರಿ, 20 ಸೆಕೆಂಡುಗಳ ಕಾಲ ಹಾರಿ, ಮೊಟ್ಟ ಮೊದಲಿಗೆ ಮನುಷ್ಯನನ್ನು ಹೊತ್ತು ಸ್ವತಂತ್ರವಾಗಿ ಹಾರಿದ ಹೆಲಿಕಾಪ್ಟರ್ ಎನಿಸಿತು. ಹೆಲಿಕಾಪ್ಟರುಗಳಿಗೆ ವಿಮಾನಗಳಂತೆ ಪಕ್ಕಕ್ಕೆರಡು ರೆಕ್ಕೆಗಳಿಲ್ಲ. ಆದರೆ ತಲೆಯ ಮೇಲೆ ಗಿರ ಗಿರ ತಿರುಗುವ ಅಲಗುಗಳಿವೆ. ಈ ಶತಮಾನ ಎರಡು ಮಹಾಯುದ್ಧಗಳನ್ನು ಕಂಡಿದೆ. ಯುದ್ಧದ ಬಿಸಿ ಕುಂಡದಲ್ಲಿ, ಸಾವಿನ ಬಗಲಿನಲ್ಲೇ ಹೆಲಿಕಾಪ್ಟರಿನ ಜೀವರಕ್ಷಕ ಪಾತ್ರದ ಅರಿವಾಯಿತು.

ಜನವರಿ 3, 1944ರ ಕೊರೆವ ಚಳಿಯ ರಾತ್ರಿ. ಎರಡನೇ ಮಹಾಯುದ್ಧದ ಸಮಯ. ನ್ಯೂಜರ್ಸಿಯ ಕಡಲ ತೀರಕ್ಕೆ ಸಮೀಪದಲ್ಲಿ ನೌಕಾಪಡೆಯ ಯುದ್ಧದ ಹಡಗೊಂದು ಆಸ್ಫೋಟಗೊಂಡಿತು. ಸುಟ್ಟವರ, ಸತ್ತವರ ಬಹುಸಂಖ್ಯೆಯ ನಡುವೆ, ಗಾಯಗೊಂಡ 70 ಮಂದಿಯನ್ನು, ಹತ್ತಿರದ ಸ್ಯಾಂಡಿ ಹುಕ್ ಆಸ್ಪತ್ರೆಗೆ ಸಾಗಿಸಲಾಯಿತು. ಈ ಜನರ ಜೀವ ಉಳಿಯಲು ಅತಿ ಶೀಘ್ರವಾಗಿ ಅತ್ಯಧಿಕ ಪ್ರಮಾಣದಲ್ಲಿ ರಕ್ತದ ಪ್ಲಾಸ್ಮದ ಅಗತ್ಯವಿತ್ತು. ಆದರೆ ಪ್ಲಾಸ್ಮ, ನಡುವೆ ನಿಂತ ಕೊಲ್ಲಿಯಾಚೆ 15 ಮೈಲಿ ದೂರದಲ್ಲಿ ಮ್ಯಾನ್ಹಾಟನ್ನಿನ ತುದಿಯಲ್ಲಿ ದೊರೆಯಲಿತ್ತು. ಮಳೆ, ಹಿಮದ ನಡುವೆ ತೀವ್ರವಾಗಿ ಬೀಸಿ ಬಂದ ಗಾಳಿಯೂ ಕೂಡಿ, ಹದಗೆಟ್ಟ ಹವಾಮಾನ, ದೋಣಿಯಲ್ಲಿ ಕೊಲ್ಲಿ ದಾಟಲು ಹೊರಟರೆ ಗಂಟೆಯ ಮೇಲಾಗುತ್ತಿತ್ತು. ಕಾರಿನಲ್ಲಿ ಸುತ್ತಿ ಬಳಸುವ ಹಾದಿ, ಮತ್ತೂ ದೀರ್ಘವಾದದ್ದು, ಗಾಯಾಳುಗಳ ಬಳಿ ಉಸಿರು ಹಿಡಿದಿರಲು ಅಷ್ಟು ಸಮಯವಿರಲಿಲ್ಲ. ತಟ್ಟನೆ ನೌಕಾ ಅಧಿಕಾರಿಗಳಿಗೆ ಏನೋ ಹೊಳೆಯಿತು. ಅದೀಗಷ್ಟೆ ಅವರ ನೌಕಾಪಡೆಗೆ ಸಿಕೊರೋಸ್ಕಿ YR-4 ಹೆಲಿಕಾಪ್ಟರ್ ಸೇರ್ಪಡೆಯಾಗಿತ್ತು. ಕಮಾಂಡರ್ ಫ್ರಾಂಕ್ ಎರಿಕ್ಸನ್, ಹೆಲಿಕಾಪ್ಟರನ್ನು ಹೊರತಂದು, ಆ ಹಿಮ ಮಳೆ ಬಿರುಗಾಳಿಯ ನಡುವೆ ನೇರ ಕೊಲ್ಲಿಯ ಮೇಲೆ ಹಾರಿಸಿ, ಮ್ಯಾನ್ಹಾಟನ್ನಿನ ತುದಿ ತಲುಪಿ, ಅಲ್ಲಿ ಕಾದಿರಿಸಿದ್ದ ರಕ್ತದ ಪ್ಲಾಸ್ಮಾವನ್ನು ಹೊತ್ತು ಅದೇ ತೀವ್ರ ಗಾಳಿಯನ್ನು ಸೀಳಿ ಬಂದು ಸ್ಯಾಂಡಿ ಹುಕ್ ಆಸ್ಪತ್ರೆಗೆ ಧಾವಿಸಿದಾಗ, ಒಟ್ಟು ಪ್ರಯಾಣ ಕೇವಲ 14 ನಿಮಿಷಗಳನ್ನು ತೆಗೆದುಕೊಂಡಿತ್ತು. ಸಮಯಕ್ಕೆ ಸರಿಯಾಗಿ ಸಂಜೀವಿನಿಯನ್ನು ಹೊತ್ತು ತಂದ ಹೆಲಿಕಾಪ್ಟರಿನ 'ಜೀವ ರಕ್ಷಕ' ಶಕ್ತಿ ಮೊಟ್ಟ ಮೊದಲಿಗೆ ಅರಿವಾಗಿತ್ತು.

ವಿಮಾನಗಳಿಗೆ 'ಓಡುಹಾದಿ'ಗಳು (runway) ಬೇಕು. ಹೆಲಿಕಾಪ್ಟರುಗಳು ಹಾಗಲ್ಲ. 'ಓಡುಹಾದಿ'ಯಲ್ಲಿ ಅಷ್ಟು ದೂರಕ್ಕೆ ಓಡುವ ಅಗತ್ಯವೇ ಇವಕ್ಕಿಲ್ಲ, ನೇರವಾಗಿ ಮೇಲಕ್ಕೆ ಏರಬಲ್ಲವು, ಇಳಿಯಬಲ್ಲವು. ಯಾವ ದಿಕ್ಕಿಗೆ ಬೇಕಾದರೂ ತಟ್ಟನೆ ತಿರುಗಬಲ್ಲವು. ನಿಶ್ಚಲವಾಗಿ ಗಾಳಿಯಲ್ಲಿ ಒಂದೇ ತಾಣದಲ್ಲಿ ನಿಲ್ಲಬಲ್ಲವು. ಹಾಗೆಂದೇ ಹೆಲಿಕಾಪ್ಟರುಗಳಿಗೆ ಸುವ್ಯವಸ್ಥಿತ ವಿಮಾನ ನಿಲ್ದಾಣಗಳು ಬೇಕಿಲ್ಲ. ತೆರೆದ ಒಂದಿಷ್ಟು ಜಾಗವಾದರೆ ಸಾಕು. ಕಟ್ಟಡಗಳ ತಾರಸಿಯ ಮೇಲೆ, ತೈಲಕೇಂದ್ರಗಳ ಮೇಲೆ, ಹಡಗಿನ ಅಟ್ಟದ ಮೇಲೆ, ಗೊಂಡಾರಣ್ಯದ ನಟ್ಟ ನಡುವಿನ ಒಂದಿಷ್ಟು ತೆರಪು ತಾಣವಾದರೂ ಸಾಕು, ಎಲ್ಲೆಂದರಲ್ಲಿ ಲೀಲಾಜಾಲವಾಗಿ ಇಳಿಯಬಲ್ಲವು. ಬೆಂಕಿ, ಪ್ರವಾಹ, ಅಪಘಾತ, ಯುದ್ಧದಂತಹ ತುರ್ತು ಸಮಯದಲ್ಲಿ ದುರ್ಗಮ ಸ್ಥಳಗಳಿಗೆ ಹೆಲಿಕಾಪ್ಟರುಗಳು ಧಾವಿಸಿ, ಗಾಯಗೊಂಡವರನ್ನು ಸುರಕ್ಷಣೆಗೆ ಸಾಗಿಸಬಲ್ಲವು.

99ನೇ ಪುಟ ನೋಡಿ

# ಹೊರನಾಡ ಕನ್ನಡಿಗರ ಬದುಕು

ಹುಟ್ಟಿದ ನೆಲದ್ದು ಬರೀ ಮೋಹ ಅಲ್ಲ. ವ್ಯಕ್ತಿಯ ಅವಿಭಾಜ್ಯ ಅಂಗವೆನಿಸಿದ ಸಂಸ್ಕೃತಿ, ಬದುಕಿನ ಅರಿವು, ಆಪ್ತ ಸಂಬಂಧ ಎಲ್ಲ ಒಳಗೊಂಡಿದ್ದು. ಅನಿವಾರ್ಯವಾಗಿ ಇನ್ನೊಂದೆಡೆ ಹೋಗಿ ನೆಲೆಸಬೇಕಾದಾಗ ಬೇರು ಕಡಿದುಕೊಂಡಂಥ ಚಡಪಡಿಕೆ. ಅಪರಿಚಿತ ಜನ, ನೆಲ, ಸಂಸ್ಕೃತಿಯಲ್ಲಿಯೂ ತನ್ನ ಹುಟ್ಟು ನೆಲದ ಸಂಬಂಧದ ತೇವ ಉಳಿಸಿಕೊಂಡೇ ಚಿಗುರುವ ಪರಿ ಅನನ್ಯವಾದದ್ದು. ತನ್ನ ಜೊತೆಗೇ ವಿಶಿಷ್ಟ ಜಗತ್ತು ಸೃಷ್ಟಿಸಿಕೊಳ್ಳಬಲ್ಲ ಮನುಷ್ಯನ ತಾಕತ್ತು ಅಪರೂಪದ್ದು ಕೂಡ.

## ದೆಹಲಿ ಕನ್ನಡಿಗ

## ನೆನಪುಗಳ ಭಾರ ಹೊತ್ತ ಯಮುನೆ



■ ಡಾ. ಪುರುಷೋತ್ತಮ ಬಿಳಿಮಲೆ

**ಊರೂರು ಅಲೆದಾಡುತ್ತ ....**

ಸ್ವಲ್ಪ ವಿಷಯಾಂತರವೆಂದೆನ್ನಿಸಿದರೂ ಕೆಲವು ವಿಷಯಗಳನ್ನು ಹೇಳದೆ ನಿರ್ವಾಹವಿಲ್ಲ. ನಾನು ಓದಲು ಆರಂಭಿಸಿದ್ದು ದಕ್ಷಿಣಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನ ಕೂತ್ಕುಂಜ ಶಾಲೆಯಲ್ಲಿ. ಯಾವುದಾದರೂ ಊರು ಕೂತ್ಕುಂಜಕ್ಕಿಂತ ಹಿಂದುಳಿದಿರಲು ಸಾಧ್ಯವಿಲ್ಲ. ಅಲ್ಲಿಗೆ ಈ ಹೊತ್ತಿಗೂ ಬಸ್ಸು ಓಡಾಡುವುದಿಲ್ಲ. ಕರೆಂಟು ಬಂದಿಲ್ಲವೆಂದರೆ ಟಿ.ವಿ. ಇಲ್ಲವೆಂದೇ ಅರ್ಥ. ಇಂಥ ಊರು ನಲುವತ್ತು ವರ್ಷಗಳ ಹಿಂದೆ ಹೇಗಿದ್ದಿರಬಹುದೆಂದು ಯಾರಾದರೂ ಊಹಿಸಬಹುದು. ಈ ಊರಲ್ಲಿ ಐದನೆಯ ತರಗತಿವರೆಗೆ ಓದಿ ಮುಂದೆ ಗುತ್ತಿಗಾರು ಎಂಬಲ್ಲಿ ಆರು-ಏಳನೇ ತರಗತಿಗಳನ್ನು ಮುಗಿಸಿದೆ. ಪ್ರೌಢಶಾಲಾ ಅಧ್ಯಯನಕ್ಕೆ ಪಂಜಕ್ಕೆ ಹೋದೆ. ಅಲ್ಲಿ ಮೂರುವರ್ಷಗಳ ಕಾಲ ದಿನಕ್ಕೆ 10 ಕೀ.ಮೀಗಳಷ್ಟು ನಡೆಯುತ್ತಾ, ಎಂಟು ಒಂಬತ್ತು, ಹತ್ತನೇ ತರಗತಿಗಳನ್ನು ಮುಗಿಸಿದೆ. ಮುಂದೆ ಪಿ.ಯುಸಿ. ಓದಲು ಸುಬ್ರಹ್ಮಣ್ಯಕ್ಕೆ ಹೋಗಬೇಕಾಯಿತು. ಅಲ್ಲಿ ಎರಡು ವರ್ಷಗಳ ಕಾಲ ಇದ್ದು, ಬಿ.ಎ. ಓದಲು ಪುತ್ತೂರು ಸೇರಿದೆ. ಮುಂದೆ ಎಂ.ಎ. ಪದವಿಯನ್ನು ಮದರಾಸು ವಿಶ್ವವಿದ್ಯಾಲಯದಿಂದ ಪಡೆದುಕೊಂಡೆ. ಡಾಕ್ಟರೇಟ್ ಪದವಿಗೋಸ್ಕರ ಮಂಗಳೂರು ವಿಶ್ವವಿದ್ಯಾಲಯಕ್ಕೂ ಓಡಾಡಿದೆ. ಹೀಗೆ ವಿದ್ಯಾರ್ಥಿ ಜೀವನದುದ್ದಕ್ಕೂ ಊರೂರು ಅಲೆದೆ, ಅದು ಅನಿವಾರ್ಯವಾಗಿತ್ತು.

ಎರಡನೇ ಹಂತದಲ್ಲಿ, ಉಪನ್ಯಾಸಕನಾಗಿ ಸುಳ್ಯದಲ್ಲಿ ಐದು ವರ್ಷಗಳ ಕಾಲ ದುಡಿದೆ. ಮುಂದೆ ಸುಮಾರು ಎಂಟು ವರ್ಷಗಳ ಕಾಲ ಮಂಗಳೂರು ವಿಶ್ವವಿದ್ಯಾಲಯದಲ್ಲಿ ಕೆಲಸ ಮಾಡಿದೆ. 1992ರಿಂದ 1998ರವರೆಗೆ ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ದುಡಿದು, ಬೇಸರಬಂದು ದೆಹಲಿ ಸೇರಿದೆ. ಇದೀಗ ನಾನು ಕಳೆದ 20 ತಿಂಗಳುಗಳಿಂದ 'ದೆಹಲಿ ಕನ್ನಡಿಗ'. ಹೀಗೆ ವೃತ್ತಿ ಜೀವನದಲ್ಲಿಯೂ ಅಲೆದಾಟ ತಪ್ಪಲಿಲ್ಲ.

ದೆಹಲಿಗೆ ಬೇಕೆಂದೇ ನಾನು ಬಂದದ್ದಲ್ಲ. ಅದು ನನ್ನ ಮನಃಪೂರ್ವಕ ಆಯ್ಕೆಯೂ ಆಗಿರಲಿಲ್ಲ. ಕನ್ನಡ ವಿಶ್ವವಿದ್ಯಾಲಯವನ್ನು ಬಿಡಲೇಬೇಕಿತ್ತು, ಬಿಡಲು ಏನಾದರೊಂದು ಹಾದಿ ಬೇಕಿತ್ತು. ಆಗಿನ ಕುಲಪತಿ - ಕುಲಸಚಿವ ಮತ್ತು ಕೆಲವು ಸಿಂಡಿಕೇಟ್ ಸದಸ್ಯರು ಮಾಡಿದ ಆಳವಾದ ಗಾಯಗಳನ್ನು ಅಲ್ಲಿದ್ದೇ ಮರೆಯುವುದು ನನಗೆ ಅಸಾಧ್ಯವಾಗಿತ್ತು. ಮೇಲಾಗಿ ನನ್ನ ಚಿತ್ತ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳಬೇಕಾಗಿತ್ತು. ಹೀಗಾಗಿ ಬಿಟ್ಟೆ. ಹೀಗೆ ಬಿಟ್ಟಾಗ ಅದುವರೆಗೆ ನನ್ನನ್ನು ರೂಪಿಸಿದ ಕೂತ್ಕುಂಜ, ಗುತ್ತಿಗಾರು, ಪಂಜ, ಸುಬ್ರಹ್ಮಣ್ಯ, ಪುತ್ತೂರು, ಮಂಗಳೂರು, ಬಳ್ಳಾರಿಗಳ ಬಗೆಗೆ ನಾನು

ಯೋಚಿಸಿರಲಿಲ್ಲ. ಕರ್ನಾಟಕದ ಕಾಡು, ಗುಡ್ಡಗಳು, ಕಡಲು, ಯಕ್ಷಗಾನ, ಮೈಲಾರ, ಹುಲಿಗೆಮ್ಮ, ಕುಮಾರರಾಮ, ಕೊಪ್ಪಳ.... ಹೀಗೆ ಎಲ್ಲವನ್ನೂ ಮರೆತು ದೆಹಲಿಯೆಡೆಗೆ ಮುಖ ಮಾಡಿದೆ. ಆದರೆ ದೆಹಲಿಯ ಹಾದಿಯ ತುಂಬ ಚೆಂಡೆಯ ಸದ್ದು, ಕಡಲ ಮೊರೆತ, ಭೂತದ ಗಗ್ಗರ, ಮೈಲಾರನ ಕಾರ್ಣಿಕದ ನುಡಿಗಳು!

**ದೆಹಲಿಯ ಹೊರಕಿಂಡಿಗಳು** : ಹಾಗೂ ಹೀಗೂ ದೆಹಲಿ ಸೇರಿದ್ದಾಯಿತು. ಇದೊಂದು ಮಹಾನಗರ. ರಾಷ್ಟ್ರದ ರಾಜಧಾನಿ. ವಿವಿಧ ರಾಜ್ಯದ ರಾಜಕಾರಣಿಗಳ ಆಡುಂಬೊಲ. ಪುರಾಣ, ಇತಿಹಾಸ, ವರ್ತಮಾನಗಳು ಇಲ್ಲಿ ತಮ್ಮ ಗಡಿರೇಖೆಗಳನ್ನು ಅಳಿಸಿಕೊಂಡು ವಿಸ್ಮಯಕರವಾಗಿ ಬೆರೆತಿವೆ. ದ್ವಾಪರಯುಗದ ಪಾಂಡವರ ಇಂದ್ರಪ್ರಸ್ಥದೊಳಗೆ ಮಧ್ಯಯುಗೀನ ಮೊಗಲರ 'ಮಹಲು'ಗಳು ಅರಳಿ ನಿಂತಿವೆ. ಅನೇಕ ಮಹಲುಗಳೊಳಗೆ ವಿಶ್ವದ ಬಹುದೊಡ್ಡ ಪ್ರಜಾತಂತ್ರ ವ್ಯವಸ್ಥೆಯ ಆಡಳಿತ ಕಚೇರಿಗಳಿವೆ. ಮಿನಾರುಗಳು, ಕೋಟೆಗಳು ಎಲ್ಲೆಂದರಲ್ಲಿ. ಇವನ್ನೆಲ್ಲ ಸುತ್ತುವರೆದು, ಸುದೀರ್ಘ ನೆನಪುಗಳನ್ನು ಹೊತ್ತು ಭಾರವಾಗಿ ಹರಿಯುತ್ತಿರುವ ಯಮುನೆ ಇದೀಗ ಕಲುಷಿತೆ. ರಕ್ತ ಸಿಕ್ತ ಇತಿಹಾಸದ ದೆಹಲಿಯ ತುಂಬ ಕೆಂಪುಗುಲಾಬಿಯ ತೋಟಗಳಿವೆ. ಇವೆಲ್ಲ ಬೇಸರ ತರಿಸಿದರೆ ಸುಮ್ಮನೆ ಆಗ್ರಾಕ್ಕೆ ಹೊರಟು ಹೋಗಬಹುದು. ಭೀಕರ ಯುದ್ಧಗಳಿಂದಾಗಿ ಆಗ್ರಾದ ಬೃಹತ್ ಕೋಟೆಯ ಕಲ್ಲುಗಳೆಲ್ಲ ಕೆಂಪಗಾಗಿವೆ. ಇಲ್ಲಿಯೇ ಅರಳಿದ ಪ್ರೇಮದ ಪ್ರತೀಕವಾಗಿರುವ ತಾಜಮಹಲಿನ ವರ್ಣನೆ ಮಾಡಲು ಭಾಷೆಗೆ ಶಕ್ತಿಯಿಲ್ಲ. ಉಗ್ರಗಾಮಿಗಳ ಬೆದರಿಕೆಯಿಂದಾಗಿ ಈಗ ತಾಜಮಹಲನ್ನು ಬೆಳದಿಂಗಳಲ್ಲಿ ನೋಡಲಾಗುವುದಿಲ್ಲ. ಆದರೆ ಕಲ್ಪಿಸಿಕೊಳ್ಳಬಹುದು. ಹಾಗೆ ಕಲ್ಪಿಸಿಕೊಳ್ಳುತ್ತಾ 'ಹುಸಿ ದುಃಖ ಮರೆಸಬಹುದು'. ಆಗ್ರಾಕ್ಕೆ ಅನತಿದೂರದಲ್ಲಿ ಅಕ್ಬರನ ಫತೇಹ್ ಪುರ್ ಸಿಕ್ರಿ ಇದೆ. ಇಲ್ಲಿನ 'ಬುಲನ್ ದರ್ವಾಜಾ'ದೆದುರು ನಿಂತು ನಾವು ಸಣ್ಣವರಾಗಿ, ನಮ್ಮ ಅಹಂಕಾರಗಳನ್ನು ಮರೆಯಬಹುದು. ಶೇಕ್ ಸಲೀಂ ಚಿಸ್ತಿಯ ಸಮಾಧಿಗೆ ಹೂ ಹಾಕಿ, ಲೋಕದ ಶಾಂತಿಗಾಗಿ ಪ್ರಾರ್ಥಿಸಬಹುದು. ಶ್ರೀ ಕೃಷ್ಣನ ಜನ್ಮಸ್ಥಾನವಾದ 'ಮಥುರಾ' ಕೂಡಾ ದೆಹಲಿಗೆ ಹತ್ತಿರದಲ್ಲಿದೆ. ಕೃಷ್ಣ ಜನಿಸಿದ ಕಂಸನ ಜೈಲಿಗೆ ತಾಗಿಕೊಂಡಿರುವ ಮಸೀದಿಯಿಂದಾಗಿ, ಆ ಬಗ್ಗೆ ಈಗಾಗಲೇ ಎದ್ದಿರುವ ವಾದ ವಿವಾದಗಳಿಂದಾಗಿ ಮಥುರಾ ನನ್ನಂಥ ನಾಸ್ತಿಕನಿಗೂ ಆಕರ್ಷಣೆಯ ಸ್ಥಳವಾಗಿದೆ. ಇಲ್ಲಿನ 'ಬೃಂದಾವನ'ದಲ್ಲಿ ರಾಧಾಕೃಷ್ಣರನ್ನು ನೆನೆಸಿಕೊಂಡು ರೊಮ್ಯಾಂಟಿಕ್ ಆಗಿ ಅಡ್ಡಾಡಬಹುದು! ದೆಹಲಿಗೆ ತಾಗಿಕೊಂಡಿರುವ ರಾಜಸ್ಥಾನದ ಮರುಭೂಮಿಯೊಳಕ್ಕೆ 4-5 ಗಂಟೆ ಪ್ರಯಾಣ ಮಾಡಿದರೆ, 'ಪಿಂಕ್ ಸಿಟಿ' ಜೈಪುರ ಸಿಗುತ್ತದೆ. ಈ ಮಾನವ ನಿರ್ಮಿತ ಲೋಕಗಳ ಬಗ್ಗೆ ಆಸಕ್ತಿ ಇಲ್ಲದವರು ದೆಹಲಿಯಿಂದ ಉತ್ತರಕ್ಕೋ, ಉತ್ತರ ಪೂರ್ವದ ಕಡೆಗೋ ಹೋಗಬಹುದು. ಅಲ್ಲಿ ಭವ್ಯವಾದ ಹಿಮಾಲಯವಿದೆ. ಅದರ ತಪ್ಪಲಲ್ಲಿರುವ ಅತ್ಯಾಕರ್ಷಕ ನಿಸರ್ಗತಾಣಗಳಲ್ಲಿ ಅನುಭಾವಿಗಳಾಗಿ ಸಂಚರಿಸಬಹುದು. ಬೇಕಾದರೆ ಧ್ಯಾನ ಮಾಡುತ್ತಾ ಅಲ್ಲಿಯೇ ಕುಳಿತುಕೊಳ್ಳಬಹುದು. ಈಗಂತೂ 'ಕಾರ್ಗಿಲ್' ಇದೆ. ದೇಶದ ಹೆಸರಿನಲ್ಲಿ ಪ್ರಾಣಬಿಡಲು ಯೋಗ್ಯವಾದ ಸ್ಥಳ.

ಹೀಗೆ ದೆಹಲಿಗೆ ಅನೇಕ ಹೊರಕಿಂಡಿಗಳಿವೆ. ಈ ಹೊರಕಿಂಡಿಗಳ ಮೂಲಕ ದೂರಕ್ಕೆ ದೃಷ್ಟಿ ಹಾಯಿಸದೇ ಇದ್ದರೆ, ದೆಹಲಿಗರ ಕಣ್ಣು ಕುರುಡಾಗಿ ಬಿಡುತ್ತದೆ. ಕಣ್ಣು ಕುರುಡಾದವರು ನಿತ್ಯ ನರಳುವ ಮನೋರೋಗಿಗಳಾಗುತ್ತಾರೆ. ಇವರು ಬೇಸಗೆಯ ಬಿಸಿಲಿನಲ್ಲಿ ಮನೆಯೊಳಕ್ಕೆ ಕುಳಿತಿರುತ್ತಾರೆ. ಮೈ ಕೊರೆಯುವ ಚಳಿಯಲ್ಲಿ ಮನೆಯೊಳಕ್ಕೆ ಮುದುಡಿರುತ್ತಾರೆ. ಬೇಸಗೆಗೊಂದು 'ಕೂಲರ್', ಚಳಿಗಾಲಕ್ಕೊಂದು 'ಹೀಟರ್' ಹಾಗೆ ನೋಡಿದರೆ ಉತ್ತರ ಭಾರತದ ಜನ ಆಚೀಚೆ ಓಡಾಡುತ್ತಲೇ ಇರುತ್ತಾರೆ. ತಮಿಳರು ಪರವಾಗಿಲ್ಲ. ಮಲೆಯಾಳಿಗಳು ಊರು ಬದಲಾಯಿಸುತ್ತಲೇ ಇರುತ್ತಾರೆ. ಕನ್ನಡಿಗರು ಮಾತ್ರ ಕುಳಿತಲ್ಲೇ ಇರುವುದು ಜಾಸ್ತಿ. ಕಚೇರಿಯಲ್ಲಾದರೂ ಅಷ್ಟೆ, ಸದಾ ಕುರ್ಚಿಯಲ್ಲಿ ಕುಳಿತಿದ್ದು ಕೆಲಸ ಮಾಡುತ್ತಿರುತ್ತಾರೆ. ಹೀಗಾಗಿ ಹೆಚ್ಚು ಓಡಾಡದ, ಕುಳಿತಲ್ಲೇ ಇದ್ದು ಕೆಲಸ ಮಾಡುವ, ನಿರುಪದ್ರವಿ ಕನ್ನಡಿಗರನ್ನು ಕಂಡರೆ ಕನ್ನಡೇತರರಿಗೆಲ್ಲ ಏನೋ ಅನುಕಂಪ. ಉಳಿದ ರಾಜ್ಯದ ಜನರು ಕನ್ನಡಿಗರಷ್ಟು ಕೆಲಸ ಮಾಡುವವರಲ್ಲ ಅಥವಾ ನಿಷ್ಠೆಯಿಂದ ದುಡಿವಷ್ಟು ಮೂರ್ಖರಲ್ಲ ಅವರು. ಬಂಗಾಲಿಗಳು ಬರೀ ಮಾತಾಡುತ್ತಾರೆ. ಹಿಂದಿ ಮಾತಾಡುವವರು ಸೋಮಾರಿಗಳು, ಮಲೆಯಾಳಿಗಳನ್ನು ನಂಬುವುದು ಕಷ್ಟ, ತಮಿಳರು ಕ್ಲೀನ್ ಆಗಿ ಇರಲ್ಲ. ತೆಲುಗರಿಗೆ ಅಹಂಕಾರ ಹೆಚ್ಚು ಎಂದೆಲ್ಲ ಇಲ್ಲಿನ ಕನ್ನಡಿಗರು ಆಗಾಗ ಗೊಣಗುತ್ತಿರುತ್ತಾರೆ.

ದೆಹಲಿ ಅಂಥ ಸೃಷ್ಟಿಶೀಲ ನಗರವೇನೂ ಅಲ್ಲ. ಬೇಸಗೆಯಲ್ಲಿ ರಾಜಸ್ಥಾನದ ಮರುಭೂಮಿಯ ಕಡೆಯಿಂದ ಬೀಸುವ ಬಿಸಿಗಾಳಿ ದೆಹಲಿಗೆ ತಲುಪುತ್ತದೆ. ಚಳಿಗಾಲದಲ್ಲಿ ಹಿಮಾಲಯದ ಕಡೆಯಿಂದ ಶೀತಗಾಳಿ ಬೀಸುತ್ತದೆ. ಭೌಗೋಳಿಕ ತಜ್ಞರ ಪ್ರಕಾರ ರಾಜಸ್ಥಾನದ ಮರುಭೂಮಿ ನಿಧಾನವಾಗಿ ದೆಹಲಿಯ ಕಡೆಗೆ ವಿಸ್ತರಿಸುತ್ತಿದೆ. ರಾಜಧಾನಿಯಾದುದರಿಂದ ಇಲ್ಲಿ ವಿಪರೀತ ವಾಹನಗಳು. ಇದರಿಂದಾಗಿ ದೆಹಲಿಯ ವಾತಾವರಣ ತುಂಬ ಕಲುಷಿತವಾಗಿ ಬಿಟ್ಟಿದೆ. ಜನಸಂಖ್ಯೆ ಏರಿದೆ. ಎಲ್ಲರಿಗೂ ವಸತಿ ವ್ಯವಸ್ಥೆ ಕಲ್ಪಿಸಲು ಜಾಗವೇ ಇಲ್ಲ. ಹೀಗಾಗಿ ದೆಹಲಿ ಆ ಕಡೆ ಉತ್ತರ ಪ್ರದೇಶದೊಳಕ್ಕೂ, ಈ ಕಡೆ ಹರಿಯಾಣದೊಳಕ್ಕೂ ಬೆಳೆಯುತ್ತಿದೆ. ಬಹುಶಃ ಇಂಥದ್ದನ್ನೆಲ್ಲ ಮುಂದಾಲೋಚಿಸಿಯೇ ತುಘಲಕನು ತನ್ನ ರಾಜಧಾನಿಯನ್ನು ದೆಹಲಿಯಿಂದ ದೇವಗಿರಿಗೆ ವರ್ಗಾಯಿಸಲು ಯೋಚಿಸಿರಬೇಕು. ಕಾಫ್ಕಾನ ಕಾದಂಬರಿಗಳ ನಾಯಕರೆಲ್ಲ ದೆಹಲಿಯಲ್ಲಿದ್ದಾರೆ.

ಇರಲಿ, ಇಂಥಲ್ಲಿ ಸ್ವತಃ ಸಂಕೋಚ ಸ್ವಭಾವದ ಕನ್ನಡಿಗರು ಹೇಗಿದ್ದಾರೆ?

**ಕನ್ನಡವ ಮರೆಯುತ್ತ....** : ಕನ್ನಡಿಗರು ಬಹಳಬೇಗ ಬೇರೆ ಭಾಷೆಗಳನ್ನು ಕಲಿಯುತ್ತ ತಮ್ಮ ಮಾತೃಭಾಷೆಯನ್ನು ಮರೆತು ಬಿಡುತ್ತಾರೆ. ಹೀಗಾಗಿ



**ದೆಹಲಿ ಕರ್ನಾಟಕ ಸಂಘದ ಉದ್ದೇಶಿತ ಕಟ್ಟಡದ ನೀಲನಕ್ಷೆ**

ದೆಹಲಿಯಲ್ಲಿ ಕನ್ನಡಿಗರನ್ನು ಪತ್ತೆ ಹಚ್ಚುವುದೇ ಒಂದು ಸಾಹಸ. ರಜಾ ದಿನಗಳಲ್ಲಿ 'ಅಪ್ಪುಘರ್' ಗೆ ಹೋದರೆ, ಅಲ್ಲಿ ಆಟವಾಡುತ್ತಿರುವ ಪುಟ್ಟ ಮಕ್ಕಳ ಬಾಯಲ್ಲಿ ಕನ್ನಡ ಕೇಳಬಹುದು. ಆ ಮಕ್ಕಳನ್ನು ಅನುಸರಿಸಿ ಅವರ ತಂದೆ-ತಾಯಿಯರನ್ನು ಭೇಟಿ ಮಾಡಿ ಕೈ ಕುಲುಕಿ ಕನ್ನಡಿಗರೆಂದು ಹೇಳಿಕೊಳ್ಳಬಹುದು. ದಕ್ಷಿಣ ಕನ್ನಡ ಜಿಲ್ಲೆಯವರು ನಡೆಸುತ್ತಿರುವ ಅನೇಕ ಹೊಟೇಲುಗಳಲ್ಲಿ 'ತುಳು' ಕೇಳಬಹುದು. ಇದು ಬಿಟ್ಟರೆ ಕನ್ನಡಿಗರನ್ನು ಪತ್ತೆ ಹಚ್ಚಲು ಇರುವ ಸ್ಥಳವೆಂದರೆ 'ದೆಹಲಿ ಕರ್ನಾಟಕ ಸಂಘ'. ಇಲ್ಲಿ ನಡೆಯುವ ಸಾಹಿತ್ಯಿಕ-ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸುಮಾರು 200 ಜನ ಕನ್ನಡಿಗರು ಭಾಗವಹಿಸುತ್ತಾರೆ. ಅಂಕಿ-ಅಂಶಗಳ ಪ್ರಕಾರ ದೆಹಲಿಯಲ್ಲಿರುವ ಒಟ್ಟು ಕನ್ನಡಿಗರ ಸಂಖ್ಯೆ 60 ಸಾವಿರಕ್ಕೂ ಹೆಚ್ಚು. ಆದರೆ ಕನ್ನಡಿಗರೆಂದು ಸ್ವಾಭಿಮಾನದಿಂದ ಹೇಳಿಕೊಳ್ಳುವವರು 300-400 ಜನ ಇರಬಹುದು. 'ದೆಹಲಿ ಕನ್ನಡ ಶಾಲೆ' ಕೂಡಾ ಕನ್ನಡಿಗರೆಲ್ಲ ಸೇರುವ ಸ್ಥಳವೇ ಆಗಿದೆ. ಇದು ಬಿಟ್ಟರೆ ದೆಹಲಿಯ ಬೇರೆ ಬೇರೆ ಕಡೆಗಳಲ್ಲಿ ಪ್ರಾದೇಶಿಕವಾದ ಕನ್ನಡ ಸಂಘಟನೆಗಳಿವೆ. ಜನಕಪುರಿಯಲ್ಲಿ 'ಕನ್ನಡ ಕೂಟ', ರಾಜೇಂದ್ರ ನಗರದಲ್ಲಿ 'ಕನ್ನಡ ಬಳಗ', ಮಯೂರ ವಿಹಾರದಲ್ಲಿ 'ತ್ರಿವೇಣಿ ಕನ್ನಡ ಸಾಂಸ್ಕೃತಿಕ ಸಂಘ', ಮಾಯಾಪುರಿ 'ಕನ್ನಡ ಬಳಗ', ಜವಾಹರಲಾಲ ವಿಶ್ವವಿದ್ಯಾಲಯದ 'ಶರಾವತಿ ಕನ್ನಡ ಸಂಘ', ಐಐಟಿಯ 'ಅರಾವಳಿ ಕನ್ನಡ ಸಂಘ', ಪಶ್ಚಿಮ ವಿಹಾರದ 'ಕನ್ನಡ ಚೈತನ್ಯ' ಹೀಗೆ ಕನ್ನಡ ಪರ ಚಟುವಟಿಕೆಗಳನ್ನು ನಡೆಸುವ ಸಂಘ-ಸಂಸ್ಥೆಗಳಿವೆ. ಬೇರೆ ಬೇರೆ ಬ್ಯಾಂಕುಗಳಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳೇ ಇವುಗಳ ಸೂತ್ರಧಾರರು. ಹಾಗೆ ನೋಡಿದರೆ ಬ್ಯಾಂಕ್

ಅಧಿಕಾರಿಗಳಿಂದಲೇ ದೆಹಲಿಯಲ್ಲಿ ಕನ್ನಡ ಉಳಿದಿದೆ ಎಂದರೆ ತಪ್ಪಾಗಲಾರದು. ಸುಮಾರು ಮೂರುವರ್ಷಗಳ ಕಾಲ ದೆಹಲಿಯಲ್ಲಿರುವ ಇವರು ಸಾಹಿತ್ಯ-ಸಂಸ್ಕೃತಿ-ನಾಟಕ ವಿಚಾರಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತ ಕನ್ನಡದ ವಾತಾವರಣವನ್ನು ಜೀವಂತವಾಗಿರಿಸಲು ಹೆಣಗಾಡುತ್ತಿರುತ್ತಾರೆ.

ಈ ಬೇರೆ ಬೇರೆ ಸಂಘ ಸಂಸ್ಥೆಗಳು 'ದೆಹಲಿ ಕರ್ನಾಟಕ ಸಂಘ' ಮತ್ತು 'ದೆಹಲಿ ಕನ್ನಡ ಶಾಲೆ'ಯನ್ನು ತುಂಬ ಗೌರವದಿಂದ ನೋಡುತ್ತವೆ. ಅಲ್ಲಿ ಕೆಲಸ ಮಾಡುವವರನ್ನು ತಮ್ಮ ನಾಯಕರೆಂದು ಭಾವಿಸುತ್ತಾರೆ. ಆದರೆ ಎಲ್ಲೆಡೆಯೂ ಇರುವಂತೆ ಈ ನಾಯಕರ ನಡುವೆ ತುಂಬ ಭಿನ್ನಾಭಿಪ್ರಾಯ, ಜಗಳ. ಪರಿಣಾಮವಾಗಿ ಕನ್ನಡಕ್ಕೆ ತೊಂದರೆ. ಈಗೇನೊ ಪರಿಸ್ಥಿತಿ ಸ್ವಲ್ಪ ಸುಧಾರಿಸಿದಂತಿದೆ. ಒಂದೇ ಗುಂಪಿಗೆ ಸೇರಿದ ಜನರು ಎರಡೂ ಕಡೆಯ ಆಡಳಿತದ ಚುಕ್ಕಾಣಿ ಹಿಡಿದಿದ್ದಾರೆ. ಹೀಗಾಗಿ ನನ್ನಂಥವರೆಲ್ಲ ಆಶೆಯಿಂದ ಆ ಕಡೆ ನೋಡುವಂತಾಗಿದೆ. ದೆಹಲಿ ಕರ್ನಾಟಕ ಸಂಘವು 'ಬೃಹತ್ ಸಾಂಸ್ಕೃತಿಕ ಸಮುಚ್ಚಯ'ವೊಂದರ ನಿರ್ಮಾಣ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ಹೀಗಾಗಿ ಕಾರ್ಯಕ್ರಮಗಳೂ ಕಡಿಮೆಯಾಗಿ ಬಿಟ್ಟಿವೆ.

**ತಾಜಮಹಲ್ : ದೆಹಲಿಗೆ ದೂರವಿಲ್ಲ**

**ಅನನ್ಯತೆಯ ಹುಡುಕಾಟದಲ್ಲಿ :** ದೆಹಲಿಯ ಮೂಲ ನಿವಾಸಿಗಳಾರೋ ತಿಳಿಯದು. ಮೊಗಲರ ಕಾಲದಲ್ಲಿ ಮತಾಂತರಗೊಂಡವರು ಎಂದು ಹೇಳಲಾದ ಮುಸಲ್ಮಾನರನೇಕರು ಕಡು ಬಡತನದಲ್ಲಿ ಜೀವಿಸುತ್ತಿದ್ದಾರೆ. ಇಲ್ಲಿಯ ಅನೇಕ ಗ್ರಾಮಗಳಲ್ಲಿರುವ ದಲಿತರು ಮೇಲ್ಜಾತಿಯವರ ಸೇವೆ ಮಾಡುತ್ತಾ ಬದುಕುತ್ತಿದ್ದಾರೆ. ಜಾಟ್‌ಗಳು, ಯಾದವರು ಬೆಲೆಬಾಳುವ ಭೂಮಿಯನ್ನು ಹೊಂದಿರುವುದರಿಂದ ಇತರರ ಮೇಲೆ ಅಧಿಕಾರ ಸ್ಥಾಪಿಸಿದ್ದಾರೆ. ಉಳಿದಂತೆ ದೆಹಲಿ ಎಂದರೆ ಬೇರೆ ಬೇರೆ ರಾಜ್ಯಗಳ ಜನರ ಆವಾಸಸ್ಥಾನ. ಚಿತ್ತರಂಜನ ಪಾರ್ಕ್ ತುಂಬಾ ಬಂಗಾಲಿಗಳು, ಜನಕಪುರಿಯಲ್ಲಿ ತಮಿಳರು, ಮುನಿರ್ಕಾ-ಆರ್.ಕೆ.ಪುರಂಗಳಲ್ಲಿ ಮಲೆಯಾಳಿಗಳು, ಪಂಜಾಬಿ ಬಾಗ್‌ನಲ್ಲಿ ಪಂಜಾಬಿಗಳು ಆಧಿಪತ್ಯ ಸ್ಥಾಪಿಸಿದ್ದಾರೆ. ಕನ್ನಡಿಗರು ಹೀಗೆ ಎಲ್ಲೂ ಆಧಿಪತ್ಯ ಸ್ಥಾಪಿಸಿಲ್ಲ. ಇಲ್ಲಿ ಕನ್ನಡಿಗರು ಹೆಚ್ಚಿದ್ದಾರೆ ಎಂದು ತೋರಿಸುವ ಜಾಗ ದೆಹಲಿಯಲ್ಲಿಲ್ಲ. ಅವರು ಇಡೀ ದೆಹಲಿಯ ತುಂಬ ಹರಡಿಕೊಂಡಿದ್ದಾರೆ. ಹೀಗಾಗಿ ಕನ್ನಡಿಗರಿಗೆ ಬಲಿಷ್ಠವಾದ ಸಂಘಟನೆಯೊಂದನ್ನು ಮಾಡಿಕೊಳ್ಳಲು ಸಾಧ್ಯ ಆಗಿಲ್ಲ.

ಇಷ್ಟಿದ್ದರೂ ಬೇರೆ ಬೇರೆ ಗುಂಪುಗಳನ್ನು ಮಾಡಿಕೊಳ್ಳುವ ಮೂಲಕ ದೆಹಲಿಯ ಕನ್ನಡಿಗರು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿದ್ದಾರೆ. ಭಾರತದ ಸಂದರ್ಭದಲ್ಲಿ 'ಸಾಂಸ್ಕೃತಿಕ ಅನನ್ಯತೆ' ಎಂದರೆ ಜಾತಿಯೇ ಆಗಿದೆ. ಈ ಅರ್ಥದಲ್ಲಿ ಇವೆಲ್ಲ ಜಾತಿ ಸಂಘಟನೆಗಳೇ ಆಗಿವೆ. ಇಲ್ಲಿನ 'ಗೋಕರ್ಣಮಂಡಲ'ವು ಮುಖ್ಯವಾಗಿ ಹವ್ಯಕ ಬ್ರಾಹ್ಮಣರ ಸಂಘಟನೆಯಾದರೆ, 'ದೆಹಲಿ ಗೌಡ ಸಮಾಜ'ದಲ್ಲಿ ಒಕ್ಕಲಿಗರಿದ್ದಾರೆ. 'ಜೋಳದ ಬಳಗ'ವು ಉತ್ತರಕರ್ನಾಟಕದ ಕನ್ನಡಿಗರನ್ನು ಪ್ರತಿನಿಧಿಸುತ್ತಿದೆಯಾದರೂ ಪ್ರಧಾನವಾಗಿ ಅದರಲ್ಲಿ 'ಲಿಂಗಾಯತ'ರು ಭಾಗಿಗಳಾಗಿದ್ದಾರೆ. 'ದೆಹಲಿ ಕೊಡವ ಸಮಾಜ'ದಲ್ಲಿ ಕೊಡವರಿದ್ದಾರೆ. ಇದೇ ರೀತಿ 'ಸೌತ್‌ಕೆನರಾ ಕ್ಲಬ್', 'ಬಸವ ಇಂಟರ್‌ನ್ಯಾಷನಲ್ ಸೆಂಟರ್'ಗಳೂ ಇಲ್ಲಿವೆ. ಈ ಜಾತಿ ಸಂಘಟನೆಗಳು ಅತ್ಯಂತ ಸೌಹಾರ್ದವಾಗಿ ಕೆಲಸ ಮಾಡುತ್ತಿರುವುದೊಂದು ವಿಶೇಷ. ಈ ಮಹಾನಗರದಲ್ಲಿ ಜಾತಿ ನಿರ್ಣಾಯಕವಾಗಿಯಂತೂ ಇಲ್ಲ. ಹೀಗಾಗಿ ಇವೆಲ್ಲ ಜನಗಳಿಗೆ ತಮ್ಮ ಊರನ್ನು ನೆನಪಿಸಿಕೊಳ್ಳಲು, ಊರಿನ ಊಟವನ್ನು ಮಾಡಲು ಇರುವ ಮಾಧ್ಯಮಗಳು. ತಮ್ಮ ಊರಿನ ಹಬ್ಬಗಳನ್ನು, ಉತ್ಸವಗಳನ್ನು ಇವರು ಇಲ್ಲಿಯೇ ಆಚರಿಸುತ್ತಾರೆ. ವರುಷಕ್ಕೊಮ್ಮೆ 'ಪಿಕ್‌ನಿಕ್' ಹೋಗುತ್ತಾರೆ. ಆಟೋಟಗಳಲ್ಲಿ ಭಾಗವಹಿಸುವುದು, ನಾಟಕ-ನೃತ್ಯ ಏರ್ಪಡಿಸುವುದು ಇಂಥ ಸಂಘಟನೆಗಳ ಇತರ ಕೆಲಸಗಳಾಗಿವೆ. 'ತಮ್ಮ ನಡವಳಿಕೆಗಳಿಂದ ಇತರರಿಗೆ ಬೇಸರ ಆಗಬಾರದು' ಎಂಬ ಎಚ್ಚರಿಕೆಯಲ್ಲಿ ಈ ಸಂಘಟನೆಗಳು ಕೆಲಸ ಮಾಡುವುದರಿಂದಾಗಿ ಇದುವರೆಗೆ ಯಾವುದೇ ತೊಂದರೆ ಉಂಟಾಗಿಲ್ಲ.

ದೆಹಲಿ ಕನ್ನಡಿಗರು ತಮ್ಮ ಹುಟ್ಟೂರಿನೊಂದಿಗೆ ಸಂಬಂಧ ಇರಿಸಿಕೊಳ್ಳಲು ಆಯ್ದುಕೊಂಡ ಇನ್ನೊಂದು ಮಾಧ್ಯಮವೆಂದರೆ ತಮ್ಮ ಊರಿನಿಂದ ಪ್ರಕಟವಾಗುವ ಸಣ್ಣ ಪತ್ರಿಕೆಗಳು. ಪ್ರಜಾವಾಣಿ-ಕನ್ನಡ ಪ್ರಭಗಳಂತಹ ರಾಜ್ಯ ಮಟ್ಟದ ಪತ್ರಿಕೆಗಳಿಗಿಂತ ಇಲ್ಲಿನ ಜನರು ತಮ್ಮ ಊರಿಗೆ ಸೀಮಿತವಾದ ಪ್ರಾದೇಶಿಕ ಪತ್ರಿಕೆಗಳನ್ನು ಹೆಚ್ಚು ಓದುತ್ತಾರೆ. ಸುಳ್ಯದ 'ಸುದ್ದಿ ಬಿಡುಗಡೆ', ಕೊಡಗಿನ 'ಶಕ್ತಿ' ಮೈಸೂರಿನ 'ಆಂದೋಲನ' ಮತ್ತಿತರ ಸಣ್ಣ ಪತ್ರಿಕೆಗಳು ಊರಿನ ಸುದ್ದಿಗಳನ್ನು ದೆಹಲಿಗೆ ನಿಯತವಾಗಿ ತಲುಪಿಸುತ್ತಿವೆ. ದೆಹಲಿಯಿಂದಲೇ ಹೊರಡುವ ಕನ್ನಡ ಪತ್ರಿಕೆಗಳು ಬಹುಶಃ ಮೂರು. ದೆಹಲಿ ಕರ್ನಾಟಕ ಸಂಘದ ಮುಖ ಪತ್ರಿಕೆ 'ಅಭಿಮತ'ಕ್ಕೆ ಆರ್ಥಿಕ ಭದ್ರತೆ ಇರುವುದರಿಂದ ನಿಯತವಾಗಿ ಪ್ರಕಟವಾಗುತ್ತಿದೆ. ವರ್ಣ ಚಿತ್ರಗಳು, ವರದಿ, ಕವನ, ಹರಟೆ ಇತ್ಯಾದಿಗಳಿಂದಾಗಿ ಅದು ಸಾಕಷ್ಟು ಜನಪ್ರಿಯವೂ ಆಗಿದೆ. ಬಾ. ಸಾಮಗರ ಸಂಪಾದಕತ್ವದಲ್ಲಿ 'ದೆಹಲಿ ಕನ್ನಡಿಗ' ಪ್ರಕಟವಾಗುತ್ತಿದೆ. ತನ್ನ ವ್ಯಂಗ್ಯ, ಚುಚ್ಚುನುಡಿಗಳಿಂದ ಅದು ಪ್ರಸಿದ್ಧವಾಗಿದೆ. ಶ್ರೀ ಎ.ವಿ.ಚಿತ್ತರಂಜನ್ ದಾಸ್ ಅವರು 'ಶುಭನುಡಿ' ಪತ್ರಿಕೆಯನ್ನು ಶ್ರಮವಹಿಸಿ ತರುತ್ತಿದ್ದಾರೆ. ಕನ್ನಡಿಗರನ್ನು ಚಿಂತನೆಗೆ ಹಚ್ಚುವ, ಹೊರನಾಡಿನಲ್ಲಿ ಕನ್ನಡಪರ ಚಟುವಟಿಕೆಗಳನ್ನು ಪ್ರೋತ್ಸಾಹಿಸುವ ಕೆಲಸ ಈ ಪತ್ರಿಕೆಯದು. ಏನಿದ್ದರೂ ಮುಂಬೈಗೆ ಹೋಲಿಸಿದರೆ, ಪತ್ರಿಕಾ ಚಟುವಟಿಕೆ ದೆಹಲಿಯಲ್ಲಿ ಸಾಲದು.

ಡಿ.ಡಿ.9ರ ಕನ್ನಡ ಕಾರ್ಯಕ್ರಮಗಳು, ಉದಯ ಟಿ.ವಿಯ ಕನ್ನಡ ಪ್ರಸಾರಗಳೂ ದೆಹಲಿಯಲ್ಲಿ ಜನಪ್ರಿಯವಾಗಿವೆ. ಮುಖ್ಯವಾಗಿ ಮನೆಯಲ್ಲಿ ಇರುವ ಅಂದರೆ ಹೊರಗೆ ಉದ್ಯೋಗದಲ್ಲಿರದ ಮಹಿಳೆಯರು ಇವನ್ನು ನಿಯತವಾಗಿ ನೋಡುತ್ತಾರೆ. ಯಾರಾದರೂ ಕನ್ನಡ ಸಿನಿಮಾ ತರಿಸಿ ತೋರಿಸಿದರೆ ಮಾತ್ರ ಸಭಾಂಗಣ ಖಾಲಿಯಾಗಿರುತ್ತದೆ. ಹೀಗೆ ಹೊರಗಡೆಗೆ ಕನ್ನಡಪ್ರೇಮವಿಲ್ಲದ, ಮನೆಯೊಳಗಡೆ ಅಚ್ಚ ಕನ್ನಡಿಗರಾಗಿರುವ ಕುಟುಂಬಗಳು ದೆಹಲಿಯಲ್ಲಿ ಹಲವಿವೆ. ರಾತ್ರಿ 11ರ ಅನಂತರ ಊರಿಗೆ ಫೋನ್ ಮಾಡುವ ಕನ್ನಡಿಗರಂತೂ ಅಸಂಖ್ಯ! "ಈ ಫೋನ್ ಬಂದು ಊರಿಗೆ ಪತ್ರ ಬರೆಯುವ ಕೆಲಸವೇ ನಿಂತಿದೆ" ಎಂದು ಪಶ್ಚಿಮ ವಿಹಾರದ ಗೆಳೆಯನೊಬ್ಬ ಹೇಳಿದರೆ, "ಎಷ್ಟೇ ಬರೆಯಿರಿ ನೀವು, ಫೋನಿನಲ್ಲಿ ಮಾತಾಡಿದಷ್ಟು ಖುಷಿ ಆಗುವುದಿಲ್ಲ ನೋಡಿ" ಎನ್ನುತ್ತಾರೆ ಮಯೂರ ವಿಹಾರದ ಗೆಳೆಯರೊಬ್ಬರು.

ದೆಹಲಿ ಕನ್ನಡಿಗರ ನಡುವೆ ಸಾಹಿತ್ಯದ ಗಂಭೀರ ಚರ್ಚೆ ಬಹುಶಃ ಸಾಧ್ಯವಿಲ್ಲ. ಶಾ. ಬಾಲೂರಾವ್, ಎಚ್.ವೈ.ಶಾರದಾಪ್ರಸಾದ್ ಮೊದಲಾದ ಹಿರಿಯ ಬರಹಗಾರರು ಇಲ್ಲಿ ಬಹಳ ವರ್ಷದಿಂದ ನೆಲೆಸಿದ್ದಾರೆ. ಎಚ್.ಎಸ್.ಶಿವಪ್ರಕಾಶ್, ಸುಮತೀಂದ್ರ ನಾಡಿಗರು ಕಳೆದ 2-3 ವರ್ಷಗಳಿಂದ ಇಲ್ಲಿದ್ದಾರೆ. ಅವರ ಮನೆಗೆ ಹೋದರೆ ಮಾತ್ರ ಸಾಹಿತ್ಯದ ಬಗ್ಗೆ ಒಳ್ಳೆಯ ಮಾತುಗಳನ್ನು ಕೇಳಬಹುದು. ಶೆಟ್ಟರ್ ಕೂಡಾ ಇಲ್ಲಿ ಜನಪ್ರಿಯರೇ ಹೌದು. ದೆಹಲಿಯಲ್ಲಿದ್ದುಕೊಂಡೇ ಕನ್ನಡ ಸಾಹಿತ್ಯದ ಈಚಿನ ಬೆಳವಣಿಗೆಗಳ ಬಗೆಗೆ ತಿಳುವಳಿಕೆ ಮೂಡಿಸಿಕೊಳ್ಳುವುದು ಯಾರಿಗಾದರೂ ಒಂದು ಸವಾಲೇ ಸರಿ! ಅನೇಕರಿಗೆ ಅದು ಅನಗತ್ಯ ಕೂಡಾ.

ಹೀಗೆ ದೆಹಲಿಯಲ್ಲಿ ಕನ್ನಡವಿದೆ, ಕನ್ನಡಿಗರಿದ್ದಾರೆ. ಕನ್ನಡಿಗರೊಳಗೆ ದೆಹಲಿಯಿದೆ, ಇಲ್ಲಿನ ಕನ್ನಡದೊಳಗೂ ದೆಹಲಿಯಿದೆ. ಯಾರಿಗೂ ತೊಂದರೆ ಕೊಡದೆ, ತಾವು ಇದ್ದೇವೆಂಬುದನ್ನೂ ತೋರಿಸಿಕೊಡದೆ ಬದುಕುತ್ತಿರುವ ಅಸಂಖ್ಯ ಕನ್ನಡಿಗರು, ದೆಹಲಿಯನ್ನು ಮೌನವಾಗಿ ಬೆಳೆಸಿದ್ದಾರೆ, ತಾವೂ ಮೌನವಾಗಿ ಬೆಳೆದಿದ್ದಾರೆ. ದೆಹಲಿಯ ಸದ್ದುಗದ್ದಲಗಳ ನಡುವೆ ಮೌನಕ್ಕೂ ಬೆಲೆಯಿದೆ ಎಂಬುದನ್ನು ಯಾರೂ ಮರೆಯಬಾರದು. ■

# ಕಲ್ಕತ್ತಾ ಕನ್ನಡಿಗ

## ಬೇರು ಬಿಡದೆ, ಚಿಗುರುವ ಆಸೆ

ಮಹಾಭಾರತದ ಯಕ್ಷ ಪ್ರಸಂಗದಲ್ಲಿನ ಯಕ್ಷನ ಒಂದು ಪ್ರಶ್ನೆ ನೆನಪಿಗೆ ಬರುತ್ತದೆ, ''ಜಗತ್ತಿನಲ್ಲಿ ಅತ್ಯಂತ ಪವಿತ್ರವಾದ ಸ್ಥಳ ಯಾವುದು?'' ಅದಕ್ಕೆ ಧರ್ಮರಾಯನ ಉತ್ತರ ''ತಂದೆ ತಾಯಿಗಳು ಇರುವ ಸ್ಥಳ''. ಹೌದು ನಾವು ಎಷ್ಟೇ ದೂರ ಹೋಗಿರಲಿ, ಯಾವುದೇ ಭಾಷೆಯನ್ನು ಕಲಿತಿರಲಿ, ಹೊರಗಿನವರೊಂದಿಗೆ ಯಾವುದೇ ಭಾಷೆಯಲ್ಲಿ ವ್ಯವಹರಿಸುತ್ತಿರಲಿ ನೋವಾದಾಗ ನಾವು ನೆನಪಿಸಿಕೊಳ್ಳುವುದು ತಾಯಿಯನ್ನು ಮಾತೃ ಭಾಷೆಯಲ್ಲಿ.

■ ಜಿ. ಕುಮಾರಪ್ಪ

ನಾನಿನ್ನೂ ಹುಡುಗನಾಗಿದ್ದಾಗ ಆಕಾಶದಲ್ಲಿ ಹಾರುತ್ತಿದ್ದ ಹಕ್ಕಿಗಳನ್ನು ನೋಡುತ್ತಿದ್ದೆ. ಅವುಗಳನ್ನು ಕುರಿತ ಕತೆಗಳನ್ನು ಕೇಳುತ್ತಿದ್ದೆ. ರೆಕ್ಕೆ-ಪುಕ್ಕ ಬಲಿತ ಹಕ್ಕಿಗಳು ತಮ್ಮ ತಂದೆ ತಾಯಿಯರ ಗೂಡನ್ನು ಬಿಟ್ಟು ದೂರದ ನೀಲಾಕಾಶಕ್ಕೆ ಹಾರಿ ತಮ್ಮದೇ ಗೂಡು ಕಟ್ಟಿಕೊಳ್ಳುತ್ತವೆ. ಮತ್ತೆಂದೂ ಅವು ತಮ್ಮ ತಂದೆ ತಾಯಿಯವರ ಬಳಿಗೆ ಬಾರವು ಎನ್ನುವುದನ್ನು ಕೇಳಿದಾಗ ನನಗೆ ಬಹಳ ಬೇಸರವೆನ್ನಿಸುತ್ತಿತ್ತು. ಮುಸುಡಿ-ಮೂತಿಗಳಿನ್ನೂ ಮೂಡಿರದ, ಬರಿಯ ಮಾಂಸದ ಮುದ್ದೆಯಂತೆ ಇರುತ್ತಿದ್ದ ಈ ಮರಿಗಳನ್ನು ತಮ್ಮ ಬೆಚ್ಚನೆಯ ಮಡಿಲಲ್ಲಿ ಇರಿಸಿಕೊಂಡು, ಗುಟುಕು ನೀಡಿ ಸಾಕುವ ತಾಯಿಯನ್ನು ಈ ಹಕ್ಕಿಗಳು ಹೇಗೆ ಮತ್ತು ಏಕೆ ಮರೆಯುತ್ತವೆ ಎನ್ನುವುದೇ ನನಗೆ ಅರ್ಥವಾಗುತ್ತಿರಲಿಲ್ಲ.

ಇಲ್ಲ ನಾನಂತೂ ಹೀಗೆ ಎಂದಿಗೂ ಹೋಗಲಾರೆ. ಅವ್ವನ ಬೆಚ್ಚಗಿನ ಸೆರಗಿನಲ್ಲಿ ಕುಳಿತು, ಹಾಲು ಕರೆಯುವಾಗ ಆಕೆ ಕೊಡುವ ಬೆಚ್ಚಗಿನ ನೊರೆ ಹಾಲನ್ನು ಕುಡಿಯುತ್ತಾ ಬೆಳೆಯಬೇಕು, ತಮ್ಮ ತಂಗಿಯರ ಜೊತೆ, ಗೆಳೆಯರ ಜೊತೆ ಓಡಾಡುತ್ತಾ, ಊರ ಹತ್ತಿರದಲ್ಲಿಯೇ ಕೆಲಸ ಹುಡುಕಿಕೊಂಡು, ಇಲ್ಲಿನ ಗಾಳಿಯಲ್ಲಿ ಗಾಳಿಯಾಗಿ, ಮಣ್ಣಿನಲ್ಲಿ ಮಣ್ಣಾಗಿ ಬದುಕಬೇಕು, ಹಸಿರು ತುಂಬಿದ ಹೊಲದಲ್ಲಿ ನಿಂತು ತಂಗಾಳಿಯನ್ನು ಸೇವಿಸಬೇಕು, ಹಬ್ಬ-ಹುಣ್ಣಿಮೆಗಳನ್ನು, ಮದುವೆ ಮುಂಜಿಗಳನ್ನು ಒಟ್ಟಾಗಿ ಆಚರಿಸಬೇಕು ಎನ್ನುವ ಕನಸು ಕಾಣುತ್ತಿದ್ದೆ.

ಕನಸು.... ಹೌದು.... ಕನಸು.

ಇಂದಿಗೂ ಈ ಆಸೆಗಳೆಲ್ಲ ಕನಸುಗಳಾಗಿಯೇ ಉಳಿದಿವೆ. ನನಗಾಗ ತಿಳಿದಿರಲಿಲ್ಲ - ''ಬದುಕು ಜಟಕಾಬಂಡಿ ವಿಧಿ ಅದರ ಸಾಹೇಬ.... '' ಎಂದು. ಡಿ.ವಿ.ಜಿಯವರ ಈ ಕವಿತೆಯನ್ನು ಓದಿಯೂ ಅರ್ಥಮಾಡಿಕೊಳ್ಳಲಾಗದ ಅನನುಭವಿ ಎಳಸುತನ.

ಹೈಸ್ಕೂಲ್ ಓದಿಗಾಗಿ ನಾನು ನನ್ನ ಹನ್ನೆರಡನೆಯ ವರ್ಷಕ್ಕೆ ಊರು ಬಿಟ್ಟಾಗಲೇ ಹಳ್ಳಿಯೊಂದಿಗೆ ಬೆಸೆದುಕೊಂಡಿದ್ದ ನನ್ನ ತಂತುಗಳು ಕಡಿದುಕೊಳ್ಳಲು ಆರಂಭಿಸಿರಬೇಕು. ಅಂದಿನಿಂದ ದೂರದೂರಕ್ಕೆ ಸಾಗುತ್ತಾ, ಸಾಗುತ್ತಾ ನಾನು ಬಂದು ಸೇರಿದುದು ಕಲ್ಕತ್ತಾ ನಗರವನ್ನು.

ಓದುವ ಕಾರಣಕ್ಕಾಗಿ ಊರು ಬಿಡುವುದರಲ್ಲಿ ಹೆಚ್ಚಿನ ವಿಶೇಷಗಳೇನೂ ಇಲ್ಲ. ''ಪರೀಕ್ಷೆ ಆದ್‌ಕೂಡ್ಲೆ ಊರಿಗೆ ಹೋಗ್ತೀನಿ'' ಎನ್ನುವ ನೆನಪು ಊರಿನಿಂದ ದೂರ ಇರುವ ನೋವನ್ನು ಕಡಿಮೆ ಮಾಡುತ್ತದೆ. ಅಲ್ಲದೆ ದಿನನಿತ್ಯದ ಪಾಠ ಪ್ರವಚನಗಳು, ಹೊಸತು ಹೊಸತನ್ನು ತಿಳಿಯುವ ಕುತೂಹಲ, ಹೊಸ ಹೊಸ ಗೆಳೆಯರು, ಪರೀಕ್ಷೆಯ ಟೆನ್ಷನ್‌ಗಳು, ಏನನ್ನೂ ಸೀರಿಯಸ್ಸಾಗಿ ತೆಗೆದುಕೊಳ್ಳದ ಹುಡುಗುತನಗಳು ಊರಿನ ನೆನಪನ್ನು ಅಷ್ಟೋ ಇಷ್ಟೋ ಮರೆಸಿಬಿಟ್ಟಿರುತ್ತವೆ. ಆದರೆ ನಿಜವಾಗಿ ಊರು ಬಿಡುವುದು ಉದ್ಯೋಗವನ್ನು ಅರಸಿಹೊರಟಾಗ ಮಾತ್ರ. ನಮ್ಮ ಕನ್ನಡಿಗರಿಗಂತೂ ಊರು ಬಿಡುವುದೆಂದರೆ ಪ್ರಾಣ ಬಿಡುವಷ್ಟೆ ಕಷ್ಟಕರ. ನೌಕರಿ ಸಿಗುವವರೆಗೆ ರಾಜ್ಯದಲ್ಲಿ ಎಲ್ಲಾದರೂ ಸರಿ ಒಂದು ಕೆಲಸ ಸಿಕ್ಕಿದರೆ ಸಾಕು ಎಂದು ಹಪಹಪಿಸುತ್ತಿರುತ್ತಾರೆ. ಒಮ್ಮೆ ಕೆಲಸ ಸಿಕ್ಕದರೆ ಸಾಕು ತಮ್ಮ ಜಿಲ್ಲೆಗೆ ವರ್ಗಾವಣೆ ಮಾಡಿಸಿಕೊಳ್ಳಲು, ನಂತರ ತಮ್ಮ ತಾಲೂಕಿಗೆ, ನಂತರ ತಮ್ಮ ಊರಿಗೆ ವರ್ಗಮಾಡಿಸಿಕೊಳ್ಳಲು ಎಲ್ಲ ತಿಪ್ಪರಲಾಗಗಳನ್ನೂ ಹಾಕುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಕೈಯಲ್ಲಿದ್ದ ಖಾಯಂ ಕೆಲಸಕ್ಕೆ ರಾಜಿನಾಮೆ ಎಸೆದು, ಸರ್ವೀಸಿನಲ್ಲಿ ಎಂದಿಗೂ ವರ್ಗಾವಣೆಯ ಮುಖವನ್ನೇ ಕಾಣಲಾರೆ ಎಂದು ತಿಳಿದೂ ಕಲ್ಕತ್ತಾಗೆ ಬಂದು ಸೇರಿದುದು ಬಹುಶಃ ನನ್ನ ಹುಚ್ಚುತನವೇ ಇರಬೇಕು.

ಪುಸ್ತಕದ ಹುಚ್ಚು, ಓದುವ ಗೀಳು, ಶಾಂತಿನಿಕೇತನ, ರವೀಂದ್ರನಾಥ ಠಾಕೂರ್, ಶರತ್‌ಚಂದ್ರ, ಬಂಕಿಮಚಂದ್ರ, ಬಿಮಲ್ ಮಿತ್ರ, ಇವರ ಸೆಳೆತವೂ ಸಹ ಇದ್ದಿರಬೇಕು. ಯಾವ ಎಳೆತ ಸೆಳೆತವೇ ಇರಲಿ, ಹದಿನೈದು



ಪತ್ನಿ ಕೋಮಲಾ ಹಾಗೂ ಮಗಳು ದಿವ್ಯಾ ಜೊತೆಗೆ ಕುಮಾರಪ್ಪ

ವರ್ಷಗಳ ಹಿಂದಿನ ಒಂದು ಬೆಳಿಗ್ಗೆ ಕಲ್ಕತ್ತಾ ಸೇರಿದೆ.

ಉದ್ಯೋಗದಲ್ಲಿ ವರ್ಗಾವಣೆಯಾಗಿ ತಾತ್ಕಾಲಿಕವಾಗಿ 'ಹೊರನಾಡಿಗೆ' ಹೋಗುವುದು ಒಂದು ಬಗೆಯದಾದರೆ, ವೃತ್ತಿ ಜೀವನವನ್ನೆಲ್ಲ ಒಂದೆಡೆಯಲ್ಲಿಯೇ ಕಳೆಯುವ ನಿರ್ಧಾರದಿಂದ ಹೊರನಾಡಿಗೆ ಹೋಗುವುದು ಮತ್ತೊಂದು ಬಗೆಯದು. ಮೊದಲನೆಯ ಬಗೆಯಲ್ಲಿ ತಾಯ್ನಾಡಿನಿಂದ ದೂರ ಇರುವುದು ತಾತ್ಕಾಲಿಕ - ಮೂರ್ನಾಲ್ಕೈದು ವರ್ಷಗಳು - ಎನ್ನುವುದು ಗ್ಯಾರಂಟಿ ಇರುತ್ತದೆ. ಈ ಸಮಯದ ನಂತರ ತಾನು ಮತ್ತೆ ತಾಯ್ನಾಡಿಗೆ ಹಿಂತಿರುಗುತ್ತೇನೆ ಎನ್ನುವ ಭರವಸೆಯಲ್ಲಿ ನೆಮ್ಮದಿ ಇರುತ್ತದೆ. ಆದುದರಿಂದ ಅವರು ''ಅಲ್ಲಿರುವುದು ನಮ್ಮ ಮನೆ, ಇಲ್ಲಿ ನಾವು ಸುಮ್ಮನೆ....'' ಎಂದುಕೊಳ್ಳುತ್ತಲೇ ದಿನ ಕಳೆಯುತ್ತಾರೆ. ಆದರೆ, ವೃತ್ತಿ ಜೀವನವನ್ನೆಲ್ಲ ಖಾಯಂ ಆಗಿ ಹೊರನಾಡಿನಲ್ಲಿ ಕಳೆಯಲು ಹೊರಡುವವರ ಮನೋಸ್ಥಿತಿಯೇ ಬೇರೆ. ಇದು ಮದುವೆಯಾದ ಹೆಣ್ಣು ಸಂಸಾರ ನಡೆಸಲು ಬರುವಂತೆಯೇ ಸರಿ. ಹೊಸ ದೇಶ, ಹೊಸ ಜನ, ಹೊಸ ಪರಿಸರ, ಹೊಸಭಾಷೆ, ಹೊಸ ಸಂಸ್ಕೃತಿ - ಎಲ್ಲವೂ ಹೊಸದು. ಇವೆಲ್ಲವುಗಳನ್ನು ಅರ್ಥಮಾಡಿಕೊಳ್ಳಬೇಕು.

ನಗರದ ಭೌಗೋಳಿಕ ಪರಿಸರವನ್ನು ಅರ್ಥಮಾಡಿಕೊಳ್ಳುವಂತೆಯೇ, ಅದರ ಸಾಂಸ್ಕೃತಿಕ ಪರಿಸರವನ್ನೂ ತಿಳಿದುಕೊಳ್ಳಬೇಕಾಗುತ್ತದೆ. ತನ್ನ ಆಸಕ್ತಿಯ ಕೇಂದ್ರಗಳ - ನನ್ನ ವಿಷಯದಲ್ಲಾದರೆ, ಇಲ್ಲಿನ ಮುಖ್ಯ ಗ್ರಂಥಾಲಯಗಳು, ಸಾಹಿತ್ಯ ಅಕಾಡೆಮಿ, ಸಾಹಿತ್ಯ ಪರಿಷತ್ತು, ಭಾಷಾ ಪರಿಷತ್ತುಗಳಂತಹ ಸಾಹಿತ್ಯಕ ಸಂಘ ಸಂಸ್ಥೆಗಳ ಪರಿಚಯ

ಮಾಡಿಕೊಳ್ಳಬೇಕಾಗುತ್ತದೆ. ಸಮಾನ ಮನಸ್ಕರನ್ನು ಹುಡುಕಿಕೊಳ್ಳಬೇಕಾಗುತ್ತದೆ.

ಬದುಕಿನ ಬಹು ಮುಖ್ಯ ಘಟ್ಟವನ್ನು ಹೊರನಾಡಿನಲ್ಲಿಯೇ ಕಳೆಯಬೇಕಾಗುತ್ತದೆ. ಹೀಗಾಗಿ ಆ ಸಂಸ್ಕೃತಿಯಲ್ಲಿ ತನ್ನನ್ನು ಸಂಮಿಳನಗೊಳಿಸಿಕೊಂಡು, ತನ್ನ ನೆಲೆಯನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಆದರೆ, ಧೀರ್ಘಕಾಲೀನ ವಲಸೆ ಬರುವವರೆಲ್ಲರೂ ಇಂತಹ ಮನೋಸ್ಥಿತಿಯನ್ನು ಇರಿಸಿಕೊಂಡೇ ಬಂದಿರುತ್ತಾರೆ ಎಂದೇನೂ ಹೇಳುವಂತಿಲ್ಲ. ಎಷ್ಟೋ ವರ್ಷಗಳಿಂದ ಕಲ್ಕತ್ತದಲ್ಲಿ ವಾಸಿಸುತ್ತಿರುವ ಬಹುಪಾಲು ಕುಟುಂಬಗಳು ಸಾಂಸ್ಕೃತಿಕ ಮುಖ್ಯಧಾರೆಯೊಂದಿಗೆ ಬೆರೆಯದೆ ತಮ್ಮದೇ ಆದ ಸೀಮಿತ ವಲಯದಲ್ಲಿ ಬದುಕುತ್ತಿರುವುದನ್ನು ನಾನು ಕಂಡುಬಲ್ಲೆ. ಮುಖ್ಯ ಸಂಸ್ಕೃತಿಯೊಂದಿಗೆ ತನ್ನನ್ನು ತಾನು ಸಂಮಿಳನಗೊಳಿಸಿಕೊಳ್ಳುವ ಕ್ರಿಯೆ ಪ್ರಜ್ಞಾಪೂರ್ವಕ ಕ್ರಿಯೆಯೇನೂ ಅಲ್ಲ. ಅದು ತಂತಾನೆ ವಿಕಸಿತಗೊಳ್ಳಬೇಕಾದ ಪ್ರಕ್ರಿಯೆ.

ಅದೆಲ್ಲ ಇರಲಿ, ಒಂದು ನಾಡಿನಿಂದ ಮತ್ತೊಂದು ನಾಡಿಗೆ ಬರುವ ವ್ಯಕ್ತಿ ಮೊಟ್ಟಮೊದಲಿಗೆ ಎದುರಿಸಬೇಕಾದುದು ಭಾಷೆಯ ಸಮಸ್ಯೆಯನ್ನು. ಉತ್ತರ ಭಾರತದಲ್ಲೆಲ್ಲ ಹಿಂದಿ ಭಾಷೆಯನ್ನು ಜನರು ಅರ್ಥಮಾಡಿಕೊಳ್ಳುತ್ತಾರೆ ಎನ್ನುವುದು ಸಾಮಾನ್ಯ ನಂಬಿಕೆ. ನಗರ ವಿಷಯಗಳಲ್ಲಿ ಇದು ಸತ್ಯ. ಆದರೆ ಹಿಂದಿ ಅಷ್ಟಾಗಿ ಬಾರದ ಕನ್ನಡಿಗರು, ತೆಲುಗರು ಮತ್ತು ಎಷ್ಟೂ ಬಾರದ ತಮಿಳರಿಗೆ ಭಾಷೆ ಬಹಳ ದೊಡ್ಡ ಅಡಚಣೆಯಾಗಿ ಬಿಡುತ್ತದೆ. ಇಂಗ್ಲಿಷ್ ಭಾಷೆಯನ್ನು 'ಬಂಗಾಲಿ ಬಾಬು'ಗಳು ಅರ್ಥಮಾಡಿಕೊಳ್ಳುತ್ತಾರೆ. ಆದರೆ ಇಂಗ್ಲೀಷಿನಲ್ಲಿ ಉತ್ತರಿಸಲು ಸಂಕೋಚ. ತಪ್ಪಾಗಿ ಮಾತನಾಡಿದರೆ ತನ್ನ ಬಣ್ಣ ಬಯಲಾಗುತ್ತದೆ ಎನ್ನುವ ಇರಿಸುಮುರಿಸು. ಆದುದರಿಂದ ಇಂಗ್ಲೀಷಿನಲ್ಲಿ ಪ್ರಶ್ನಿಸಿದರೆ, ಎತ್ತಲೋ ನೋಡುತ್ತಾ ನಮ್ಮ ಇರವನ್ನೇ ಉಪೇಕ್ಷಿಸಿಬಿಡುತ್ತಾರೆ. ಇದು ಅವರ ಭಾಷೆಯನ್ನು ಕಲಿಯಲೇಬೇಕಾದ ಅನಿವಾರ್ಯತೆಯನ್ನು ಅನ್ಯಭಾಷಿಕರಲ್ಲಿ ಹುಟ್ಟಿಸುತ್ತದೆ.

ಹರುಕುಮುರುಕಾಗಿಯಾದರೂ ಅವರ ಭಾಷೆಯನ್ನು ಬಳಸುವ ಧಾರಾಳತನ ಕನ್ನಡಿಗರಲ್ಲಿ ಇರುವಷ್ಟು ಬೇರೆ ಯಾರಲ್ಲೂ ಇಲ್ಲ. ಅಷ್ಟೇ ಅಲ್ಲ, ಮನೆಯಲ್ಲಿಯೂ ಸಹ ಮಕ್ಕಳೊಂದಿಗೆ ಹಿಂದಿಯಲ್ಲಿಯೇ ಮಾತನಾಡುವ ವಿಶಾಲ ಮನೋಭಾವದ ಎಷ್ಟೋ ಕನ್ನಡದ ತಂದೆ ತಾಯಿಯರನ್ನು ನಾನು ನೋಡುತ್ತಿದ್ದೇನೆ. ಹೀಗಾಗಿ, ''ಇದ್ಕಿಂತ ಸಣ್ಣ ಸೈಜ್ ದೀಜಿಯೆ'', ''ನಿಜವಾಗ್ಲೂ ನಹಿ ಚಾಯಿಯೆ'' (ನಿಜವಾಗ್ಲೂ ಬೇಡ), ''ರೈಲು ಬಂದ್ ಗಯಾ (ರೈಲು ಬಂದು ಬಿಡ್ತು), ''ಟಿಫಿನ್ ಖಾಬೋ, ಆಮೇಲೆ ಖಾಬೋ'' (ಟಿಫಿನ್ ತಿನ್ತೀನಿ. ಆದ್ರೆ ಆಮೇಲೆ ತಿನ್ತೀನಿ) ಎನ್ನುವ ಮಾತುಗಳನ್ನು ಕನ್ನಡಿಗರ ಮನೆಗಳಲ್ಲಿ ಕೇಳಬಹುದು. ಇದು ತಾವು ಇರುವ ಪರಿಸರಕ್ಕೆ ಸಹಜವಾಗಿಯೇ ಹೊಂದಿಕೊಳ್ಳುವ ನಮ್ಮ ಮನೋಭಾವವೇ ಹೊರತು, ನಮ್ಮ ತಾಯ್ನುಡಿಯ ಬಗೆಗಿನ ಹೀನಾಯ ಭಾವನೆಯೇನೂ ಅಲ್ಲ.

25-30 ವರ್ಷಗಳಿಂದಲೂ ಇಲ್ಲಿಯೇ ಉದ್ಯೋಗದಲ್ಲಿರುವ ನನ್ನ ಅನೇಕ ತಮಿಳು ಗೆಳೆಯರಿಗೆ ಬಂಗಾಳಿ ತಿಳಿಯುವುದಿಲ್ಲ. ಹಿಂದಿ ಬರುವುದಿಲ್ಲ, ಕಲ್ಕತ್ತದಲ್ಲಿಯೇ ಹುಟ್ಟಿ ಎಂ.ಎ.ವರೆಗಿನ ಶಿಕ್ಷಣವನ್ನು ಇಲ್ಲಿಯೇ ಮುಗಿಸಿದ ಪಂಜಾಬಿ ಹುಡುಗಿಯೊಬ್ಬಳು ''ನನಗೆ ಬಂಗಾಳಿ ಸ್ವಲ್ಪ ಸ್ವಲ್ಪ ಅರ್ಥ ಆಗುತ್ತೆ ಸಾರ್. ಆದ್ರೆ ಮಾತಾಡೋಕೆ ಬರೋಲ್ಲ'' ಎಂದಾಗ ಆಕೆಯ ಬಗ್ಗೆ, ನನ್ನ ತಮಿಳು ಗೆಳೆಯರ ಬಗ್ಗೆ ಪಾಪ ಅನ್ನಿಸುತ್ತದೆ. ಇವರಿಗೆಲ್ಲ Communication gap ಅನ್ನಿಸಿಯೇ ಇಲ್ಲವೆ? ಇಲ್ಲಿನ ಬಹುಪಾಲು ಜನರ ಮಾತೃಭಾಷೆಯನ್ನೇ ಅರಿಯದೆ ಇವರು ಅವರೊಂದಿಗೆ ಹೇಗೆ ವ್ಯವಹರಿಸಿದ್ದಾರೆ ಎನ್ನುವುದನ್ನು ಯೋಚಿಸಿದಾಗ ಆಶ್ಚರ್ಯವಾಗುತ್ತದೆ. ನಮ್ಮ ಕನ್ನಡಿಗರ ಧಾರಾಳತನವನ್ನು ಕಂಡು ಖುಷಿಯಾಗುತ್ತದೆ. ಒಂದು ಭಾಷೆಯನ್ನು ಕಲಿಯುವುದರಿಂದ ನಮಗೇ ಹೆಚ್ಚು ಲಾಭ ಎನ್ನುವ ಮನೋಭಾವ ನನ್ನದು - ನಮ್ಮದು. ಈ ಮನೋಭಾವದಿಂದಾಗಿಯೇ ಕೆ. ರಾಘವೇಂದ್ರರಾವ್ ಅವರಂತಹ ಕನ್ನಡಿಗರು (ಈಗ ನಿವೃತ್ತರಾಗಿ ಮೈಸೂರಿನಲ್ಲಿ ನೆಲೆಸಿದ್ದಾರೆ) ಕಲ್ಕತ್ತಾದ ಸಾಂಸ್ಕೃತಿಕ ವಲಯದಲ್ಲಿ ಚಿರಪರಿಚಿತರಾಗಿದ್ದರು.

ಕಲ್ಕತ್ತೆಗೆ ಬಂದ ಮೊದಲ ದಿನಗಳಲ್ಲಿ ಭಾಷೆಯ ಸಮಸ್ಯೆ ನನಗೆ ಹೆಚ್ಚೇನೂ ಕಾಡಲಿಲ್ಲ - ಹಿಂದಿ ಬರುತ್ತಿದ್ದ ಕಾರಣ. ಆದರೆ ಹಿಂದಿ ನನಗೆ ಹೇಗೋ ಹಾಗೆಯೇ ಬಂಗಾಲಿಗಳಿಗೂ ಸಹ ಪರಕೀಯ ಭಾಷೆ. ಹಿಂದಿಯ ಮೂಲಕ ನಾನು ಬಂಗಾಲಿಗಳನ್ನು ಮುಟ್ಟಲಾರೆ ಎನ್ನಿಸಿತು. ಅವರ ''ಅಪೊನ್‌ಜನ್'' (ನಮ್ಮವರು) ಆಗದೆ, ಅವರನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಅವರನ್ನು ಅವರ ಭಾಷೆ, ಸಾಹಿತ್ಯ, ಸಂಸ್ಕೃತಿಗಳನ್ನು ಅರ್ಥಮಾಡಿಕೊಳ್ಳದೆ ಇದ್ದಲ್ಲಿ ನಾನು ಕಲ್ಕತ್ತೆಯಲ್ಲಿ ಇದ್ದೂ ಏನು ಪ್ರಯೋಜನ ಎನ್ನಿಸಲಾರಂಭಿಸಿತು. ಹೀಗಾಗಿ ಸ್ವ ಪ್ರಯತ್ನದಿಂದಲೇ ಬಂಗಾಲಿಯನ್ನು ಕಲಿಯಲಾರಂಭಿಸಿದೆ. ಕಲಿತೆ.

ಆದರೆ ಬಂಗಾಲಿ ಕಲಿತಾಕ್ಷಣಕ್ಕೆ ನಾವು ಬಂಗಾಲಿಗಳಾಗುವುದಿಲ್ಲ. ಬಂಗಾಲಿಗಳೂ ಸಹ ಹೊರನಾಡಿನಿಂದ ಬರುವವರೆಲ್ಲರನ್ನೂ ತಮ್ಮವರೆಂದು ಕೈಚಾಚಿ ಸ್ವಾಗತಿಸುವುದಿಲ್ಲ. ಹೊರನಾಡಿನಿಂದ ಬರುವ ಪ್ರತಿಯೊಬ್ಬ ಅಬಂಗಾಲಿಯೂ (ಬಂಗಾಲಿ ಅಲ್ಲದವನು) ಬಂಗಾಲಿಯನ್ನು ಶೋಷಿಸಲು, ಅವರ ಉದ್ಯೋಗದ ಅವಕಾಶಗಳನ್ನು ಕಸಿದುಕೊಳ್ಳಲು, ತಮ್ಮ ಬಂಗಾಲಿ ಸಂಸ್ಕೃತಿಯನ್ನು ಕಲುಷಿತಗೊಳಿಸಲು ಬರುತ್ತಿದ್ದಾನೆ ಎಂದೇ ಅವರು ಭಾವಿಸುತ್ತಾರೆ. ಅನ್ಯಭಾಷಿಕರನ್ನು ಗುಮಾನಿಯಿಂದಲೂ, ಈರ್ಷೆಯಿಂದಲೂ ನೋಡುತ್ತಾರೆ. ಇದು ಸಾರ್ವತ್ರಿಕ ರೋಗವೇ ಸರಿ. ಕುಗ್ಗುತ್ತಿರುವ ಉದ್ಯೋಗದ ಅವಕಾಶಗಳು, ನಿರುದ್ಯೋಗ, ಬಡತನಗಳು ''ಮಣ್ಣಿನ ಮಕ್ಕಳಿಗೇ ಉದ್ಯೋಗ'' ಎನ್ನುವ ವಾದಕ್ಕೆ ಪ್ರೋತ್ಸಾಹ ಕೊಡುತ್ತವೆ. ಇಂತಹ ಸಂದರ್ಭಗಳಲ್ಲೆಲ್ಲ ಅವರ ಹೊಟ್ಟೆಯಲ್ಲಿನ ಸಿಟ್ಟು ವ್ಯಂಗ್ಯೋಕ್ತಿಗಳ ಮೂಲಕವೋ, ಅಸಹನೆಯ ಮೂಲಕವೋ ಹೊರಹೊಮ್ಮುತ್ತದೆ. ಉದ್ಯೋಗಕ್ಕೆ ಸೇರುವ ಮುನ್ನ ಕಡ್ಡಾಯವಾಗಿ ಸಲ್ಲಿಸಬೇಕಾದ ಮೆಡಿಕಲ್ ಸರ್ಟಿಫಿಕೇಟ್‌ನಲ್ಲಿ ವಿನಾಕಾರಣ 'unfit for the post' ಎಂದು ಬರೆದ ಬಂಗಾಲಿ ಡಾಕ್ಟರ್, ರಸ್ತೆಬದಿಯಲ್ಲಿ ಹೂ ಮಾರುವವನೊಂದಿಗೆ ಸಣ್ಣ ಕಾರಣಕ್ಕೆ ಮಾತಿಗೆ ಮಾತು ಬೆಳೆದಾಗ ''ಸಾಲೆ ಅಬಂಗಾಲಿ ಎಖಾನೆ ಎಷೆ ಮಸ್ತಿ ದೆಖಾಚ್ಚೆ (ಬಡ್ಡಿಮಗ ಅಬಂಗಾಲಿ ಇಲ್ಲಿಗೆ ಬಂದು ಮಷ್ಕಿರಿ ಮಾಡ್ತಾ ಅದಾನೆ) ಎನ್ನುವ ಅವನ ಭರ್ತ್ಸನೆಯಲ್ಲಿ ಬಂಗಾಲಿಗಳ ಅಸಹನೆ ಪ್ರಕಟವಾಗುತ್ತದೆ. ಮೊದಮೊದಲಿಗೆ ಇಂತಹ ಪರಿಸ್ಥಿತಿಗಳನ್ನು ಎದುರಿಸಿದಾಗ ನನಗೂ ಸಿಟ್ಟು ನೆತ್ತಿಗೇರುತ್ತಿತ್ತು. ಆದರೆ ನಿಧಾನಕ್ಕೆ ಅವರ ನಿರುದ್ಯೋಗ, ಬಡತನಗಳನ್ನು ಅರ್ಥಮಾಡಿಕೊಳ್ಳಲು ಆರಂಭಿಸಿದ ಮೇಲೆ ''ಅವರ ಸಿಟ್ಟಿಗೆ ಅರ್ಥವಿಲ್ಲದೇ ಇದ್ದರೂ ಆಧಿಕಾರವಿದೆ'' ಎನ್ನಿಸಿ ಸುಮ್ಮನಾಗುತ್ತೇನೆ. ನಮ್ಮ ಬೆಂಗಳೂರಿನ 'ಕನ್ನಡ ಓರಾಟಗಾರರ' ಸೋದರ ಸಂಬಂಧಿ 'ಆಮ್‌ರಾ ಬಂಗಾಲಿ' (ನಾವು ಬಂಗಾಲಿಗಳು) ಎನ್ನುವ ಸಂಘಟನೆಯೊಂದು ಬಂಗಾಲಿಗಳನ್ನು ಭಾವನಾತ್ಮಕವಾಗಿ ಪ್ರಚೋದಿಸುವ ಗುಪ್ತ ಕೆಲಸ ನಡೆದಿದೆ. ಆದರೆ ಇದು ಅನೇಕ ವರ್ಷಗಳಿಂದ ಅಸ್ತಿತ್ವದಲ್ಲಿದ್ದರೂ ಸಹ ಅಧಿಕಾರಿಗಳಾಗಲಿ, ರಾಜಕೀಯ ವ್ಯಕ್ತಿಗಳಾಗಲಿ ಇದಕ್ಕೆ ಪ್ರೋತ್ಸಾಹ ನೀಡದೆ ಇರುವುದರಿಂದ ಇದು ನಗಣ್ಯ ಸಂಘಟನೆಯಾಗಿಯೇ ಉಳಿದಿದೆ. ದೇಶದ ಇತರ ನಗರಗಳಿಗೆ ಹೋಲಿಸಿದರೆ, ಬಂಗಾಲಿಗಳು ಅನ್ಯಭಾಷಿಕರನ್ನು ಸೌಹಾರ್ದಯುತವಾಗಿಯೇ ನೋಡುತ್ತಾರೆ. ಮೇಲೆ ಹೇಳಿದ ಘಟನೆಗಳು ಬಹಳ ಅಪರೂಪಕ್ಕೆ ಘಟಿಸುವಂತಹುಗಳು. ಇಂದಿರಾಗಾಂಧಿಯ ಕೊಲೆಯಾದಾಗ, ಬಾಬರಿ ಮಸೀದಿಯನ್ನು ಕೆಡವಿದಾಗ ಇಡೀ



## ಬಿಹಾರಿ ಬಾಬು

ಹಿಂದೀ ಚಿತ್ರರಂಗದಲ್ಲಿ ಹೆಸರು ಮಾಡಿದ ನಾಯಕರೆಲ್ಲ ಹೆಚ್ಚಾಗಿ ಪಂಜಾಬಿನವರು. ಮೊದಲು ಮೊದಲು ಹಿಂದೀ ಚಿತ್ರರಂಗದ ನಾಯಕ ನಟರೆಲ್ಲ ಪಾಕಿಸ್ತಾನದಿಂದ ಭಾರತಕ್ಕೆ ವಲಸೆ ಬಂದವರು. ಇಂಥವರ ನಡುವೆ ಬಂಗಾಳಿ ಬಾಬು ಮಿಥುನ್ ಚಕ್ರವರ್ತಿ ಮತ್ತು ಬಿಹಾರಿ ಬಾಬು ಶತ್ರುಘ್ನ ಸಿನ್ಹಾ ಹೆಚ್ಚಿನ ಯಶಸ್ಸು ಸಾಧಿಸಿದ್ದು ನಿಜಕ್ಕೂ ಗಮನಾರ್ಹ.

ದೇಶ ಹತ್ತಿ ಉರಿಯುತ್ತಿದ್ದಾಗ ಕಲ್ಕತ್ತಾ ನಗರದಲ್ಲಿ ಗಂಭೀರವೆನ್ನಿಸುವ ಘಟನೆಗಳಾವುವೂ ಘಟಿಸಲಿಲ್ಲ.

ಹೊರನಾಡಿಗೆ ಬಂದು ನೆಲೆಸುವ ವ್ಯಕ್ತಿ ಅನ್ಯ ಭಾಷಿಕರ ನಡುವೆ ತಾನು ಒಬ್ಬಂಟಿಯಾಗಿ ಉಳಿದುಹೋಗುವ, ಕಳೆದುಹೋಗುವ ಭಯದಿಂದ ತಪ್ಪಿಸಿಕೊಳ್ಳಲಿಕ್ಕಾಗಿ ಅವನು ಮೊದಲಿಗೆ ಹುಡುಕುವುದು ತನ್ನ ಭಾಷಿಕ ಜನರನ್ನು. ಆದರೆ ಹತ್ತೈವತ್ತು ಮೈಲುಗಳಷ್ಟು ವಿಶಾಲವಾಗಿ ಹರಡಿರುವ ನಗರಗಳಲ್ಲಿ ತನ್ನವರನ್ನು ಹುಡುಕುವುದು ಹೇಗೆ? ಇಂತಹ ಸಂದರ್ಭಗಳಲ್ಲಿ ಅವನ ಭಾಷಿಕ ಸಂಘ-ಸಂಸ್ಥೆಗಳು ಓಯಸಿಸ್‌ಗಳಂತೆ ಅವನ ಕಣ್ಣಿಗೆ ಬೀಳುತ್ತವೆ. ಕಲ್ಕತ್ತದಲ್ಲಿ - ದೇಶದ ಎಲ್ಲ ನಗರಗಳಲ್ಲೂ ಇರುವಂತೆ - ವಿವಿಧ ಭಾಷಿಕರಿಗಾಗಿ ಅವರದ್ದೇ ಆದ ಸಂಘ ಸಂಸ್ಥೆಗಳಿವೆ. ತಮಿಳು, ಮಲಯಾಳಂ ಗುಜರಾತಿಗಳಂತಹ ಹೆಚ್ಚಿನ ವಲಸಿಗರು ಇರುವ ಜನರಿಗಾಗಿ ಒಂದಕ್ಕಿಂತ ಹೆಚ್ಚಿನ ಸಂಘಗಳಿವೆ. ಈ ಸಂಘಗಳು ಮುಖ್ಯವಾಗಿ ನಿಂತಿರುವುದು ಭಾಷಿಕರ ಭಾವನಾತ್ಮಕ ಸಂಬಂಧದ ಆಧಾರದ ಮೇಲೆ. ಜಾತಿ ಮತಗಳಾಗಲಿ, ಮೇಲುಕೀಳುಗಳಾಗಲಿ, ರಾಜಕೀಯ ಬದ್ಧತೆಗಳಾಗಲಿ, ತಾನು ಹೊಂದಿರುವ ಉದ್ಯೋಗ, ಅಧಿಕಾರ, ದರ್ಪ, ದೌಲತ್ತುಗಳು ಇಲ್ಲಿ ಕೆಲಸ ಮಾಡಲಾರವು. ಕಲ್ಕತ್ತಾದಲ್ಲಿ ನಾವು ಅಲ್ಪ ಸಂಖ್ಯಾತರೆ. ಕಲ್ಕತ್ತಾದಲ್ಲಿರುವ ಕನ್ನಡಿಗರ ಸಂಖ್ಯೆ ಒಂದುಸಾವಿರದ ಆಸುಪಾಸಿನಲ್ಲಿದೆ. ಇಡಿ ಕಲ್ಕತ್ತಾದಲ್ಲಿರುವ ಕನ್ನಡಿಗರಿಗೆ ಇರುವುದು ಒಂದೇ ಒಂದು ಸಂಘ - 'ಕರ್ನಾಟಕ ಅಸೋಸಿಯೇಷನ್' ಕನ್ನಡಿಗರು ಒತ್ತಾಗಿ ನೆಲೆಸಿರುವ ಏರಿಯಾದಲ್ಲಿ ಸ್ವಂತ ಕಟ್ಟಡ ಹೊಂದಿರುವ ಈ ಸಂಘ ಕಲ್ಕತ್ತಾಗೆ ಬರುವ ಕನ್ನಡಿಗರಿಗೆ ದೀಪಸ್ತಂಭವಿದ್ದಂತೆ. 'ನಾವು ಕನ್ನಡಿಗರು' ಎನ್ನುವುದಷ್ಟೇ ಇಲ್ಲಿನ ಏಕೈಕ ಬೆಸುಗೆ. ಹೊಸದಾಗಿ ಬಂದವರಿಗೆ ಕನ್ನಡ ಗೆಳೆಯರನ್ನು ಹುಡುಕಿಕೊಳ್ಳಲು, ಹೊಸದಾಗಿ ಬರುವ ಕನ್ನಡಿಗರನ್ನು ಪರಿಚಯ ಮಾಡಿಕೊಳ್ಳಲು ಇರುವ ಏಕೈಕ ಸ್ಥಳ ಕನ್ನಡ ಸಂಘ. ಈ ಸಂಘವಿಲ್ಲದಿದ್ದಲ್ಲಿ ಶೇಷಾದ್ರಿ, ಸೀತಾರಾಂ, ಐಯ್ಯಂಗಾರ್, ಸುಬ್ಬರಾವ್, ರಾಘವೇಂದ್ರರಾವ್, ರುಕ್ಮಿಣಿ ರಂಗಸ್ವಾಮಿಯವರಂತಹ ಹಿರಿಯರನ್ನಾಗಲಿ, ಸ್ವಾಮಿ, ನಾರಾಯಣ ಪಾಟೀಲ್, ಶ್ರೀಧರ್, ಮಧುಸೂದನ್ (ಈಗ ಹೈದರಾಬಾದ್‌ನಲ್ಲಿದ್ದಾರೆ) ಝುಂಜರವಾಡ (ಈಗ ಕೊಚ್ಚಿನ್‌ನಲ್ಲಿದ್ದಾರೆ), ಲಿಡ್ಕರ್ ರವಿ (ಈಗ ಬೆಂಗಳೂರಿನಲ್ಲಿದ್ದಾರೆ) - ಇಂತಹ ಗೆಳೆಯರನ್ನಾಗಲಿ ಪಡೆಯುವುದು ಸಾಧ್ಯವೇ ಇರಲಿಲ್ಲ. ಈ ಗೆಳೆತನಗಳಿಗೆ ಇರುವ ಮಹತ್ವವನ್ನು ಬಹುಶಃ ಕರ್ನಾಟಕದಲ್ಲಿ ಕುಳಿತು ಅರ್ಥಮಾಡಿಕೊಳ್ಳುವುದು ಕಷ್ಟ.

**ಆಸ್ಪತ್ರೆ ವಾಸದ ದಾಖಲೆ**

ಮಾರ್ಥಾ ನೆಲ್ಸನ್ ಎಂಬಾಕೆ ಸುದೀರ್ಘ ಆಸ್ಪತ್ರೆ ವಾಸದ ದಾಖಲೆ ಮಾಡಿದ್ದಾಳೆ. ಅಮೆರಿಕಾದ ಓಹೀಯಾ ನಗರದ ಕೊಲಂಬಸ್ ಆಸ್ಪತ್ರೆಗೆ 1875ರಲ್ಲಿ ದಾಖಲಾದ ಆಕೆ ಅಲ್ಲಿಯೇ 1975ರ ಜನವರಿಯಲ್ಲಿ ಅಸು ನೀಗಿದಳು. ಆಗ ಆಕೆಗೆ 103 ವರ್ಷ ಆರು ತಿಂಗಳು. ಮಾರ್ಥಾ ತನ್ನ ಜೀವನದ 99 ವರ್ಷ ಆಸ್ಪತ್ರೆಯಲ್ಲೇ ರೋಗಿಯಾಗಿ ಕಳೆದಿದ್ದಳು!

ಆಸಕ್ತ ಸದಸ್ಯರು ವಾರಕ್ಕೊಮ್ಮೆ ಸಂಜೆ ಇಲ್ಲಿ ಸೇರುತ್ತಾರೆ. ಹೊಸಬರು ಬಂದರೆ ತಾವಾಗಿಯೇ ಪರಿಚಯ ಮಾಡಿಕೊಳ್ಳುತ್ತಾರೆ. ಬಾಡಿಗೆಗೆ ಮನೆ ಹುಡುಕಲು, ಮಕ್ಕಳ ಸ್ಕೂಲ್ ಅಡ್ಮಿಷನ್ ವಿಷಯಗಳಲ್ಲಿ ಸಹಾಯ ಮಾಡುತ್ತಾರೆ. ಇದರಿಂದ ಕಲ್ಕತ್ತಾಗೆ ಬರುವ ಕನ್ನಡಿಗರಲ್ಲಿ 'ಪರದೇಸೀತನ' ಕಡಿಮೆಯಾಗುತ್ತದೆ. ಸಂಘದಲ್ಲಿ ಆದ ಪರಿಚಯ ನಿಧಾನವಾಗಿ ಗೆಳೆತನಕ್ಕೆ ತಿರುಗುವುದುಂಟು. ಇವರ ಮನೆಗೆ ಅವರು, ಅವರ ಮನೆಗೆ ಇವರು ಬರುವ ಹೋಗುವ ಪರಿಪಾಠ ಬೆಳೆಯುತ್ತದೆ. ನಾಲ್ಕಾರು ಕುಟುಂಬಗಳು ಒಂದಾಗಿ ಹದಿನೈದು ದಿನಗಳಿಗೋ, ತಿಂಗಳಿಗೋ ಒಮ್ಮೆ ಯಾರದ್ದಾದರೂ ಒಬ್ಬರ ಮನೆಯಲ್ಲಿ ಸೇರಿ ಇಡೀ ದಿನ ಹಾಡು ಹರಟೆಗಳಲ್ಲಿ ಕಾಲಕಳೆಯುವುದುಂಟು. ಆಗೆಲ್ಲ ಮಕ್ಕಳಿಗೆ ಖುಷಿಯೋ ಖುಷಿ. 'ಬೆಂಗಳೂರಿನಲ್ಲಿಯೂ ಸಹ ಜನರು ಇಷ್ಟು ರೆಗ್ಯುಲರ್ ಆಗಿ ಗೆಳೆಯರ, ಸಂಬಂಧಿಕರ ಮನೆಗಳಿಗೆ ಹೋಗುವುದಿಲ್ಲ' ಎಂದು ಬೆಂಗಳೂರಿನಿಂದ ಬಂದ ಎಷ್ಟೋ ಗೆಳೆಯರು ಹೇಳುವುದುಂಟು.

ವಾರಕ್ಕೊಮ್ಮೆ ಭೇಟಿಯಾಗುವುದೇ ಅಲ್ಲದೆ, ತಿಂಗಳಿಗೆ ಒಂದೆರಡು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು, ವರ್ಷಕ್ಕೆ ಒಂದೆರಡು ದೊಡ್ಡ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ಕನ್ನಡ ಸಂಘ ಆಯೋಜಿಸುತ್ತದೆ. ಕೇರಳದವರಿಗೆ ಓಣಂ, ತಮಿಳರಿಗೆ ಸಂಕ್ರಾಂತಿ, ಕನ್ನಡಿಗರಿಗೆ ದಸರಾ, ಗಣೇಶೋತ್ಸವ, ಮರಾಠಿಗರಿಗೆ ಗಣೇಶೋತ್ಸವಗಳು ಇಂತಹ ದೊಡ್ಡ ಸಾಂಸ್ಕೃತಿಕ ಕಾರ್ಯಕ್ರಮಗಳು. ಆಗೆಲ್ಲ ವಾರವಿಡೀ ಕಾರ್ಯಕ್ರಮಗಳು. ಈ ಕಾರ್ಯಕ್ರಮಗಳಿಗೆ ಕರ್ನಾಟಕದಿಂದ ನಾಟಕ ತಂಡಗಳನ್ನೂ, ನೃತ್ಯ ಕಲಾವಿದರನ್ನೂ ಸಂಘ ಆಹ್ವಾನಿಸುತ್ತದೆ. ಕಲ್ಕತ್ತಾಗೆ ಭೇಟಿ ನೀಡುವ ಲೇಖಕರನ್ನು ಸಂಘ ಆಹ್ವಾನಿಸಿ ಗೌರವಿಸುವ ಪರಿಪಾಠವನ್ನು ಇರಿಸಿಕೊಂಡಿದೆ. ಈ ಕಾರ್ಯಕ್ರಮಗಳ ಮೂಲಕ ಕರ್ನಾಟಕದ ಸಾಂಸ್ಕೃತಿಕ ವಾತಾವರಣವನ್ನು ಕನ್ನಡ ಸಂಘ ಬೆಳೆಸಿದೆ.

ನಿಧಾನಕ್ಕೆ ನಾನು ಬಂದ ನಾಡಿನ ಸಂಸ್ಕೃತಿಗೆ ತೆರೆದುಕೊಳ್ಳುತ್ತಾ ಸಾಗಿದಂತೆ, ಇಲ್ಲಿನ ಸಮಾಜವೂ ಸಹ ನನಗೆ ತೆರೆದುಕೊಳ್ಳುತ್ತಾ ಸಾಗುತ್ತದೆ. ಕೊಡುಕೊಳ್ಳುವಿಕೆಯ ಈ ಪ್ರಕ್ರಿಯೆಯಲ್ಲಿ ಸಂಘರ್ಷಗಳು ಉಂಟಾಗದೆ ಇರುವುದು ಖುಷಿಯ ವಿಚಾರ. ಇಲ್ಲಿನ ಭಾಷೆ, ಸಾಹಿತ್ಯ, ಸಂಸ್ಕೃತಿಗಳನ್ನು ಅರಿಯುವ ಕುತೂಹಲ ನನಗೆ ಇರುವಂತೆಯೇ, ನನ್ನ ಭಾಷೆ, ಸಾಹಿತ್ಯ, ಸಂಸ್ಕೃತಿಗಳನ್ನು ತಿಳಿಯುವ ಕುತೂಹಲ ಇಲ್ಲಿನ ಜನರಿಗೂ ಇರುವುದನ್ನು ಕಂಡು ಸಂತೋಷವಾಗಿದೆ. ಇದರಿಂದಾಗಿ ಕನ್ನಡ, ಕನ್ನಡತನಗಳನ್ನು ಕುರಿತು ಮಾತನಾಡುವ ಯಾವ ಅವಕಾಶಗಳನ್ನೂ ನಾನು ತಪ್ಪಿಸಿಕೊಳ್ಳುವುದಿಲ್ಲ. ಜಗತ್ತಿನ ಎಷ್ಟೋ ದೇಶಗಳ ಬಗ್ಗೆ ತಿಳಿದುಕೊಂಡಷ್ಟು ವಿವರವಾಗಿ ನಾವು ನಮ್ಮ ನೆರೆಯ ರಾಜ್ಯದ ಬಗ್ಗೆ ತಿಳಿದುಕೊಂಡಿಲ್ಲ ಎನ್ನುವುದು ಸ್ಪಷ್ಟ. ಇದಕ್ಕೆ ಮುಖ್ಯ ಕಾರಣ ಇತರ ರಾಜ್ಯಗಳ ಬಗ್ಗೆ ನಮಗೆ ಅಸಡ್ಡೆ ಇದೆ ಎಂದೇನೂ ಅಲ್ಲ. ಆಯಾರಾಜ್ಯಗಳ ಬಗ್ಗೆ ತಿಳಿಯಲು ಸರಿಯಾದ ಮಾಹಿತಿಗಳು ಗ್ರಂಥಗಳು ಇಲ್ಲದೇ ಇರುವುದು. ನಮ್ಮ ರಾಜ್ಯಗಳ ಬಗ್ಗೆ ಹಿಂದಿ ಅಥವಾ ಇಂಗ್ಲೀಷಿನಲ್ಲಿ ಪ್ರಕಟವಾಗಿರುವ ಗ್ರಂಥಗಳ ಸಂಖ್ಯೆ ತುಂಬಾ ಕಡಿಮೆ. ಪ್ರಕಟವಾದ ಗ್ರಂಥಗಳೂ ಸಹ ನಮ್ಮ ನಾಡಿನ ಗಡಿಯನ್ನು ದಾಟಿ ಆಚೆ ಹೋಗಿಲ್ಲ. ಆದರೆ ಜನರಲ್ಲಿ ಕುತೂಹಲ ಇದ್ದೇ ಇದೆ. ಸಾಹಿತ್ಯಾಸಕ್ತ ಮಿತ್ರರು ನನ್ನನ್ನು ಭೇಟಿಯಾದಾಗ ಅನಂತಮೂರ್ತಿ, ಕಾರ್ನಾಡ್, ಕಾರಂತ ಇವರ ಬಗ್ಗೆ ಕೇಳುತ್ತಿರುತ್ತಾರೆ. (ಪಾಪ, ಈ ಲೇಖಕರನ್ನು ಬಿಟ್ಟು ಬೇರೆಯವರ ಹೆಸರನ್ನು ಅವರು ಕೇಳಿಯೇ ಇಲ್ಲ) ಇತ್ತೀಚೆಗೆ ದೇವನೂರು ಮಹಾದೇವ, ಸಿದ್ಧಲಿಂಗಯ್ಯ, ಅರವಿಂದ ಮಾಲಗತ್ತಿಯಂತಹ ದಲಿತ ಲೇಖಕರ ಹೆಸರುಗಳು ಅವರನ್ನು ತಲುಪಿವೆ. ಅವರನ್ನು ಮುಖ್ಯವಾಗಿ ದಲಿತ ಲೇಖಕರನ್ನು ಕುರಿತ ಆಸಕ್ತಿ ಹೆಚ್ಚುತ್ತಿದೆ. ಕನ್ನಡದಿಂದ ಕತೆ, ಕವನ, ಕಾದಂಬರಿಗಳನ್ನು ಬಂಗಾಲಿಗೆ ಅನುವಾದಿಸಿ ಕೊಡಲು ದುಂಬಾಲು ಬೀಳುತ್ತಿರುತ್ತಾರೆ. ಇದು ಕಲ್ಕತ್ತದಲ್ಲಿ ನನ್ನ ಇರುವಿಕೆಗೆ ಹೊಸ ಆಯಾಮವನ್ನು ನೀಡಿತು. ನಾನು ಅವರ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳುತ್ತಿರುವಂತೆಯೇ ಅವರಿಗೆ ನನ್ನ ಸಂಸ್ಕೃತಿಯನ್ನು ಅರ್ಥ ಮಾಡಿಸುವುದು ನನ್ನ ಕರ್ತವ್ಯ ಎಂದು ಭಾವಿಸಿದ್ದೇನೆ. ಸಂಶಯ, ಈರ್ಷೆಗಳಿಂದ ನೋಡುತ್ತಿದ್ದ ನನ್ನ ಬಂಗಾಲಿ ಗೆಳೆಯರು ಸಹೋದ್ಯೋಗಿಗಳು ನಿಧಾನಕ್ಕೆ ನನ್ನನ್ನು 'ಅಪೊನ್‌ಜನ್' ಎಂದು ಭಾವಿಸಿದಾಗ ಕನ್ನಡದ ಸಾಹಿತಿಗಳ ಪ್ರತಿನಿಧಿ ಎಂದು ನನ್ನನ್ನು ಗುರುತಿಸಲು ಆರಂಭಿಸಿದಾಗ ಕಲ್ಕತ್ತೆಯ ನನ್ನ ಇರುವಿಕೆಗೆ ಸಾರ್ಥಕ್ಯ ಬಂದಂತಾಗುತ್ತದೆ.

ರೇಡಿಯೋ, ದೂರದರ್ಶನಗಳಲ್ಲಿ ಕನ್ನಡವನ್ನು ಕುರಿತಂತೆ ಮಾತನಾಡುವಾಗ, 'ಆವರ್ತ' ಎನ್ನುವ ಬಂಗಾಳಿ ಸಾಹಿತ್ಯ ಪತ್ರಿಕೆಯ ಒಂದು ವಿಶೇಷ ಸಂಚಿಕೆಯನ್ನು ಕರ್ನಾಟಕಕ್ಕೆ ಮೀಸಲಾಗಿರಿಸಿ ಸಂಪಾದಿಸುವಾಗ, ಕಾಜಿ ನಜರುಲ್ ಇಸ್ಲಾಂ, ಅವರ ಶತಮಾನೋತ್ಸವದ ಸಂದರ್ಭದಲ್ಲಿ, ಇಸ್ಲಾಂ ಅವರ ಫೋಟೋಗೆ ಕನ್ನಡಿಗರೆಲ್ಲರ ಪರವಾಗಿ ಮಾಲಾರ್ಪಣೆ ಮಾಡುವಾಗ 'ಅಖಿಲ ಬಾಂಗ್ಲಾ ದಲಿತ ಲೇಖಕರ ಒಕ್ಕೂಟ'ದ ಉದ್ಘಾಟನಾ ಭಾಷಣ ಮಾಡುವಾಗ ನನ್ನ ಎದೆ ತುಂಬಿ ಬರುತ್ತದೆ. ಈ ಎಲ್ಲ ಗೌರವಗಳು ನನ್ನ ವೈಯಕ್ತಿಕ ಗೌರವಗಳಾಗಿರದೆ, ನನ್ನ ಶ್ರೀಮಂತ ಕನ್ನಡ ಸಾಹಿತ್ಯಕ್ಕೆ ಸಂದ ಗೌರವ ಎಂದು ಭಾವಿಸಿ ವಿನೀತನಾಗುತ್ತೇನೆ. ಆಗೆಲ್ಲ ಊರು ನೆನಪಿನಿಂದ ಮರೆಯಾಗಿರುತ್ತದೆ.

ಆದರೆ ಹುಟ್ಟಿದ ಊರನ್ನು ಮರೆಯಲು ಸಾಧ್ಯವೆ? ಮಹಾಭಾರತದ ಯಕ್ಷ ಪ್ರಸಂಗದಲ್ಲಿನ ಯಕ್ಷನ ಒಂದು ಪ್ರಶ್ನೆ ನೆನಪಿಗೆ ಬರುತ್ತದೆ.

''ಜಗತ್ತಿನಲ್ಲಿ ಅತ್ಯಂತ ಪವಿತ್ರವಾದ ಸ್ಥಳ ಯಾವುದು?'' ಅದಕ್ಕೆ ಧರ್ಮರಾಯನ ಉತ್ತರ ''ತಂದೆ ತಾಯಿಗಳು ಇರುವ ಸ್ಥಳ''. ಹೌದು ನಾವು ಎಷ್ಟೇ ದೂರ ಹೋಗಿರಲಿ, ಯಾವುದೇ ಭಾಷೆಯನ್ನು ಕಲಿತಿರಲಿ, ಹೊರಗಿನವರೊಂದಿಗೆ ಯಾವುದೇ ಭಾಷೆಯಲ್ಲಿ ವ್ಯವಹರಿಸುತ್ತಿರಲಿ ನೋವಾದಾಗ ನಾವು ನೆನಪಿಸಿಕೊಳ್ಳುವುದು ತಾಯಿಯನ್ನು ಮಾತೃ ಭಾಷೆಯಲ್ಲಿ.

ದಿನಪತ್ರಿಕೆಯಲ್ಲಿ ನನ್ನೂರು ಕಡೆಯ ಸುದ್ದಿಯನ್ನು ಓದಿದಾಗ, ಟಿ.ವಿ.ಯಲ್ಲಿ ಆ ಸುದ್ದಿಯನ್ನು ಕೇಳಿದಾಗ ಮನಸ್ಸು ಥಟ್ಟನೆ ಊರನ್ನು ನೆನಪಿಸಿಕೊಳ್ಳುತ್ತದೆ. ಚಿತ್ರದುರ್ಗದಲ್ಲಿ ಹೊಂಡಕ್ಕೆ ಬಸ್ ಬಿದ್ದ ಸುದ್ದಿಕೇಳಿದ ಕೂಡಲೆ, ''ನಮ್ಮ ಊರಿನವರು ಯಾರಾದರೂ ಆ ಬಸ್ಸಿನಲ್ಲಿ ಇದ್ದಾರೆಯೆ?'' ಎಂದು ಮನಸ್ಸು ಕಳವಳಕ್ಕೆ ಈಡಾಗುತ್ತದೆ. ಸಿರಿಗೆರೆಯಲ್ಲಿ ಕವಿಗೋಷ್ಠಿ ನಡೆದ ಸುದ್ದಿಯನ್ನು ಓದಿದಾಗ ಮನಸ್ಸು ಕಳೆದ ಕಾಲೇಜಿನ ದಿನಗಳನ್ನು ನೆನಪಿಸಿಕೊಳ್ಳುತ್ತದೆ. ಪ್ರಿನ್ಸಿಪಾಲ್ ಸಿದ್ದಪ್ಪ, ಒಡೆಯರ್, ಪಾಟೀಲ್, ಹೆಗಡೆ, ಮಠಪತಿ, ಗುರುಗಳನ್ನು ಹೋಗಿ ನೋಡಬೇಕೆನ್ನಿಸುತ್ತದೆ. ತಾಲೂಕು, ಜಿಲ್ಲಾ ಮಟ್ಟದ ಸಾಹಿತ್ಯ ಸಮ್ಮೇಳನಗಳ ಆಹ್ವಾನ ಪತ್ರಿಕೆಗಳನ್ನು ಪಡೆದಾಗ ನಾನೂ ಆ ಸಮ್ಮೇಳನಗಳಲ್ಲಿ ಭಾಗವಹಿಸಲು ಸಾಧ್ಯವಾಗಿದ್ದರೆ ಎನ್ನಿಸುತ್ತದೆ. ಗೆಳೆಯರ, ಬಂಧುಗಳ ವಿವಾಹದ ಆಹ್ವಾನ ಪತ್ರಗಳನ್ನೂ ಗೃಹಪ್ರವೇಶದ ಆಹ್ವಾನ ಪತ್ರಗಳನ್ನೂ ಅಂಚೆಯಿಂದ ಪಡೆದಾಗ ಮನಸ್ಸು ಒಂದರೆಕ್ಷಣ ಮುದುಡುತ್ತದೆ. ''ಅಯ್ಯೋ ಕರ್ನಾಟಕದಲ್ಲಿ ಇದ್ದಿದ್ದರೆ ಮದುವೆಗೆ ಹೋಗಬಹುದಿತ್ತು'' ಎನ್ನಿಸುತ್ತದೆ. ಇಂತಹ ಸಂದರ್ಭಗಳಲ್ಲೆಲ್ಲ 'ಥತ್ ಇಲ್ಲಿ ಇದ್ದು ಮಾಡುವುದೇನು? ಕೆಲಸಕ್ಕೆ ರಾಜಿನಾಮೆ ಎಸೆದು ಊರಿಗೆ ಹೋಗಿಬಿಡಲೆ?'' ಎನ್ನಿಸುತ್ತದೆ. ಆದರೆ ಬದುಕು ನಾವು ಅಂದುಕೊಂಡಷ್ಟು ಸರಳವೂ, ಸುಲಭವೂ ಆದುದಲ್ಲ ತಾನೆ. ''ಕಷ್ಟಸುಖಗಳಲ್ಲಿ ನಾವು ಭಾಗಿಗಳಾಗಲಾರೆವು'' ಎನ್ನುವುದೊಂದೆ ದೂರದಲ್ಲಿ ಇರುವ ನಮ್ಮಂತಹವರ ದೊಡ್ಡ ಕೊರಗು. ಸುಖಕ್ಕಿಂತಲೂ ಕಷ್ಟಗಳ ವಿಷಯದಲ್ಲಿ ಇದು ಹೆಚ್ಚಾಗಿ ಅನ್ವಯಿಸುತ್ತದೆ. ಕಷ್ಟಗಳೇನು ಹೇಳಿ ಕೇಳಿ ಬರುತ್ತವೆಯೆ? ಹಠಾತ್ತನೆ ಎರಗುವ ಸಾವಿನ ಸಂದರ್ಭಗಳಲ್ಲಿ ನಾವು ನಿಸ್ಸಹಾಯಕರಾಗಲೇ ಬೇಕಾಗುತ್ತದೆ. ನನ್ನ ಶ್ರೀಮತಿಯ ತಂದೆ ಸಾವನ್ನಪ್ಪಿದಾಗ ಸುದ್ದಿ ತಿಳಿದದ್ದೆ ಬಹಳ ತಡವಾಗಿ. ನಲವತ್ತೆಂಟು ಗಂಟೆಗಳ ಪ್ರಯಾಣ. ಹೀಗಾಗಿ ಹೆಂಡತಿಗೆ ಸುದ್ದಿಯನ್ನು ಮೊದಲೇ ತಿಳಿಸುವಂತಿಲ್ಲ. ಶಾಕ್‌ನಿಂದ ಪ್ರಯಾಣ ಕಷ್ಟಕರವಾಗಿ ಬಿಟ್ಟರೆ ಎನ್ನುವ ಚಿಂತೆ. ''ನಿಮ್ಮ ಅಪ್ಪನಿಗೆ ಕಾಯಿಲೆ ಜಾಸ್ತಿ ಆಗೀತಂತೆ. ಊರಿಗೆ ಬನ್ನಿ ಅಂತ ಫೋನ್ ಮಾಡೀದಾರೆ'' ಎಂದು ಹೇಳಿ, ನಿಧಾನಕ್ಕೆ ಹೊರಡಿಸಿಕೊಂಡು ಊರು ಮುಟ್ಟುವ ವೇಳೆ ಎಂಟತ್ತು ದಿನಗಳೇ ಕಳೆದು ಹೋಗಿದ್ದವು. ಊರಿಗೆ ಬರುವವರೆಗೆ ಸಾವಿನ ಸುದ್ದಿಯನ್ನು ಮುಚ್ಚಿಡುವುದು ಎಷ್ಟು ಕಷ್ಟ! ಸಾವಿನ ಸುದ್ದಿ ತಿಳಿದ ಎರಡೇ ದಿನಗಳಿಗೆ ಯುಗಾದಿ ಹಬ್ಬ, ಹಬ್ಬ ಆಚರಿಸಬೇಕೆ, ಬೇಡವೆ? ಎನ್ನುವ ಸಂದಿಗ್ಧ. ಆಚರಿಸಿದರೆ ಅಪಚಾರವಾದಂತೆ, ಆಚರಿಸದೆ ಇದ್ದಲ್ಲಿ ಹೆಂಡತಿಗೆ ಅನುಮಾನ ಹೆಚ್ಚಾಗುತ್ತದೆ. ಇಂತಹ ಸಂದರ್ಭಗಳಲ್ಲಿ ನಗುನಗುತ್ತಲೇ ಯಾವು ಯಾವುದೋ ಕಾರಣಗಳನ್ನು ಹೇಳುತ್ತಾ ನೋವನ್ನು ಅನುಭವಿಸುವಾಗೆಲ್ಲ ನನ್ನ ಬಗ್ಗೆ ನನಗೇ ಬೇಸರ ಹುಟ್ಟುತ್ತದೆ. (ಇತ್ತೀಚೆಗೆ ಇಂತಹುದೇ ಅನುಭವವನ್ನು ನನ್ನ ಗೆಳೆಯರೊಬ್ಬರು ಅನುಭವಿಸಬೇಕಾಯಿತು) ಆಗೆಲ್ಲ, 'ಇಷ್ಟು ದೂರ ಬಂದು ನಾನು ಸಾಧಿಸಿರುವುದೇನು? ಹತ್ತಿರದವರ, ಆತ್ಮೀಯರ ಕಷ್ಟಸುಖಗಳಲ್ಲಿ ಭಾಗಿಯಾಗದೇ ಇದ್ದಲ್ಲಿ ಏನು ಪ್ರಯೋಜನ?'' ಎಂದು ಪ್ರಶ್ನಿಸಿಕೊಳ್ಳುತ್ತೇನೆ. ಮೈ ಮನಸ್ಸುಗಳನ್ನೆಲ್ಲ ಊರು, ರಾಜ್ಯಗಳು ಆವರಿಸಿ ಬಿಡುತ್ತವೆ.

ಆದರೆ ನೆನಪಿಸಿಕೊಂಡಾಗಲೆಲ್ಲ ಊರಿಗೆ ಓಡಿ ಬರಲು ಸಾಧ್ಯವೇ? ಶಾಲೆಗೆ ಹೋಗುತ್ತಿರುವ ಮಗಳ ರಜಾ ದಿನಗಳೊಂದಿಗೆ ನನ್ನ ರಜಾ ದಿನಗಳನ್ನೂ ಹೊಂದಿಸಿಕೊಳ್ಳಬೇಕು. ನಲವತ್ತೈವತ್ತು ದಿನಗಳ ಮೊದಲೇ ರಿಜರ್ವೇಷನ್ ಮಾಡಿಸಬೇಕು. ಅಪರೂಪಕ್ಕೆ ಹೋಗುತ್ತಿರುವುದರಿಂದ ಚಿಕ್ಕಪುಟ್ಟ ವಸ್ತುಗಳನ್ನು ಕೊಳ್ಳುವುದು ಇದ್ದೇ ಇರುತ್ತದೆ.

ಹೇಗೋ ಏನೋ ಅಂತೂ ವರ್ಷಕ್ಕೊಮ್ಮೆ ಊರಿಗೆ ಬಂದರೆ ಅದೇ ದೊಡ್ಡ ಹಬ್ಬ. ಗೆಳೆಯರು, ಸಂಬಂಧಿಕರ ಊರುಗಳಿಗೆ ಭೇಟಿನೀಡುವುದರಲ್ಲಿ ದಿನಗಳು ಕಳೆದದ್ದೇ ತಿಳಿಯುವುದಿಲ್ಲ. ಒಂದು ತಿಂಗಳ ರಜೆಯ ದಿನಗಳು ಬೆರಳ ಸಂದಿಯಲ್ಲಿ ಮರಳು ಸೋರುವಂತೆ ಸೋರಿಹೋಗಿಬಿಡುತ್ತವೆ. ಕಲ್ಕತ್ತೆಗೆ ಹೊರಡುವ ದಿನಗಳು ಹತ್ತಿರ ಬಂದಂತೆ ಮತ್ತೆ ಮನಸ್ಸನ್ನು ದುಗುಡ ಆವರಿಸುತ್ತದೆ. ''ಕಲ್ಕತ್ತೆಗೆ ಹೋಗಲೇ ಬೇಕೆ?'' ಎಂದು ಮನಸ್ಸು ತನ್ನನ್ನೇ ತಾನು ಕೇಳಿಕೊಳ್ಳುತ್ತದೆ. ಇಪ್ಪತ್ನಾಲ್ಕು ಗಂಟೆಗಳ ದಿನಗಳು ಇನ್ನೂ ನಾಲ್ಕಾರು ಗಂಟೆಗಳಷ್ಟು ಹಿಗ್ಗಿದರೆ ಎಷ್ಟು ಚೆನ್ನ ಎಂದುಕೊಳ್ಳುತ್ತೇನೆ. ಆದರೆ ಕಾಲ ತನ್ನ ನಿಯತಿಯಲ್ಲಿಯೇ ನಡೆಯುತ್ತದೆ.

ಹೊರಡುವ ದಿನ ಹತ್ತಿರವಾದಂತೆ, ಊರ ಕೆರೆಯ ಏರಿಯ ಮೇಲೆ ನಿಂತು ಊರನ್ನು ಕಣ್ತುಂಬ ತುಂಬಿಕೊಳ್ಳುತ್ತೇನೆ. ತುಂಬಿದ ಕೆರೆಯ ಮೇಲಿಂದ ಹಾದು ಬರುವ ತಂಗಾಳಿಯನ್ನು ಎದೆ ತುಂಬ ಹೀರಿಕೊಳ್ಳುತ್ತೇನೆ, ಮನೆಯ ಅಂಗಳದಲ್ಲಿ ಅಂಗಾತ ಮಲಗಿ ನಕ್ಷತ್ರ ಖಚಿತ ರಾತ್ರಿಯ ಸೊಗಸನ್ನು ಆಸ್ವಾದಿಸುತ್ತೇನೆ. ಈ ನೋಟ, ಈ ಗಾಳಿ, ಈ ಸೊಗಸುಗಳು ಮತ್ತೆ ನಾನು ವಾಪಾಸು ಬರುವವರೆಗೆ ನನ್ನಲ್ಲಿ ಇರಲಿ ಎಂದು ಅಂದುಕೊಳ್ಳುತ್ತೇನೆ.

ಇದೋ ಹೊರಡುವ ದಿನ ಬಂದೇ ಬಿಟ್ಟಿತು. ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತಿರುವ ಅವ್ವನಿಗೆ ನಮಸ್ಕರಿಸಿ, ದಿನಕ್ಕೊಂದು ಚೆಂದವಾಗಿ ಬೆಳೆಯುತ್ತಿರುವ ತಮ್ಮನ ಮಗಳು ರಮ್ಯಳನ್ನು ಮುದ್ದಿಸಿ, ಕಳುಹಿಸಲು ಬಂದ ಎಲ್ಲರಿಗೂ ಕೈ ಬೀಸಿ ಬಸ್ಸಿನಲ್ಲಿ ಕುಳಿತರೆ ಸೆರಗಿನಿಂದ ಕಣ್ಣನ್ನು ಒರೆಸಿಕೊಳ್ಳುತ್ತಿರುವ ಅವ್ವನ ಚಿತ್ರ.

ಊರಿನಿಂದ ಬೆಂಗಳೂರು, ಬೆಂಗಳೂರಿನಿಂದ ಮದ್ರಾಸು. ಊರು ಬಿಟ್ಟು ಆಗಲೇ ಎರಡು ದಿನಗಳಾಗಿವೆ. ಊರು ಆರು ನೂರು ಮೈಲುಗಳಷ್ಟು ಹಿಂದೆ ಸರಿದಿದೆ. ಮನಸ್ಸಿನಲ್ಲಿ ಸ್ಥಾಯಿಯಾಗಿ ನಿಂತಿದ್ದ ಊರಿನ ಚಿತ್ರ ಸಣ್ಣ ಅಲೆಗಳಲ್ಲಿ ಪ್ರತಿಬಿಂಬ ಮಸುಕಾಗುವಂತೆ ಮಸುಕಾಗಲಾರಂಭಿಸಿದೆ. ಊರು-ಕಲ್ಕತ್ತಾಗಳ ಚಿತ್ರಗಳು ಮನಸ್ಸಿನಲ್ಲಿ ಕಲಸಿಕೊಳ್ಳಲಾರಂಭಿಸಿವೆ. ಮಾತನಾಡುವಾಗ ಕನ್ನಡ, ಇಂಗ್ಲಿಷ್‌ಗಳಿಗಿಂತಲೂ ಮೊದಲು ಬಂಗಾಳಿ ನಾಲಗೆಗೆ ಬರುತ್ತದೆ.

ಕಲ್ಕತ್ತದಲ್ಲಿ ನನ್ನೊಂದಿಗೆ ಕೆಲಸ ಮಾಡುತ್ತಿದ್ದ ಗೆಳೆಯ ಈಗ ಮದ್ರಾಸಿನಲ್ಲಿ. ಅವನೊಂದಿಗೆ ಹರಟೆ ಹೊಡೆಯುವಾಗ ಕಲ್ಕತ್ತಾ ನಿಧಾನವಾಗಿ ನನ್ನೊಳಗೆ ಸೇರಲಾರಂಭಿಸುತ್ತದೆ. ಊರು ಮತ್ತಷ್ಟು ಮಸುಕಾಗುತ್ತದೆ. ಕಳುಹಿಸಲು ಸ್ಟೇಷನ್‌ಗೆ ಬಂದ ಗೆಳೆಯನಿಗೆ ಟಾಟಾ ಹೇಳಿ ಕೋರಮಂಡಲ್ ಹತ್ತಿ ಕುಳಿತರೆ ಸಾಕು. ಊರು ಮರೆಯಾಗಿಯೇ ಬಿಡುತ್ತದೆ. ಓಡುವ ರೈಲಿನ ವೇಗಕ್ಕೆ ಅನುಗುಣವಾಗಿ ಕಿ.ಮೀ. ಕಲ್ಲುಗಳು ಹಿಂದಕ್ಕೆ ಓಡುತ್ತಲೇ ಕಲ್ಕತ್ತಾ ಅಷ್ಟಷ್ಟು ಹತ್ತಿರವಾಗುತ್ತದೆ. ಮತ್ತೆ ಕಲ್ಕತ್ತಾ ನನ್ನನ್ನು ಸಂಪೂರ್ಣವಾಗಿ ಆವರಿಸಿಕೊಳ್ಳುತ್ತದೆ. ಕಲ್ಕತ್ತಾಗೆ ಹೋದ ಕೂಡಲೇ ಮಾಡಬೇಕಾದ, ಬಾಕಿ ಇಟ್ಟು ಬಂದ ಕೆಲಸಗಳು ನೆನಪಾಗುತ್ತವೆ.

ಈ ವರ್ಷ ಮಗಳ ಸ್ಕೂಲ್ ಬದಲಾಯಿಸಬೇಕು, 'ಅಗ್ನಿಗರ್ಭ' ಕಾದಂಬರಿಯ ಅನುವಾದದ ಕೆಲಸ ಮುಗಿದಿದೆ, ಮಹಾಶ್ವೇತಾದೇವಿ ಅವರ ಬಳಿ ಪ್ರಕಟಿಸಲು ಒಪ್ಪಿಗೆ ಪಡೆಯಬೇಕು, ಉಷಾ ಗಂಗೂಲಿ ಅವರಿಗೆ ಮಹಾಚೈತ್ರ, ನಾಟಕದ ಹಿಂದಿ ಅನುವಾದ ತರಿಸಿಕೊಡುತ್ತೇನೆ ಎಂದು ಹೇಳಿದ್ದೆನು. ಶಿವಪ್ರಕಾಶ್‌ಗೆ ಫೋನ್ ಮಾಡಬೇಕು. ಸಾಹಿತ್ಯ ಅಕಾಡೆಮಿಗಾಗಿ ಕನ್ನಡದಿಂದ ಕತೆ, ಕವಿತೆಗಳನ್ನೂ ಅನುವಾದಿಸಿಕೊಟ್ಟಿದ್ದೆ. ಪುಸ್ತಕದ ಮುದ್ರಣವಾಗಿದೆಯೆ? ನಿರ್ಮಲ್ ಬಾಬುಗೆ ಕೇಳಬೇಕು, ಅರುಂಧತಿ ದಾಸ್‌ಗೆ ಬೇಕಾಗಿದ್ದ ಪುಸ್ತಕಕ್ಕಾಗಿ ಅಮೆರಿಕಾದ ಲೈಬ್ರರಿ ಆಫ್ ಕಾಂಗ್ರೆಸ್‌ಗೆ ಪತ್ರ ಬರೆದಿದ್ದೆ. ಪುಸ್ತಕ ಬಂದಿರಬಹುದೆ? ತೇಜಸ್ವಿಯವರ ಕಥೆಯೊಂದನ್ನು ಒರಿಯಾ ಭಾಷೆಗೆ ಅನುವಾದಿಸಲು ನಂದಿಬಾಬುಗೆ ಕೊಟ್ಟಿದ್ದೆ. ಅನುವಾದದ ಕೆಲಸ ಮುಗಿದಿರಬಹುದೆ? ಕೇಳಬೇಕು. ಕಾವ್ಯಾಲಯದ ಕೃಷ್ಣಮೂರ್ತಿಯವರಿಗೆ ಬೇಕಾದ ಪುಸ್ತಕಗಳನ್ನು ಕಳುಹಿಸಲು ಕಾಲೇಜ್ ಸ್ಟ್ರೀಟ್‌ಗೆ ಹೋಗಬೇಕು, ಡಾ. ಪ್ರಭುಶಂಕರರು ಸೂಚಿಸಿರುವ ಬಂಗಾಲಿ ಪುಸ್ತಕದ ಅನುವಾದದ ಕೆಲಸವನ್ನು ಕಲ್ಕತ್ತಾಗೆ ಹೋದ ಕೂಡಲೇ ಕೈಗೆತ್ತಿಕೊಳ್ಳಬೇಕು.

.... ಪಟ್ಟಿ ಬೆಳೆಯಲಾರಂಭಿಸಿದಂತೆ ಮನಸ್ಸಿನಿಂದ ಅವ್ವ, ರಮ್ಯ ಮರೆಯಾಗುತ್ತಾರೆ.

ಹೌರಾದಲ್ಲಿಳಿದು, ಸೂಟ್‌ಕೇಸ್‌ಗಳನ್ನು ಕೂಲಿಯ ತಲೆಯ ಮೇಲಿರಿಸಿ, ಮಗಳು, ಹೆಂಡತಿಯ ಕೈ ಹಿಡಿದು ಹೆಜ್ಜೆ ಹಾಕುತ್ತೇನೆ. ■

# ಸಿಂಗಪುರ ಕನ್ನಡಿಗ

## ಇಲ್ಲಿರಲಾರೆ, ಅಲ್ಲಿಗೆ ಹೋಗಲಾರೆ


ವಿ.ಟಿ. ಶ್ರೀನಿವಾಸ್ ಮತ್ತು ಅವರ ಕುಟುಂಬ

■ ವಿ.ಟಿ. ಶ್ರೀನಿವಾಸ್

ಸಿಂಗಪುರ ಸುಂದರ ನಗರ. ಇಲ್ಲಿ ಬದುಕುವುದೇ ವಿಶಿಷ್ಟ ಅನುಭವ. ಮನುಷ್ಯರೇ ಕಟ್ಟಿದ ಈ ನಗರ ರಾಜ್ಯದಲ್ಲಿ ಮನುಷ್ಯನಿಗೆ ಬೇಕಾದುದೆಲ್ಲ ಇವೆ. ಪರಿಶುದ್ಧ ಗಾಳಿ, ನಿಲ್ಲದ ನೀರು, ವಿದ್ಯುತ್, ಹೊಗೆ ಉಗುಳದ ವಾಹನಗಳು, ಇನ್ನೇನು ಬೇಕು.

ಇಂಥ ಸುಂದರ, ಸರ್ವ ಸವಲತ್ತುಗಳ ಊರಲ್ಲೂ ನನಗೇನೋ ಕೊರತೆ ಕಾಡುತ್ತದೆ. ಆ ಕೊರತೆ ಏನೆಂದು ತಿಳಿಯದು. ಊರಿನ ಮಣ್ಣಿನ ವಾಸನೆಯೇ? ಹೆತ್ತವರ ಕೈತುತ್ತೇ? ಬಂಧು, ಬಳಗದ ಮೆಚ್ಚುಗೆ, ಟೀಕೆಗಳೇ?

ನಾನು ಹುಡುಕುತ್ತಾ ಇರುವುದು ನನ್ನ ಕನ್ನಡವೇ? ಪುಸ್ತಕಗಳೇ? ನೆಚ್ಚಿನ ನಾಟಕ, ಸಿನಿಮಾ, ಮಸಾಲೆದೋಸೆ, ಲಾಲ್‌ಬಾಗ್‌ನ ಭಾನುವಾರದ ವಾಕಿಂಗ್ ಕಳೆದುಕೊಂಡ ದುಗುಡವೇ? ಅಥವಾ ಬೆಂಗಳೂರಿನ ಬಿ.ಟಿ.ಎಸ್. ಆಟೋರಿಕ್ಷಾದ ಗದ್ದಲ, ಕೆ.ಆರ್. ಮಾರ್ಕೆಟ್ಟಿನ ವಾಸನೆ, ಅಣ್ಣಮ್ಮನ ತೇರಿನ ತಮಟೆ ಸದ್ದು ಇಲ್ಲವೆಂದು, ಇಲ್ಲಿನ ಸ್ವಚ್ಛ ರಸ್ತೆ, ನಿರಾಂತಕ ನಡೆಯಬಲ್ಲ ಫುಟ್‌ಪಾತ್ ನೋಡಿದಾಗೆಲ್ಲ ನೆನಪಾಗುವ ರಸ್ತೆ ಬದಿಯ ಪಾನೀಪುರಿ, ಅಲ್ಲೇ ಒಲೆ ಇಟ್ಟುಕೊಂಡು ಕರಿಯುವ ಉದ್ದಿನ ವಡೆ ಮುಂತಾದವು ಕಾಣದೇ ಬಣ ಬಣ ಅನ್ನಿಸುತ್ತಿತ್ತು.

ನಾನು ಇಲ್ಲಿ ಬಂದು ಹತ್ತು ವರ್ಷಗಳೇ ಆಗಿವೆ. ಬರುವಾಗ ಮನೆಯಲ್ಲಿ ಯಾರಿಗೂ ಇಷ್ಟವಿರಲಿಲ್ಲ. ನನಗೋ, ಎರಡು ವರ್ಷ ದುಡಿದು, ಒಂದು ಲಕ್ಷದಷ್ಟು ಗಂಟು ಮಾಡಿಕೊಂಡು ಬಂದರಾಯಿತು, ಮುಂದೆ ಬೆಂಗಳೂರಲ್ಲೇ ಒಂದುಸೈಟು, ಎಂದೆಲ್ಲ ಕನಸು. ನಾನು ಹೊರಟಾಗ ಹಿರಿಯರೊಬ್ಬರು 'ಹೆಗ್ಗಣ ಎಲ್ಲಿದ್ರೂ ನೆಲ ಕೆರಿಯೋದು ತಪ್ಪಲ್ಲ' ಅಂದಿದ್ರು. ಅದು ನಿಜ ಕೂಡ.

ಮದುವೆಯಾಗಿತ್ತು. ಸಂಸಾರ ಏನೆಂದು ಅರಿಯುವ ಮುಂಚೆ ಇಲ್ಲಿಗೆ ಬಂದೆ. ಮೂರು ತಿಂಗಳ ಕೈಗೂಸಿನ ಹೊಣೆ ನನ್ನ ಹೆಂಡತಿ ಮೇಲೆ. ಇಲ್ಲಿ ಹನ್ನೆರಡು, ಹದಿನಾಲ್ಕು ಗಂಟೆ ದುಡಿತ. ಎಷ್ಟೋ ದಿನ ಸೂರ್ಯನ ಬೆಳಕನ್ನೇ ನಾನು ಕಾಣುತ್ತಾ ಇರಲಿಲ್ಲ.

ಎರಡು ವರ್ಷ ಅಂದುಕೊಂಡಿದ್ದು ನಾಲ್ಕಾಯಿತು. ಬೆಂಗಳೂರಲ್ಲಿ ಸೈಟು ಕೊಳ್ಳಲು ಕೈಯಲ್ಲಿನ ಹಣ ಏನೇನೂ ಸಾಲದು. ಪ್ರಧಾನಿ ನರಸಿಂಹರಾಯರ ಉದಾರ ಆರ್ಥಿಕ ನೀತಿಯಿಂದ ಸೈಟುಗಳ ಬೆಲೆ ಗಗನ ಮುಟ್ಟಿತ್ತು. ಅದೇ ಹೊತ್ತಿಗೆ ನನಗೆ ಸಿಂಗಾಪುರದ ಪರ್ಮನೆಂಟ್ ರೆಸಿಡೆಂಟ್ ಶಿಪ್ ಬೇರೆ ದೊರೆಯಿತು. ಕೈಯಲ್ಲಿ ಉಳಿದಿದ್ದ ಹಣ ಮುಂಗಡ ನೀಡಿ ಮನೆ ಖರೀದಿಸಿದ್ದಾಯಿತು. ಮಗನ ಶಾಲೆ, ಅವನ ಮ್ಯಾಂಡರೀನ್ (ಚೀನಿ) ಭಾಷೆ ಕಲಿಕೆ, ಮಗಳು ಶಿಲ್ಪಳ ಜನನ ಹೀಗೆ ಸಿಂಗಾಪುರದ ಜೀವನಚಕ್ರದ ತಿರುಗಣೆ ಮಡುವಿನಲ್ಲಿ ಸಿಕ್ಕಿಬಿಟ್ಟಿದ್ದೆ. ಪ್ರತಿವರ್ಷ ಮಕ್ಕಳ ಶಾಲಾ ರಜೆಯ ಸಮಯಕ್ಕೆ ತವರಿನತ್ತ ಪ್ರಯಾಣ. ನಡುವೆ ಆಗೊಮ್ಮೆ ಥೈಲ್ಯಾಂಡ್, ಮಲೇಶಿಯಾ ಎಂದೆಲ್ಲಾ ಸುತ್ತಾಟ.

ಬೆಂಗಳೂರು ಚಳಿ ಸವಿಯಲು ಡಿಸೆಂಬರಿಗೆ ಬಂದರೆ ನೆಂಟರಿಷ್ಟರ ಕಾಟ. ಚಿನ್ನ ತರಲಿಲ್ಲ, ಅದು ತರಲಿಲ್ಲ, ಇದು ತರಲಿಲ್ಲ ಎಂದು ಮುನಿಸು. ಈ ಮಧ್ಯೆ ಒಂದು ಸೈಟಿಗಾಗಿ ಹುಡುಕಾಟ. ಚಿತ್ರ ವಿಚಿತ್ರ ಏಜೆಂಟರುಗಳ ಒಡನಾಟ, ಕಾಟ. ಅಲ್ಲಿ ಸಿಗುವುದಿಲ್ಲ ಎಂದು ಇಲ್ಲಿಂದ ನೂರೆಂಟು ವಸ್ತು ಖರೀದಿಸಿ ಅಲ್ಲಿಗೆ ಹೊತ್ತೊಯ್ಯುವುದು. ಇದೇ ಬದುಕಾಗಿಬಿಟ್ಟಿತ್ತು.

ಇವರ ನಡುವೆಯೂ ಆಗೊಮ್ಮೆ ಈಗೊಮ್ಮೆ ಕಾರಂತ, ಲಂಕೇಶ್, ಅನಂತಮೂರ್ತಿಯವರ ಪುಸ್ತಕ ಕಂಡು ಹಿಗ್ಗು. ಆಗಾಗ ಸಿಗುತ್ತಿದ್ದ 'ಲಂಕೇಶ್ ಪತ್ರಿಕೆ', ಇಂಟರ್‌ನೆಟ್ ಆರಂಭವಾದ ಮೇಲೆಯೇ ನಮಗೆ ನಿತ್ಯ ಕನ್ನಡ ಪೇಪರು ಓದುವ ಯೋಗ ದೊರಕಿದ್ದು.

1992ರಲ್ಲಿ ಗೆಳೆಯರೊಬ್ಬರ ಮನೇಲಿ ಸೇರಿ ಕನ್ನಡದಲ್ಲಿ ಹರಟೆ ಖುಷಿ ಪಟ್ಟೆವು. ಮುಂದೆ ಆ ಹರಟೆಯೇ, ನಮ್ಮ ದೀಪಾವಳಿ, ಯುಗಾದಿ ಹಬ್ಬಗಳನ್ನು ಕನ್ನಡಿಗರೆಲ್ಲ ಸೇರಿ ಒಟ್ಟಿಗೆ ಆಚರಿಸುವ ಕ್ರಿಯೆಗೆ ನಾಂದಿಯಾಯಿತು. ಆಗೆಲ್ಲ ನಮ್ಮದೇ ಕನ್ನಡ ಸಂಘ ಆರಂಭಿಸಬಾರದೇಕೆ ಎಂಬ ಕನಸು. ಅದು ಮುಂದೆ ಒಂದೇ ವರ್ಷದಲ್ಲಿ ಸಾಕಾರಗೊಂಡು 'ಸಿಂಗಪುರ ಕನ್ನಡ ಸಂಘ' ಮೈದಾಳಿತು.

ಸಂಘದ ಆಶ್ರಯದಲ್ಲಿ ಸಾಮೂಹಿಕವಾಗಿ ಹಬ್ಬಗಳ ಆಚರಣೆ, ನಾಟಕ ಮೇಳ, ಕರ್ನಾಟಕದಿಂದ ಬಂದ ಕಲಾವಿದರೊಂದಿಗೆ ಸಂವಾದ, ಸಾಹಿತಿಗಳ ಸಂಪರ್ಕ ಹೀಗೆ ಮತ್ತೆ ನನ್ನ ಬದುಕಲ್ಲಿ ಮತ್ತೆ ಜೀವಂತಿಕೆ ಕಾಣಿಸಿಕೊಂಡಿತು.

ನಾಟಕಗಳಲ್ಲಿ ನನ್ನದೇ ಛಾಪು. ಅಭಿನಯದಿಂದ, ಮೇಕಪ್‌ವರೆಗೆ ಎಲ್ಲ ನನ್ನದೇ. 'ಕಸ್ತೂರಿ ಕಂಪು' ರೂಪುಗೊಂಡಿತು. ಜನರನ್ನು ಕಲೆ ಹಾಕಿ, ಮೂರು ಗಂಟೆ ನಾನಾ ಕಾರ್ಯಕ್ರಮ. ಆಮೇಲೆ ಸಹಭೋಜನ. ನಾಟಕದ ಪ್ರತಿ ರಂಗದಲ್ಲೂ ಕೈಯಾಡಿಸಿ, ರಂಗಭೂಮಿಯ ಮೇಲೂ ಮೆರೆದು, ಊಟದ ಸಮಯಕ್ಕೆ ಅಭಿನಂದನೆಗಳ ಸುರಿಮಳೆ ಹೊತ್ತು ಜಂಭದಿಂದ ಬೀಗುತ್ತಿದ್ದವನು, ಅದಾದ ಮೇಲೆ ಸಂಕೋಚವಿಲ್ಲದೇ ಎಂಜಲೆಲೆಯನ್ನು ಖುಷಿಯಿಂದ ಹೊತ್ತು ಹಾಕಿದ್ದೇನೆ.

ಈಗ ಇದೆಲ್ಲದರ ನಡುವೆಯೇ ನಮ್ಮ ಹಳ್ಳಿಯಿಂದ ಬೆಂಗಳೂರಿಗೆ ಸಾಲ ಕೇಳಲೆಂದು ಬಂದಿದ್ದ ಹಿರಿಯರೊಬ್ಬರು ಮಧ್ಯಾಹ್ನದ ಊಟ ಮುಗಿಸಿ, ಕಿವಿಯಲ್ಲಿ ಸಿಕ್ಕಿಸಿಕೊಂಡಿದ್ದ ಕೊರೆ ಬೀಡಿಯನ್ನು ತೆಗೆದು ಹೊತ್ತಿಸಿ ಬೆರಳು ಸುಡುವವರೆಗೂ ಆರಾಮಾಗಿ ಸೇದಿ ನಿರುಮ್ಮಳವಾಗಿ ಸಂಜೆ ಹೊರಡುತ್ತಿದ್ದ ರೀತಿ ನನಗೆ ನೆನಪಾಗುತ್ತದೆ. ಆ ನೆಮ್ಮದಿ, ಆ ನಿರಾಳತೆ ನಮಗೆ ಸಾಧ್ಯವೇ? ಎಂದು ಎಷ್ಟೋ ಸಲ ಯೋಚಿಸುತ್ತೇನೆ.

ಬೆಳಿಗ್ಗೆ ಅರ್ಧ ತಿಂದ ಸ್ಯಾಂಡ್‌ವಿಚ್, ಉಳಿದರ್ಧ ತಲೆ ಬಾಚುತ್ತಾ, ಟೈ ಕಟ್ಟುತ್ತಾ ಮುಗಿಸಬೇಕಾದ ಪರಿ. ರಾತ್ರಿ ಒಂದು ಕೈಲಿ ಫೋನು ಹಿಡಿದು ಮಾತಾಡುತ್ತಲೇ ಅನ್ನ ಅಗಿಯುವ ಶೈಲಿ.

ಬೆಳಿಗ್ಗೆ ಮನೆ ಬಿಡುವಾಗ ಮಕ್ಕಳಿನ್ನೂ ಎದ್ದಿರುವುದಿಲ್ಲ. ರಾತ್ರಿ ಬಂದಾಗ ಅವರು ಮಲಗಿಬಿಟ್ಟಿರುತ್ತಾರೆ. ರಾತ್ರಿ ಸ್ನಾನ ಮುಗಿಸಿ ಹಾಸಿಗೆಗೆ ಬೀಳುವಂತಿಲ್ಲ. ಕಂಪ್ಯೂಟರ್‌ನಲ್ಲಿ ಒಮ್ಮೆ ಇ-ಮೇಲ್ ನೋಡಿ ಉತ್ತರಿಸಬೇಕು. 'ಪ್ರಜಾವಾಣಿ' ಓದಿ, ಬರಲಿರುವ ರಾಜ್ಯೋತ್ಸವ ನಾಡಹಬ್ಬದ ಬಗ್ಗೆ ಸಂಘದ ಪದಾಧಿಕಾರಿಗಳೊಡನೆ ಫೋನ್‌ನಲ್ಲಿ ಚರ್ಚಿಸಿ ಗೊತ್ತು ಮಾಡಬೇಕು. ಇದೆಲ್ಲ ಮುಗಿಸಬೇಕು. ಇದೆಲ್ಲ ಮುಗಿಯುವಾಗ ರಾತ್ರಿ ಒಂದು ಗಂಟೆಯಾದರೆ ಅದೇ ಪುಣ್ಯ.

ಭಾನುವಾರ ಬಂತೆಂದರೆ ಮಗನ ಸ್ಕೇಟಿಂಗ್ ಕ್ಲಾಸ್, ಮಗಳ ಭರತನಾಟ್ಯ ಕ್ಲಾಸ್, ಯೋಗ ಶಿಬಿರ, ಸಮಯ ಉಳಿದಿದ್ದರೆ ಒಂದಿಷ್ಟು ಸುತ್ತಾಟ, ಮುಂದಿನ ನಾಟಕ ಮೇಳಕ್ಕೆ ನಾಟಕದ ಆಯ್ಕೆ. ಸಾಕಪ್ಪಾ ಸಾಕು, ಇಲ್ಲಿ ಬದುಕು ಜಟಕಾ ಬಂಡಿ ಖಂಡಿತ ಅಲ್ಲ ಉಗಿ ಬಂಡಿ. ನಿಜವಾಗಿ ಹೇಳಬೇಕೆಂದರೆ ಬುಲೆಟ್ ಟ್ರೈನ್.

ಇದೆಲ್ಲದರ ಮಧ್ಯೆ ಇಲ್ಲಿಯೇ ಇರುವುದೋ? ಅಲ್ಲಿಗೆ ಬರುವುದೋ? ಎಲ್ಲಿ ನೆಮ್ಮದಿ!

'ಇಲ್ಲಿರಲಾರೆ, ಅಲ್ಲಿಗೆ ಹೋಗಲಾರೆ' ಎಂಬಂತಿದೆ ಬದುಕು. ■

# ಬದುಕು ದೀಪಾವಳಿ ವಿಶೇಷಾಂಕ - 99 ವಿವಿಧ ಸ್ಪರ್ಧೆಗಳ ಫಲಿತಾಂಶ

## ಕಥಾ ಸ್ಪರ್ಧೆ

[ ಪ್ರಾಯೋಜಕರು : ಹೆಚ್.ಇಬ್ರಾಹಿಂಸಾಬ್, ಶಿವಮೊಗ್ಗ ]

### ಪ್ರಥಮ ಬಹುಮಾನ ರೂ. 2,000

- **ಬೆಳದಿಂಗಳ ತಂಪು**
  ಶ್ರೀಕಾಂತ ಪಾಟೀಲ
  ಇ/ಮ ದೇವೇಂದ್ರಪ್ಪ ಚಿಮಕೋಡ,
  ಕೃಷಿ ನಗರ, ಮನ್ನಳ್ಳಿ ರಸ್ತೆ, ಬೀದರ-585 403.

### ದ್ವಿತೀಯ ಬಹುಮಾನ ರೂ. 1,000

- **ದಾರಿ**
  ಚಿತ್ರಶೇಖರ ಕಂಠಿ
  ಗ್ರೀಷ್ಮ, ಸಂ. 145/2ಎ, ಮಾಕಾ ಬಡಾವಣೆ,
  ಜೇವರ್ಗಿ ರಸ್ತೆ, ಗುಲಬರ್ಗಾ-585 102.

### ಸಮಾಧಾನಕರ ಬಹುಮಾನ ತಲಾ ರೂ. 500

- **ಹಸಿರು ಸೀರೆ**
  ಗಾಯತ್ರಿ ಎಸ್. ಉಡುಪ, ಕಿನ್ನಿಗೋಳಿ
- **ಮುನಿಸು**
  ಶರಣಗೌಡ ಎರಡೆತ್ತಿನ, ಚಿತ್ರದುರ್ಗ
- **ಕೊರಳುದ್ದ ನೋಡ**
  ಪ್ರಹ್ಲಾದ ಅಗಸನಕಟ್ಟೆ, ಹುಬ್ಬಳ್ಳಿ
- **ಹೆಸರಿಲ್ಲದ ಕತೆ**
  ಚನ್ನಮ್ಮ ಸರಗಣಾಚಾರಿಮಠ, ಪೋತ್ನಾಳ

## ಪ್ರಬಂಧ ಸ್ಪರ್ಧೆ

### ಪ್ರಥಮ ಬಹುಮಾನ ರೂ. 2,000

[ ಪ್ರಾಯೋಜಕರು : ಎಚ್.ಎಂ.ಟಿ.ಸ್ವಾಮಿ, ಜಯಾ ಕನ್‌ಸ್ಟ್ರಕ್ಷನ್ಸ್, ಬಳ್ಳಾರಿ ]

- **ನಾನೊಂದು ಮರವಾಗಿದ್ದರೆ**
  ಚಿಂತಾಮಣಿ ಕೊಡ್ಲೆಕೆರೆ
  ಸಿ-2-2, ಡಬ್ಲ್ಯೂಎಮ್‌ಎಸ್ ಕಂಪೌಂಡ್,
  ಜಯನಗರ 5ನೇ ಬ್ಲಾಕ್, ಬೆಂಗಳೂರು-560 041.

### ದ್ವಿತೀಯ ಬಹುಮಾನ ರೂ. 1,000

- **ಶಬರಿಮಲೈ ರಿಮೋಟು**
  ಈರಪ್ಪ ಎಂ. ಕಂಬಳಿ
  ಡಿ-154, ಜೀವನ್‌ಬಿಮಾ ನಗರ, ಬೆಂಗಳೂರು-560 075.

### ಸಮಾಧಾನಕರ ಬಹುಮಾನ ತಲಾ ರೂ. 500

- **ಹೂಗಳ ಲೋಕ**
  ಮಲ್ಲಿಕಾರ್ಜುನ ಹುಲಗಬಾಳಿ, ಬನಹಟ್ಟಿ
- **ನಾನೂ ಬರಹಗಾರನಾದೆ**
  ಹೊರೆಯಾಲ ದೊರೆಸ್ವಾಮಿ, ಮೈಸೂರು
- **ಪತ್ರ ಪುರಾಣ**
  ತ್ಯಾಮಗೊಂಡ್ಲು ಅಂಬರೀಷ್, ನೆಲಮಂಗಲ
- **ಹಳೆಯ ಹೆಂಡತಿ ಕೊಟ್ಟು...!**
  ಹ.ಶಿ. ಭೈರನಟ್ಟಿ, ಧಾರವಾಡ

**ಪ್ರಥಮ ಬಹುಮಾನ ಪಡೆದ ಕಥೆ ಮತ್ತು ಪ್ರಬಂಧಗಳನ್ನು ಇದೇ ಸಂಚಿಕೆಯಲ್ಲಿ ಪ್ರಕಟಿಸಿದ್ದು ಉಳಿದ ಬಹುಮಾನಿತ ಬರಹಗಳನ್ನು ಬದುಕು ಮಾಸಪತ್ರಿಕೆಯ ಮುಂಬರುವ ಸಂಚಿಕೆಗಳಲ್ಲಿ ಯಥಾವಕಾಶ ಪ್ರಕಟಿಸಲಾಗುವುದು.**

## ಛಾಯಾಚಿತ್ರ ಸ್ಪರ್ಧೆ

### ಪ್ರಥಮ ಬಹುಮಾನ ತಲಾ ರೂ. 1,000

[ ಪ್ರಾಯೋಜಕರು : ಹೆಚ್.ಇಬ್ರಾಹಿಂಸಾಬ್, ಶಿವಮೊಗ್ಗ ]

**ಭಾವಚಿತ್ರ :**
- **'ಶಬರಿ'**
  ರಾಜಶೇಖರ ಕೆ.ಎಸ್.
  3714-6, ಎಂ.ಸಿ.ಕಾಲನಿ 'ಎ' ಬ್ಲಾಕ್,
  ದಾವಣಗೆರೆ-577 004.

**ನಿಸರ್ಗ :**
- **'ಗುಟುಕು'**
  ವೈ.ಕೃಷ್ಣಾಜಿರಾವ್
  4661, 3ನೇ ಕ್ರಾಸ್,
  ಎನ್.ಆರ್. ಮೊಹಲ್ಲಾ, ಮೈಸೂರು-07.

**ಇತರೆ :**
- **'ಒಬ್ಬೊಂಟಿ'**
  ಮಹಾಂತೇಶ ಸಿ. ಮೊರಬದ
  235ಸಿ, 13 'ಎ' ಕ್ರಾಸ್, 'ಎ' ಸೆಕ್ಟರ್,
  ಯಲಹಂಕಾ ಉಪನಗರ, ಬೆಂಗಳೂರು-64.

### ಸಮಾಧಾನಕರ ಬಹುಮಾನ ತಲಾ ರೂ. 250

[ ಪ್ರಾಯೋಜಕರು : ಎಚ್.ಎಂ.ಟಿ.ಸ್ವಾಮಿ, ಜಯಾ ಕನ್‌ಸ್ಟ್ರಕ್ಷನ್ಸ್, ಬಳ್ಳಾರಿ ]

- **'ದೃಷ್ಟಿ'** – ಗಣಪತಿ ಎಚ್.ಬಿರಾದಾರ, ಗುಲಬರ್ಗಾ
- **'ಕಾವಲು'** – ಎಂ.ಜಿನರಾಜ ಹೆಗ್ಡೆ, ಶಿವಮೊಗ್ಗ
- **'ಶ್ರದ್ಧೆ'** – ವಿ.ಗೋ.ವಡೇರ, ಬೇಡಕಿಹಾಳ
- **'ಬೆಳಕಿನೆಡೆಗೆ'** – ಕೆ.ಎಸ್.ಮುರುಗೇಂದ್ರ, ದಾವಣಗೆರೆ
- **'ಬಿಸಿಲ ಬದುಕು'** – ಬಸವರಾಜ ಗವಿಮಠ, ಇಳಕಲ್ಲ
- **'ಹಳೆ ಬೇರು ..'** – ಸುಭಾಶ್ಚಂದ್ರ ಎಸ್. ವಾಗ್ಲೆ, ಉಡುಪಿ
- **'ಪರ್ಯಟನೆ'** – ಶ್ರೀಧರ ಹೆಗಡೆ, ಬೆಂಗಳೂರು
- **'ನಿಸರ್ಗ ರಮ್ಯ'** – ಕೆ.ಪಿ. ಸತ್ಯನಾರಾಯಣ, ಹಾಸನ

# ಕಥಾ ಸ್ಪರ್ಧೆ-ತೀರ್ಪುಗಾರರ ಮಾತುಗಳು

ಸ್ಪರ್ಧೆಗೆ ಬಂದಿದ್ದ ಕಥೆಗಳು ಸುಮಾರು ಮುನ್ನೂರಕ್ಕೂ ಹೆಚ್ಚು. ನಿರ್ಣಯಕ್ಕೆಂದು ಈ ತೀರ್ಪುಗಾರನಿಗೆ ಓದಲು ದೊರೆತ ಕಥೆಗಳು ಹದಿನಾರು. ಬಹಳ ಒಳ್ಳೆಯ ಕಥೆ, ಬಹಳ ಕಾಲ ಮನಸ್ಸಿನಲ್ಲಿ ಉಳಿಯುವ ಕಥೆ ಎಂದು ಹೇಳಬಹುದಾದ ಕಥೆ ಯಾವುದೂ ಸಿಗಲಿಲ್ಲ. ಆದರೆ ಹಾಗೆಂದು ಒಟ್ಟಾರೆಯಾಗಿ ನಿರಾಶೆ ಹುಟ್ಟಿಸುವ ಬರವಣಿಗೆಗಳು ಎಂದೂ ಹೇಳುವಂತಿಲ್ಲ. ಮೊದಲಿಗೆ ಕಥೆಗಳು ಒಟ್ಟಾರೆಯಾಗಿ ಮೂಡಿಸಿದ ವಿಚಾರಗಳ ಬಗ್ಗೆ ಎರಡು ಮಾತು.

ಈ ಎಲ್ಲ ಕಥೆಗಳೂ ಸಮಕಾಲೀನ ಕಥೆಗಳು. ಹಳ್ಳಿಗಳ ಬದುಕಿನ ದಾರುಣ ಚಿತ್ರಣ, ರಾಜಕೀಯದ ತೊಡಕು, ಜಾತಿ ಸಮಸ್ಯೆ, ಸ್ವ-ದೇಶ ಮತ್ತು ಪರದೇಶ ಇಂಥ ವಸ್ತುಗಳೇ ಪ್ರಾಧಾನ್ಯವನ್ನು ಪಡೆದಿವೆ. ''ಹಸಿರು ಸೀರೆ'' ಎಂಬ ಒಂದು ಕಥೆ ಮಾತ್ರ ಹೆಣ್ಣಿನ ಮನಸ್ಥಿತಿಯ ನಿರೂಪಣೆಯನ್ನು ಮುಖ್ಯ ಆಶಯವಾಗಿ ಹೊಂದಿದೆ. ಕಥೆಗಳ ಒಂದೊಂದು ವಿವರವೂ, ಒಂದೊಂದು ಪಾತ್ರವೂ ನಿಜಜೀವನದ ವಿವರ ಮತ್ತು ವ್ಯಕ್ತಿ ಮಾದರಿಗಳನ್ನು ಭಾಷೆಯಲ್ಲಿ ಚಿತ್ರಿಸುವ ಅಪೇಕ್ಷೆ ಹೊಂದಿವೆ. ಕಥೆ ಹೇಳುವ ಭಾಷೆಯನ್ನು ತಮ್ಮ ತಮ್ಮ ಪ್ರದೇಶದ ನುಡಿಕಟ್ಟಿನಲ್ಲಿಯೇ ಹೇಳುವ ಅಪೇಕ್ಷೆ ''ಸೆಳೆತ'' ಕಥೆಯನ್ನು ಹೊರತುಪಡಿಸಿ ಉಳಿದೆಲ್ಲ ಕಥೆಗಳಲ್ಲೂ ಕಾಣುತ್ತದೆ. ಅಂದರೆ ವಾಸ್ತವ ಬದುಕೆಂದರೆ ವಾಸ್ತವ ಭಾಷೆಯಷ್ಟೇ ಎಂಬ ಧೋರಣೆ ಈ ಕಥೆಗಾರರಲ್ಲಿ ದೃಢವಾಗಿರುವಂತೆ ಕಾಣುತ್ತದೆ. ಆದ್ದರಿಂದಲೇ ಯಾವ ಕಥೆಯಲ್ಲೂ ವ್ಯಕ್ತಿಗಳ, ಸನ್ನಿವೇಶಗಳ, ಖಚಿತವಿವರಗಳು ಕಾಣುವುದೇ ಇಲ್ಲ. ''ಕೊರಳುದ್ದ ನೋಡಾ'' ಕಥೆ ಮಾತ್ರ ಊರನ್ನು, ಊರಿನ ಬಿಸಿಲನ್ನು, ಪಾತ್ರಗಳ ಮನಸ್ಥಿತಿಯನ್ನು ಏಕತ್ರಗೊಳಿಸುವ ಪ್ರಯತ್ನ ಮಾಡುತ್ತದೆ. ''ದಾರಿ'' ಕಥೆ ವಾಸ್ತವ ವಾತಾವರಣ ಕಟ್ಟಲು ಪ್ರಯತ್ನಿಸಿದರೂ ಅಲ್ಲಿಯೂ ಜನರ ನುಡಿ-ಬೆರೆಕೆಯೇ ಎದ್ದು ಕಾಣುತ್ತದೆ. ''ಎಳ್ಳು, ಜೀರಿಗೆ ಬೆಳೆಯೋಳೆ'', 'ಕಾಳವ್ವನ ಕೋಳಿ' ಕಥೆಗಳಲ್ಲಿ ಘನವಾದ ವಸ್ತು ಮತ್ತು ಲಘುವಾದ ನಿರೂಪಣೆಗಳನ್ನು, ವ್ಯಂಗ್ಯಗಳ ಮುಖಾಂತರ ಸಮಾಜ ವಿಮರ್ಶೆಯನ್ನು ಮಂಡಿಸುವ ಅಪೇಕ್ಷೆ ಕಾಣುತ್ತದೆ. ''ಮಣ್ಣಿನ ಕುಡಿಕೆ'' ವಾಸ್ತವದ ಅಂಚಿನಲ್ಲಿ ಸುಳಿಯುತ್ತಾ ಹಲವಾರು ಸಂಗತಿಗಳನ್ನು ಒಳಗು ಮಾಡಿಕೊಳ್ಳುವ ಆಕಾಂಕ್ಷೆಯನ್ನು ಹೊಂದಿದೆ.



ಓ.ಎಲ್.ನಾಗಭೂಷಣ ಸ್ವಾಮಿ

ಈ ಎಲ್ಲ ಬರವಣಿಗೆಗಳು ಕಥೆಗಾರಿಕೆಗೆ ಸಂಬಂಧಿಸಿದ ಒಂದು ಪ್ರಶ್ನೆಯನ್ನು ರೂಪಿಸುತ್ತವೆ. ಕೇವಲ ಉದಾತ್ತ ಆಶಯ, ಪ್ರಾದೇಶಿಕ ಭಾಷಾ ಬಳಕೆಗಳು ಮಾತ್ರ ಸಾಕೆ ಅಥವ ಕಥೆಗಾರ ಓದುಗರು ನಂಬುವಂಥ ಲೋಕವೊಂದನ್ನು ಸೃಷ್ಟಿಸಿ ಆ ಲೋಕದಲ್ಲಿ ನಾವು ಪಡೆದ ಅನುಭವದ ಬೆಳಕಿನಲ್ಲಿ ವಾಸ್ತವ ಲೋಕದ ಸತ್ಯಗಳನ್ನು ಹೊಸ ನೋಟದಿಂದ ಕಾಣುವಂತೆ ಮಾಡಬೇಕೆ? ಈ ತೀರ್ಪುಗಾರ, ಕಥೆಗಾರ ಒಂದು ಲೋಕವನ್ನು ಸೃಷ್ಟಿಸಬೇಕೆಂದು ಬಯಸುವವನು. ಕೇವಲ ಪಾತ್ರಗಳ ಸಂಭಾಷಣೆಯಲ್ಲಿ ಮಾತ್ರವಲ್ಲದೆ ನಿರೂಪಣೆಯ ಭಾಷೆಯಲ್ಲಿಯೂ ಪ್ರಾದೇಶಿಕ ನುಡಿ ವಿಶೇಷವನ್ನೇ ಬಳಸಿದರೆ ಓದುವಿಕೆಗೆ ತೊಡಕಾದೀತೆ? ಈ ತೀರ್ಪುಗಾರ ಭಾಷಾರೂಪದ ಬಳಕೆಯ ಬಗ್ಗೆ ಕಥೆಗಾರರಿಗೆ ಇರುವ ಸ್ವಾತಂತ್ರ್ಯವನ್ನು ಒಪ್ಪಿಕೊಂಡರೂ ಆಡುಮಾತು ಮತ್ತು ''ಶಿಷ್ಟ''ವೆಂದು ಕರೆಯಲಾಗುವ ರೂಪಗಳ ಬಳಕೆಯಲ್ಲಿ ಕಥೆಗಾರರು ತಾವೇ ಮಾಡಿಕೊಂಡಿರುವ ಆಯ್ಕೆಯನ್ನು ಸಾಕಷ್ಟು ಎಚ್ಚರದಿಂದ ಪಾಲಿಸಬೇಕು ಎಂಬ ನಿರೀಕ್ಷೆಯನ್ನು ಹೊಂದಿರುವವನು. ಈ ಅಪೇಕ್ಷೆಗಳ ಹಿನ್ನೆಲೆಯಲ್ಲಿ ಅಂತಿಮ ಸುತ್ತು ತಲುಪಿದ ಕಥೆಗಳ ಬಗ್ಗೆ ಎರಡು ಮಾತು.

''ಮಳೆ'' ತೀರ ಸಾಮಾನ್ಯ ಕಥೆ. ಗಂಡನ ಬಗ್ಗೆ ಆಸೆ, ಸೆಳೆತ, ಅವನು ಒಳ್ಳೆಯವನಾದಾನೆಂಬ ನಂಬಿಕೆ ಇಟ್ಟುಕೊಂಡು ಅವನನ್ನು ಒಪ್ಪುವ ಮತ್ತು ಅವನ ಮೋಸ ಗೊತ್ತಾದಾಗ ದೂರ ತಳ್ಳುವ ಹೆಣ್ಣಿನ ಚಿತ್ರಣ ನೀಡುತ್ತದೆ. ಭಾಷೆಯ ಬಳಕೆಯಲ್ಲಿ ಇನ್ನಷ್ಟು ಎಚ್ಚರ ವಹಿಸಬೇಕಾಗಿತ್ತು. ಘಟನೆಗಳು ಊಹಿಸಿದಂತೆಯೇ ನಡೆಯುವುದರಿಂದ ದೇವಿ ತೆಗೆದುಕೊಳ್ಳುವ ತೀರ್ಮಾನವನ್ನು ನಾವೇ ಊಹಿಸಿಬಿಡಬಹುದು. ಕಥೆಗಾರರು ನಮಗೆ ಕಾಣಿಸುವುದು ಏನೂ ಇಲ್ಲ ಅನ್ನಿಸಿಬಿಡುತ್ತದೆ. ''ಡೋಲು'' ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಅಂಚಿನ ದಲಿತರ ಬದುಕನ್ನು ಚಿತ್ರಿಸುತ್ತದೆ. ಕೇಮರನಿಗೆ ಆದ ಅನ್ಯಾಯ ಅವನ ಬಗ್ಗೆ ಅಯ್ಯೋ ಪಾಪ ಅನ್ನಿಸುವಂತೆ ಮಾಡುತ್ತದೆ. ಆದರೆ ಕಥೆಯ ಎಲ್ಲ ಘಟನೆಗಳೂ ಪೂರ್ವ ನಿರ್ಧಾರಿತವೆಂಬಂತೆ ತೋರುವುದರಿಂದ ಕಥೆಗಾರರಿಗೆ ಕೇವಲ ಭಾವನೆಗಳನ್ನು ಮಿಡಿಯುವುದೇ ಉದ್ದೇಶವಿದ್ದೀತು ಅನ್ನಿಸಿಬಿಡುತ್ತದೆ. ''ಹೊಂಗಿರಣದ ಹೊನಲು'' ಮದುವೆಯಾಗಿ ಬದುಕಲು ಬಯಸುವ ದೇವದಾಸಿ ಹೆಣ್ಣುಗಳ ಬದುಕನ್ನು ಕುರಿತ ಕಥೆ. ಶೀರ್ಷಿಕೆಯೇ ಸೂಚಿಸುವಂತೆ ಕಥೆಯನ್ನು ಸುಖಾಂತಗೊಳಿಸುವ ಅಪೇಕ್ಷೆ ಕಥೆಗಾರರಿಗೆ ಬಲವಾಗಿದೆ. ಆದ್ದರಿಂದ ಕೇವಲ ಕುತೂಹಲ ಮಾತ್ರ ಮುಖ್ಯವಾಗುತ್ತದೆಯೇ ಹೊರತು ಇನ್ನೇನಿಲ್ಲ. ಈ ಮೂರು ಕಥೆಗಳು, ಅಸಂಖ್ಯಾತ ಪತ್ರಿಕಾ ಕಥೆಗಳ ಮಾದರಿಯನ್ನು ಅನುಸರಿಸುವ ಸಾಮಾನ್ಯ ಕಥೆಗಳು, ''ಇರುಳು ನಾಲ್ಕು ಹೊತ್ತು'' ಕಥೆಗಾರರ ಮಹತ್ವಾಕಾಂಕ್ಷೆಯನ್ನು ತೋರುತ್ತದೆ. ಆದರೆ ಮಹತ್ವಾಕಾಂಕ್ಷೆ ಕಲೆಗಾರಿಕೆಯ ನಿಯಂತ್ರಣಕ್ಕೆ ಒಳಪಡುವುದೂ ಅಗತ್ಯ. ಒಂದು ಕಾದಂಬರಿಯಾಗಿ ಬೆಳೆಯಬಹುದಾದ ಸಾಮಗ್ರಿ ಇಲ್ಲಿದೆ. ಬೆಳೆಯಬಹುದಾದ ಕಥೆ ಅಲ್ಲಲ್ಲಿಗೇ ನಿಂತಂತೆ ಕಾಣುವುದರಿಂದ ಅತೃಪ್ತಿ ಮೂಡಿಸುತ್ತದೆ. ಈ ಕಥೆಗಾರರು ಭಾಷೆಯ ಬಳಕೆಯಲ್ಲಿ ಗಮನ ಸೆಳೆಯುತ್ತಾರೆ, ಪಾತ್ರಗಳ ಸ್ವಭಾವವನ್ನು ಅವರ ಕ್ರಿಯೆಗಳ ಮೂಲಕ ಮಂಡಿಸಲು ಯತ್ನಿಸುತ್ತಾರೆ. ಯಾವುದು ಎಷ್ಟಿದ್ದರೆ ಸೂಕ್ತ ಎಂಬ ಔಚಿತ್ಯ ಕಂಡುಕೊಂಡರೆ ಈ ಲೇಖಕರಿಂದ ಉತ್ತಮ ಬರವಣಿಗೆಯನ್ನು ನಿರೀಕ್ಷಿಸಬಹುದು. ''ಎಳ್ಳು ಜೀರಿಗೆ ಬೆಳೆಯೋಳೆ'' ಕಥೆ ತಕ್ಕಮಟ್ಟಿಗೆ ಮೊನಚಾದ ಸಾಮಾಜಿಕ ವಿಶ್ಲೇಷಣೆಯನ್ನು ಒಳಗೊಂಡಿದೆ. ಹೌದೋ ಅಲ್ಲವೋ ಅನ್ನುವಂತೆ ಫ್ಯಾಂಟಸಿಯ ಅಂಚಿಗೆ ಸರಿಯುತ್ತದೆ. ಆದರೆ ವರದಿಯ ಶೈಲಿಯ ಬರವಣಿಗೆ ಕಥೆಯ ಸಾಧ್ಯತೆಗಳನ್ನು ಕುಗ್ಗಿಸಿದೆ. ಲೇಖಕರ ಕೋಪ ತಿಳಿಯುತ್ತದೆ. ನಮ್ಮ ಅನುಭವವಾಗುವುದಿಲ್ಲ. ''ಕಾಳವ್ವನ ಕೋಳಿ'' ಬೀದರ್ ಪ್ರಾಂತ್ಯದ ಭಾಷೆಯನ್ನು ಸಮರ್ಪಕವಾಗಿ ಬಳಸಿದೆ. ನಿರೂಪಣೆಯ ವಿಧಾನದಲ್ಲಿ 'ಕುಂವೀ' ಅವರ ನೆರಳು ಅಲ್ಲಲ್ಲಿ ಚಾಚಿಕೊಳ್ಳುತ್ತದೆ. ವಿಷಯಕ್ಕೂ ಶೈಲಿಗೂ ಹೊಂದಾಣಿಕೆ ಆಗದೆ ಅತೃಪ್ತಿ ಮೂಡಿಸುತ್ತದೆ. ''ನಂಬಿಕೆಟ್ಟವರು'' ಕರ್ನಾಟಕದ ಗ್ರಾಮರಾಜಕೀಯದ ಒಂದು ಚಿತ್ರಣ. ದಲಿತನೊಬ್ಬ ಗ್ರಾಮಪಂಚಾಯತಿಯ ಮುಖ್ಯಸ್ಥನಾದರೂ ಮೇಲುಜಾತಿಯ ಹಿಡಿತಕ್ಕೆ ಸಿಕ್ಕಿ ನರಳುವ ಕಥೆ. ಕೊನೆಗೆ ಜನಪರವಾಗಿ ನಿಲ್ಲುವ ತೀರ್ಮಾನ ತೆಗೆದುಕೊಳ್ಳುತ್ತಾನೆ. ಆದರೆ ಇಲ್ಲಿಯೂ ಅಷ್ಟೆ, ಕಥೆಗಾರರ ಆದರ್ಶ ಮುಖ್ಯವಾಗುತ್ತದೆಯೇ ಹೊರತು ಕಥೆಯಲ್ಲ. ವರದಿಯ ಶೈಲಿಯ ಭಾಷೆ ತೊಡಕಾಗಿದೆ. ''ಸೆಳೆತ'' ವಸ್ತುವಿನ ದೃಷ್ಟಿಯಿಂದ ಭಿನ್ನವಾಗಿದೆ. ಆದರೆ ಆಶಯ ಮರಳಿ-ಮಣ್ಣಿಗೆ ಎಂಬ ಆಶಯವೇ.

ಇಂಡಿಯಾದ ಹಳ್ಳಿ ಮತ್ತು ಅಮೆರಿಕದ ನಾಗರಿಕತೆಗಳ ಮುಖಾಮುಖಿಯಾಗಬಹುದಾದ ಅವಕಾಶವಿತ್ತು. ಆದರೆ ಮತ್ತೆ ಭಾಷೆಯ ಬಳಕೆಯಲ್ಲಿ ಎದ್ದು ಕಾಣುವ ಶೈಥಿಲ್ಯ ನಿರಾಸೆ ಹುಟ್ಟಿಸುತ್ತದೆ. ವಾದ, ಚರ್ಚೆಗಳು ಮುಖ್ಯವಾಗಿ ಕಥೆ ರೂಪ ಪಡೆಯುವುದೇ ಇಲ್ಲ. "ಎತ್ತಣಿಂದೆತ್ತಣ ಸಂಬಂಧವಯ್ಯ" ಕೂಡ ವಸ್ತುವಿನ ಆಯ್ಕೆಯಲ್ಲಿ ಗಮನ ಸೆಳೆಯುತ್ತದೆ. ಒಂದು ಒಳ್ಳೆಯ ಕಥೆಯಾಗುವ ಎಲ್ಲ ಅವಕಾಶಗಳೂ ಇವೆ. ಮಗುವಿನ ಬಯಕೆ, ಮೊಮ್ಮಗನಿಗೆ ಹಂಬಲಿಸುವ ಅತ್ತೆಯ ಮನಸ್ಥಿತಿಗಳು, ತಂದೆಯಾಗಲಾರದ ಗಂಡ, ಎಲ್ಲ ಇದ್ದೂ ಒಂದು ಮೆಡಿಕಲ್ ಕೇಸ್ ಹಿಸ್ಟರಿಯಾಗಿ ಅಷ್ಟೇ ಉಳಿದು ಬಿಡುತ್ತದೆ. ಪಾತ್ರಗಳು ವ್ಯಕ್ತಿಗಳಾಗುವ ಮಾಂತ್ರಿಕತೆ ಇಲ್ಲಿಲ್ಲ. ಈ ಎಲ್ಲ ಕಥೆಗಳು ಆಯಾ ಕಥೆಗಾರರು ಶ್ರಮವಹಿಸಿದರೆ ಉತ್ತಮ ಕಥೆಗಾರರಾಗಬಹುದೆಂಬ ಸೂಚನೆಗಳನ್ನು ಒಳಗೊಂಡಿವೆ.

"ಕೊರಳುದ್ದ ನೋಡಾ", ಗೌಡಸಾನಿಯನ್ನು ಚಿತ್ರಿಸುವ ಹೆಸರಿಲ್ಲದ ಕಥೆ, ಮತ್ತು "ಮುನಿಸು" ಇನ್ನೂ ಕೊಂಚ ಮೇಲು ಮಟ್ಟದ ಕಥೆಗಳಾಗಿ ಕಾಣುತ್ತವೆ. "ಕೊರಳುದ್ದ ನೋಡಾ" ಕಥೆ ಸಂಸಾರದ ರೇಜಿಗೆಯನ್ನೂ ರಾಯದುರ್ಗದ ಬಿಸಿಲ ಬೇಗೆಯನ್ನೂ ಒಟ್ಟಿಗೆ ಬೆಸೆಯಲು ಪ್ರಯತ್ನಿಸಿವೆ. ವಾತಾವರಣ ನಿರ್ಮಾಣ ಚೆನ್ನಾಗಿ ಮೂಡಿದೆ. ರೇಜಿಗೆಗಳೂ ನಿಜವೆನ್ನಿಸುವಂತಿವೆ. ಆದರೆ ಕಥೆಯ ಕೊನೆಯ ಭಾಗದ ಅಚ್ಚರಿ ತೀರ ನಿರೀಕ್ಷಿತ ಮತ್ತು ಸಿನಿಮೀಯ. ಇಷ್ಟು ಸ್ವಲ್ಪದ್ದನ್ನು ಹೇಳಲು ಇಷ್ಟೊಂದು ಶ್ರಮಬೇಕೆ ಅನ್ನಿಸಿ, ಕಥೆ ನಿರಾಸೆ ಹುಟ್ಟಿಸಿಬಿಡುತ್ತದೆ. ಗೌಡಸಾನಿಯ ನೈತಿಕ ಆದರ್ಶವನ್ನೂ ಹೆಣ್ಣಿನಲ್ಲಿರುವ ದೃಢತ್ವವನ್ನೂ ಚಿತ್ರಿಸುವ ಕಥೆ ಮೊದಮೊದಲಲ್ಲಿ ಹೆಚ್ಚು ವಿವರಗಳನ್ನು ಒಳಗೊಂಡಿದ್ದು, ಕೊನೆಯ ಭಾಗದಲ್ಲಿ ಆದರ್ಶ ಸ್ಥಾಪನೆಯ ಉದ್ದೇಶಕ್ಕೆ ತೀರಾವೇಗವಾಗಿ ಓಡುವುದರಿಂದ ಅಸಮಾಧಾನ ಉಳಿಸುತ್ತದೆ. "ಮುನಿಸು" ಸಮಕಾಲೀನವಾದ, ರೈತರ ಆತ್ಮಹತ್ಯೆಯ ಸಂಗತಿಯನ್ನು ಕಥೆ ಮಾಡಿ ಹೇಳಲು ಪ್ರಯತ್ನಿಸಿದೆ. ಆದರೆ ಇದು ಸಾಮಾಜಿಕ ದಾಖಲೆಯಾಗಿ ಕಾಣುತ್ತದೆಯೇ ಹೊರತು ಕಥೆಯಾಗಿ ರೂಪು ಪಡೆಯುವುದಿಲ್ಲ. ಅಪ್ಪಟ ಪ್ರಾದೇಶಿಕ ಭಾಷೆಯನ್ನು ಬಳಸುವ ವಾಕ್ಯ ಇದ್ದಕ್ಕಿದ್ದಂತೆ "ಒಟ್ಟುಲಾಯಿತು", "ಭಾಸವಾಯಿತು" ಎಂದು ಅತ್ಯಂತ ಶಿಷ್ಟವಾಗಿ ಕೊನೆಗೊಳ್ಳುವುದು ಲೇಖಕರು ಭಾಷೆಯ ಬಳಕೆಯ ಬಗ್ಗೆ ಇನ್ನಷ್ಟು ಎಚ್ಚರ ವಹಿಸಬೇಕೆಂದು ಸೂಚಿಸುವಂತಿವೆ.

ಈ ತೀರ್ಪುಗಾರನ ಮೆಚ್ಚುಗೆ ಪಡೆದ ಕಥೆಗಳು ಎರಡು: ಒಂದು "ಹಸಿರು ಸೀರೆ" ಇನ್ನೊಂದು "ಮಣ್ಣಿನ ಕುಡಿಕೆ". ಹಸಿರು ಸೀರೆ ಹುಡುಗಿಯೊಬ್ಬಳ ತೀರಾ ಸಾಮಾನ್ಯವಾದ ಆಸೆಯೊಂದು ಆಸೆಯಾಗೇ ಉಳಿಯುವ ದುರಂತವನ್ನು ಹೇಳುತ್ತದೆ. ಪಾತ್ರವೊಂದರ ಮನಸ್ಥಿತಿಯನ್ನೇ ಕಥೆಯಾಗಿಸುವ, ಈಚಿನ ದಿನಗಳಲ್ಲಿ ಅಷ್ಟೇನು ಪ್ರಚಲಿತವಲ್ಲದ, ದಾರಿಯನ್ನು ಲೇಖಕರು ತುಳಿದಿದ್ದಾರೆ. ದಕ್ಷಿಣ ಕನ್ನಡದ ಬ್ರಾಹ್ಮಣರ ಕನ್ನಡ ನುಡಿಗಟ್ಟಿನ ಬಳಕೆ ಸಾಕಷ್ಟು ಸಮರ್ಥವಾಗಿಯೇ ಇದೆ. ಕಥೆಯನ್ನು ಓದುವಾಗ ವೈದೇಹಿಯವರ ಬರವಣಿಗೆ ಅಲ್ಲಲ್ಲಿ ನೆನಪಿಗೆ ಬರುತ್ತದೆ. ಅಪ್ಪಟವೆಂಬಂತೆ ಪದ್ಮಳ ಮನಸ್ಸಿನ ಆಸೆಯನ್ನು ಕಥೆಗಾರರು ಓದುಗರಿಗೆ ಮುಟ್ಟಿಸಬಲ್ಲರು. ಆದರೆ ಕಥೆಯ ಉತ್ತರಾರ್ಧದಲ್ಲಿ ಕೊನೆಯನ್ನು ಮೊದಲೇ ಊಹಿಸಿಬಿಡಬಹುದು. ಆದ್ದರಿಂದಲೇ ಪದ್ಮಳ ಬಗ್ಗೆ ಕರುಣೆ ಹುಟ್ಟಿಸುವುದೇ ಕಥೆಯ ಗುರಿಯಾಗಿಬಿಡುತ್ತದೆ. ಪಾತ್ರವನ್ನೂ, ಸನ್ನಿವೇಶವನ್ನೂ ಇನ್ನಷ್ಟು ನಿಷ್ಠುರವಾಗಿ ನೋಡುತ್ತಾ ಹೆಣ್ಣಿನ ಲೋಕದ ಸೂಕ್ಷ್ಮಗಳನ್ನು ಚಿತ್ರಿಸುವ ಅವಕಾಶವನ್ನು ಲೇಖಕರು ಬಳಸಿಕೊಂಡಿಲ್ಲವೆಂಬ ಕಾರಣಕ್ಕೆ ಅತೃಪ್ತಿಯನ್ನು ಮೂಡಿಸುತ್ತದೆ. "ಮಣ್ಣಿನ ಕುಡಿಕೆ" ತನ್ನ ವ್ಯಾಪ್ತಿಯಲ್ಲಿ ಸಮಾಜ, ಸಂಸ್ಕೃತಿ, ವ್ಯಕ್ತಿಯ ಅಂತರಾಳದಲ್ಲಿ ಉಳಿದು ಬದುಕಿನ ಮೌಲ್ಯವೆಂಬಂತೆ ತೋರುವ ವಸ್ತುಗಳು, ಜಾನಪದ, ಸಂಸ್ಕೃತಿ ಅಧ್ಯಯನಗಳ ಟೊಳ್ಳುತನ ಇತ್ಯಾದಿ ಹಲವಾರು ಸಂಗತಿಗಳನ್ನು ಹೇಳಲು ಬಯಸುತ್ತದೆ. ಮೊದಲ ಭಾಗ ವಾಸ್ತವ ನಿರೂಪಣೆಯನ್ನೂ ಕೊನೆಯ ಭಾಗ ಕೊಂಚ ಅವಾಸ್ತವ ನೆಲೆಯ ನಿರೂಪಣೆಯನ್ನೂ ಆಶ್ರಯಿಸಿದೆ. ಈ ಕಥೆಯ ತೊಡಕು ಏನೆಂದರೆ ಎರಡೂ ಭಾಗಗಳನ್ನು ಬೆಸೆಯುವಲ್ಲಿ ಕಥೆಗಾರರು ವಿಫಲರಾಗಿದ್ದಾರೆ.

ಇನ್ನುಳಿದ ಎರಡು ಕಥೆಗಳೆಂದರೆ "ದಾರಿ" ಮತ್ತು "ಬೆಳದಿಂಗಳ ತಂಪು". ಇವೆರಡೂ ಕಥೆಗಳು ಮನುಷ್ಯನ ಮೂಲಭೂತ ಒಳ್ಳೆಯತನದಲ್ಲಿ ನಂಬಿಕೆಯನ್ನು ಪ್ರಕಟಿಸುತ್ತವೆ. "ದಾರಿ" ಕಥೆ ಭಾಷೆಯ ಬಳಕೆಯಲ್ಲಿ ಉಳಿದ ಕಥೆಗಳಿಗಿಂತ ವಿಶೇಷವಾದ ಪ್ರಯತ್ನದಲ್ಲಿ ತೊಡಗಿದೆ. ಕನ್ನಡ ಮತ್ತು ಉರ್ದುಗಳ ಬಳಕೆ ಕಥೆ ನಡೆಯುವ ಪ್ರದೇಶದ ಭಾಷೆಯನ್ನು ಯಥಾವತ್ತಾಗಿ ಪ್ರತಿಫಲಿಸಲು ಬಯಸಿದೆ. ಮತ್ತು ಆ ಕಾರಣದಿಂದಲೇ ಕನ್ನಡನಾಡಿನ ಇತರ ಪ್ರದೇಶಗಳ ಓದುಗರಿಗೆ ಕೊಂಚ ಅಪರಿಚಿತ ಅನ್ನಿಸೀತು. ಆದರೂ ಒಮ್ಮೆ ಕಥೆಯ ಒಳಹೊಕ್ಕಮೇಲೆ ಭಾಷೆ ಅಂಥ ತೊಡಕೇನೂ ಆಗುವುದಿಲ್ಲ. ಕಥೆಗಾರರಲ್ಲಿ ವಾಸ್ತವ ವಿವರಗಳನ್ನು ಚಿತ್ರಿಸುವ ಶಕ್ತಿಯೂ ಇದೆ. ಕೊನೆಗೆ ಉಳಿಯುವ ಅನುಮಾನವೆಂದರೆ ವೈಮನಸ್ಸು ಇಷ್ಟು ಸರಳವಾಗಿ ಬಗೆಹರಿದೀತೆ ಎಂಬುದು. ಆದರೆ ಶಿಕ್ಷಣ ಪಡೆದ ಹೊಸ ತಲೆಮಾರು ಭಾವೈಕ್ಯವನ್ನು ಸಾಧಿಸಬೇಕೆಂಬ ಕಥೆಗಾರರ ಆಶಯ, ಸಾಧಿಸೀತು ಎಂಬ ವಿಶ್ವಾಸ ಅವು ಮಾತ್ರ ಮನಸ್ಸಿನಲ್ಲಿ ಉಳಿಯುತ್ತವೆ. ವಾಸ್ತವ ಮಾರ್ಗದ ಕಥೆಯನ್ನು ರೂಪಿಸಲು ಪ್ರಯತ್ನಿಸುತ್ತಾ ಕೊನೆಯಲ್ಲಿ ಅಪೇಕ್ಷಣೀಯವೇ ಆದರೂ ಅದಕ್ಕೆ ಹೊಂದಿದಂತೆ ಆದರ್ಶವನ್ನು ನಿಜವೆಂಬಂತೆ ಚಿತ್ರಿಸುವುದರಿಂದ ಈ ಕಥೆಗೆ ಎರಡನೆಯ ಬಹುಮಾನವನ್ನು ಶಿಫಾರಸು ಮಾಡಿದ್ದೇನೆ.

"ಬೆಳದಿಂಗಳ ತಂಪು" ಕಥೆ ಕೂಡ ಮಾನವೀಯ ಆದರ್ಶದ ಕಥೆ. ಬಸವಂತರಾಯಗೌಡ ತನ್ನ ಕ್ರಿಯೆಯ ಮುಖಾಂತರ ಹೊಸ ಮನುಷ್ಯನಾಗುವತ್ತ ಹೆಜ್ಜೆ ಇಡುತ್ತಾನೆಂಬ ಸೂಚನೆಯೊಂದಿಗೆ ಕಥೆ ಮುಗಿಯುತ್ತದೆ. ಆದರ್ಶ ನಿಜವಾದೀತೋ ಇಲ್ಲವೋ, ಅದರತ್ತ ಹೆಜ್ಜೆ ಇಡುವುದು ಸಾಧ್ಯ ಎಂಬ ವಾಸ್ತವವಾದೀ ನಿಲುವು ಈ ಕಥೆಯ ಚೌಕಟ್ಟಿಗೆ ಹೊಂದುವಂತಿದೆ. ಹಾಗಾಗಿ ಕಥೆಯಾಗಿ ಈ ಬರವಣಿಗೆ "ದಾರಿ"ಗಿಂತ ಭಿನ್ನ, ಜೊತೆಯಲ್ಲಿಯೇ ಸರಿಯಾಗಿ ಕಟ್ಟದಿರುವ ಊರಿನ ಚರಂಡಿ ಮತ್ತು ಬೆಳೆನಾಶಕ್ಕೆ ದೊರೆತ ಹಣವನ್ನು ಬಳಸಿ ಕಟ್ಟಬೇಕೆಂದಿರುವ ದೇವಾಲಯ ಇವು ಕಥೆಯ ಉದ್ದಕ್ಕೂ ರೂಪಕಗಳೆಂಬಂತೆ ಬೆಳೆಯುತ್ತ ಹೋಗುತ್ತವೆ. ಈ ಸ್ಪರ್ಧೆಗೆ ಬಂದ ಗ್ರಾಮ ರಾಜಕೀಯವನ್ನೇ ಕುರಿತ ಹಲವು ಕಥೆಗಳಿಗಿಂತ ಇದು ಭಿನ್ನ. ಇದು ನೇರವಾಗಿ ವರದಿಯಂತೆ ಗ್ರಾಮರಾಜಕೀಯವನ್ನು ವಿವರಿಸುವ ಬದಲು ನಿರ್ದಿಷ್ಟ ಸನ್ನಿವೇಶ ಮತ್ತು ಕ್ರಿಯೆಗಳ ಮುಖಾಂತರ ಚಿತ್ರಿಸಲು ಯತ್ನಿಸುತ್ತದೆ. ಈ ಕಾರಣಗಳಿಂದ ಈ ಕಥೆಗೆ ಪ್ರಥಮ ಬಹುಮಾನ ನೀಡಬಹುದೆಂದು ಶಿಫಾರಸು ಮಾಡಿದ್ದೇನೆ. ಈ ಲೇಖಕರಿಂದ ಇನ್ನಷ್ಟು ಒಳ್ಳೆಯ ಬರವಣಿಗೆಯನ್ನು ನಿರೀಕ್ಷಿಸಬಹುದು.

ಕಥೆಗಳಿಗೆ ಬಹುಮಾನ ಶಿಫಾರಸು ಮಾಡುವುದು ಬೇರೆ, ಆದರೆ ಓದುಗನಾಗಿ ಅತೃಪ್ತಿಯನ್ನು ದಾಖಲು ಮಾಡುವುದು ಬೇರೆ. ಒಟ್ಟಾರೆಯಾಗಿ ಈ ಸ್ಪರ್ಧೆಗೆ ಬಂದ ಯಾವ ಕಥೆಯೂ ಬಹುಕಾಲ ಮನಸ್ಸಿನಲ್ಲಿ ಉಳಿದು, ಮತ್ತೆ ಓದಿಸಿಕೊಳ್ಳುವ ಗುಣವನ್ನು ಪಡೆದಿಲ್ಲ ಎಂಬ ಅತೃಪ್ತಿ ನನಗಿದೆ. ಓದುಗರು ತಮ್ಮ ತಮ್ಮ ತೀರ್ಮಾನಗಳನ್ನು ತೆಗೆದುಕೊಳ್ಳಬಹುದು. ■



# ಬೆಳದಿಂಗಳ ತಂಪು

■ ಶ್ರೀಕಾಂತ ಪಾಟೀಲ

ಮೊದಲ ಬಹುಮಾನ ಪಡೆದ ಕಥೆ

**ಬಂಗ್ಲಾ ದೇಶಕ ಅನ್ನ ನೀರು ಕೊಟ್ಟು ಜೀವ ಉಳಿಸಿದ ದೇಶ, ಗಾಂಧಿ ಮಹಾತ್ಮನ ದೇಶದಾಗ ನಾನೆಂಬ ನಾನು ಸರಪಂಚಕಿಗ ಜೋತ ಬಿದ್ದು ಎಲ್ಲಾನೂ ಕೆಡವುತಾ ಹೊಂಟಿನಿ.**

ಮಠ ಹುಟ್ಟಿದಾಗಿನಿಂದ ಊರ ಹುಟ್ಟಿತೋ? ಊರ ಹುಟ್ಟಿದಾಗಿನಿಂದ ಮಠ ಹುಟ್ಟಿತೋ?!.... ಬಸವಣ್ಣದೇವರ ಗುಡ್ಡಕಾನಿಸಿ ಕುಂತ ಮನೆಗಳೆಲ್ಲ ತೂಫಾನ ಬಿಟ್ಟು ಜಟಿಜಟಿ ಮಳ್ಯಾಗ ತೋಯಿಸ್ಕೊಂಡು ತಪ್ಪಡ್ಯಾಗಿದ ಊರ ಗಲ್ಲಿಗಳೆಲ್ಲ ರೊಜ್ಜೆದ್ದು ಗುಂಗಾಡ ತುಂಬಿ ಗುಂಯ್ ಗುಟ್ಟತಿದ್ದು. ಮಲಗಿದವರ ಮೈಗ ಗುಂಗಾಡುಗಳು ತಮ್ಮ ಸೂಜಿಬಾಯಿ ಚುಚ್ಚಿ ರಕ್ತ ಹೀರುತ ನಿದ್ದೆ ಕೆಡಿಸುವದರಕಿಂತ, ಶಿವಯ್ಯ ಗುಡಿ ಕಟ್ಟಿಸ್ತಾನೆಂಬ ಸುದ್ದಿಗ ಬುಗಲ್ ಬಿದ್ದು ಅರನಿದ್ಯಾಗ ಹೊಳ್ಯಾಡ್ತಿದ್ರು. ಹೋದ ವರ್ಷ ಇಂಥದೇ ತೂಫಾನ್ ಬಿಟ್ಟು ತೊಗರಿಬೆಳಿಗ ಹುಳಾ ಹೆಚ್ಚಾಗಿ ಹಾಳಾದು. ಹಾಳಾದ ಬೆಳಿಗ ಸರಕಾರ ಕೊಡುವ ತಟುಗ ರೊಕ್ಕನೂ ಐನೋರು ಊರ ಮುಖಂಡರಿಗ ಮುಂದ ಮಾಡಿ, ಊರಿಗೆ ಬರುವ ಸರಕಾರದ ರೊಕ್ಕ ಧರ್ಮದ ಕಾರ್ಯಕ ಖರ್ಚ ಮಾಡಬೇಕೆಂಬಾ ಮಾತ ಎತ್ತಿದ್ದು ರೈತರಿಗ ನುಂಗಲಾರದ ತುತ್ತಾಗಿ ಹೊಯ್ತು. ಈ ವರ್ಷನೂ ಮುಂಗಾರಿ ಮಳೆ ಹೆಚ್ಚಾಗಿ ಬೆಳೆ ಹಾಳಾದು.. ಉಪ್ಪ ಎಣ್ಣಿಗ ಮೋತಾಜ ಆಗಿದ ಇಂಥಾ ದಿನಮಾನದಾಗ ಐನೋರು ಕೈಗ ಬಂದ ತುತ್ತನೂ ಕಸಗೋತಾನಂತ. ಹಿಂಗೇ ಸಂಸಾರದ ಚಿಂತೆಯಲ್ಲಿ ಅರನಿದ್ದೆಗಣ್ಣಲ್ಲಿ ಕೌದಿ ಮುಸುಕ ಹಾಕಿ ಹೊಳ್ಯಾಡ್ತಿದ್ದಾಗ ಕರಿ ಮೋಡದಾಗಿಂದ ಚಂದ್ರಾಮ ಇಣಕಿ ಹಾಕ್ತಿದ್ದ.

ಮುತ್ತಾತನ ತೆಲಿಲಿ ಬಂದ ಮಂಚದ ಕಾಲುಗಳಿಗ ಜಂತ್ರ ಹಿಡಿದು ಗಿಳಿ ಕೂಡಿಸಿ ಜಡಿದ ಮಳೆಗಳು ಸವದಿದ್ದು, ಮಗ್ಗಲ ಬದಲಾಯಿಸಿದಾಗೊಮ್ಮಿ ಬಸಂತ್ರಾಯ ಗೌಡನ ಮನಸಿಗ ಚುಚ್ಚಿದ ಚಿಂತಿಗ ಕಿಣಿ ಕಿಣಿ ಸದ್ದ ಮಾಡ್ತಾ ದನಿಕೂಡಿಸುತಿದ್ದು.

ಪಿಳಿ ಪಿಳಿ ಕಣ್ಣಬಿಡ್ವಾಗ, ಬಿಚ್ಚ ಪಡಸಾಲೆಯ ಗೋಡೆಗೆ ತೂಗು ಹಾಕಿದ ಬಸವಣ್ಣದೇವರು, ಶರಣಬಸಪ್ಪ, ಗಾಂಧಿ ಮಹಾತ್ಮರ ಫೋಟೊಗಳ ಮ್ಯಾಲ ಅಂಗಳಕ ಬಿದ್ದ ಚಂದ್ರಾಮನ ಬೆಳಕಿನಾಗ ಹೊಳಿಗತಿದ್ದು, ಎಡ್ಡು ದಿವಸಲಿಂದ ಹತ್ತಿದ ತೂಫಾನ ಮಳೆ ನಿಂತು, ಚಳಿಗಾಳಿ ಕೊರಿಗತಿತ್ತು.

ಎದ್ದು ಅಂಗಳ ಮೋರಿಗ ಕಾಲಮಡಿ ಮಾಡಿ ಮುಗಲ ನೋಡ್ತಾನ. ಚಂದ್ರಾಮ ನಡುನೆತ್ತಿಗೇರಿದ್ದ. ಸುತ್ತಾಕಮರಿದ ಕರಿ ಮೋಡ ಸರಿದು ಬಿಳಿ ಮೋಡ ಓಡತಿದ್ದು. ಈ ಕೆಡಗಾಲ ತೂಫಾನ್ ಈ ವರ್ಷನೂ ಮತ್ತ ಬಂತಲ್ಲಪ್ಪಾ ಶಿವನS. ನಿಟ್ಟುಸಿರ ಬಿಟ್ಟು, ತೂಫಾನ ಬಂದರ ಬೆಳಿಗ ಹುಳಾ ಹೆಚ್ಚಾಗತಾವ. ಔಷಧಿ ಹೊಡೆಸಿದರೂ ಬೆಳಿಗ್ಯಾರಂಟಿ ಇರಾಲ. ಧಬಡ್ಯಾಗ ಕಟ್ಟಿದ ಎತ್ತುಗಳು ಕಣಕಿಗ ಬಾಯಿ ಹಾಕಿ ಮೆಲಕ ಹಾಕ್ತಾ ಉಸರ ಬಿಡ್ತಿದ್ದಾಗ

ಅಂಗಳಾಗಿನ ಆಕಳ ಎಮ್ಮಿ ಕಾಲ ಸಂದ್ಯಾಗ ಬಾಲ ಮುದಡಸಕೊಂಡು ಚಳಿಗ ನಡಗತಾ "ಅಂಬಾ.... ಹೊಂಯ್ಕ್.... ಒದರದು. ಮಾರತ್ಯಾಗ ಹೇಳಿ ಸಾಕಾಯ್ತು. ಮಾಳಗಿಮ್ಯಾಲ ಬಿದ್ದ ಹಳೆ ತಗಡ ಹೆಣ್ಣದನಕ ಆಶ್ರಿಯಾಗಿ ಹಾಕೋ ಅಂದ್ರಾ "ಹೂಂ.... ಹೂಂ...." ಅನಕೋತ ಹೊಸದಾಗಿ ಬಂದ ಹೇಣ್ತಿಶೆರಗ ಬೆಚ್ಚಗ ಮಾಡ್ಲಾಕ ಓಡ್ತಾನ. ಈ ವಯಸ್ಸೇ ಹೀಂಗ್.

ಧಬಡಿ ಕಟ್ಟಿ ಮ್ಯಾಲ ಮಲಗಿದ ದನಗಳ ಕಾಯುವ ಲಚಮ್ಯಾ ಗುಂಗಾಡ ಕಚ್ಚಿದಾಗೊಮ್ಮಿ ಫಟ್‌ಂತ ಕೈಲೆ ಹೊಡಕೋತ ಬಾಯಿ ತೆರದು ಜೊಲ್ಲ ಸೋರಸಿ ಅಸ್ತವ್ಯಸ್ತ ಬಿದ್ದಿದು ನೋಡಿ "ಲಚಮ್ಯಾ. ಏ ಲಚಮ್ಯಾ. ಎದ್ದು ಆಕಳ ಎಮ್ಮಿಗಳಿಗ ಕಣಕಿ ಹಾಕು. ಮುಂಜಾಲೆದ್ದು ಮಾರುತಿ ಜೊತಿಗ ಅವುದರ ಮ್ಯಾಲ ತಗಡ ಆಶ್ರಿಯಾಗಿ ಹಾಕೇ ಮುಂದಿನ ಕೆಲಸ ಹಿಡಿರಿ" ಗೌಡನ ಗದರಕಿಗ ಲಚಮ್ಯಾ ಕಣಕಿ ಶಿವುಡ ಹಿಡಿದ.

ಪುನಃ ಪಲ್ಲಂಗದ ಮ್ಯಾಲ ಒರಗಿದರೂ ಶಿವಯ್ಯನ ಮಾತ ಕಟಿಗತಿತ್ತು. ಗುಡಿ ಕಟ್ಟಿಸಿ ಏನ್ ಮಾಡ್ತಾನಂದ್ರ? ಮಹಾತ್ಮರೆಲ್ಲ ಏಟೊಂದು ಹೇಳ್ಯಾರ ಈ ಜನುಮ ಪಾವನ ಆಗ್ಲಾಕ. ಮನಸ ಕೇಳೊದಿಲ್ಲ. ಗುಡಿ ಕಟ್ಸಾದು ಭ್ಯಾಡ. ಊರಿಗೊಂದು ಹೈಸ್ಕೂಲ ತಂದರ ಬಡಮಕ್ಕಳಿಗ ಆಧಾರ ಆಗ್ತಾದ ಅಂದರೂ ಕೇಳವಲ್ಲಾಗ್ಯಾನ. ಗುಡಿ ಕಟ್ಟಿಸಿ ಅದರ ಜೀರ್ಣೋದ್ಧಾರ ಮಾಡಿ ತನ್ನ ಮಗನಿಗ ಪಟ್ಟಾ ಕಟ್ಟಿ ನಿಚ್ಚಳಾಗ್ತಾನ. ಬಡವರ ಬಾಯಿ ಬಡಿಯುವ ಧೈರ್ಯ ಹ್ಯಾಂಗ್ ಬಂದಿದ್ದಾತು? ಹಳ್ಳಿಯವರ ಮುಂದ ದೇವರ ಭಕ್ತಿ ಇಟ್ಟು ತನ್ನ ಬ್ಯಾಳಿಬೆಯಿಸಾ ಹುನ್ನಾರ ಹೂಡ್ಯಾನ. ಮಠದ ಮೊದಲಿನ ಅಪ್ಪುಗೋಳು ಮಠದಾಗೇ ದಾಸೋಗಿಟ್ಟು ಅಕ್ಷರಾ ಕಲಸ್ತಿದ್ರು. ಶ್ರಾವಣಮಾಸದಾಗ ಪುರಾಣ ಪಾಠ ಹೇಳ್ತಾ ಭಕ್ತಿಲಿಂದ ತುಂಬಿ ತುಳಕ್ತಿದ್ರು. ಅವರು ಹೋದ ಎರಡೇ ವರ್ಷದಾಗ ಎಲ್ಲಾ ನಿಲ್ಲಿಸಿ ಬಿಟ್ಟ.

ನಾಡಿದ್ದು ಪಂಚಾಯ್ತಿ ಸಭಾ ಬ್ಯಾರೆ ಆದಾ. ಯಾರ್ಯಾರ ತೆಲಿ ತುಂಬಿ ಬಿಟ್ಟಾನೋ? ಚೇರಮನ್ ನಾ ಇದ್ದರೂ ಊರ ಮಠದ ಕೈಯ್ಯಾಗ ಇರಬೇಕಂತಾನ.

ವಿಠಲ ಕಾರಭಾರಿ ನನ್ನಮ್ಯಾಲ ಹಲ್ಲಕಟಿಗತಾನ. ಇದೊಂದು ತಪ್ಪು ನಾ ಮಾಡಬಾರದಿತ್ತು. ವಿಠಲನ ತಂಗಿ ಸುಮಿತ್ರಿ ಚಲೂಕಿಗ ಎಷ್ಟು ತಡದರೂ ಮನಸ ಕೇಳಿಲ್ಲ. ಅವಳಿಂದಾಗಿನೇ ವಿಠಲನ ಜೊತಿಗ ಅವನ ಅಳಗಾಬಳಗದ ಮನೆಗಳೆಲ್ಲ ವೈರಿಯಾಗಿ ನಿಂತಾರ. ಈಗ ಇಂಥಾ ಚಾನ್ಸ ಬಿಟ್ಟಾನS? ಆಗ ಶಿವಯ್ಯಗ ಮುಂದಮಾಡಿ ಉಳಕೊಂಡಿನಿ. ವಿಠಲನ ಓಟ ನನಗ ಬರುವ ಹಾಂಗ ಮಾಡಿದ. ಇಲ್ಲಂದ್ರ ಇವತ್ತ ವಿಠಲ ನನ್ನ ಸರಿಕ ಸ್ಪರ್ಧಿಯಾಗಿ ಊರ ಕಾರಭಾರದಾಗ ಇರತಿದ್ದಿಲ್ಲ. ಈ ಹರ್ಯಾದ ಕಾಲ ಹ್ಯಾಂಗ ಕುಣಸ್ತದ.

ಹೀಗೆ ಚಿಂತಿಸುತ ಹೊಳ್ಯಾಡ್ತಿದ್ದಾಗ ಗುಂಗಾಡುಗಳು ಮುಖಕ, ಕೈಗ ಸಿಕ್ಕ ಸಿಕ್ಕಲೆಲ್ಲಾ ದಾಳಿ ಮಾಡ್ತಿದ್ದು. ಫಟ್‌ಂತ ಕೈಲೆ ಹೊಡದು ಇವನವ್ವನ ಊರ ತುಂಬಾ ರೊಜ್ಜಾಗಿ ಗುಂಗಾಡ ಹೆಚ್ಚಾಗ್ಯಾವ. ಗ್ರಾಮ ಪಂಚಾಯ್ತಿ ಬಂದು ಊರ ಹೊಲಸ ಹರದು ಹೋಗ್ಲಾಕ ನಾಲಿಗಟಾರ ಕಟ್ಟಿಸುವ ಕೆಲಸ ವಿಠಲನ ಮಗನಿಗ ಕೊಟ್ಟ. ಕಟ್ಟಿಸುವ ನಾಲಿ ಇಳಕಲಿಗ ಇರಲಿ, ಅಗಲ ಇರಲಿ ಅಂತ ತಿಳಿಸಿ ಹೇಳಿದರೂ ಕೆಳಿಲ್ಲ. ವಿಠಲನ ಮಗನಿಗ ಇಂಥಾ ಕೆಲಸ ಕೊಟ್ಟು ಕೈಯ್ಯಾಗ ಇಟಗೋಬೇಕು ಗೌಡಾ. ಇಲ್ಲಂದ್ರ ನಿನಗ ಓಟ ಹಾಕ್ತಿದ್ನಾ? ಬಾಯಿ ಮುಚ್ಚಿಸಿದ. ಊರ ಗಬ್ಬೆದ್ದು ನಾರಲಾತದ. ಈಗ ತೊಗರಿ ಬೆಳಿಗ ಬರುವ ರೊಕ್ಕಿಗ ಬೆನ್ನ ಬಿದ್ದಾನ. ಹೋದ ವರ್ಷ ರೈತರೆಲ್ಲ ಬೆವರ ಸುರಸಿ, ಬಾಕಿಸಾಕಿ ಮಾಡಿ ಔಷಧಿ ಹೊಡದರೂ ತೂಫಾನದ ಹುಳಗೋಳು ತೊಗರಿಕಾಯಿ ನುಂಗಿ ಹಾಳ ಮಾಡಿದು. ರೈತರು ಬಾಕಿಗ ಅಂಜಿ ಜೀವಕಳಕೊಳ್ಳುವ ವರದಿಗ ಸರಕಾರ ಕೊಡುವ ರೊಕ್ಕ ಆಟು ಈಟು ಕೈಗ ಬಂದಿದ್ದೇ ದೊಡ್ಡ ಭಾಗ್ಯ ಬಂಧಾಂಗ ಆಸೆ ಇಟಗೊಂಡು ಕುಂತಾಗ ಗುಡಿ ಕಟ್ಟಿಸಿ ಜೀರ್ಣೋದ್ಧಾರ ಮಾಡುವ ಮಾತ ಮುಂದ ಮಾಡ್ಯಾನ.

ಎಷ್ಟೇ ಚಡಪಡಿಸಿದರೂ ಕಣ್ಣಿಗೆ ಕಣ್ಣ ಹತ್ತಲಿಲ್ಲ. ಚಿಂತೆಯ ದಣಿವು ಮಬ್ಬು ಮಬ್ಬಾಗಿ ಝೋಂಪ್ ಸುಂದ ಏರಿಸಿತು.

ಕಣ್ಣ ನಸುಕಿನ ಹೊತ್ತಿಗ ಮಠದ ಭಕ್ತಿ ಹಾಡಿನ ಕ್ಯಾಸೆಟ್ಟಿನ ದನಿ ಕೇಳಿ ಎಚ್ಚರಾದ ಹೆಣ್ಮಕ್ಕಳು ಒಲೆ ಹೊತ್ತಿಸಿ ರೊಟ್ಟಿ ಬಡಿಯುವದು, ಹಾದಿಗಳ ಕೆಸರಿಗೆ ಹೇಸಿದ ಮಕ್ಕಳು ನೀರು ತರಲೊಪ್ಪದಿದ್ದಾಗ ಗಂಡಾಳುಗಳು, ಅವಸರದ ಹೆಣ್ಮಕ್ಕಳು ಗಂಡಗಚ್ಚೀ ಹಾಕಿ ಕಿಚಿಪಿಚಿ ಕೆಸರೋ, ತಮ್ಮ ಬಚ್ಚಲಿನ ರೊಜ್ಜೋ ತಿಳಿಯದೆ ಮೂಗಿಗ ಕೈ ಹಿಡಿದು ಕೊಡ ಹೊತ್ತು ನೀರು ತರುವದು, ರೈತ ಮಕ್ಕಳು ಎತ್ತುಗಳ ಹೊಡಕೊಂಡು ಹೊಲಕ್ಕೆ ಹೋಗಾಗ ಅವುಗಳ ಕಾಲಿನಿಂದ ಸಿಡಿದ ರೊಜ್ಜಿಗೆ ಹೇಸಿ ದೂರದಿಂದಲೆ "ಹೊಯ್.... ಹೊಯ್.... ನಿಭಾಯಿಸುತ ಹೊಲದ ಹಾದಿ ಹಿಡಿಯುವದು, ಹೆಂಡೆಕಸದ ಬುಟ್ಟಿ ಹೊತ್ತು ನಡೆದಾಡುವ ಹೆಣ್ಣುಮಕ್ಕಳು, ಮಡಿವಂತ ಹೆಣ್ಮಕ್ಕಳು ಮಡಿನೀರು ತರುವ ಕೊಡ ಹೊತ್ತು, ಮುಖ ಕಿವುಚಿ ಊರ ಮುಖಂಡರಿಗೆ, ನಾಲೆ ಕಟ್ಟದ ಉಪಾರರಿಗೆ ಬೈಯುತ ದಿನದ ರೂಢಿಗ ಹೆಜ್ಜೆ ಹಾಕತೊಡಗಿದರು.

ಬಸವಂತ್ರಾಯ ಗೌಡ ಮೈ ತೊಳಕೊಂಡು, ಪೂಜೆ ಮಾಡ್ಕೊಂಡು, ಹೇಂಡ್ತಿ ಹಾಡುವ ಸಂಸಾರದ ಗೋಳಿನ ಸುಪ್ರಭಾತವು ಮಠದ ಭಕ್ತಿ ಹಾಡಿಗ ಬೆರೆಸುತ ನಿಚ್ಚಳಾಗಿ ಚಹಾ ಕುಡಿದು ಪಡಸಾಲೆಯಿಂದ ಅಂಗಳ ದಾಟುವಾಗ ಹೆಂಡಿಕಸಾ ತೆಗೆಯುವ ಮಲಕವ್ವ ದನಗಳಿಟ್ಟ ಹೆಂಡೆ ತೆಗೆದು ಅವುಗಳ ಉಚ್ಚೆ ಸಮೇತ ಅಂಗಳ ಮಳಿ ನೀರು ತೊಗರಿಕಟಗಿ ಫರಕಿಲೆ ಫರ್ ಫರ್ ಸದ್ದ ಮಾಡುತ ಉಡುಗಿ ಹಾಕುತಿದ್ದಳು. ಅಂಗಳದ ನೊಣ, ಗುಂಗಾಡಗಳು ಗೌವಂತಿದ್ದು, ದೊಡ್ಡಿ ಬಾಗಿಲ ಬಂಕಿಗೆ ಬಂದು ಯಾವಾಗಲೋ ಓದಿ ಮಾಡಿನಾಗಿಟ್ಟ ವಚನಗಳ ಕಟ್ಟು ತಕ್ಕೊಂಡು ತಕಿಯಾಕಾನಿಸಿ ಕುಂತು ತನಗ ಬೇಕಾದ ವಚನ ಹುಡುಕತೊಡಗಿದರು.

ಮಗ್ಗಲು ಮನೆ ಗುರಲಿಂಗವ್ವ ಕೈಯ್ಯಾಗ ಕೊಡ ಹಿಡ್ಕೊಂಡು ತನ್ನ ಮನೆಯ ಬಾಗಿಲದಾಟಿ ರಸ್ತಾಕ ಬಂದು "ಐಯS..... ಇದರ ಮ್ಯಾಗ ಮಣ್ಣ ಭೀಳಿ, ಒಬ್ಬರ ಮನಿರೊಜ್ಜ ಒಬ್ಬರ ಬಾಗಿಲಕ ಬಂದು ನಿಲ್ಲತಾದ. ಹೊಯಿಮಲ್ಯಾ ಮುಖಂಡರು ಹೊಯಿಮಲತನ ಮಾಡಿ ಗಟಾರನಾಲಿ ಕಟ್ಟುಸಿ, ಇದ್ದ ರೊಜ್ಜ ಊರಾಗೆ ಮಲತು ನಾರುವ ಹಾಂಗ ಮಾಡದು. ಇವುಕ ಮರಗಿ ಬ್ಯಾನಿ ಬರಲಿ." ಬೈಯುತ ಬಸಂತ್ರಾಯ ಗೌಡನ ಬಂಕಿಗ ಬಂದು "ಏನಪಾ ಊರ ಆಳಾಗೌಡ. ಊರ ಹಾದಿಗೋಳು ಹ್ಯಾಂಗ್ ಆಗ್ಯಾವಂತ ಒಮ್ಮೆರೆ ನಡದು ನೋಡಿದ್ಯಾ? ಇಲ್ಲಿ ಬರೀ ಪುಸ್ತಕದಾಗೇ ಮಾರಿ ಸೇರಿಸಿ ಕುಂತಿದ್ದಿ. ನಿನ್ನೆ ನನ್ನ ಮಗನ ಕಾಲ ಉಳುಕಿತು. ನಾಳಿ ನಂದು, ಮತ್ಯಾರದೋ. ಊರ ಮನಿ ಮಾರಿನವರು ನೀರ ಹ್ಯಾಂಗ ತರಬೇಕು? ಕೆಲಸ ಹ್ಯಾಂಗ್ ನಿಭಾಯಿಸಬೇಕು?" ಒಳ ಬಳಗದ ಹಕ್ಕಿಲಿಂದ ಬಸವಂತ್ರಾಯನ ಮ್ಯಾಲ ಹರಿಹಾಯ್ತಳು.

ತನಗ ಬೇಕಾದ ವಚನ ಹುಡುಕುವ ಹೊತ್ತಿಗ ಗುರಲಿಂಗವ್ವ ಬಂದು ಗದ್ದಲ ಎಬ್ಬಿಸಿದ್ದು ಗೌಡಗ ಪೇಚಿಗಿಟ್ಟಿತು. "ಇಲ್ಲೆಕ್ಕ. ನಾ ಈ ನಾಲಿ ಕಟ್ಟಿಸುವಾಗೇ ಹೇಳಿನಿ. ಇಳಕಲಿಗ ಇರಲಿ. ಅಗಲ ಇರಲೆಂತ, ಕೇಳಿಲ್ಲ, ಆಗ ಬಜೆಟ ಕಮ್ಮಿ ಬಿತ್ತು. ಊರ ರಸ್ತಾಕ ಗುಡ್ಡದ ಮರಬ ಖಟಕ ಹಾಕಲಾಕ ಹೇಳ್ತಿನಿ." ಸಮಾಧಾನಿಸತೊಡಗಿದ.

"ನಾ ಈ ಮಾತ ಹೇಳಿ ಹೋಗಾಣಂತೇ ಬಂದಿನಿ. ಅಷ್ಟು ಮಾಡಿಸು." ಗುರುಲಿಂಗವ್ವ ಕೊಡ ಹಿಡಕೊಂಡು ಊರ ಬಾವಿ ಹಾದಿ ಹಿಡಿದಳು.

ವಿಚಾರ ಮಾಡುತ, ವಚನ ಹುಡುಕುತಿದ್ದಾಗ ಮೂಲಗೇರ ಶಿವಶಂಕರ ಗೌಡರ ಬಂಕಿಗ ಬಂದು ಕೆಸರಗಾಲ ನೆಲಕ ಒರೆಸುತ "ನಮಸ್ಕಾರ ಗೌಡ್ರಿಗ. ನೀವು ಹೀಂಗ್ ಪುಸ್ತಕದಾಗ ಮಾರಿ ಇಟಗೊಂಡು ಕುಂತ್ರ ಚೇರಮನ್‌ಗಿರಿ ಖುರ್ಚಿ ಕಿತಗೊಂಡು ಹೋಗ್ತಾದ. ಊರೆಲ್ಲ ಸುದ್ದಿ ಆಗ್ಯಾದ. ಗೌಡ ಬಸವಣ್ಣದೇವರ ಗುಡಿ ಕಟ್ಟಿಸಬ್ಯಾಡ ಅಂತಾನ. ಊರ ಅಂದಲ್ಲಿ ಗುಡಿ, ದೇವರ ಇದ್ದರನೇ ಸಂಸಾರಕ ಮುಕ್ತಿ ಸಿಗತಾದ. ತೂಫಾನ ಕಡಿಮ ಆಗ್ತದ. ಬೆಳಿ ಬರತಾವ. ನೀವೆಲ್ಲ ಇವತ್ತ ಪಂಚೇತಿ ಸಭಾದಾಗ ನಿಮ್ಮ ನಿಮ್ಮ ಸಪೋರ್ಟ ಹಿಂದಕ ತಗೋರಿ, ಅಂತ ಶಿವಯ್ಯ ಮಹಾಲಿಂಗ ರಾಯಗ, ವಿಠಲ ಕಾರಭಾರಿಗ ತೆಲಿ ತುಂಬ್ಯಾನಂತ" ಹೇಳುತ ನೆಲಕ ಕೈ ಬಡಿದು ಕುಂತಿದ್ದು ಗೌಡನ ತೆಲಿಮ್ಯಾಲ ಸಿಡಿಲ ಬಡಿಧಾಂಗ್ ತತ್ತರಿಸಿ ಅವಡಗಚ್ಚಿ ಮುಖ ಮ್ಯಾಲೆತ್ತಿದ.

"ನನಗ ಗೊತ್ತಿತ್ತು. ಇಂವಾ ಇಂಥಾ ಕೆಲಸಾ ಮಾಡ್ತಾನಂತ. ನೀವೇ ಹೇಳ್ರಿ, ಶೆಂಕರಣ್ಣ, ರೈತರ ಬಾಯಿ ತುತ್ತ ಕಸಗೊಳ್ಳುವದು ಪಾಪದ ಹಾದಿಯೋ? ಪುಣ್ಯದ ಹಾದಿಯೋ? ಅದಕಾಗಿ ಗುಡಿ ಕಟ್ಟಿಸುವದು ಭ್ಯಾಡ ಅಂದಿನಿ." ತಣ್ಣಗ ಮಾತಿಟ್ಟರು.

"ವಿಠಲ ಕಾರಭಾರಿಗ ಮುಂದ ಹಾಯ್ಕೊಂಡು ಎಂ.ಎಲ್.ಎ.ಸಾಬರ ಭೆಟ್ಟಿಗ ಹೋಗ್ಯಾನಂತ, ಶಿವಯ್ಯ. ಫಂಡ ಮಂಜೂರಿ ಮಾಡಿಸ್ಕೊಳ್ಳಾದು ಅಲ್ಲದೇ, ಗುಡಿ ಕಂಟ್ರಾಕ್ಟರಕಿ ವಿಠಲನ ಮಗನಿಗ ಕೊಡ್ತಾನಂತ.

ಪೇಚಿಗ ಬಿದ್ದ ಗೌಡ "ಶಂಕರಣ್ಣ ಎಂ.ಎಲ್.ಎ.ನೂ ಓಟಿಗಾಗಿ ಅಂಜತಾನ. ಮೊದಲ ಹೈಸ್ಕೂಲ ಕೊಡಸರೀ ಅಂದ್ರ ಬಿಡಗೋತಾನೇ ಇಲ್ಲ. ಹೈಸ್ಕೂಲ ಇದ್ದರ ಊರ ಮಕ್ಕಳಿಗ, ಸುತ್ತಲೂರಿನ ಮಕ್ಕಳಿಗ ಆಧಾರ ಆಗ್ತದ. ಈಗ ಶಿವಯ್ಯನ ಮಾತ ಮೊದಲ ನಡಸಿಕೊಡ್ತಾನಿಲ್ಲ ನೋಡರಿ". ಹೇಳುತ ತನ್ನ ಲೆಕ್ಕಾಚಾರ ತಿಳಿಸಿದ.

ಇಬ್ಬರೂ ಶಿವಯ್ಯನ ಕರಾಮತ್ತಿಗ ಸುಂದ ಬಡಧಾವರ ಹಾಂಗ ಕುಂತಾಗ, ಕೆಸರೆಂಬ ಕೆಸರಿನ ಖಬರ ಇಲ್ಲದೆ ಹುಲ್ಲಿನ ಹೊರೆ ಹೊತ್ತಿಕೊಂಡು ಧಾವಗಾಲ ಹಾಕುತ ಬಂದ ಮೇತ್ರಿ ಮಹಾಲಿಂಗಪ್ಪ ಹುಲ್ಲಿನ ಹೊರೆ ಗೌಡರ ತಲಬಾಗಿಲ ಕಟ್ಟಿಗಿಟ್ಟು ಒಂದೇ ಹೆಜ್ಜಿಗ ಬಂಕಿಗ ಬಂದು "ಅಲ್ರೀಗೌಡರೆ. ನೀವು ಹೀಂಗ್ ಬಂಕಿನಾಗ ತಕಿಯಾಕಾನಿಸಿ ಕುಂತರ ಮಾತ ಭಾಳ ಬಿರಸಿಗ ಬರತಾದ." ಬಂಕಿಗಾನಿಸಿ ಕೂಡತ "ಶಿವಯ್ಯ ವಿಠಲನ ತೆಲಿತುಂಬಿ ಪ್ಯಾಟಿಗ ಹೋಗ್ಯಾನಂತ. ಮತ್ತೆಲ್ಲಿ ಕಿತಾಪತಿ ಮಾಡ್ತಾನ ಅಂತೀನಿ ಇವನವ್ವನ." ಒಂದೇ ಉಸರಿಗ ಹೇಳುತ "ನಿಮಗರೆ ಯಾಕ ಭ್ಯಾಡ ಆಗ್ಯಾದ. ಗುಡಿ ಕಟ್ಟುಸ್ತಿನಿ ಅಂದ್ರ ಕಟ್ಟುಸಲಿ. ಅವನ ಹಾಂಗ ನಾವೂ ಒಳಗಿಂದೊಳಗೆ ಏನಕೇನರ ಮಸಲತ್ತ ಮಾಡ್ತಾ ಇರಬೇಕು. ಇಲ್ಲಂದ್ರ ಕುರ್ಚಿ ಕಳಕೋಬೇಕಾಗ್ತದ. ತಲೆಮಾರಲಿಂದ ನಡಕೊಂಡು ಬಂದ ಮರ್ಯಾದಿ ವಿಠಲನ ಕೈಯ್ಯಾಗ ಕೊಟ್ಟು ಕುಂತು ಬಿಡ್ರಿ." ಸಿಟ್ಟಿನಿಂದ ಒಳ ಮರ್ಮ ಕಾರುತ ಮುಖ ಸಿಂಡರಿಸಿ ಧೋತರ ಶೆರಗಿಲೆ ಬೆವತ ಮುಖ ಒರೆಸಿ, ತಂಬಾಕ ಚೀಲಕ ಕೈ ಆಡಿಸಹತ್ತಿದ.

ಶಿವಶಂಕರ ತನ್ನ ಮನೆಯ ಅಣ್ಣತಮ್ಮಂದಿರದಾಗ ಹುಷಾರಿದ್ದ ಕಾರಣ ಮನೆ ಕಾರಭಾರ ಜೊತಿಗ ಊರ ಕಾರಭಾರದಾಗನೂ ಮನೆತನದ ಗಂಡಾಳ ಇದ್ದರ, ಮನಿತನಕ ಮರುವಾದಿ ಇರತಾದಂತ ಗೌಡಗ ಹತ್ತಿರ ಆಗಿದ್ದ. ಕೂಲಿ ಮಾಡಿ ಉಣ್ಣಾ ಮಹಾಲಿಂಗಪ್ಪ ಗೌಡಗ ಸುಮಿತ್ತಿ ಗೆಳತನ ಮಾಡಾ ಕುಂಟಲತನ ಮಾಡಿದಕ, ಗೌಡ ಮಹಾಲಿಂಗಪ್ಪನ ಮಗನ ಶಾಲೆಯ ಫೀಸು, ಪುಸ್ತಕಗಳ ಖರ್ಚುಕೊಟ್ಟು ಆಧಾರ ಆಗಿದ್ದಕ ಗೌಡನ ಮನಿಗ ಖಾಸಗತ ಮನಷಾ ಆಗಿದ್ದ.

ವಿಚಾರ ಮಾಡಿ ಮಾಡಿ ಮೂವರ ತೆಲಿ ಒಜ್ಜಿ ಆಧಂಗ ಅನಿಸಿದಾಗ, ಪುಥಳವ್ವ ಗೌಡತಿ ಮಜಗಿಗ ಬಂದ ಮಗ್ಗಲ ಮನೆಯ ನೀಲಗಂಗಿ ಪೋರಿ ಕೈಯ್ಯಾಗ ಚಹಾದ ಕೇಟ್ಲಿ, ಕಪ್ಪುಗಳು ಕೊಟ್ಟು ತಾನೂ ಅಂಗಳ ತನಕ ಬಂದು, ಬಂಕಿಗ ಖಳಿಸಿದಳು. ಅಂಗಳಲ್ಲೇ ನಿಂತು "ಶಂಕರಣ್ಣ ನಿಮ್ಮೆಲ್ಲರಿಗ ಯಾಕ ಇಟೋಂದು ಪಂಚೇತಿ ಬಿದ್ದಾದ. ಏನೋರು ಗುಡಿ ಕಟ್ಟಿಸ್ತಿನಂದ್ರ ಕಟ್ಟಿಸಲಿ. ಇಲ್ಲಂದ್ರ ಹಿಂಗೇ ಚಿಂತ್ಯಾಗ ನಿದ್ದೆ ಇಲ್ಲದೆ, ಐಯ್ಯಗ ಎದರ ಹಾಯಿಕೊಂಡು ಮಾರಿ ಒಣಗಿಸಿ ಕೂಡಾದು ಯಾರಿಗ ಬೇಕಾಗ್ಯದ." ತಲೆ ಮೇಲಿನ ಶೆರಗು ಮತ್ತೊಮ್ಮೆ ಸಾವರಿಸಿ ಎಳಕೊಂಡು ಬಂಕಿಗ ಹಣಿಕಿ ಹಾಕಿ ಮತ್ತೆ ಹಿಂದೆ ಸರಿದು ನಿಂತಳು.

"ಅಕ್ಕ ಹೇಳಾದೇ ಛಂದ ಅನಸ್ತದ" ಮಹಾಲಿಂಗಪ್ಪ ಕಣ್ಣ ಹೊರಳಿಸಿ, ಮಾರಿ ಅಡ್ಡಾಲ್ಗ ಮಾಡಿ "ಗೌಡಾ ನೀವು ಹೂಂ ಅನ್ರಿ. ಮೊದಲೇ ಪಂಚಾಯ್ತಿ ಎಲೆಕ್ಷನ್‌ದಾಗ ಬೆಳದ ಎಳ್ಳಿನ ಬೆಳಿ ಪಟ್ಟಿ, ಉದ್ದ, ಹೆಸರಿನ ಪಟ್ಟಿ ಖರ್ಚ ಮಾಡಿರಿ. ಕೈಯ್ಯಾಗ ಕಾರಭಾರ ಇಟಗೊಂಡು ಸಂಸಾರಕಡಿ ಲೆಕ್ಕ ಹಾಕಿ ಹುಶಾರಲಿಂದ ಇರಾದೇ ಶಾಣ್ಯಾರ ಮಾತ ಅದಾ ನೋಡ್ರಿ."

ಗೌಡತಿ ಇಟ್ಟ ಮಾತ, ಮಹಾಲಿಂಗಪ್ಪ ಪುಟಗಿಲಿ ಹೇಳಿದ ವಿಚಾರಕ ಗೌಡ ಶಿವಶಂಕರ ಇಬ್ಬರೂ ಎಡ್ಡ ಮಾತ ಆಡಲಾರದು ಸಮ್ಮತಿಯಾಗಿ "ನಾಳಿಗ ಪಂಚೇತಿ ಕಟ್ಟಿಗ ಊರ ಮಂದಿಗ ನೆರಸಲಾಕ ಡಂಗರಾ ಸಾರಂತ ತಳವಾರಗ ಹೇಳ್ತಿನಿ. ಮಜಕೂರಿ ಹೈದರಗನೂ ಮೀಟಿಂಗ್ ತೈಯ್ಯಾರಿ ಮಾಡಂತ ಹೇಳ್ತಿನಿ." ಹೇಳುತ ಮಹಾಲಿಂಗಪ್ಪ ಅವಸರಲಿಂದ ಎದ್ದು ಹುಲ್ಲಿನ ಹೊರಿ ಹೊತಗೊಂಡು ಮನೆ ಹಾದಿ ಹಿಡಿದ.

"ಗೌಡ್ರ, ಮಹಾಲಿಂಗಪ್ಪ ಅಕ್ಕ ಅನ್ನಾದೇ ಈಗಿನ ಮಾತಿಗೆ ಇಲಾಜ ಅದಾ. ಶಿವಯ್ಯ ಬರುವುದರಾಗ ಅವನ ಮಾತಿಗ ನಮದೂ ಒಪ್ಪಿಗಿ ಅದಾ ಅಂತ ಖಾತರಿ ಮಾಡಿಧಾಂಗ್ ಆಗ್ತದ. ಇನ್ನ ಚೇರಮನ್‌ಗಿರಿ ಮಾತೇ ಉಳ್ಯಾದಿಲ್ಲ." ಶಿವಶಂಕರನ ನಿರ್ಣಾಯಕದ ಮಾತಿಗ ಗೌಡ ತಲಿ ಅಳ್ಯಾಡಿಸಿದ.



## ಕಾರಂತರ ಪಕ್ಕದಲ್ಲಿ ಶ್ರೀಮತಿ !

ಮಂಗಳೂರಿನಲ್ಲಿ ಒಂದು ಸಮಾರಂಭ. ಸಭೆಗೆ ತುಸು ತಡವಾಗಿ ಬಂದ ಸಾರ್ವಜನಿಕರೊಬ್ಬರು ತಮ್ಮ ಚಾಳೀಸವನ್ನು ಮೂಗಿನ ಮೇಲಿಂದ ತೆಗೆದು ವೇದಿಕೆಯತ್ತ ದಿಟ್ಟಿಸುತ್ತಾ ತಮ್ಮ ಮಸಕು ದೃಷ್ಟಿಯಲ್ಲಿ ವೇದಿಕೆಯಲ್ಲಿರುವವರು ಯಾರು ಎಂಬ ಗೊಂದಲದಲ್ಲಿ ಕೇಳಿದರು; "ಯಾರದು ಕಾರಂತರ ಪಕ್ಕದಲ್ಲಿ ಕುಳಿತಿರುವುದೂ. ಅವರ ಶ್ರೀಮತಿಯೋ, ಅನುಪಮಾ ನಿರಂಜನರೋ?...." ಕಾರಂತರ ಪಕ್ಕದಲ್ಲಿ ಕೂತಿದ್ದವರು ಈ ಇಬ್ಬರೂ ಆಗಿರದೆ ಬಿಳಿಗೂದಲ ಹಿರಿಯರಾದ ಡಾ. ಹಾಮಾನಾ ಅವರಾಗಿದ್ದರು.

ತೂಫಾನ ಹೋಗಿ ನಾಕ ದಿವಸದ ಮ್ಯಾಲ ಮಾಗಿದಿವಸದ ಚಳಿಗ ಅಂಜಿ, ದೀಪ ಹಚ್ಚಿದ ಘಳಿಗೆ ಹೊತ್ತಿಗ ಹರಕಕೌದಿ, ಚಾದರ, ಕುಂಚಗಿ, ಕಂಬಳಿ ಹೊದಕೊಂಡು ಊರಿನ ಗಂಡು-ಹೆಣ್ಣುಗಳೆಲ್ಲ ಕಲಕಲಾಂತ ಬಸವಣ್ಣದೇವರ ಗುಡಿ ಕಟ್ಟಾ ಸಭಾಕ ಪಂಚರು ಸಾರಿದ ಡಂಗರ ಕೇಳಿ ಪಂಚೇತಿ ಕಟ್ಟಿ ತೆಳಗ ಬಂದು ಕುಂತಿದ್ದರು.

ಕುರಬರ ಗಂಗವ್ವ ಗಂಡುಗ ಕುಣಿಗಾರಿಗ ಹಾಕಿ ಎರಡು ಹೊಟ್ಟಿಲಿ ಹುಟ್ಟಿದ ಗಂಡ ಮಕ್ಕಳ ಮ್ಯಾಲ ಈ ಜೀವಕ ಸಂಸಾರ ಸುಖಾ ಎಷ್ಟೈತಂತ ನಿಚ್ಚಳಾಗಿ ಕುಂಚಗಿ ಹೊಚಗೊಂಡು,

"ಯಣ್ಣಾ ಹೇನ ಹತ್ತಿ ಮಳೆ ಹೆಚ್ಚಾಗಿ ಉದ್ದ-ಹೆಸರ ಹ್ವಾದು. ತೂಫಾನ ಬಿಟ್ಟು ತೊಗರಿ ಬೆಳಿ ಹುಳಾ ನುಂಗದು. ರಬ್ಬಿಜ್ವಾಳ ನೆಲಬಿಟ್ಟು ಏಳವಲ್ಲು. ಇಂಥಾದರಾಗ ಊರ ಮುಖಂಡರು ಗುಡಿ ಕಟ್ಟಾದು ಸಂಸಾರಿಸ್ತರಿಗ ನಿಭಾಯಿಸಾ ಮಾತೇನು ಹೇಳು ಒಳ್ಳೆದು.'

ಮೂಗ ಸವರಿ ಚೆಂಚಿ ಬಿಚ್ಚಿ, ಒಂದೇ ಎಲಿದಾಗ ಎರಡು ಪಾಲ ಮಾಡಿ, ಎದರು ಕುಂತ ಜಟಂಗಗ ಒಂದು ಕೊಟ್ಟು ತನ್ನ ಎಲಿಗ ಸುಣ್ಣಾ ಹಚ್ಚಿ ಅಡಕಿ ತುಣಕಿನ ಜೊತಿ ಬಾಯಿಗಿಡುತ್ತ ಕಣ್ಣಾ ಕಿಸಿದು ಹೇಳುತ ಜಟಂಗ ಕೊಟ್ಟ ತಂಬಾಕಿನ ಪುಡಿ ಬಾಯಿಗ ಹಾಕ್ತಾ ಗುಸು ಪುಸು ಸುರು ಮಾಡಿದಳು.

"ಹೌದವ್ವಾ ಇವನವ್ವನಿ. ನಮಗ ನಮ್ಮ ಸಂಸಾರದ ಉಪ್ಪು ಎಣ್ಣಿಗ ತಿಪ್ಪಲ ಬಿದ್ರ, ಈ ಐಯ್ಯಗ ಗೌಡಗ ಗುಡಿ ಕಟ್ಟಾದರ ಚಟಾ ಎದ್ದಾದ." ಕಂಬಳಿ ಸವರಿ ಗಂಗವ್ವಳ ಕೈಗ ತಂಬಾಕಿನ ತುಣಕಪುಡಿ ಕೊಡುತ ಮಾತ ಸುರೂ ಮಾಡಿದ.

"ಪ್ಯಾಟ್ಯಾಗ ಬೆಳದ ಬೆಳಿಮಾಲಿಗ ಧಾರಣಿ ಇಲ್ಲ. ನಮ್ಮ ಗೊಬ್ಬರ ಬೀಜದ ಖರ್ಚ ಹೋಗಿ ಹೊಲ ಹಸನ ಇಡಾದರಾಗೇ ಸಾಕಾಗ್ಯಾದ. ಗುಡಿ ಕಟ್ಟಸ್ತಾರಂತ, ಗುಡಿ." ಮಗ್ಗಲ ಕುಂತ ಮಾಲಗಾರ ಮಹಾದೇವ ಮಾತೆತ್ತಿದ.

ತನ್ನ ಒಳಗುದಿಯ ಮಾತು ಎದುರಾಗಿದ್ದೇ "ಕಟ್ಟಿದರೇ ಸುದ್ದ ಕಟ್ಟುಸ್ತಾರ, ಅದೂ ಇಲ್ಲ. ಊರ ಹೊಲಸ ಹರದು ಹೋಗ್ಲಾಕ ನಾಲಿ ಕಟದು. ಊರಾಗಿನ ರೊಜ್ಜ ರಸ್ತಾದಾಗ ಮಲ್ತು ಗಬ್ಬೆದ್ದು ಹೋಗಿ ನಡಿಲಾಕ ವಾಕರಕಿ ಹೊಂಟಾದ. ಇವದರ ಮ್ಯಾಗ ಮಣ್ಣು." ಗುರನಿಂಗವ್ವ ಸಿಟಿಪಿಟಿ ಮಾಡ್ತಾ ಕುಂಚಗಿ ಮೂಗಿಗ ಒತ್ತಿಕೊಂಡಳು.

ಹಿಂಗೇ ಮಾತುಗಳ ಗುಸು ಗುಸು ಪುಸು ಪುಸು ಇದ್ದಾಗ ಬಿಳಿಧೋತ್ರ, ಕಮೀಜ ಅಂಗಿ, ಕಣ್ಣಿಗ ಚಾಳೀಸು, ಮೈ ಮ್ಯಾಲ ಕಾಶ್ಮೀರಿ ಶಾಲು ಹೊದಕೊಂಡು ಊರ ಆಳುವ ಗೌಡ, ಮಠದ ಶಿವಯ್ಯ ಪಂಚೇತಿ ಕಟ್ಟಿಗ ಬಂದು ಕೂಡುತಲಿದ್ದಾಗ ಎಲ್ಲರ ಮಾತುಗಳು ತಣ್ಣಗಾದು. ಮಜಕೂರಿ ಹೈದರ ಚಿಮಣಿ ಎಣ್ಣಿ ಗ್ಯಾಸ ಬತ್ತಿ ಹಚಗೊಂಡು ತಂದು ಕಟ್ಟಿಯ ಮಗ್ಗುಲಿಗೆ ಇಟ್ಟನು.

"ಮುತ್ತ್ಯಾವರು ಗುಡ್ಡ ಬಸವಣ್ಣ ದೇವರ ಗುಡಿ ಕಟಸಾ ಮನಸ ಮಾಡ್ಯಾರ. ಇದಕ ಊರವರಾದ ನೀವೆಲ್ಲ ಒಪಗೊಂಡು ಪಾಲಿಗ ಬಂದ ಚಂದಾಪಟ್ಟಿ ಅಂದರ ಮನ್ನೆ ಸರಕಾರ ಮಂಜೂರಿ ಮಾಡಿದ ತೊಗರಿ ಬೆಳಿಗ ಬಂದ ರೊಕ್ಕ ಕೊಡಬೇಕಂತ ದೈವದ ಮಾತದಾ." ಬಸವಂತರಾಯ ಗೌಡ ಮಾತು ಊರವರ ಮುಂದಿಟ್ಟ.

ಊರವರೆಲ್ಲ ಒಬ್ಬರದೊಬ್ಬರು ಮುಖ ನೋಡುತ, ಇಂಥಾ ಬೆಳಿ ಹಾಳಾದ ದಿವಸದಾಗ ಶಿವಯ್ಯ ಗುಡಿ ಕಟ್ಟಸ್ತಾನ ಅಂದ್ರ ನಮ್ಮ ರೊಕ್ಕ

ಹಾಳಾಗ್ವಾಡಿಗ ಹಾಯಿದಾಟೇ ಖರೆ. ವಿಚಾರಿಸುತ್ತ ಕಣ್ಣ ಪಿಳಿ ಪಿಳಿ ಬಿಡುತಿದ್ದಾಗ -

ಕುರುಬರ ಜಟಿಂಗ ಎದ್ದು "ಅಲ್ಲರೀ ಗೌಡಾ, ಹೊಲದಾಗ ಬೆಳಿ ಹಾಳ ಆಗ್ಯಾವ. ಪ್ಯಾಟ್ಯಾಗ ಧಾರಣಿ ಇಲ್ಲ. ಇಂಥಾದರಾಗ" ಕಟ್ಟಿಗಾನಿಸಿ ಕುಂತ ಮಹಾಲಿಂಗಪ್ಪ ಸಟಕ್‌ನೆ ಎದ್ದು "ಅಲ್ಲಪಾ ಜಟಿಂಗಣ್ಣಾ, ಬೆಳೆ ಹಾಳಾಗಿ ಧಾರಣಿ ಇಲ್ಲಂದ್ರ ಉಣ್ಣಾದು ಬಿಟ್ಟರೇನು, ಇಲ್ಲ ಸಂಸಾರ ಮಾಡಾದು ಬಿಟ್ಟೀರಿ?" ಕಣ್ಣ ಕ್ಯಾಕರಿಸಿ "ಸ್ವಲ್ಪನ ಧರ್ಮದ ಕಡಿ ಭಯ ಭಕ್ತಿ ಇರಲಿ. ದೇವರಿಗ ಮರತೀರಂತೇ ಇಂಥಾ ಧಿನಮಾನ ಬಂದಾವ." ಮೊದಲೇ ಹೇಳಿದ್ದ ಮಾತ ತನ್ನ ಚಾಲಾಕಿ ಮಾತಿನಿಂದ ಸಮಸ್ಯೆ ಬಗೆ ಹರೆಸಿದವನಂತೆ ಖಿಮ್ಮಗ ಖ್ಯಾಕರಿಸಿ ಕುಂತು ಬಿಟ್ಟ.

ಮರಾಠರ ತುಳಸಿರಾಮ ಎದ್ದು "ಗೌಡರೇ, ನಮ್ಮ ಏಕನಾಥ ಮಹಾರಾಜರ ಸಪ್ತಾದ ಕಟ್ಟಿಗ ಘರಸಿಕಲ್ಲ ಹಾಸ್ತಿರೆಂದ್ರ ನಾವು ಒಪಗೋತೆವು." ತನ್ನ ಸಮಾಜದ ಕಕ್ಕುಲಾತಿ ಒಳಮಾತ ವಿಠಲ ಕಾರಬಾರಿ ಹೇಳಿದಾಟು ಎತ್ತರಿಸಿ ಹೇಳಿದ.

"ಇಲ್ಲಂತ ಯಾರು ಅಂತಾರಪಾ ತುಳಸಿರಾಮ. ಎಲ್ಲರ ದೇವರಿಗೂ ಜೀರ್ಣೋದ್ಧಾರ ಮಾಡಬೇಕು. ಊರ ಅಂದಮ್ಯಾಲ ಗುಡಿ, ದೇವರು ಬೇಕು. ಭಕ್ತಿಲಿಂದ ನಡಿಬೇಕು." ಗೌಡನ ಶಾಂತ ಭಾವದ ಮನಗೆಲ್ಲುವ ಮಾತಿಗೆ ಮರಾಠರೆಲ್ಲ ಉಬ್ಬಿದರು. ತುಳಸಿರಾಮ ತನ್ನ ಚಂದಾ ಪಟ್ಟಿಗ ಒಪಗಿ ಕೊಟ್ಟಿದ್ದೇ ತಡ, ಎಲ್ಲರೂ ದೇವರ ಬಗ್ಗೆ ಅಭಿಮಾನದ ಭಕುತಿ ಉಕ್ಕಿ ಚಂದಾಪಟ್ಟಿ ಬರಿಲಾಕ ನಾ ಮುಂದ, ತಾ ಮುಂದಾಗಿ ರಸ್ತಾದಿಂದ ಹರಿದು ಬರುವ ರೊಜ್ಜನೀರ ತುಳಕೋತ ಎಲ್ಲರ ಕಾಲುಗಳು ಕೆಸರಾಗಿದರ ಖಬರು ಇಲ್ಲದೆ ಚಂದಾ ಪಟ್ಟಿ ಜಮ್ಮಾಯಿಸುತ ನಡೆಯಿತು.

ಗುರಲಿಂಗವ್ವ ಎದ್ದು "ಮೊದಲ ಊರಾಗಿನ ರಸ್ತಾ ದುರಸ್ತಿ ಮಾಡಿಸರೋಽ" ಚೀರಿದ್ದು ಮೂಲೆ ಸೇರಿತು.

ಶಿವಯ್ಯನ ಮುಖದಮ್ಯಾಲ ಸಂತೃಪ್ತಿ ಚಿಮ್ಮಿ ಗೌಡನ ಮುಖ ನೋಡಿದ. ಗೌಡ ಕಣ್ಣನಾಗೇ ನಕ್ಕ.

★ ★ ★

ಮಗ್ಗಲು ಬದಲಾಯಿಸಿದರೂ ಮನಸ್ಸಿನಾಗ ಮತ್ತದೇ ಲಾವಾರಸದ ಕುದಿತ. ಎದ್ದು ಕಾಲ್ಮಡಿ ಮಾಡಿ ಬಂದು ಹಾಸಗಿಗ ಒರಗಿ ಮುಗಲ ನೋಡ್ತಾನ. ಬ್ಯಾಸಗಿ ರಾತ್ರಿ ಚಂದ್ರಾಮನ ತಂಪಾನ ಬೆಳದಿಂಗಳದಾಗ ಹಾಯೆನಿಸಿದರೂ ಬೇಚೈನಾಗಿದ್ದ. ಚಂದ್ರಾಮ ಪಶ್ಚಿಮಕ ವಾಲಿದ್ದ. ಗುಬ್ಬಿ ಮಂಚಾ ಮುಳಗುವ ತೈಯ್ಯಾರಿ ನಡಸಿತ್ತು. ಉತ್ತರ ಚುಕ್ಕಿ ಮಿಣ ಮಿಣ ಮಿಣಕ್ತಿತ್ತು. ಈ ಚಂದ್ರಾಮ, ಚುಕ್ಕಿ, ಭೂಮಿ, ಬ್ರಹ್ಮಾಂಡದಾಗೆ ಹ್ಯಾಂಗ ತಮ್ಮಷ್ಟಕ ತಾವು ತಿರುಗತಿರತಾವ. ಒಂದರ ಗುಣ ಒಂದಕಿಲ್ಲ. ಅಮೇರಿಕಾದವರು ಚಂದ್ರಾಮನ ಮ್ಯಾಲ ಹೋಗಿ ಬಂದರು. ರಶಿಯಾ ಮಶಿನ ಬಿಟ್ಟಿತು. ಆದರs, ಈ ಮನಶಾರ ಮನಸ ಎಲ್ಲೆವಾ, ಅಲ್ಲೆ ಮಲತು ರಾಡಿ ಎಬಸ್ತಾವ.

ಗುಡಿ ಮುಂದಿನ ದೊಡ್ಡ ಪಡಸಾಲಿಗ ತಳದಿಂದ ಕಂಬದ ಪಾಯಾ ಹಾಕುವದು ಬ್ಯಾಡಂತನ ಶಿವಯ್ಯ. ಎಲ್ಲಾರಿಂದ ಹೇಳಿಸಿದರೂ ಬಗ್ಗವಲ್ಲಾಗ್ಯಾನ. ಹಿಂದಕ ನಾಲಿ ಗಟಾರ ಕಟ್ಟಿಸಿ ಹಾಳ ಮಾಡಿದ. ಗುಡ್ಡದ ಮ್ಯಾಲ ಏರಿ ಹೋಗ್ಲಾಕ ಸಿಡಿಕಟ್ಟಿ ಕಟ್ಟಾಮುಂದ ಐದುಗಜ ಮುಂದಕ ಇಟ್ಟಕಟ್ಟಿದರ ಮ್ಯಾಲ ಏರ್‌ಚಡ್ ಆಗುವದಿಲ್ಲ ಸಿಡಿಗಳು ಅಂದರೂ ಕೇಳಿಲ್ಲ. ಸಿಡಿಗೋಳು ಗುಡ್ಡದ ಎತ್ತರಿಗ ಬಂದಾಗ ಒಮ್ಮಿಗೆ ಏರ್‌ಚಡ ಆಗ್ಯಾವ. ನಾ ಹೇಳಿದರ, ಖರ್ಚ ಹೆಚ್ಚಿಗ ಬರತಾದ ಗೌಡ ಅಂತಾನ. ನನಗ ಚೇರಮನ್‌ಗಿರಿ ಖರ್ಚಿಯ ಅಂಜಿಕಿ ತೋರಸ್ತಾನ. ಇದರಿಂದ ಹ್ಯಾಂಗ್ ಮುಕ್ತಿ ಪಡಿಬೇಕು? ಇದರಾಗ ನನ್ನ ತಪ್ಪು ಹೆಚ್ಚಾಗಿದ್ದಾತು. ಹಿರೇರಲಿಂದ ಬಂದ ಗೌಡಕಿ ಗತ್ತಿನಾಗ ಇರಬೇಕೆಂಬಾ ಛಲ ಸ್ವಾಭಿಮಾನದ ಮಾತಾಗಿ ಅಂವಾ ಹೇಳಿಧಾಂಗ್ ಕುಣಿಗತಿನಿ. ಇದರಾಗ ಶಿವಯ್ಯಗ ನಾ ಮುಂದ ಮಾಡಿನೋ, ಇಲ್ಲ ಶಿವಯ್ಯ ನನಗ ಮುಂದ ಮಾಡ್ಯಾನೋ? ಅವನಿಗ ಮಠ ಉಳಿಬೇಕು. ನನಗ ಗೌಡಕಿ ಗತ್ತ ಉಳಿಬೇಕು.

ಹಿಂದಕ ಗೌಡಕಿ ಇತ್ತು. ಮುಂದ ಮಂಡಳ ಪಂಚಾಯ್ತಿ ಬಂತು. ನಡುವ ಇಂದ್ರಾಜಿ ತಂದ ಇಂಡಿಕೇಟ್ ಸಿಂಡಿಕೇಟ್ ಬಂದಾಗ ಊರಾಗ ಕಲಿತ ನಾಕು ಹರ್‍ಯಾದ ಹುಡುಗರೂ ರಾಜಕೀಯದ ಮಾತ ತಿಳಕೊಂಡಿದ್ದರೂ, ಮಸಲತ್ತ ಮಾಡಿ ಅವರಿಗೆಲ್ಲ ಸದಸ್ಯತ್ವ ಮಾಡಿದರೂ ಕಾರಭಾರ ನನ್ನ ಕೈಯ್ಯಾಗ ಇರಬೇಕಂತ ಈ ಶಿವಯ್ಯಗ ಎಬಸೀನಿ. ಈಗ ಎಲ್ಲಾದರಾಗನೂ ತನ್ನ ಬ್ಯಾಳಿ ಬೇಯಿಸ್ತಿದಾನ.

ಮುಗಲ ನೋಡ್ತಾ ಮನಸ್ಸಿನಾಗ ಕಲಸುವ ಒಪ್ಪು ತಪ್ಪುಗಳ ಚಂದ್ರಾಮನ ಮ್ಯಾಲಿದ್ದ ಕಪ್ಪ ಕಲೆಗಳ ಹಾಂಗ ಗೌಡನ ಮನಸ್ಸಿನಾಗ ಎಣಿಕಿ ಸುರೂ ಆಯ್ತು. ಚಂದ್ರಾಮ ಫಳಫಳಾಂತ ಹೊಳಿತಿದ್ರೂ ತನ್ನೊಳಗಿನ ಕಪ್ಪು ಕಲೆಗಳು ಮರೆ ಮಾಡ್ತಿದ್ದ ಹಾಗೆ ಗೌಡ ಎಷ್ಟೆ ಒಳ್ಳೆ ಕೆಲಸದ ಬೆನ್ನಿಗ ಬಿದ್ದರೂ ಗೌಡಕಿ ಉಳಿಸಿಕೊಳ್ಳುವ ಕರಿ ಮನಸ ಒಳಗೊಳಗೇ ಮುಚಗೊಂಡಿದ್ದ.

ಎದ್ದು ಗುಡ್ಡದ ಮ್ಯಾಲಿನ ಗುಡಿ ನೋಡುತ, ಅರ್ಧಕ ಕಟ್ಟಿದ ಗುಡಿ ಹಾಳು ಬಿಧಾಂಗ್ ಅನಿಸಿ, ಮೊನ್ನೆ ರೇಡಿಯೋದಾಗ ಕೇಳಿದ್ದು ಸುದ್ದಿ, ಮಸೀದಿ ಕೆಡವಿದ್ದು ಮನಸಿಗ ನಾಟಿತು. ಗುಡ್ಡದ ಪೊದೆ ಗಿಡಗಳ ನೆರಳೆಲ್ಲ ಕಪ್ಪು ಕಪ್ಪಾಗಿ ಚಂದ್ರನ ಬೆಳದಿಂಗಳಲ್ಲಿ ಕರಿ ಗುಡ್ಡೆಗಳಾಗಿ, ಅವು ತನ್ನೆಡೆಗೆ ಓಡಿ ಬಂದಂತಾಗಿ ಪುನಃ ಒರಗಿ ಕಣ್ಣು ಮುಚ್ಚಿದ.

ಮನಶಾರ ಮನಸ್ಸ ಎಷ್ಟು ವಿಚಿತ್ರ ಅವಾ. ಒಮ್ಮೆ ಕಟ್ಟತಾವ, ಒಮ್ಮಿ ಕೆಡವುತಾವ. ನಾ ಅಂತಾವ, ನಾವೆಲ್ಲರೂ ಅಂತಾವ. ಗುಡಿ-ಮಸೀದಿ-ಗುಡ್ಡಕ್ಕೇರುವ ಸಿಡಿಗಳು, ನಾವು ಏರುವಾಗಿನ ಏದುಸಿರು, ಕೆಳಗೆ ಬಂದಾಗ ಗಲ್ಲಿಯ ರೊಜ್ಜು.... ತಳಮಳ.... ತಳಮಳ....

ನಾ ಎಂಬುದು ಅಳಿಯಬೇಕು
ನನ್ನವರೆಂದು ತಿಳಿಯಬೇಕು.

ಗಾಂಧಿ ಮಹಾತ್ಮ ಜಗತ್ತನ್ನಾಳಿದ ಬ್ರಿಟೀಷರ ಬಂದೂಕಿನ ಕೊಳಾಯಿಯಲ್ಲಿ ಗುಬ್ಬಿ ಗೂಡ ಕಟ್ಟಿಸಿ ಸ್ವಾತಂತ್ರ್ಯ ತಂದ. ಎಂದನೂ ಖುರ್ಚಿಗ ಆಸೆ ಮಾಡಿಲ್ಲ. ನಾನೆಂಬುದು ಬಿಟ್ಟು ನನ್ನವರಂತ ಜಗತ್ತಿಗ ಅಪಗೊಂಡು ಶಾಂತಿಯ ದಾರಿ ತೋರಿದ.

ನಾನು ಯಾವಾಗ ನನ್ನವರೆಂದು ನಡದೀನಿ? ವೈಜಣ್ಣನ ಮಕ್ಕಳಿಗ, ಮಹಾಲಿಂಗರಾಯನ ಮಗನಿಗ?

ಯಾವಾಗನಾ ನಾನೆಂದೀನಿ? ಗೌಡಕಿ ಗತ್ತಿನಾಗ? ಸರಪಂಚಕಿ ಉಳಿಸಿಕೊಳ್ಳುವಾಗ? ಶಿವಯ್ಯಗ ಹೂಂ ಗುಟ್ಟಿದಾಗ? ತೊಗರಿ ರೊಕ್ಕ ಗುಡಿ ಕಟ್ಟಿಲು ಬಳಸಿ ರೈತರ ಬಾಯಿಗ ಮಣ್ಣ ಹಾಕಾಗ?

ಶಿವಯ್ಯ ಕಟ್ಟಿದ ನಾಲಿ ಒಡದು ಊರೆಲ್ಲರೊಜ್ಜಾಗ್ಯಾದ. ಗುಡ್ಡದ ಸಿಡಿಕಟ್ಟಿ ಏರ್‌ಚಡ್ ಆಗ್ಯಾವ. ಸಾಲಿ ಛತ್ತ ಸೋರಲಾತದ. ಇನ್ನ ಗುಡಿ ಪಡಸಾಲೆಯ ಪಾಯಾ ಕಚ್ಚಪಕ್ಕ ಮಾಡ್ಯಾನ. ಸ್ವಾರ್ಥದ ಕಲ್ಲಿನ ಕಟ್ಟಡ ಬಿದ್ದಾವ, ಕೆಡವ್ಯಾರು.

ಮನಸ್ಸಿನಿಂದ ಜೀವಕ ಜೀವ ಆಗುವ ಆಶ್ರಯಗಳೆಲ್ಲ ಜೀವ ತುಂಬಿಕೊಂಡಾವ. ವೈಜಣ್ಣನ ಮಕ್ಕಳು, ಮಹಾಲಿಂಗಪ್ಪನ ಮಗ.

ಬಂಗ್ಲಾ ದೇಶಕ ಅನ್ನ ನೀರು ಕೊಟ್ಟು ಜೀವ ಉಳಿಸಿದ ದೇಶ, ಗಾಂಧಿ ಮಹಾತ್ಮನ ದೇಶದಾಗ ನಾನೆಂಬ ನಾನು ಸರಪಂಚಕಿಗ ಜೋತ ಬಿದ್ದು ಎಲ್ಲಾನೂ ಕೆಡವುತಾ ಹೊಂಟಿನಿ.

ಸಿಕ್ತು.... ಸಿಕ್ತು.... ವಚನ ಸಿಕ್ತು.
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.
ಏಟ ಛಂದ ಹೇಳ್ಯಾನ ಬಸವಣ್ಣ.
ಕಣ್ಣು ತುಂಬಿದ ನೀರ ಒರೆಸಿಕೊಂಡ.

★ ★ ★

ಮೂಡಲದಾಗ ಕೆಂಪರಾಶಿ ಒಡದು, ಸೂರ್ಯ ಕೆಂಪನ ಮೈಯಿಲೆ ಭೂಮಿ ತಾಯಿ ಹೊಟ್ಯಾಂದು ಎದ್ದು, ತನ್ನೆಡೆಗೆ ಬರುವ ಬಸವಂತ್ರಾಯ ಗೌಡನ ಕಣ್ಣಾಗ ತನ್ನ ಮುಖ ನೋಡುತ ತಂಪನೆ ಗಾಳಿಗ ಇಬ್ಬರೂ ನಗನಗತಾ ಇದ್ದಾಗ, ಬಸವಂತ್ರಾಯ ಕೆಂಪ ಬಸ್ಸಿನ ಸೀಟಿಗ ಕುಂತು-ಮೊದಲ ಊರಿಗ ಹೈಸ್ಕೂಲ ಮಂಜೂರಿ ಮಾಡಿಸಬೇಕು. ದೊಡ್ಡ ಇಂಜನಿಯರ ಪ್ಲಾನ ಹಾಕಿಸಿ ಕಟ್ಟಿಸಬೇಕು. ಊರ ಜನರಿಗ ದವಾಖಾನಿ ಇಲ್ಲ. ಬಾಣಂತಿ ಹೆಣ್ಮಕ್ಕಳಿಗ ಜೀವ ಉಳಸಾಕ ದಾಯಮ್ಮ ಬೇಕು. ಗುರಲಿಂಗವ್ವ ಹೇಳಿಧಾಂಗ್ ರಸ್ತೆ ದುರಸ್ತಿ ಮಾಡಿಸಬೇಕು. ಶಿವಯ್ಯ ಎದರಾದರ ಚೇರಮನ್‌ಗಿರಿಗ ರಾಜಿನಾಮೆ ಕೊಟ್ಟು, ಊರಿಗ ದುಡಿಬೇಕು. ಜೀವಕ ಜೀವಾಗಾ ಯೋಜನೆಗಳ ಅರ್ಜಿಗಳು ಕೈಯ್ಯಾಗ ಹಿಡಕೊಂಡು ತಾಲೂಕಾದ ಕಚೇರಿಗ ಹೋಗ್ಲಾಕ ಮುಂಜಾನೆಯ ತಂಪನೆಯ ಬೆಳಗುವ ಸೂರ್ಯನ ಬೆಳಕಲ್ಲಿ ಟಿಕೆಟ್ ತೆಗಿತಾನ. ಮನಸ್ಸ ನಿರಮ್ಮಳಾಗಿ ಜೀವ ಪುಟಿಗತಿರತಾದ. ■

ದೀಪಾವಳಿಯ ಹಾರ್ದಿಕ
ಶುಭಾಶಯಗಳೊಂದಿಗೆ



# ಅಲ್ಲಮಪ್ರಭು ಕೈಗಾರಿಕಾ ತರಬೇತಿ ಕೇಂದ್ರ




ಐ.ಟಿ.ಸಿ.
ಚಿಕ್ಕೋಡಿ - 591201
ಜಿ: ಬೆಳಗಾವಿ

ಶ್ರೀ ಚಿಂಚಣಿಸಿದ್ಧ ಸಂಸ್ಥಾನ ಮಠದ ಅಲ್ಲಮಪ್ರಭು ಜನ ಕಲ್ಯಾಣ ಸಂಸ್ಥೆ-ಈ ಸಾಮಾಜಿಕ ಸಂಸ್ಥೆಯಿಂದ ಬೆಳಗಾವಿ ಜಿಲ್ಲಾ ಚಿಕ್ಕೋಡಿಯಲ್ಲಿ ನಡೆಯುತ್ತಿರುವ ಅಲ್ಲಮಪ್ರಭು ಕೈಗಾರಿಕಾ ತರಬೇತಿ ಕೇಂದ್ರದಲ್ಲಿ ಈ ಕೆಳಗಿನ ವೃತ್ತಿಗಳಲ್ಲಿ ತರಬೇತಿ ನೀಡಲಾಗುವುದು.

| ಅ.ನಂ. | ವೃತ್ತಿ | ತರಬೇತಿ ಅವಧಿ | ಪ್ರವೇಶಕ್ಕೆ ವಿದ್ಯಾರ್ಹತೆ |
|---|---|---|---|
| 1. | ಇಲೆಕ್ಟ್ರಿಷಿಯನ್ | ಎರಡು ವರ್ಷ | ಎಸ್.ಎಸ್.ಎಲ್.ಸಿ. |
| 2. | ಫಿಟ್ಟರ್ | ಎರಡು ವರ್ಷ | ಎಸ್.ಎಸ್.ಎಲ್.ಸಿ. |

ಪ್ರಾಚಾರ್ಯರು
ಅಲ್ಲಮಪ್ರಭು ಐ.ಟಿ.ಸಿ
ಚಿಕ್ಕೋಡಿ

*With best compliments from*



# Shivakrupa Industries

Ankale Road
SANKESHWAR - 591 313



**Manufactures of :**

'PAN BRAND'
Best Groundnut Seeds,
Double Filtered Best
Groundnut Oil &
Groundnut Oil Cake



**Shrikant B. Hatanuri**
*President,*
*Town Muncipal Council,*
*Sankeshwar*

**Phone :**
Off : 73505/73070
Resi : 73370/73177



**Sri Shrikant B. Hatanuri**
*President, Vice President*
*& Members*

ದೀಪಾವಳಿಯ ಹಾರ್ದಿಕ
ಶುಭಾಶಯಗಳೊಂದಿಗೆ

# ತುಂಗಭದ್ರ ರೈತರ ಸಹಕಾರಿ ನೂಲಿನ ಗಿರಣಿ ನಿಯಮಿತ,

ರಾಣೇಬೆನ್ನೂರ
(ಕಮದೋಡ) 581115
ಜಿಲ್ಲಾ : ಹಾವೇರಿ ಕರ್ನಾಟಕ ರಾಜ್ಯ



# TUNGABHADRA FARMERS CO-OP SPINNING MILL LIMITED

**RANEBENNUR**
**(KAMADOD) 581 115**
Dist.: Haveri State : Karnataka

**Phone**

| | | |
|---|---|---|
| Office | : | 66694 |
| M.D. Office | : | 66567 |
| M.D. Resi | : | 66386 |
| Chairman Resi | : | 66387 |

Grams : TUNGA SPIN
Fax No. 08373-66386
Post Box No. 55

Reg No. JRBG/7613/10-4-81
KST : 4011257-3
CST : 4016257-6

**V.S. Karjagi**
Chairman

**S.O. Patil**
M.D.

# 'ಪ್ರಮಾಥಿ'ಯ ಪ್ರಾರಬ್ಧ

ಹಬ್ಬಕ್ಕೆ ಎಣ್ಣೆ ಹಚ್ಚಿ ಎರೆದಂತೆ
ಚಿಗುರಿ ಮಿರಿಮಿರಿ ಮಿಂಚುವ
ಅಶೋಕ ವೃಕ್ಷದ ನೆತ್ತಿಯಲ್ಲಿ
ಕುಳಿತ ಬಣ್ಣದ ಹಕ್ಕಿ -
ಗುಡಿ ಪಾಡ್ಯದ ಗಿಂಡಿ:
ಸೃಷ್ಟಿಗೂ ದೃಷ್ಟಿಗೂ ನಡುವೆ ಸಮದಂಡಿ.






■ ಚೆನ್ನವೀರ ಕಣವಿ

ಉದುರಿದೆಲೆಗಳ ರಾಶಿ
ಘಾಸಿಯಾಗದ ಹಾಗೆ ಗುಡಿಸಿ ಗುಂಪಿ ಮಾಡಿದೆ.
ಯಾಕೊ, ಬೆಂಕಿ ಹಚ್ಚಲು ಮನಸ್ಸಾಗಲಿಲ್ಲ:
ಮೊನ್ನೆ ಮೊನ್ನೆ ಕೊಳಚೆ-ಕೊಂಪೆಗೆ ಬೆಂಕಿಬಿದ್ದು
ಸುಟ್ಟು ಕರಕಾದ ದೇಹಗಳೇ ಇನ್ನೂ ಕಣ್ಣಮುಂದೆ.

ಕಂಪೌಂಡು ಗೋಡೆಯ ಮೇಲೆ ನಿರ್ಭಯವಾಗಿ ಓಡಾಡಿ
ಬಾಲವೆತ್ತಿ, ಸರಸರ ತೆಂಗಿನ ಮರವೇರಿ
'ಚೀಂಕ್... ಚೀಂಕ್' ಎಂದು ತನ್ನ ಸ್ವಾತಂತ್ರ್ಯವನ್ನು
ಸಾರಿ ಹೇಳಿತು ಅಳಿಲು.
ಅದಕ್ಕೆ ಬಿದ್ದಂತಿಲ್ಲ ಇನ್ನೂ ಭಯೋತ್ಪಾದಕರ ನೆರಳು.
ಎಳನೀರಿನೊಳಗೆ ಬಲಿಯತೊಡಗಿದೆ ತೆಂಗಿನ ತಿಳಲು.

ಮಾವಿನ ಮರದಲ್ಲಿ ತೂಗಾಡುತ್ತಿದ್ದ ಗೊಂಚಲಿನಿಂದ
ಒಂದೇ ಒಂದು ಕಾಯಿಹರಿದು ಚಟ್ಟನೆಂದು ಇವಳಿಗೆ ಕೊಟ್ಟೆ,
ತಟ್ಟನೆ ಯಾವುದೋ ಮೂಲೆಯಿಂದ ಕೋಗಿಲೆಯೊಂದು ಕೂಗಿ
ಬೇರೊಂದು ಮರಕ್ಕೆ ಹಾರಿ ಹಾರಿಹೋಯ್ತು.

2

ತಲೆಬಾಗಿಲ ತೋರಣ ಸ್ವಾಗತ ಬಯಸುತ್ತಿದೆ:
ಪ್ರಮಾಥಿ, ಪ್ರಮಾದ, ಪ್ರವಾದಿ
ಸಂವತ್ಸರಕ್ಕೆ ಯಾವ ಹೆಸರಾದರೇನು,
ಮತ್ಸರವಿರದಿದ್ದರೆ ಆಯಿತು.
ಮಲ್ಲಿಗೆಯ ಕಂಪಿನಂತೆ ಬೇವಿನಹೂವಿಗೂ
ತನ್ನದೇ ಆದ ಸೊಗಡು.
ಮಧುಮಾಲತಿಯ ಮೈತುಂಬ ಹೂವಿನ ಗೊಂಚಲೇ ಗೊಂಚಲು
ನಸುಕಿನಲ್ಲಿಯೇ ಎದ್ದು ಸಿದ್ಧವಾಗಿದೆ ಪರಿಮಳ ಹಂಚಲು.

ನಳದಲ್ಲಿ ನೀರು ಬಂದಾಗ, ನೀರು ತುಂಬುವ ಹಬ್ಬ
ಲೈಟು ಬಂದಾಗ, ದೀಪಾವಳಿ.
ಇದಕ್ಕೆ ಬೇರೇನಾದರೂ ಉಪಾಯವಿದ್ದರೆ ನೀವೇ ಹೇಳಿ.
ಹೋಗಲಿ ಬಿಡಿ, ಇಲ್ಲಿ ನೋಡಿ -
ಹೇಗೆ ಬದುಕುತ್ತಿವೆಯೊ ಈ ಹಂದಿಗಳ ಹಿಂಡು!
ನಗರ ಸಭೆಯ ಕೃಪೆ: ಕಸದ ತೊಟ್ಟಿ ತುಂಬಿ
ಹಾರಾಡುತ್ತಿವೆ ಪ್ಲಾಸ್ಟಿಕ್ ಚೀಲಗಳ ದಂಡು.
ಇದನ್ನು ಕಂಡೂ ಕಂಡೂ ನಾವೂ ಸುಮ್ಮನಿದ್ದೇವೆ,
ಯಾಕೆಂದರೆ
ಇದರಲ್ಲಿ ನಮ್ಮದೂ ಇದೆ ಅರ್ಧಪಾಲು.

3

ಯುಗಾದಿಯ ಶುಭಾಶಯ ಕೋರುತ್ತ
ಆಗಲೇ ಸುರುವಾಯ್ತು ಬಿಸಿಲಿನ ಝಳ,
ಆಕಾಶದಲ್ಲಿ ಮೋಡದ ಸುಳಿವಿಲ್ಲ,
ಗಾಳಿಯ ಕೈಯಲ್ಲಿ ಬೀಸಣಿಕೆಯಿಲ್ಲ.
ಇವತ್ತೊಂದು ದಿನವಾದರೂ ನಾನು
ಖಂಡಿತ ದಿನಪತ್ರಿಕೆ ತೆರೆಯುವದಿಲ್ಲ.
ಬನ್ನಿ, ಒಳಗೆ ಕರೆಯುತ್ತಿದ್ದಾರೆ,
ನಿಮಗೇನು, ಚಹ?
ಅಥವಾ ಕೇವಲ ಬೇವು-ಬೆಲ್ಲ?

ನನ್ನ ರಂಗಾನುಭವಗಳನ್ನು ಬರೆಯಲು 'ಬಿಸಿಲ ಬದುಕು' ಪತ್ರಿಕೆಯವರು ಕೇಳಿರುವ ಈ ಹೊತ್ತಿನಲ್ಲಿ, ವೈಯಕ್ತಿಕ ಜೀವನ-ರಾಜಕೀಯ ಬದ್ಧತೆ (ಅದಿದ್ದರೆ) ಮತ್ತು ರಂಗಭೂಮಿ ಇವುಗಳಿಗಿರುವ ಗಾಢಸಂಬಂಧವೇ ನಿರ್ಣಾಯಕವಾದದ್ದು ಎಂದು ನನಗನ್ನಿಸುತ್ತಿದೆ. ಇಲ್ಲೇ ಮತ್ತೊಂದು ವಿಚಾರ ಹೇಳಬೇಕೆನ್ನಿಸುತ್ತಿದೆ. ಮಹಿಳೆಯರು ತಮ್ಮ ವೈಯಕ್ತಿಕ ಜೀವನಕ್ಕೂ ತಮ್ಮ ಅಭಿವ್ಯಕ್ತಿ ಮಾಧ್ಯಮಕ್ಕೂ ಕಲ್ಪಿಸಿಕೊಳ್ಳುವಂತಹ ನಿಷ್ಠುರ ಸಂಬಂಧವನ್ನು, ಪುರುಷರಲ್ಲಿ ಕಾಣುವುದು ಅಪರೂಪ. ರಂಗಭೂಮಿಯಲ್ಲಿ ನಾನು ಬಹಳ ಹತ್ತಿರದಿಂದ ನೋಡಿದ ಹಲವು ನಿರ್ದೇಶಕರು ಹಿಪೋಕ್ರೆಟ್‌ಗಳಾಗಿರುವುದು ನನ್ನ ಗಮನಕ್ಕೆ ಬಂದಿದೆ. ಹೆಣ್ಣಿನ ಸಮಾನತೆಯ ಬಗ್ಗೆ ನಾಟಕಗಳಲ್ಲಿ ಬಿಂಬಿಸುತ್ತ, ಭಾಷಣಗಳನ್ನು ಮಾಡುತ್ತ ಹೆಂಡತಿಯನ್ನು ಹೊಡೆಯುವ ರಂಗನಿರ್ದೇಶಕರನ್ನು ನಾನು ಬಹಳ ಹತ್ತಿರದಿಂದಲೇ ನೋಡಿದ್ದೇನೆ. ಹಾಗೆಯೇ ಮಾನವೀಯತೆಯ ಬಗ್ಗೆ ನಾಟಕಗಳಲ್ಲಿ ಮಾತನಾಡುತ್ತ ಹೆಣ್ಣನ್ನು ಸುಡುವ ರಂಗನಿರ್ದೇಶಕರೂ ನಮ್ಮಲ್ಲಿದ್ದಾರೆ. ಇವರೆಲ್ಲ ಹೆಸರಾಂತ ನಿರ್ದೇಶಕರು ಎಂಬುದಕ್ಕಾಗಿ ಅವರನ್ನು ಪ್ರಸ್ತಾಪಿಸದೆ ಗತ್ಯಂತರವಿಲ್ಲ. ಆದರೆ, ನನಗೆ ಯಾಂತ್ರಿಕ ಜೀವನಕ್ಕೊಂದು ಪರ್ಯಾಯ ಬೇಕು ಎನ್ನಿಸಿದಾಗ ರಂಗಭೂಮಿ ಆಪ್ತವಾಯಿತು; ಆನಂತರ ಬದುಕಿನ ಅಭಿವ್ಯಕ್ತಿ ರಂಗಭೂಮಿಯೋ ಅಥವಾ ರಂಗಭೂಮಿಯಿಂದಲೇ ನನ್ನ ಬದುಕು ರೂಪುಗೊಳ್ಳುತ್ತಿದೆಯೋ ಎಂಬಷ್ಟರ ಮಟ್ಟಿಗೆ ಎರಡೂ ಬೆಸೆದುಕೊಂಡವು. ನಾನು ನಟಿಸಿದ, ಬರೆದ, ನಿರ್ದೇಶಿಸಿದ ನಾಟಕಗಳೆಲ್ಲ ಈ ಪ್ರಕ್ರಿಯೆ ದಾಖಲೆಯಾಗಬಹುದು, ಅಷ್ಟೆ.

# ಒಂಟಿ ಹೆಂಗಸನ್ನು ಬಾಳಲು ಬಿಡದ ಗಂಡಸರು !

**"ನಾನು ಬಹಳ ಹತ್ತಿರದಿಂದ ನೋಡಿದ ಹಲವು ನಿರ್ದೇಶಕರು ಹಿಪೋಕ್ರೆಟ್‌ಗಳಾಗಿರುವುದು ನನ್ನ ಗಮನಕ್ಕೆ ಬಂದಿದೆ. ಹೆಣ್ಣಿನ ಸಮಾನತೆಯ ಬಗ್ಗೆ ನಾಟಕಗಳಲ್ಲಿ ಬಿಂಬಿಸುತ್ತ, ಭಾಷಣಗಳನ್ನು ಮಾಡುತ್ತ ಹೆಂಡತಿಯನ್ನು ಹೊಡೆಯುವ ರಂಗನಿರ್ದೇಶಕರನ್ನು ನಾನು ಬಹಳ ಹತ್ತಿರದಿಂದಲೇ ನೋಡಿದ್ದೇನೆ. ಹಾಗೆಯೇ ಮಾನವೀಯತೆಯ ಬಗ್ಗೆ ನಾಟಕಗಳಲ್ಲಿ ಮಾತನಾಡುತ್ತ ಹೆಣ್ಣನ್ನು ಸುಡುವ ರಂಗನಿರ್ದೇಶಕರೂ ನಮ್ಮಲ್ಲಿದ್ದಾರೆ"**



ಬಾಲ್ಯದಲ್ಲಿ ನಾಟಕಗಳಲ್ಲಿ ಅಭಿನಯಿಸಿದ್ದು ನನ್ನಿಚ್ಛೆಯಿಂದೇನೂ ಅಲ್ಲ. 2-3ನೆಯ ತರಗತಿಯಲ್ಲಿರುವಾಗಲೇ ನನ್ನ ಟೀಚರ್‌ಗಳು ನನ್ನಿಂದ ಹರಿಶ್ಚಂದ್ರ-ಕಿಸಾಗೌತಮಿ ಮುಂತಾದ ನಾಟಕಗಳಲ್ಲಿ ಮುಖ್ಯ ಪಾತ್ರಗಳನ್ನು ವಹಿಸುವಂತೆ ತರಬೇತಿ ಕೊಟ್ಟರು. ಆನಂತರ, ಕಾಲೇಜಿನ ನಾಟಕಗಳಲ್ಲಿ ಅಭಿನಯಿಸುತ್ತೇನೆಂದಾಗ ತಂದೆಯವರ ವಿರೋಧ ಬಂತು. ಗುಟ್ಟಾಗಿ ರಿಹರ್ಸಲ್‌ಗಳಿಗೆ ಹೋಗುತ್ತಿದ್ದೆ. ನನ್ನ ಅಭಿನಯಕ್ಕೆ ಬಹುಮಾನ ಬಂದಾಗ ಇಡೀ ಊರಿಗೇ ಗೊತ್ತಾಗಿತ್ತು. ತಂದೆಯವರೂ ಸುಮ್ಮನಿದ್ದರು.

ನಂತರ ಅಭಿಯಿಸಿದ್ದು ಪಿಎಚ್‌ಡಿ ಮಾಡಲು ಮೈಸೂರಿನ ಮಾನಸ ಗಂಗೋತ್ರಿಗೆ ಬಂದಾಗ. ಮೈಸೂರಿನ 'ಸಮತೆಂತೋ' ತಂಡದ ನಾಟಕಗಳಲ್ಲಿ ಅಭಿನಯಿಸಿದೆ. ಒಂದು ರಂಗತರಬೇತಿ ಶಿಬಿರದಲ್ಲೂ ಪಾಲ್ಗೊಂಡಿದ್ದೆ. ಆದರೆ, ಆಗ ತಾನೇ ಮಾರ್ಕ್ಸವಾದದ ಕಡೆ ಒಲಿಯುತ್ತಿದ್ದ ನನಗೆ ಸಮುದಾಯ ತಂಡದಲ್ಲಿ ಆಸಕ್ತಿ ಮೂಡಿತು. ಮೈಸೂರಿನಲ್ಲಿ ಬ್ರೆಕ್ಟ್‌ನ 'ತಾಯಿ' ನಾಟಕದಲ್ಲಿ ಅಭಿನಯಿಸಿದೆ. ಅಲ್ಲಿಯೇ ರಂಗ ನಿರ್ದೇಶಕ ಪ್ರಸನ್ನರ ಪರಿಚಯವಾಗಿ, ಮನೆಯವರ ವಿರೋಧವಿದ್ದರೂ ಅವರನ್ನು ಮದುವೆಯಾದೆ. ಬೆಂಗಳೂರಿಗೆ ಬಂದೆ. ಆನಂತರದ 3 ವರ್ಷ ಬೆಳಗ್ಗಿನಿಂದ ರಾತ್ರಿಯವರೆಗೂ ಸಮುದಾಯದ ಕೆಲಸ. ನಾಟಕಗಳಲ್ಲಿ ಅಭಿನಯ, ವಸ್ತ್ರವಿನ್ಯಾಸ, ಸಂಘಟನೆ, ರಂಗನಿರ್ವಹಣೆ ಮುಂತಾದುವಲ್ಲದೆ, ಸಮುದಾಯದ ಸಾಂಸ್ಕೃತಿಕ ಪತ್ರಿಕೆಗೂ ಸಂಪಾದಕಿಯಾಗಿ ಕೆಲಸ ಮಾಡಿದೆ. ಜೊತೆ ಜೊತೆಗೆ ಸಂಸಾರ ನಿರ್ವಹಣೆಗಾಗಿ ಕೆಲಕಾಲ ಆರ್.ವಿ.ಟೀಚರ್ಸ್ ಕಾಲೇಜಿನಲ್ಲಿ ಅಧ್ಯಾಪಕಿಯ ಕೆಲಸ, ಇಂಡಿಯನ್ ಇನ್‌ಸ್ಟಿಟ್ಯೂಟ್‌ನಲ್ಲಿ ಸಂಶೋಧಕಿಯ ಕೆಲಸ ಇತ್ಯಾದಿ. ಇಲ್ಲಿ ಹೇಳಲೇಬೇಕಾದ ಬಹಳ ಮುಖ್ಯ ವಿಷಯವೆಂದರೆ, ನಾನು ಸಿ.ಪಿ.ಎಂ. ಪಕ್ಷದ ಮಹಿಳಾ ಸಂಘಟನೆಗಾಗಿ ದುಡಿದದ್ದು. ಊರೂರು ಸುತ್ತಿದೆ.... ತಲೆತುಂಬ ಮಹಿಳೆಯರ ಹೀನಸ್ಥಿತಿಗಾಗಿ ಏನಾದರೂ ಮಾಡಲೇಬೇಕೆಂಬ ತವಕ.

ಇದೆಲ್ಲದರ ಮಧ್ಯೆ, ಮದುವೆಯಾಗಿ 3 ವರ್ಷ ಕಳೆದಿತ್ತು. ಗಂಡನ ಶಠತ್ವ ಬೇಸರ ಬರಿಸಿತ್ತು. ಮುಂಜಾನೆ ಶುರುವಾಗುವ ಚಾಕರಿ ರಾತ್ರಿ ಹನ್ನೆರಡಕ್ಕೂ ಮುಗಿಯುತ್ತಿರಲಿಲ್ಲ. ಆದರೆ, ವೈವಾಹಿಕ ಜೀವನ ಬೇಸರವೆನ್ನಿಸಿತ್ತು. ಈ ಸಮಯದಲ್ಲೇ ನಾನು ರಂಗಭೂಮಿಯನ್ನು ವೃತ್ತಿಯಾಗಿ ಸ್ವೀಕರಿಸಬೇಕೆಂಬ ನಿರ್ಧಾರ ಮಾಡಿ, ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಗೆ ಹೋದದ್ದು. ಆದರೆ, ಗಂಟುಬಿದ್ದ ಶನಿ, ದೆಹಲಿಗೂ ಬಂದು ಮನೆ ಮಾಡಿತು. ಆಗಿನ ಕಿರುಕುಳಗಳನ್ನು ನೆನೆಸಿಕೊಂಡರೆ, ಏಕಾದರೂ ಸಹಿಸಿದೆನೋ ಎಂದು ಈಗ ಅನ್ನಿಸುತ್ತದೆ. ಅಂದೇ ಅವನ ಕಪಾಳಕ್ಕೆರಡು ಬಾರಿಸಿ ಹೊರಬಂದಿದ್ದರೆ,

**ಆಗಿನ ಕಿರುಕುಳಗಳನ್ನು ನೆನೆಸಿಕೊಂಡರೆ, ಏಕಾದರೂ ಸಹಿಸಿದೆನೋ ಎಂದು ಈಗ ಅನ್ನಿಸುತ್ತದೆ. ಅಂದೇ ಅವನ ಕಪಾಳಕ್ಕೆರಡು ಬಾರಿಸಿ ಹೊರಬಂದಿದ್ದರೆ, ಜೀವನದಲ್ಲಿ ಒಂದೆರಡು ವರ್ಷ ಉಳಿಕೆಯಾಗುತ್ತಿತ್ತು.**



‘ಎ ಡಾಲ್ಸ್ ಹೌಸ್’ ನಾಟಕದ ರೂಪಾಂತರ ‘ವಾಸಂತಿ’ಯಲ್ಲಿ ಎಸ್.ಮಾಲತಿ ಮತ್ತು ಎಂ.ಸಿ.ಆನಂದ್ (ನಿರ್ದೇಶನ - ಎಸ್.ಮಾಲತಿ)

ಜೀವನದಲ್ಲಿ ಒಂದೆರಡು ವರ್ಷ ಉಳಿಕೆಯಾಗುತ್ತಿತ್ತು. ಆದರೆ ಹಾಗಾಗಲಿಲ್ಲ. ನನ್ನ ಗಂಡನನ್ನು ಹತ್ತಿರದಿಂದ ನೋಡಿದ ಹಲವು ಸ್ನೇಹಿತರಷ್ಟೇ ಅಲ್ಲ, ಅವನನ್ನು ಕರೆಸಿ ಅವನೊಂದಿಗೆ ಮಾತನಾಡಿದ ಇ.ಎಂ.ಎಸ್ ಕೂಡ ‘ವಿಚ್ಛೇದನ ಮಾಡಿಕೊ’ ಎಂದು ನನಗೆ ಸಲಹೆ ಕೊಟ್ಟಿದ್ದರು. ನಾನು ಗೊಂದಲದಲ್ಲಿದ್ದೆ. ಎನ್.ಎಸ್.ಡಿಯಿಂದ ನಿರ್ದೇಶನದಲ್ಲಿ ಡಿಪ್ಲೊಮಾ ಪಡೆದು ಬೆಂಗಳೂರಿಗೆ ಬಂದು ಮತ್ತೆ ಕ್ರಿಯಾಶೀಲಳಾಗಬೇಕೆಂಬ ಹಂಬಲವಿತ್ತು ನನ್ನಲ್ಲಿ. ಆದರೆ ಹಾಗಾಗಲಿಲ್ಲ..... ನನ್ನ ನಿರ್ದೇಶನದ ಮೊದಲ ನಾಟಕದ ರಿಹರ್ಸಲ್ ಬೆಂಗಳೂರಿನಲ್ಲಿ ಆರಂಭವಾಗುತ್ತಿದ್ದಂತೆ, ಗಂಡನ ಹಿಂಸೆ ಹೆಚ್ಚಾಗುತ್ತ ಹೋಯಿತು. ಹೊಡೆವ ಮಟ್ಟಕ್ಕೂ ಹೋಯಿತು.

**ಕೆಲವರು ಮದುವೆ ಮಾಡಿಕೊಳ್ಳಲು ಮುಂದೆ ಬಂದರೂ, ಯಾರನ್ನೂ ಮನಸ್ಸು ಒಪ್ಪುತ್ತಿರಲಿಲ್ಲ. ಇಂತಹ ಹೊತ್ತಿನಲ್ಲಿ ವಿವಾಹಿತ ವೃದ್ಧರೊಬ್ಬರ ಜೊತೆಗೆ ಸ್ನೇಹವಾಯಿತು. ಆ ಮನುಷ್ಯ ಬರೀ ಸ್ನೇಹಿತನಾಗಿಯೇ ಉಳಿಯಲಿಲ್ಲ. ತೀರ ಹತ್ತಿರಕ್ಕೆ ಬರುವ ಇಂಗಿತ ವ್ಯಕ್ತಪಡಿಸಿದ. ನಾನು ಸೋತೆ.**

ಅತೀವ ಹಿಂಸೆಯಲ್ಲೇ ಎರಡು ವರ್ಷ ಕಳೆದೆ. ಆನಂತರ ನಾನು ಮದುವೆಯಾದವನಲ್ಲಿ ಸ್ವಾರ್ಥ, ವಿಕೃತಿ ಬಿಟ್ಟು, ಪ್ರೀತಿ-ಬದ್ಧತೆ ಯಾವುದೂ ಇಲ್ಲ ಎಂಬುದು ಸಂಪೂರ್ಣ ಅರಿವಿಗೆ ಬಂದಾಗ, ಅವನ ಮನೆ ಬಿಟ್ಟು ಹೊರಗೆ ಬಂದೆ. ಆ ಹೊತ್ತಿನಲ್ಲಿ ಆದರ್ಶ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಕೆಲಸಕ್ಕೆ ಸೇರಿ ಒಂದು ವರ್ಷವಾಗಿತ್ತು. ಆ ಹೊತ್ತಿನಲ್ಲಿ ಗೆಳತಿಯರು ಸಹಾಯ ಮಾಡಿದರು. ನನಗೊಂದು ಮನೆ ಸಿಗುವವರೆಗೂ ಆಸರೆ ಕೊಟ್ಟರು. ಆ ಹೊತ್ತಿನಲ್ಲಿ ನನ್ನ ಗಂಡನಾಗಿದ್ದವನಷ್ಟೇ ಅಲ್ಲ, ಅವನ ಇಡೀ ಕುಟುಂಬ ಒಂದಾಗಿ ನನಗೆ ಆಸರೆಗಳನ್ನು ತಪ್ಪಿಸಿ ಬೀದಿಯಲ್ಲಿ ನಿಲ್ಲಿಸಬೇಕೆಂದು ಶತಪ್ರಯತ್ನ ಮಾಡಿತು. ನಾನು ಮತ್ತೆ ಅವನ ಮನೆಗೆ ಹಿಂತಿರುಗಲಿಲ್ಲ. ಆನಂತರ ವಿಚ್ಛೇದನ ಪಡೆದೆ.

ಈ ಹೊತ್ತಿನಲ್ಲಿ, ಬೆಂಗಳೂರಿನ ಸ್ಪಂದನ ತಂಡಕ್ಕಾಗಿ ‘ಮೀಡಿಯಾ’, ಸಮುದಾಯಕ್ಕಾಗಿ ಇಬ್ಸೆನ್‌ನ ‘ಎ ಡಾಲ್ಸ್ ಹೌಸ್’ ನಾಟಕದ ರೂಪಾಂತರ ‘ವಾಸಂತಿ’, ‘ಕೆರೆಗೆ ಹಾರ’ - ಮುಂತಾದ ನಾಟಕಗಳನ್ನು ನಿರ್ದೇಶಿಸಿದೆ. ಈ ಎಲ್ಲ ನಾಟಕಗಳೂ ಹೆಣ್ಣಿನ ಮನಸ್ಸಿನ ವಿವಿಧ ಸ್ಥಿತ್ಯಂತರಗಳನ್ನು ಅಭಿವ್ಯಕ್ತಿಸುವಂತಹವೇ ಆಗಿದ್ದವು. ಆನಂತರ, ಕಾಡುಕುದುರೆ, ತಾಯಿ, ಜನತೆಯ ಶತ್ರು, ಯಕ್ಷನಗರಿ, ದಫನ್, ಈಶ್ವರ ಅಲ್ಲಾ, ಸಿರಿಸಂಪಿಗೆ, ಮಾಧವಿ, ಮೂಡೂರಿನ ಪ್ರಸಂಗ. ಹ್ಯಾಮ್ಲೆಟ್, ರೂಪಾಂತರ ಮತ್ತು ಕೆಲವು ಮಕ್ಕಳ ನಾಟಕಗಳನ್ನು ವಿವಿಧ ತಂಡಗಳಿಗೆ, ವಿವಿಧ ಊರುಗಳಲ್ಲಿ ನಿರ್ದೇಶಿಸಿದೆ.

ವಿಚ್ಛೇದನದ ನಂತರ, ವೈವಾಹಿಕ ಜೀವನದ ಹೊತ್ತಿನಲ್ಲಿ ಇಬ್ಬರಿಗೂ ಸ್ನೇಹಿತರಾಗಿದ್ದ ಹಲವರು ನನ್ನನ್ನು ಕುತೂಹಲದಿಂದ ನೋಡಿದರೇ ಹೊರತು, ಸಮಾಧಾನದ ಮಾತುಗಳನ್ನಾಡಲಿಲ್ಲ. ನಾನು ನನ್ನ ನೋವಿನಲ್ಲೇ ಇದ್ದೆ. ಇಂತಹ ಹೊತ್ತಿನಲ್ಲಿ ದೂರದರ್ಶನದಲ್ಲಿ ನಾನು ಮಾಡಿದ ಮೀಡಿಯಾ ಪಾತ್ರವನ್ನು ಮೆಚ್ಚಿ ರಾಜಕುಮಾರ್ ಅವರು, ತಮ್ಮದೊಂದು ಚಿತ್ರದಲ್ಲಿ ಅಭಿನಯಿಸಬೇಕೆಂದು ಕೇಳಿದರು. ವಾಣಿಜ್ಯ ಚಿತ್ರಗಳಲ್ಲಿ ಅಭಿನಯಿಸಬಾರದೆಂಬ ಅಭಿಪ್ರಾಯವಿದ್ದವಳಿಗೆ ‘ನಟಿಸೋಣ’ ಎಂಬ ಆಸೆಯಾಯಿತು. ನಟಿಸಿದೆ. ಆನಂತರ ಕನ್ನಡದ 10-15 ಚಲನ ಚಿತ್ರಗಳಲ್ಲಿ, ಸುಮಾರು 25-30 ದೂರದರ್ಶನ ಧಾರಾವಾಹಿಗಳಲ್ಲಿ ಅಭಿನಯಿಸಿದೆ. ಆದರೆ, ಮನಸ್ಸಿಗೆ ಸಂಪೂರ್ಣ ತೃಪ್ತಿಯಿರಲಿಲ್ಲ. ಜೀವನ ನಿರಾಳವಾಗಿ ಸಾಗಿತ್ತು.

ಆದರೆ, ಒಂಟಿ ಹೆಂಗಸನ್ನು ಗಂಡಸರು ಸುಮ್ಮನೆ ಬಾಳಲು ಬಿಡುವುದಿಲ್ಲ. ಹಲವು ಕಷ್ಟ ಕೋಟಲೆಗಳನ್ನು ಅನುಭವಿಸಿದೆ. ಕೆಲವರು ಮದುವೆ ಮಾಡಿಕೊಳ್ಳಲು ಮುಂದೆ ಬಂದರೂ, ಯಾರನ್ನೂ ಮನಸ್ಸು ಒಪ್ಪುತ್ತಿರಲಿಲ್ಲ. ಇಂತಹ ಹೊತ್ತಿನಲ್ಲಿ ವಿವಾಹಿತ ವೃದ್ಧರೊಬ್ಬರ ಜೊತೆಗೆ ಸ್ನೇಹವಾಯಿತು. ಆ ಮನುಷ್ಯ ಬರೀ ಸ್ನೇಹಿತನಾಗಿಯೇ ಉಳಿಯಲಿಲ್ಲ. ತೀರ ಹತ್ತಿರಕ್ಕೆ ಬರುವ ಇಂಗಿತ ವ್ಯಕ್ತಪಡಿಸಿದ. ನಾನು ಸೋತೆ. ಆದರೆ, ಈ ಸಂಬಂಧವೂ ಸುಗಮವಾಗಿರಲು ಸಾಧ್ಯವಿರಲಿಲ್ಲ - ನೋವಿನಲ್ಲೇ ಕೊನೆಗೊಂಡಿತು.

ಹಲವು ಕ್ಷೇತ್ರಗಳಲ್ಲಿ ಅರ್ಥಪೂರ್ಣವಾಗಿ ದುಡಿಯುತ್ತಿರುವ ಹಲವು ಗಂಡಸರು ನನ್ನೊಂದಿಗೆ ನಡೆದುಕೊಳ್ಳುತ್ತಿದ್ದ ರೀತಿ ಮಾತ್ರ ಒಂದೇ ರೀತಿಯದಾಗಿರುತ್ತಿತ್ತು. ಬೇಸತ್ತೆ.... ಮಾನಸಿಕ ತೊಳಲಾಟಗಳಲ್ಲಿದ್ದೆ. ಕೊನೆಗೊಮ್ಮೆ ಇದೆಲ್ಲದರಿಂದ ದೂರವಾಗಲು ಸಾಗರಕ್ಕೆ ಬಂದೆ. ಜೀವನ ಮತ್ತೊಮ್ಮೆ ಸುಂದರವಾಗಿ ಕಾಣಲಾರಂಭಿಸಿತು. ಇಲ್ಲಿ ಕೆಲವು ಸ್ನೇಹಿತರನ್ನು ಸಂಪಾದಿಸಿ, ಅವರೊಂದಿಗೆ ಸೇರಿ ‘ಪ್ರಜ್ಞಾ’ ಎಂಬ ರಂಗತಂಡವನ್ನು ಆರಂಭಿಸಿದೆ. ಈಗ, ನಡೆಯಬೇಕಿರುವ ದಾರಿ ಬಹಳ ದೂರದ್ದಿದೆ ಎಂಬ ಅರಿವಾಗುತ್ತಿದೆ. ಆದರೆ ತೃಪ್ತಿಯಿದೆ.

■ ಎಸ್ ಮಾಲತಿ







■ ಶ್ರೀಕೃಷ್ಣ ಆಲನಹಳ್ಳಿ

ಹತ್ತು ವರ್ಷಗಳ ಹಿಂದೆ ನಮ್ಮನ್ನು ಅಗಲಿದ ಶ್ರೀಕೃಷ್ಣ ಆಲನಹಳ್ಳಿ ತಮ್ಮ ಕೃತಿಗಳ ಮೂಲಕ ಇಂದಿಗೂ ನಮ್ಮೊಂದಿಗಿದ್ದಾರೆ. ಅವರ 'ಕಾಡು', 'ಪರಸಂಗದ ಗೆಂಡೆತಿಮ್ಮ', 'ಭುಜಂಗಯ್ಯನ ದಶಾವತಾರ' ಕಾದಂಬರಿಗಳು ಚಲನಚಿತ್ರಗಳಾಗಿ ನೋಡುಗರ ಮನ ತಟ್ಟಿವೆ. ಅವರ ಅನುವಾದಿತ ಕೃತಿಗಳು ಮಲಯಾಳಂನಲ್ಲಿ ಅತ್ಯಂತ ಜನಪ್ರಿಯ. ಕನ್ನಡ ಸಾರಸ್ವತ ಲೋಕದಲ್ಲಿ ಅಲ್ಪಾವಧಿಯಲ್ಲೇ ಹೆಸರು ಮಾಡಿದ ಆಲನಹಳ್ಳಿಯವರ ಅಪ್ರಕಟಿತ ಕತೆಯೊಂದನ್ನು ನಿಮ್ಮೆದುರಿಗಿರಿಸಲು ಹೆಮ್ಮೆ ಎನ್ನಿಸುತ್ತದೆ. ಯಾವುದೋ ಕಾರಣಕ್ಕೆ ಪೂರ್ಣಗೊಳ್ಳದೆ ಉಳಿದುಬಿಟ್ಟಿರುವ ಈ ಕತೆ ನಿಮಗೂ ಇಷ್ಟವಾದೀತು.

1

ಮನೆಗೆ ಬಂದೊಡನೆ ನನ್ನನ್ನು ಕಂಡವನೆ ಖುಷಿಯಾಗಿಬಿಡುತ್ತಿದ್ದವನು ಅವತ್ತು ಯಾಕೊ ಬಿಮ್ಮನೆ ಬಿಗಿದುಕೊಂಡು ಮಾತುಬಿಟ್ಟ. ನನಗೆ ಗೊತ್ತು; ಅವನ ಮನಸ್ಸಿಗೆ ತುಂಬಾ ಬೇಜಾರಾದಾಗ ಮಾತ್ರ ಅವನು ಹೀಗೆ. ಅವನ ಪಕ್ಕ ಕೂತು ಅವನು ಮಾತಾಡುವವರೆಗೂ ನಾನು ಏನೂ ಮಾತಾಡದೆ ಅವನ ಕೂದಲೊಳಗೆ ಬೆರಳಾಡಿಸುತ್ತ ಕೂತೆ. ಹಾಗೆ ಮಾಡಿದರಷ್ಟೆ ಸಾಕು ಅವನು ತಾನಾಗಿಯೆ ಉಕ್ಕಿ ಬಂದಂತೆ ನನ್ನನ್ನು ಅಪ್ಪಿಕೊಂಡು ಅತ್ತುಬಿಡುತ್ತಿದ್ದ. ಇಲ್ಲ ತನ್ನೊಳಗಿನದನ್ನೆಲ್ಲ ತೋಡಿಕೊಂಡು ಬಿಡುತ್ತಿದ್ದ. ಆದರವತ್ತು ಏನೂ ಪ್ರತಿಕ್ರಿಯಿಸಲಿಲ್ಲ. ಬಿಗಿದುಕೊಂಡೇ ಇದ್ದ. ಕಡೆಗೆ ನಾನೇ ಅವನನ್ನು ರಮಿಸುತ್ತ 'ಯಾಕೋ ಹೀಗೆ' ಅಂದೆ. ಚಂಡಿಹಿಡಿದ ಮಗುವಿನಂತೆ ಮಾತೇ ಆಡದೆ ಹಠಮಾಡಿದ. ಕಡೆಗೆ ಸಿಟ್ಟಿನಿಂದ 'ನೀನಿಲ್ಲೆ ಹೀಗೇ ಕೂತಿರು. ನಾನು ಹೋಗ್ತೇನೆ' ಎಂದು ಎದ್ದು ನಿಂತೆ. ಸಡಿಲಗೊಂಡವನಂತೆ ಉದ್ದ ಉಸಿರು ಬಿಡುತ್ತ ಕತ್ತೆತ್ತಿ ನನ್ನ ಮುಖಕ್ಕೆ ಕಣ್ಣುನೆಟ್ಟು ತೋಳುಗಳಿಂದ ನನ್ನ ಮೊಣಕಾಲುಗಳನ್ನು ಬಿಗಿದುಕೊಂಡು ತುಂಬಾ ಗಂಭೀರದನಿಯಲ್ಲಿ ಅಂದ; 'ನೋಡು ರಾತ್ರಿ ನಾನೊಂದು ಕಥೆ ಬರೆದೆ. ಆದೀಗ ನನ್ನ ಜೇಬಿನಲ್ಲೆ ಇದೆ. ನೀನು ಅದನ್ನ ಓದಬೇಕು. ಓದಿಯಾದ ಮೇಲೆ ನನ್ನ-ನಿನ್ನ ಸಂಬಂಧ ಹೀಗಿರಲಾರದು. ನೀನು ನನ್ನ ಬಗ್ಗೆ ಇಟ್ಟುಕೊಂಡಿರೊ ಆಸೆಗೆಲ್ಲ ಅದು ಬೆಂಕಿ. ನನಗದು ಗೊತ್ತು. ಏನೇ ಆದರೂ ನಿನಗದು ಗೊತ್ತಾಗಬೇಕು. ಗವಿಯೊಳಗಿನ ಸಿಳ್ಳು ಹಾವಿನದೊ ಮನುಷ್ಯನದ್ದೊ. ನನಗೇ ಗೊತ್ತೇ ಇಲ್ಲವಾಗಿತ್ತು. ಈಗ ಸ್ಪಷ್ಟವಾಗಬೇಕು; ಅದು ನನಗಾದಂತೆ ನಿನಗೂ ಕೂಡ. ಅದಕ್ಕೆಂದೆ ನಾನು ಈ ಕತೆ ಬರೆದದ್ದು' ಅಂದ.

ತಮಾಷೆ ಅನ್ನಿಸಿತು. ಜೊತೆಗೆ ಭಯವಾಯಿತು. ಇವನು ಯಾವತ್ತೂ ಹೀಗಲ್ಲ. ಬರೆದ

ಕತೆಯ ಬಗ್ಗೆ ಏನೂ ಪೀಠಿಕೆ ಇಲ್ಲದೆ 'ಓದಿನೋಡೆ' ಎಂದು ಕೈಗೆ ತುರುಕಿ ಹೋಗುತ್ತಿದ್ದ. ಬರೆದ ಕತೆಯ ಮಸಿಯಾರುವ ಮುಂಚೆ ಓದಿಬಿಡುತ್ತಿದ್ದೆ. ಅರ್ಥವಾಗಲಿ ಆಗದಿರಲಿ ಅವನೊಳಗಿನ ಅನಿಸಿಕೆಗಳೆ, ಅವನ ಬದುಕಿನ ಘಟನೆಗಳೆ ಬಹಳಮಟ್ಟಿಗೆ ಅವನ ಕತೆಗಳಾದ್ದರಿಂದ ಅವು ಇಷ್ಟವೆನಿಸಿದ್ದವು. ಆತ್ಮೀಯವಾಗಿದ್ದವು. ಅಲ್ಲದೆ ಬಹಳಷ್ಟು ನನ್ನ ಕಾಟಕ್ಕಾಗಿಯೆ ಅವನು ಬರೆದವು. ನನ್ನಾಸೆ ಅವನು ದೊಡ್ಡ ಲೇಖಕನಾಗಬೇಕೆಂದು. ಅವನಿಗೆ ಏನೂ ಬೇಕಿಲ್ಲ. ನಿರಾಸಕ್ತ. ಲಾಭವಿಲ್ಲದ ಮಾತಿದ್ದರೆ ಸಾಕು. ಯಾರಾದರೂ ಸರಿಯೆ. ಕಡೆಗೆ ಸಣ್ಣಮಕ್ಕಳೇ ಸಾಕು. ಮಾತುಮಾತು. ಹೊತ್ತಿನ ಪರಿವೆಯೆ ಇಲ್ಲ. ಬರೆಯಲು ನಾನು ಪೀಡಿಸತೊಡಗಿಸಿಬಿಟ್ಟರೆ ಅವನೊಬ್ಬ ಹುಚ್ಚ. ಬರೆಯುವಾಗ ಬರೆದಾದ ಮೇಲೆ ಎಷ್ಟೋ ದಿನ ಮಂಕಾಗಿ ಶಾಪಗ್ರಸ್ತನಂತಾಗಿ ಬಿಡುತ್ತಿದ್ದ. 'ಯಾಕೋ ಹೀಗೆ' ಅಂದರೆ 'ನಿನಗೇನು ತಮಾಷೆ ಕಣೆ. ನನಗೆ ಜೀವ ಹಿಂಡೆ. ಸುಲಭವಾಗಿ ಬರೆಯೊ ಅಂತ ಕಾಡುತ್ತಿ. ಬರೆಯಲು ಕೂತರೆ ಜೀವಕ್ಕೆ ಬಂದಂತೆ. ಬರೆದಾದ ಮೇಲೂ ಅತೃಪ್ತಿ ಸಂಕಟ' ಅನ್ನುತ್ತಿದ್ದ. ಕೆಲವು ದಿನದಿಂದ ನಾನು ಅವನಿಗೆ ಕತೆ ಸುದ್ದಿಯನ್ನೇ ಎತ್ತಿರಲಿಲ್ಲ. ಈಗ ತಾನಾಗಿಯೆ ಬರೆದು ತಂದಿದ್ದೀನಿ ಅಂದಾಗ ತುಂಬಾ ಕುತೂಹಲ. ಅಲ್ಲದೆ ಅದರ ಬಗ್ಗೆ ಬೆಚ್ಚಿ ಬೀಳುವ ಪೀಠಿಕೆ. ನಿಂತಿದ್ದವಳು ಅವನಿಗೆ ಅಂಟಿ ಕೂತೆ. ಮೆಲ್ಲಗವನ ಕೈ ಅದುಮುತ್ತ 'ಏನು ಕತೆಯೊ ಅದು' ಅಂದೆ. ಸ್ವಲ್ಪ ಹೊತ್ತು ಸುಮ್ಮನಿದ್ದು 'ಈ ಕತೆಗೆ ವಸ್ತು ಏನೂ ಇಲ್ಲ' ಅಂದ. ವಿಚಿತ್ರವೆನಿಸಿತು. ಅದರ ಹೆಸರಾದರೂ ಏನು ಹೇಳು ಅಂದೆ. 'ಸಂಬಂಧ' ಎಂದು ತಟ್ಟನೆ ಮುಖ ಕೆಳಗೆ ಮಾಡಿದ. ಎಲ್ಲೋ ಕೇಳಿದ್ದ ಯಾರೊ ಪಿಸುಗುಟ್ಟಿದ್ದ ಕಳ್ಳದನಿಯಿರಬೇಕೆಂದು ಮಬ್ಬು ಮಬ್ಬಾಗಿ ನೆನಪಾಗತೊಡಗಿತು. ತುಂಬಾ ಒತ್ತಾಯ ಮಾಡಿದೆ. ಉತ್ಕಂಠಿತ ನಾಗತೊಡಗಿದ. 'ಬೇಡ ಅದನ್ನು ನೀನು ಓದೋದು ಬೇಡ. ಓದಿದರೆ ನನ್ನ ಮುಖ ನೋಡದೆ ಓಡಿ ಹೋಗುತ್ತಿ ಅಥವ ಬೈದು ನನ್ನನ್ನೇ ಓಡಿಸುತ್ತಿ' ಎಂದು ನನ್ನನ್ನೇ ದುರುಗುಟ್ಟಿ ನೋಡಿದ. ನನಗೂ ಕೆಲವು ದಿನಗಳಿಂದ ಯಾಕೊ ಇವನು ಒಂದು ಥರ ವಿಚಿತ್ರ ಅನ್ನಿಸಿತ್ತು. ಮೊದಲ ಹಾಗಲ್ಲ. ನನ್ನನ್ನೇ ರೆಪ್ಪೆ ಅಲುಗಿಸದೆ ನೋಡುತ್ತ ಕೂತುಬಿಡುತ್ತಿದ್ದ. 'ಯಾಕೊ ಹಾಗೆ ನೋಡುತ್ತಿ' ಅಂದರೆ ಬರಿದೆ ನಕ್ಕು ಬಿಡುತ್ತಿದ್ದ. ಒಳಗೇ ಭಯವಾಯಿತು. ಆದರೂ ಇವನನ್ನು, ಇವನ ಗುಪ್ತ ಅಭಿಲಾಷೆಯನ್ನೂ ಹೆದರಿಸುವುದು ಕಷ್ಟವಲ್ಲ ಅನ್ನುವುದೂ ಗೊತ್ತಿತ್ತು. ಆದ್ದರಿಂದಲೆ ತಮಾಷೆಯಾಗಿ 'ನಿನ್ನ-ಅವಳ ಸಂಬಂಧ ಮುರಿದ ಕತೆಯೇನೊ' ಅಂದೆ. ಮತ್ತಷ್ಟೂ ಉತ್ಕಂಠಿತ ನಾಗಿ 'ಹೌದು ಅವಳ ಸಂಬಂಧ ಮುರಿದ ಮತ್ತು.... ಮತ್ತು' ಹಾಗೆಯೆ ಮಾತುಮುಗಿಸದೆ ಬಿಕ್ಕತೊಡಗಿದ. ಅವನ ಒಳಗುದಿ ನನಗೆ ಅರ್ಥವಾಗತೊಡಗಿತು.

★

ಅನ್ನಿಸುತ್ತೆ; ನನ್ನಿಂದಾಗಿಯೆ ಇವನಿಗಿಷ್ಟು ಸಂಕಟ ಅಂತ. ಇವನಾಗಿಯೆ ಅವಳನ್ನು ಇಷ್ಟಪಟ್ಟ. ಇವನ ಇಷ್ಟಕ್ಕೆ ನಾನು ಅಡ್ಡಿಯಾಗಲಿಲ್ಲ. ಸಹಕರಿಸಿದೆ. ಅದು ಗಾಢವಾಗಲೆಂದು ಆಸೆಪಟ್ಟೆ. ಅವರಿಬ್ಬರ ಸ್ವಚ್ಛಂದತೆಗೆ ಖುಷಿಯಾದರೂ ಎಚ್ಚರಿಸುತ್ತಲೇ ಇದ್ದೆ. ನಾನು ಅಂದುಕೊಂಡಂತೆ ಆಗಲಿಲ್ಲ. ಅವನ-ಅವಳ ಸಂಬಂಧ ಕೂಡಿದರೂ ಬೆಸೆಯಲಿಲ್ಲ. ಅವಳು ಇವನಿಗೆ ತಕ್ಕವಳಲ್ಲ, ಇವನೊಡನೆ ಸಾಮರಸ್ಯ ಸಾಧ್ಯವಿಲ್ಲ ಅನ್ನುವುದು ನನಗೆ ಗೊತ್ತಿದ್ದರೂ ಅಸಹಾಯಕಳಾದೆ. ಇಬ್ಬರ ನಡುವೆ ದಿನವೂ ಒಂದೊಂದು ಅಡ್ಡಗೋಡೆಗಳು. ಅವುಗಳನ್ನೊಡೆಯಲು ಪ್ರಯತ್ನಿಸತೊಡಗಿದೆ. ನನ್ನ ಈ ದುರಸ್ತಿ ಅವನಿಗೆ ಬೇಕಿಲ್ಲ. ಸಿನಿಕನಾಗತೊಡಗಿದ್ದಾನೆ. ಭಯವಾಯಿತು. ಇವನು ಹೀಗೆ ಕುಟ್ಟೆ ಹಿಡಿದ ಮರದ ಹಾಗೆ ಒಳಗೊಳಗೇ ಜೀರ್ಣವಾಗಿ, ಇದ್ದ ಶಕ್ತಿಯನ್ನೆಲ್ಲ ಕಳೆದುಕೊಂಡು ಬಿಟ್ಟಾನೆಂದು ಭಯವಾಯಿತು. ಅವನ ರೂಮಿಗೆ ಒಬ್ಬಳೇ ಹೋದೆ. ಅವರಿವರು ಕಂಡಾರೆಂಬ ಭಯವಿದ್ದರೂ ಇವನಿಗಾಗಿ, ಇವನ ಸುಖಕ್ಕಾಗಿ ಏನನ್ನಾದರೂ ಕೊಡಲು ಯಾವತ್ತೂ ಮನಸ್ಸು ಹಿಂದಾದುದಿಲ್ಲ. ಅವನು ರೂಮಲ್ಲಿರಲಿಲ್ಲ. ಅರ್ಧ ಗಂಟೆ ಕಾದೆ. ಅಷ್ಟರಲ್ಲೆ ಎಷ್ಟೋ ಜನ ನನ್ನನ್ನು ಸಂಶಯಾಸ್ಪದ ರೀತಿಯಲ್ಲೆ ನೋಡಿ ಹೋದರು. ನನಗೇನೂ ಅಂಥ ಅವಮಾನ ಅನ್ನಿಸಲಿಲ್ಲ. ಅವನದೇ ಕಾತರ. ಅವನಿಗಾಗಿ ಏನನ್ನಾದರೂ ಭರಿಸಬಲ್ಲೆನೆಂಬ ನಿಲುವು ಇವತ್ತಿನದಲ್ಲ. ಅವನ ಬಗ್ಗೆ ಯಾರೊಬ್ಬರೂ ಕಡೆಗೆ ನನ್ನನ್ನು ಸಾಕಿ ದೊಡ್ಡವಳನ್ನಾಗಿ ಮಾಡಿದವರೂ ಕೂಡ ಹಗುರವಾಗಿ ಅವನ ಮನಸ್ಸಿಗೆ ನೋವಾಗುವಂಥ ಒಂದು ಮಾತನ್ನು ಕೂಡ ಆಡಲು ಬಿಟ್ಟವಳಲ್ಲ. ಆಡಿದರೂ ಅದನ್ನು ಸಹಿಸಿದವಳಲ್ಲ. ಆ ಅರ್ಧ ಗಂಟೆ ಮನಸ್ಸೆಲ್ಲ ಅವನಲ್ಲೆ ಮುಳುಗಿತ್ತು. ಯಾಕಾಗಿ ಇವನ ಬಗೆಗೆ ನನಗಿಷ್ಟು ಕಳಕಳಿ? ಆದರ? ಆತ್ಮೀಯತೆ? ಯಾಕಾಗಿ? ಯಾಕಾಗಿ?

ಅರ್ಥವಾಗುತ್ತಿಲ್ಲ. ಇತ್ತೀಚೆಗಿನ ಇವನ ಈ ತೆರನ ರೀತಿಯೆ ಅರ್ಥವಾಗುತ್ತಿಲ್ಲ. ಅವನಾಗಿ ಇಷ್ಟಪಟ್ಟವಳೊಡನೆ ಸಾಂಗತ್ಯ ಸಾಧ್ಯವಿಲ್ಲದೆ ಹೀಗಾದನೆ? ಏನನ್ನೋ ಕಳೆದುಕೊಂಡವನಂತೆ ಏನೊ ತಪ್ಪು ಮಾಡಿದವನಂತೆ ಒಳಗೆ ಹೀಗೆ. ಬೇರೆಯವರಿಗೆಲ್ಲ ಹೊರಗೆ ಸಂತೃಪ್ತ ನಗುನಗು. ನನಗೆ ಅವನ ನಗುಮುಖದ ಹಿಂದಿನ ನೋವು ಗೊತ್ತು. ಅದಕ್ಕಾಗಿ ಅತ್ತಿದ್ದೇನೆ. ಅವನ ಹಾಗೆಯೆ ನಾನೂ ಒಳಗೊಳಗೆ ನೋವುಂಡು ನಕ್ಕಿದ್ದೇನೆ. ಅವನು ನನ್ನಲ್ಲಿ ಏನನ್ನೂ ಮುಚ್ಚಿಡುವುದಿಲ್ಲ. ನಾನೂ ಅಷ್ಟೆ. ನನ್ನ ಪರಿಚಿತಳೊಬ್ಬಳು ಅವನನ್ನು ತುಂಬಾ ಇಷ್ಟಪಟ್ಟಳು. ಅವನ ದೌರ್ಬಲ್ಯ ನನಗೆ ಗೊತ್ತಿತ್ತು. ಆಕಸ್ಮಿಕ ಅವನಿಗವಳನ್ನು ಪರಿಚಯಿಸಿದೆ. ಪರಿಚಯ ಗಾಢವಾಗತೊಡಗಿದ್ದನ್ನು ಕಂಡು ಎಚ್ಚರಿಸದೆ ಮತ್ತೆ ಯೋಚಿಸಿದೆ. ಇಬ್ಬರದೂ ಒಂದೇ ಬಗೆಯ ಅಭಿಲಾಷೆಯಿರುವ ವ್ಯಕ್ತಿತ್ವಗಳು. ಕೂಡಿದರೆ ಹೇಗೆ ಎಂದು ಯೋಚಿಸುತ್ತಿರುವಾಗಲೆ ಅವನಿಗೆ ಹಠಾತ್ತನೆ ಅವಳೂ ಬೇಡವಾಗಿ ಬಿಟ್ಟಳು. ಅವನ ಬದುಕಲ್ಲಿ ಕಾಲಿಟ್ಟವರೆಲ್ಲ ಅವನ ಕನಸುಗಳನ್ನೆಲ್ಲ ತುಂಡು ದನಗಳ ಹಾಗೆ ತುಳಿದು ಹೋದವರೆ ಇದಕ್ಕೆಲ್ಲ ಕಾರಣ ಅವನ ದುರ್ಬಲ ಮನಸ್ಸು ದೃಢತೆಯಲ್ಲ. ತಟ್ಟನೆ ಮರುಳಾಗುತ್ತಾನೆ. ಮುಳುಗುತ್ತಾನೆ. ಉಸಿರು ಕಟ್ಟಿದಾಗ ಚಡಪಡಿಸುತ್ತ ಕೈಕಾಲು ಬಡಿಯುತ್ತ ನನ್ನ ಮಡಿಲಿನಲ್ಲಿ ಮುಲುಗುಟ್ಟುತ್ತಾನೆ, ಮಗುವಾಗುತ್ತಾನೆ. ದಿನವೂ ನನಗೆ ಇವನದೇ ಸಮಸ್ಯೆ. ಇವನನ್ನು ಸಂಪರ್ಕಿಸಬೇಕು. ಇವನ ಸಿಕ್ಕನ್ನು ಬಿಡಿಸಬೇಕು. ನಿರಾಳವಾಗಿಡಬೇಕು. ಜೀವನಕ್ಕೆ, ಸಾಹಿತ್ಯಕ್ಕೆ ತೊಡಗಿಸಬೇಕು. ಹೀಗೆ ಇವನದೇ ಇವನ ಬಗೆಗಿನದೇ ಯೋಚನೆ.



ನಿಂತು ನಿಂತು ಸಾಕಾಗಿತ್ತು. ಕಡೆಗೆ ಬಂದ. ಇಷ್ಟು ಕಾಯಿಸಿದರೂ ಇವನ ಬಗ್ಗೆ ಕೋಪ ಬರಲಿಲ್ಲ. ಅವನೇ ದಡಬಡ ಬಾಗಿಲು ತೆಗೆದು ಇಷ್ಟು ಕಾಯಿಸಿದ್ದಕ್ಕೆ ನೊಂದುಕೊಂಡ. ಏನೋ ಮಣಭಾರ ಹೊತ್ತವನಂತೆ ನೆಲಕ್ಕೇ ಕಣ್ಣುನೆಟ್ಟು ಬರುತ್ತಿದ್ದವನು ನನ್ನನ್ನು ಕಂಡದ್ದೆ ಹಗುರವಾಗಿ ಬಿಟ್ಟ. ನನ್ನ ತೊಡೆ ಮೇಲೆ ತಲೆಯಿಟ್ಟು ಕಣ್ಣು ಮುಚ್ಚಿ ಮಲಗಿ ಬಿಟ್ಟ. ಬಿಸಿಲಿನಲ್ಲಿ ತುಂಬಾ ಆಟವಾಡಿ ದಣಿದು ಬಂದ ಮಗುವಿನ ಹಾಗೆ ಇವನಾದ. ಕ್ಷಣದ ಹಿಂದೆ ನಾನು ಅಂದುಕೊಂಡಂತೆಯೇ ಆಯಿತು. ಎಷ್ಟೊ ಹೊತ್ತು ಹಾಗೆಯೆ ಮಲಗಿದ್ದ. ಬಿಸಿಲು ಇಳಿಮುಖವಾಗಿತ್ತು. ಇವನ ರೂಮಿನ ಮುಂದಿನ ದೊಡ್ಡ ಸಂಪಿಗೆ ಮರದ ಚಿಗುರು ಕೊಂಬೆಯೊಂದು ಕಿಟಕಿಯನ್ನು ಒತ್ತರಿಸಿ ಚಾಚಿತ್ತು. ತಣ್ಣಗೆ ಬೀಸತೊಡಗಿದ್ದ ಗಾಳಿಗೆ ಎಲೆಗಳು ಅಲುಗತೊಡಗಿದ್ದವು. ಮೆಲ್ಲಗೆ ಕೆನ್ನೆಗೆ ಒಡೆದು ಎಚ್ಚರಿಸಿದೆ. 'ಹೊತ್ತಾಯಿತು ಏಳೊ ಹೋಗುವ' ಅಂದೆ. ತೊಡೆಯನ್ನು ಬಿಗಿಯಾಗಿ ಅಪ್ಪಿಕೊಂಡು ಬೇಡ, ನೀನು ಹೋಗುವುದು ಬೇಡ ಎಂದು ಹಠಮಾಡತೊಡಗಿದ. ಅವನ ಮುಖದ ತುಂಬ ಮುತ್ತಿಟ್ಟೆ. ಹುಚ್ಚು ಹಿಡಿದವನಂತೆ ತನ್ನ ಎದೆಗೆ ನನ್ನನ್ನು ಬಿಗಿದಪ್ಪಿಕೊಂಡು 'ಬೇಡ ನೀನು ನನ್ನನ್ನು ಬಿಟ್ಟು ಹೋಗಬೇಡ. ಒಬ್ಬಂಟಿಯಾದರೆ ಮತ್ತೆ ನರಕ. ನನ್ನಾಣೆ ನನಗೆ ಈ ಏಕಾಂತ, ಒಬ್ಬಂಟಿತನ ಸಾಧ್ಯವಿಲ್ಲ. ಸತ್ತೇ ಹೋಗುತ್ತೇನೆ, ಎಂದೆಲ್ಲ ಹಲುಬತೊಡಗಿದ. ಮತ್ತೆ ರಮಿಸುತ್ತ ಅವನಿಗೆ ಧೈರ್ಯ ತುಂಬತೊಡಗಿದೆ. ನಾನು 'ಬೇಡ ನೀನು ನನ್ನೊಡನೆ ಬಯಸುತ್ತಿರುವ ಸಂಬಂಧ ಬೇಡ' ಎಂದು ಉಪಾಯವಾಗಿ ಅವನಿಂದ ಬಿಡಿಸಿಕೊಂಡು ಮೇಲೇಳತೊಡಗಿದಂತೆ ಉದ್ವೇಗದಿಂದ ಕಂಪಿಸುತ್ತ ಅಳತೊಡಗಿದ. ನನಗಂತೂ ದಾರಿಯೆ ಕಾಣದಾಯಿತು. ಏನುಮಾಡುವುದು. ನಾನು ಬಲ್ಲವರಿಗೆ ಇವನ-ನನ್ನ ಸಂಬಂಧ ಏನಂತ ಹೇಳಿದ್ದೇನೆ. ನನ್ನ ಬಗೆಗಿನ ಅವರ ಆ ಚಿತ್ರ ಕಪ್ಪು ಹಿಡಿಯಬಾರದು. ಉದ್ವಿಗ್ನಳಾದೆ. ಅವನ ಬಲಿಷ್ಠ ತೋಳುಗಳು ಸರ್ಪಗಳು ಅನ್ನಿಸಿತು. ತಟ್ಟನೆ ಕಿತ್ತೆಸೆದು ಮನೆಗೆ ಹೊರಟು ಹೋದೆ. ದಾರಿಯುದ್ದಕ್ಕೂ ಮಂಜು ಕವಿದಂತೆ. ಇವನ ಸಂಬಂಧ ಇಷ್ಟಕ್ಕೆ ಸಾಕು. ನಾನೂ ಬದುಕಬೇಕು. ಎಲ್ಲವೂ ಇವನಿಗಾಗಿಯೆ ಅಲ್ಲ. ತುಂಬಾ ಸ್ವಾರ್ಥಿ. ನಾನು ಯಾವುದನ್ನು ಬೇಡ ಅನ್ನುತ್ತೇನೊ ಅದನ್ನೇ ಮಾಡುತ್ತಾನೆ. ನನ್ನವರಿಗಾಗಿ ನನ್ನ ಈ ತುಟಿಗಳು ಎಂದರೂ ಬಿಡದೆ ಅವನ್ನೂ ಕಚ್ಚಿ ತಿಂದ. ಸಂಜೆಯಾಗಿತ್ತು. ದಾರಿಯುದ್ದಕ್ಕೂ ಬಸ್ಸು ಕಾರುಗಳ ಸದ್ದನ್ನೂ ಮೀರಿಸುವ

ಸದ್ದು ನನ್ನೊಳಗೆ.

2

ಅರ್ಥವಾಗತೊಡಗಿತು; ಬರೆದು ತಂದ ಕತೆಯನ್ನು ತೋರಿಸಲಾಗದೆ, ತೋರಿಸದೆ ಇರಲೂ ಸಾಧ್ಯವಾಗದೆ ಮಿಸುಕಾಡುವ ಇವನ ಕಿರುಕುಳ. ಬಹಳ ಹೊತ್ತು ಕಲ್ಲಾಗಿದ್ದ ನಮ್ಮಲ್ಲಿ ನನಗೇ ಮೊದಲು ಮಾತು ಬಂತು. ನಾನಂದೆ 'ನೋಡು, ನೀನು ಬರೆದಿರೊ ಕತೇಲಿ ಏನಾದರೂ ಇರಲಿ. ಅದರಲ್ಲಿ ಏನಿದೆ ಅಂತ ನನಗೂ ಗೊತ್ತಿದೆ. ನಾನು ಖಂಡಿತ ಅದರ ಬಗ್ಗೆ ಕೋಪ ಮಾಡಲ್ಲ'. ನನ್ನ ಮಾತು ಅವನನ್ನು ಅಲುಗಾಡಿಸಲಿಲ್ಲ. ಮತ್ತೆ 'ಆ ಕತೆ ಕೊಡು, ಇಲ್ಲೆ ಕೂತು ಓದಿ ಮುಗಿಸ್ತೇನೆ. ನಿನಗೆ ಏನಾದರು ಒಂದು ಮಾತು ಅಂದರೆ ಕೇಳು' ಎಂದು ಕಾಡಿದೆ. ಇಕ್ಕಟ್ಟಿನಲ್ಲಿ ಸಿಕ್ಕವನಂತೆ ಪರದಾಡಿದ. ಏನೊ ನಿರ್ಧರಿಸಿ ಬಿಟ್ಟವನಂತೆ ಜೇಬಿನಿಂದ ಕತೆ ತೆಗೆದವನೆ ತಟ್ಟನೆ ಹರಿದು ಚೂರುಮಾಡಿ ಎದ್ದು ನಿಂತು ಬಿಟ್ಟ. 'ನಾನು ತುಂಬಾ ಕೆಟ್ಟವನು, ಸಣ್ಣವನು, ದುರ್ಬಲ, ಬೇಡ ಮಾರಾಯಳೆ ಅದನ್ನು ಓದುವುದೂ ಬೇಡ ಅದು ಅಚ್ಚಾಗುವುದೂ ಬೇಡ' ಅಂದವನೆ ಹೊರಗೆ ಹೋಗಿಯೇ ಬಿಟ್ಟ. ಹರಿದು ಬಿಸಾಡಿದ್ದ ಕತೆಯ ಚೂರುಗಳನ್ನೆಲ್ಲ ಒಟ್ಟುಗೂಡಿಸಿದೆ. ಹೇಗಾದರೂ ಮಾಡಿ ಆ ಈ ಸಾಲುಗಳನ್ನು ಕೂಡಿಸಿ ಓದಲು ಪ್ರಯತ್ನ ಪಟ್ಟೆ. ಸಾಧ್ಯವಾಗಲಿಲ್ಲ. ಬಿಸಾಡಿ ಬಿಡುವುದಕ್ಕೂ ಮನಸ್ಸಿಲ್ಲ. ಏನು ಮಾಡುವುದು?

ಅದೆಷ್ಟು ಹೊತ್ತು ಹಾಗೆ ಕುಳಿತಿದ್ದೆನೊ ನೆನಪಿಲ್ಲ. 'ಲೆ ಯಾಕೆ ಹೀಗೆ ಬೆಪ್ಪು ಬಡಿದವಳಂಗೆ ಕೂತಿದ್ದಿ' ಅಂತ ಅಕ್ಕ ಹತ್ತಿರ ಬಂದಾಗಲೆ ಎಚ್ಚರ. ಅಚ್ಚಾಗ ರೂಕತೆಯಿಂದ ಅಕ್ಕನ ಕಣ್ಣಿಗೆ ಹರಿದ ಕತೆಯ ರಾಶಿ ಬಿದ್ದಿತ್ತು. 'ಇದೇನೆ ಯಾರದೇ ಕಾಗದ? ಚೂರುಮಾಡಿಕೊಂಡು ಕೂತಿದ್ದೀಯಲ್ಲೆ, ಅಂದಾಗ ತಟಕ್ಕನೆ ಏನು ಹೇಳುವುದಂತ ತಿಳಿಯದೆ ಗಡಬಡಿಸಿದಾಗ ಅಕ್ಕ ಒಂದು ಥರ ಅನುಮಾನದಿಂದಲೆಂಬಂತೆ ಇನ್ನೂ ಹತ್ತಿರ ಬಂದವಳೆ 'ಏನೆ, ಯಾರದೆ, ಯಾಕೆ' ಅಂತೆಲ್ಲ ಕಾಡುತಿದ್ದ ಹಾಗೆ ಏನೋ ಹೊಳೆದಂತಾಗಿ 'ಯಾರದೂ ಅಲ್ಲ ನನ್ನದೆ. ಕತೆ ಬರೆಯೋಣ ಅಂತ ಕೂತೆ. ಬರೆದೆ. ಅದ್ಯಾಕೋ ಚೆನ್ನಾಗಿಲ್ಲ ಅನ್ನಿಸ್ತು. ಹರಿದುಹಾಕಿದೆ' ಅಂದೆ. ಅವಳು 'ಓಹೋ ಇದು ಬೇರೆ ಯಾವತ್ನಿಂದ? ಇಷ್ಟು ದಿನ ಹಗಲೂ ರಾತ್ರಿ ಹಾಳು ಕತೆ ಕತೆ ಅಂತ ಓದಿ ಓದಿ ಸಾಯತಾ ಇದ್ದೆ. ಇನ್ನು ಬರೆದು ಬರೆದು....' ಅವಳ ಮಾತು ಅಸಹ್ಯ ಅನ್ನಿಸಿ ಅಲ್ಲಿಂದ ಎದ್ದು ಕಾಗದ ಚೂರುಗಳನ್ನೆಲ್ಲ ಬೊಗಸೆಯಲ್ಲಿ ತುಂಬಿ ಮನೆಯಾಚೆಗಿನ ಕಸದ ತೊಟ್ಟಿಗೆ ಸುರಿದು ಬಂದೆ. ತಪ್ಪು ಮಾಡಿದೆ ಅನ್ನಿಸಿತು. ಯಾವತ್ತು ಅವನ ಭಾವನೆಗಳನ್ನು ಕೀಳಾಗಿ ಕಂಡಿದ್ದಿಲ್ಲ. ಇವತ್ತೇಕೆ ಹೀಗೆ ಮಾಡಿದೆ? ನನಗಿಷ್ಟವಿಲ್ಲದ್ದನ್ನು ಅವನು ಬಯಸುತ್ತಿದ್ದಾನೆಂದೆ? ಅಥವಾ ನನ್ನ ನಂಬಿಕೆಗೆ ಎರಡು ಬಗೆದನೆಂದೆ? ಇಲ್ಲ ಇವನ ಬಯಕೆ ನನಗೆ ಪೂರ್ಣ ಬೇಡದಿದ್ದರೆ ನಾನೇಕೆ ಇವನಿಗೆ ನನ್ನನ್ನೆ ಇಡಿಯಾಗಿ ಒಡ್ಡಿ ಹಾಕಿಬಿಡುತ್ತಿರುವೆ? ಇಲ್ಲ ಇವನ ಈ ಬಯಕೆಗೆ ನಾನು ಪ್ರತ್ಯಕ್ಷ ಯಾವತ್ತೂ ಸಹಕರಿಸಲಿಲ್ಲ. ಇವನನ್ನು ಕೆರಳಿಸಿಲ್ಲ. ಇವನ ಅಪ್ಪುಗೆ, ಇವನ ರಮಿಸುವಿಕೆ ಎಲ್ಲಾ ಯಾವತ್ತೂ ನನ್ನನ್ನು ಲೈಂಗಿಕಾಸಕ್ತಿಗೆ ದ್ರವಿಸಲಿಲ್ಲವೆಂದೇ ಅನ್ನಿಸುತ್ತಿದೆ. ಆದರೂ ಏನೋ ಒಂದು ಬಗೆಯ ಸುಖ, ಉಲ್ಲಾಸ ಇವನ ಜೊತೆ ಇದ್ದಾಗ. ಇವನ ಮಾತಿಗೆ, ಇವನ ಮುತ್ತಿಗೆ, ಮೃದುವಾದ ಸ್ಪರ್ಶಕ್ಕೆ, ಏನನ್ನೊ ತುಂಬಿಕೊಂಡ ಕಣ್ಣುಗಳ ಕೂಟಕ್ಕೆ ಜೀವ ದಡಗುಟ್ಟುತ್ತದೆ. ಬಯಸಿ ಬಯಸಿ ಬಸಿರಾಗುತ್ತದೆ. ತೆಗೆದುಕೊಳ್ಳದೆ ಬರೆಯತೊಡಗುತ್ತೇನೆ. ಪುಟಗಟ್ಟಲೆ ಬರೆದ ಕಾಗದಕ್ಕೆ ಅವನು ಉತ್ತರಿಸುವುದಿಲ್ಲ. ನನ್ನ ಕಾಗದದ ಪ್ರಾರಂಭದಲ್ಲಿನ ಸಂಬೋಧನೆ ಅವನಿಗಿಷ್ಟವಿಲ್ಲ. ಅದಕ್ಕೆಂದೇ ಅವನು ಉತ್ತರಿಸುವುದಿಲ್ಲವೆಂಬುದೂ ನನಗೆ ಗೊತ್ತಿದೆ. ಪ್ರತ್ಯುತ್ತರ ಅಪೇಕ್ಷೆ ಇಲ್ಲದೆ ಅದೆಷ್ಟೊ ಕಾಗದ ಬರೆದೆ. ನನ್ನಲ್ಲಿ ಅವನ ಕಾಗದಗಳು ಇದ್ದರೆ ಮೂರೊ ನಾಕೊ ಅಷ್ಟೆ. ಅವನು ಅವನು ಬರೆದದ್ದು ನನ್ನ ಯಾವ ಕಾಗದಕ್ಕೂ ಉತ್ತರವಾಗಿ ಅಲ್ಲ. ಅವನ ಬದುಕಿನಲ್ಲಿ ಅವನನ್ನು ಅತ್ಯಂತ ಭಯಂಕರವಾಗಿ ಹಿಂಸಿಸಿದ ಘಟನೆಗಳು ಸಂಭವಿಸಿದಾಗ ಮಾತ್ರ. ಅವನ್ನು ಓದುವಾಗೆಲ್ಲ ಅವನನ್ನೆ ಎದೆಗವಚಿ ಸಂತೈಸಿದ, ಸಂತೈಸುತ್ತಿರುವ ಅನುಭವ. ಅವನೆಲ್ಲೆ ಇರಲಿ ಓಡಿ ಹೋಗಿ ಹುಡುಕಿ ಅವನ ತಪ್ತ ಹೃದಯವನ್ನು ತಂಪಾಗಿಸುವ ಅಸಾಧ್ಯ ಉತ್ಕಟತೆ. ಯಾಕಾಗಿ ಇದೆಲ್ಲ?

★

ಮೂರು ದಿನವಾಗಿ ಬಿಟ್ಟಿತು ಅವನ ಮನೆ ಕಡೆಗೆ ಸುಳಿಯಲೆ ಇಲ್ಲ. ನನಗೆ ಕಳವಳ. ಅಕ್ಕನಿಗೆ ಲೈಬ್ರರಿಗೆ ಹೋಗಿ ಬರುತ್ತೇನೆಂದು ಸುಳ್ಳುಹೇಳಿ ಅವರ ರೂಮಿಗೆ ಹೋದೆ. ಬೀಗ. ಅವನಿದ್ದ ಮನೆಯವರನ್ನೆ ಕೇಳಿದೆ. ಮೂರು ದಿನದಿಂದ ಬಾಗಿಲೇ ತೆಗೆದಿಲ್ಲ ಅಂದರು. ಭಯವಾಯಿತು. ಇಲ್ಲದ ವಿಚಾರಗಳು, ಕಳವಳ, ತಕ್ಷಣ ಒಂದು ಚೀಟಿ ಬರೆದೆ. '- ಈ ಚೀಟಿ ಕಂಡ ತಕ್ಷಣ ಬಾ. ನನ್ನಾಣೆ. ನಿನ್ನ ಪ್ರೀತಿಯ...' ಬಾಗಿಲ ಸಂದಿನಿಂದ ಒಳಗೆ ತುರುಕಿದೆ. ಮನೆಗೆ ಬಂದೆ. ಅಕ್ಕ 'ಇದೇನೆ ಇಷ್ಟು ಬೇಗ ಲೈಬ್ರರಿಯಿಂದ'... ಅನ್ನುತ್ತಿದ್ದವಳು ಆ ಮಾತು ಅದಲ್ಲಿಗೆ ನಿಲ್ಲಿಸಿ 'ನೋಡೆ - ಮೂರು ದಿನದಿಂದ ಬಂದೆ ಇಲ್ಲ. ಅವನು ಎಲ್ಲಿಗಾದರೂ ಹೋಗುವಾಗ ಬಂದು ಹೇಳದೆ ಹೋಗುತ್ತಿರಲೆ ಇಲ್ಲ. ಊರಲ್ಲಿದ್ದರೆ ಒಂದುಸಲವಾದರೂ ಮನೆಗೆ ಬರದೆ ಇದ್ದವನಲ್ಲ. ಪಕ್ಕದ ಮನೆ ಹುಡುಗನ್ನ ಕಳಿಸ್ತೇನೆ ತಡಿ' ಅನ್ನುತ್ತ ಹೊರಗೆ ಹೋದಳು. ಎಲ್ಲರ ಜೊತೆಯಲ್ಲೂ ಮಗುವಿನ ಹಾಗೆ ಮುಗ್ಧ. ಎಲ್ಲರಿಗೂ ಇಷ್ಟ. ಯಾರು ಏನಂದರೂ ಕೋಪವಿಲ್ಲ. ಯಾರಾದರೂ ಅವನ ಮಕ್ಕಳಾಟಿಕೆ ಕಂಡು ಹಗುರಾಗಿ ಮಾತಾಡಿ ಬಿಟ್ಟಾಗ ನಾನೇ ಭಯಂಕರ ಸಿಟ್ಟಿಂದ ಅವರನ್ನು ಬೈಯ್ಯುವೆ. 'ಅಂದುಕೊಳ್ಳಲಿ ಬಿಡೆ, ಅದೇನು ಚರ್ಮಕ್ಕೆ ಅಂಟಿಕೊಳ್ಳುತ್ತ' ಅಂತ ತೀರ ಸರಳವಾಗಿ ಮಾತಾಡುತ್ತಾನೆ. ಮೂರುದಿನದಿಂದ ಭಣ ಭಣ. ಅವನು ಎಲ್ಲಿ ಹೋದ? ಯಾಕೆ ಬರಲಿಲ್ಲ? ನಾನು ಏನಾದರೂ ಅಂದೆನೆ? ಇಲ್ಲ ನಾನು ಅವನಿಗೆ ಏನೂ ಅನ್ನಲೆ ಇಲ್ಲ. ಅವನ ಬಗ್ಗೆ ಕೋಪ, ಮರುಕ, ಕಾತರ. ಕೂತಲ್ಲಿ ಕೂರಲಾಗದ ಕಳವಳ. ಆತಂಕ. ಮನೆಯ ಹೊರಬಾಗಿಲಲ್ಲೆ ಕಣ್ಣು. ಅತ್ತ ಕಡೆಗೇ ಕಿವಿ.

ಹೋಗಿದ್ದ ಹುಡುಗ ಬಂದವನೆ ಅಕ್ಕನ ಹತ್ತಿರ 'ಮೂರು ದಿನದಿಂದ ರೂಮಿಗೇ ಬಂದಿಲ್ಲವಂತೆ' ಅಂದ. ಅಕ್ಕ 'ಎಲ್ಲೋ ಊರಿಗೆ ಹೋಗಿರಬೇಕು. ಇಲ್ಲದಿದ್ದರೆ ಬರ್‍ತಾ ಇದ್ದ' ಎಂದು ಸುಮ್ಮನಾದಳು. ನನ್ನ ತಳಮಳ ಉಮ್ಮಳಿಸತೊಡಗಿತು. ಅವನ ತಪ್ತ ಹೃದಯದ ಬಡಿತ ಕಿವಿಗೆ ಅಪ್ಪಳಿಸಿದಂತೆ ಅವನೆಲ್ಲೊ ದಾರಿ ತಪ್ಪಿ ಅಲೆದು ಅಲೆದು ಸುಸ್ತಾಗಿಯೊ ಪ್ರಜ್ಞೆತಪ್ಪಿಯೊ ಯಾವುದೋ ಮರದಡಿ ಮಲಗಿ ಬಿಟ್ಟಂತೆ. ಅವನ ಹಳ್ಳಿಯ ಹೊಲದ ದೊಡ್ಡ ಆಲದ ಮರ. ಕೆರೆಯ ಕೋಡಿಯ ಮಾವಿನ ತೋಪು. ಹಾಳು ಹನುಮಂತರಾಯನ ಗುಡಿ. ರಕ್ತ ಉಕ್ಕಿ ಹರಿಯುವಂತೆ ನೆರೆ ಬಂದ ಹೆಬ್ಬಳ್ಳ, ಅವನು ಹೇಳುತ್ತಿದ್ದ ಚಿತ್ರಗಳು ಕಣ್ಣು ತುಂಬಿದವು. ಓಡಿ ಬಿಡಬೇಕು ಇಲ್ಲಿಂದ. ಈ ಕಲ್ಲುಗಾರೆಯ ನರಕದಿಂದ. ಅಲ್ಲೆಲ್ಲೊ ಅವನಿರಬೇಕು. ಬಾಲ್ಯದ ದಿನಗಳನ್ನು ಪುನರನುಭವಿಸುತ್ತಿರಬೇಕು. ಆದದ್ದೆಲ್ಲವನ್ನೂ ಮರೆಯುತ್ತಿರಬೇಕು. ಅಸೂಯೆಯಾಯಿತು. ನಾನು ಅವನ ಹಾಗೆ ಹಳ್ಳಿಯಲ್ಲೆ ಹುಟ್ಟಿದ್ದರೆ? ಆ ಕಾಡು, ಹಳ್ಳ, ಬೆಟ್ಟಗುಡ್ಡ, ಗಿಡಮರಗಳ ತೋಪು. ಬಾಯಲ್ಲಿ ನೀರೂರಿತು. ಅಕ್ಕ 'ನೋಡೆ ಮಳೆ ಬರೋತರ ಇದೆ. ಜೋರಾಗೆ ಬರ್‍ಬಹುದು. ಬಟ್ಟೆನೆಲ್ಲ ಎತ್ತಿ ಒಳಗೆ ಹಾಕು. ನಾನು ಇಲ್ಲೆ ಬಂದೆ' ಎಂದು ಹೊರಗೆ ಹೋದಳು. ಕೂತಲ್ಲಿಂದ ಕದಲಲಿಲ್ಲ. ಎಷ್ಟು ಹೊತ್ತಾಯಿತೊ. ಮುಂಗಾರು ಮಳೆ. ದಡದಡ ಬಗ್ಗಿಸಿತು. ಬಟ್ಟೆಯೆಲ್ಲ ನೆನೆದು ಮುದ್ದೆಯಾದವು. ಅಕ್ಕ ಬಂದವಳೆ ಸಿಡುಗುಟ್ಟುತ್ತ ಅವನ್ನೆಲ್ಲ ಮತ್ತೆ ಹಿಂಡಿದಳು. ಮನೆಯೊಳಗೇ ಒಣ ಹಾಕಿದಳು. ಅವುಗಳಿಂದ ನೀರು ತೊಟ್ಟಿಕ್ಕುತ್ತಿತ್ತು. ತೊಟ್ಟಿಕ್ಕಿದ ನೀರು ಸಣ್ಣಗೆ ಹರಿದು ಬಂದು ನಾನು ಕೂತಲ್ಲಿ ಸ್ವಲ್ಪ ತಗ್ಗಾದ್ದರಿಂದ ಕೆರೆ ಕಟ್ಟತೊಡಗಿತು. ಹೊರಗೆ ಮಳೆ ನಿಂತಿದ್ದರೂ ಮೋಡಗಳ ಬಡಿದಾಟ, ಆರ್ಭಟ, ಕಿವಿಗೆ ದಸಿ ಓಡಿದಂತೆ ಎದೆಗೆ ಗುದ್ದಿದಂತೆ.

3

ನಾಲ್ಕು ದಿನ ನಂತರ....

■



## ಕ್ಯಾಮೆರಾ ಹಿಂದೆ ಮುಂದೆ!

ಸುಹಾಸಿನಿ ಡಿಗ್ರಿ ಪಡೆದಿದ್ದು ಸಿನಿಮಾಟೋಗ್ರಫಿಯಲ್ಲಿ. ಅನಂತರ ಆಕೆ ಒಂದು ತಮಿಳು ಸಿನಿಮಾಕ್ಕೆ ಕ್ಯಾಮೆರಾ ನಿರ್ವಹಣೆ ಮಾಡಿದ್ದೂ ಉಂಟು. ಅದಾದ ಮೇಲೆ ಆಕೆ ಕೆಲಸ ಮಾಡಿದ್ದು ಕ್ಯಾಮೆರಾದ ಮುಂದೆ ನಾಯಕಿಯಾಗಿ. ಮದುವೆಯಾದ ಮೇಲೆ ಇತ್ತೀಚೆಗೆ ಮದರಾಸು ಟಿವಿ ಚಾನೆಲ್ ಒಂದಕ್ಕೆ 'ಇಂದಿರಾ' ಎಂಬ ಧಾರಾವಾಹಿ ನಿರ್ದೇಶನದಲ್ಲಿ ತೊಡಗಿದ ಮೇಲಷ್ಟೇ ಆಕೆ ಮತ್ತೆ ಕ್ಯಾಮೆರಾ ಹಿಂದಿನ ಕೆಲಸಕ್ಕೆ ಮುಂದಾದರು, ನಿರ್ದೇಶಕಿಯಾಗಿ.

# ನಾನೊಂದು ಮರವಾಗಿದ್ದರೆ




■ ಚಿಂತಾಮಣಿ ಕೊಡ್ಲೆಕೆರೆ

ಮೊದಲ ಬಹುಮಾನ ಪಡೆದ ಪ್ರಬಂಧ

ಇದು ನನ್ನ ಕನ್ನಡ ಶಾಲೆಯ ದಿನಗಳ ಪ್ರಬಂಧಗಳ ಖಾಯಂ ವಿಷಯ. 'ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ' ಕರ್ನಾಟಕದ ನಂದನವನದಲ್ಲಿ ಜನಿಸುವೆನೆಂದು ಕನಸು ಕಂಡ ಪಂಪನ ಬನವಾಸಿ ದೇಶದವನು ನಾನು. ನನಗೆ ಮರವಾಗುವ ಆಸೆ. ಯಾವ ಮರವಾಗಲಿ? ಹಿರೇಗುತ್ತಿಯ ಈಶ್ವರಕೆರೆಯೆದುರು ಚಿಕ್ಕಂದಿನಲ್ಲಿ ಗಂಟೆಗಟ್ಟಲೆ ಕೂರುತ್ತಿದ್ದೆ. ನೆಳಲಿಗೆ ಸಂಪಿಗೆಮರ. ಮೈತುಂಬ ಪರಿಮಳ ಚೆಲ್ಲುವ ಬಿಳಿ-ಹಳದಿ ಬಣ್ಣಗಳ ಹೂಗಳನ್ನು ಮುಡಿದುಕೊಂಡ ಮರ, ಈಗಲೂ ಆ ಹೂಗಳನ್ನು 'ಎತ್ತಿಕೋ, ಬಾ' ಎಂದು ಕೈಬೀಸಿ ಕರೆದಂತಾಗುವುದು. ಅದರ ಟೊಂಗೆಗಳು ಇರುವುದೇ ಹಾಗೆ - ಪ್ರೀತಿಯಿಂದ 'ಬಾ' ಎಂದು ಕರೆಯುವ ಭಂಗಿಯಲ್ಲಿ ನನ್ನ ಮನದೊಳಗೆ ಶಾಶ್ವತವಾಗಿ ನಿಂತುಬಿಟ್ಟಿದೆ. ಮೊನ್ನೆ-ಮೊನ್ನೆ ಬೆಂಗಳೂರಿನಲ್ಲಿ ನನ್ನ ನಿತ್ಯದ ಹಾದಿಯಲ್ಲಿ ಅದೇ ರೀತಿ ನಿಂತಿದ್ದ ಸಂಪಿಗೆ ಮರವನ್ನು ಕಂಡು ಚಕಿತನಾದೆ. ಇಷ್ಟು ದಿನ ಈ ಮರವನ್ನು ನಾನು ಹೇಗೆ ಗಮನಿಸಲಿಲ್ಲ? ಇಲ್ಲಿಯೂ ಹೂಗಳ ಸೀರೆ ಉಟ್ಟ ಮರ, ಅವೆಷ್ಟೋ ಹೂಗಳನ್ನು ಕಾಲ ಕೆಳಗೆ ಚೆಲ್ಲಿಕೊಂಡಿದೆ - ಉಣ್ಣಲು ಕಲಿಯುವ ಮಕ್ಕಳು ಬಟ್ಟಲ ಸುತ್ತಲೂ ಅನ್ನ ಚೆಲ್ಲಿಕೊಂಡ ಹಾಗೆ. ಹಿನ್ನೆಲೆಗಿದ್ದ ನೀಲಿ ಆಕಾಶ - ಈ ಮರ, ಆ ಮರದ ಕಿರಿಯ ಸೋದರನೆಂದು ಪರಿಚಯಿಸಿದ ಹಾಗಾಯಿತು. ಪ್ರೀತಿಯಿಂದ ಮರದ ಮೈ ಸವರಿದೆ. ''ಹಕ್ಕಿಯ ಹಾಡಿಗೆ ತಲೆದೂಗುವ ಹೂ ನಾನಾಗುವ ಆಸೆ'' ಎಂದು ಹಾಡಿದ್ದಾರೆ ಕೆ.ಎಸ್.ನ. ಅಂಥ ಎಷ್ಟೋ ಹೂಗಳನ್ನೂ, ಹಕ್ಕಿಗಳನ್ನೂ ಆದರಿಸುವ ಮರ ನಾನಾಗಬೇಕು. ಆ ಮರದ 'ಕೊರಳೊಳಗಿಂದ' ಹಕ್ಕಿಗಳ ಹಾಡು ಕೇಳಬೇಕು. ಆಗಸಕ್ಕೆ ಮುಖ ಕೊಟ್ಟ ಆ ಮರ ಭೂಮಿಯೊಳಗೆ ಬೇರುಗಳನ್ನಿಳಿಸಿದೆ. ವ್ಯಕ್ತಮಧ್ಯದಲ್ಲಿ ಪರಿಮಳಭರಿತ ಜೀವನದ ಹಸಿರು ಸಂಪತ್ತು. 'ವೃಕ್ಷಗಳಲ್ಲೆಲ್ಲ ಅಶ್ವತ್ಥ ನಾನು' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳಿದ್ದಾನಂತೆ. 'ಊರ್ಧ್ವಮೂಲ ಅಧಃಶಾಖ'ವ ಅಶ್ವತ್ಥ ಜೀವನದ ಸಂಕೇತವಂತೆ.... ಏನೇನೊ ಮಂಪರು ನೆನಪುಗಳು. ನಾನೊಂದು ಮರವಾಗಬೇಕು.

'ನಾನೊಂದು ಮರವಾಗಿದ್ದರೆ' ಯಾರೂ ನನ್ನ ಜಾತಿ, ಕುಲ, ಗೋತ್ರ ಕೇಳುತ್ತಿರಲಿಲ್ಲವೆಂದು ನನ್ನೊಬ್ಬ ಕವಿಮಿತ್ರರು ಒಂದು ಕವಿತೆ ಬರೆದಿದ್ದಾರೆ. ಆ ಮಾತು ಎಷ್ಟು ಸತ್ಯ! ಜಾತ್ಯಾತೀತವಾಗಿ ಬೆಳೆಯುವ ಗಿಡ-ಮರಗಳಿಗೆ ಮನುಷ್ಯನ ಕಟ್ಟುಪಾಡುಗಳ ಹಂಗಿಲ್ಲ. 'ಜಾತ್ಯಾತೀತ' ಎಂಬ ಶಬ್ದ ಬಳಸಿದ್ದಕ್ಕೇ ಅವು ಘರ್-ಘರ್ ನಕ್ಕು ಬಿಟ್ಟಾವು. ನಕ್ಕರೂ ಚೆನ್ನಾಗಿರುತ್ತವೆ -

## ತೀರ್ಪುಗಾರರ ಟಿಪ್ಪಣಿ

'ಬಿಸಿಲ ಬದುಕು' ಪತ್ರಿಕೆ ಏರ್ಪಡಿಸಿದ್ದ, ಪ್ರಬಂಧ ಸ್ಪರ್ಧೆಗೆ ಬಂದ ಪ್ರಬಂಧಗಳನ್ನು ಪರಿಶೀಲನೆ ಮಾಡುವ ಅವಕಾಶ ದೊರಕಿತು. ಇಂದಿನ ಬಹುಪಾಲು ಬರಹಗಾರರು ಲಲಿತ ಪ್ರಬಂಧಕ್ಕೂ ಹರಟೆಗೂ ಮತ್ತು ಹಾಸ್ಯ ಬರಹಕ್ಕೂ ಇರುವ ಅಂತರವನ್ನಾಗಲಿ ಸೂಕ್ಷ್ಮತೆಯನ್ನಾಗಲಿ ಸರಿಯಾಗಿ ಅರಿತಿಲ್ಲ. ಭಾಷೆಯನ್ನು ಬಳಸುವುದರ ಬಗ್ಗೆ ಇರಬೇಕಾದ ಎಚ್ಚರಿಕೆಯೂ ಕಂಡು ಬರುವುದಿಲ್ಲ. ಆದ್ದರಿಂದ ಬಹುಪಾಲು ಬರಹಗಳು ದಿಕ್ಕುತಪ್ಪಿದ ಹರಟೆಗಳಾಗಿ ಅಥವಾ ಒಂದೆರಡು ಜೋಕಿನ ಸುತ್ತಾ ಹೆಣೆದ ಹಸಿಹಸಿ ಬರಹಗಳಾಗಿ ಕಂಡುಬರುತ್ತವೆ. ಕನ್ನಡದಲ್ಲಿ ನೂರುವರ್ಷಗಳ ಪರಂಪರೆಯುಳ್ಳ ಲಲಿತಪ್ರಬಂಧ ಪ್ರಕಾರವನ್ನು ಯುವಕರು ಇನ್ನೂ ಸರಿಯಾಗಿ ಗ್ರಹಿಸಿಲ್ಲ. ಹಿಂದಿನ ಹಿರಿಯರು ಅದನ್ನು ಭಾವಗದ್ಯವಾಗಿ ಬೆಳೆಸಿದ ರೀತಿ; ಅನೇಕ ವಿಚಾರಗಳನ್ನು ಮುದ ನೀಡುವಂತೆ ತಿಳಿಸುವ ವ್ಯಕ್ತಿತ್ವದ ಛಾಪು; ಆತ್ಮೀಯತೆಯ ಹದವನ್ನು ನಮ್ಮ ಯುವ ಲೇಖಕರು ಸಾಧನೆ ಮಾಡಬೇಕಾಗಿದೆ.

ಪ್ರಥಮ ಬಹುಮಾನ ಪಡೆದ ಪ್ರಬಂಧದಲ್ಲಿ ನೆನಪಿನಂಗಳದಿಂದ ಮೂಡಿ ಬರುವ ವಿಚಾರಗಳು ವಸ್ತುವಿನೊಂದಿಗೆ ಹಿತಮಿತವಾಗಿ ವಿಕಾಸಗೊಳ್ಳುತ್ತಾ ಹೋಗುತ್ತವೆ. ಈ ಹಿನ್ನೆಲೆಯಲ್ಲಿ ಮನುಷ್ಯನಿಗೂ ಮರಕ್ಕೂ ಇರುವ ಸಂಬಂಧಗಳ ಅನಾವರಣ ಅರ್ಥಪೂರ್ಣವಾಗಿ ಕಂಡುಬರುತ್ತದೆ. ಲೇಖಕರು ವಸ್ತುವನ್ನು ಹರಡುವ ರೀತಿ, ಅದನ್ನು ನಿಯಂತ್ರಿಸುವ ಸಂಯಮ, ಏಕಸೂತ್ರತೆಯಿಂದ ಕಟ್ಟುವ ವಿಧಾನ ಗಮನಾರ್ಹ. ಹದವರಿತು ಬಳಸುವ ಭಾಷೆಯ ಲಾಲಿತ್ಯದಿಂದ ಪ್ರಬಂಧ ಸರಾಗವಾಗಿ ಓದಿಸಿಕೊಳ್ಳುತ್ತಾ, ಚಿಂತನೆಯ ಬೀಜಗಳನ್ನು ಬಿತ್ತುತ್ತದೆ. ಎರಡನೆಯ ಬಹುಮಾನ ಪಡೆದ ಪ್ರಬಂಧ ಪ್ರತಿವರ್ಷ ನಮ್ಮ ಸುತ್ತಲೂ ನಡೆಯುವ ಸಮುದಾಯದ ನಂಬಿಕೆಯ ಆಚರಣೆಯ ಸುತ್ತಾ ಹರಡಿಕೊಂಡಿದೆ. ಈ ವಸ್ತುವಿನ ಹಿಂದೆ ಇರುವ ಸಾಮಾಜಿಕ ಕಳಕಳಿಯನ್ನು ಮೆಚ್ಚಬೇಕು. ನಿರೂಪಣೆಯ ಸಂದರ್ಭದಲ್ಲಿ ಕೆಲವು ಕಡೆ ಮಾತು ಲಾಲಿತ್ಯದ ಗಡಿಗಳನ್ನು ದಾಟಿ, ಲಹರಿಯ ಪ್ರಸನ್ನತೆಯನ್ನು ಕಳೆದುಕೊಂಡು ಹೇಳಿಕೆಗಳಾಗಿ ಬಿಡುತ್ತದೆ. ಬಹುಮಾನಿತರಿಬ್ಬರು ವಸ್ತುವಿನ ಆಯ್ಕೆಯಲ್ಲಿ, ನಿರೂಪಣೆಯಲ್ಲಿ ಪ್ರಗತಿಪರ ಮನೋಧರ್ಮವನ್ನು ಸೂಚಿಸಿರುವುದು ಆರೋಗ್ಯಕರ, ಅವರು ಎತ್ತುವ ಪ್ರಶ್ನೆಗಳು, ಬದುಕಿನ ಒಳಸುಳಿಯ ಚಿತ್ರಗಳು ಪ್ರಸ್ತುತವಾಗಿವೆ. ಇವರು ಈ ಪ್ರಕಾರದಲ್ಲಿ ಗಂಭೀರವಾಗಿ ತೊಡಗಿಸಿಕೊಂಡರೆ, ಕನ್ನಡ ಜನತೆ ಇನ್ನೂ ಒಳ್ಳೆಯ ಪ್ರಬಂಧಗಳನ್ನು ನಿರೀಕ್ಷಿಸಬಹುದು.

■ ಚಿ. ಶ್ರೀನಿವಾಸರಾಜು

ಹೂಗಳು ಉದುರುತ್ತವೆ! ಜಾತಿಯ ಹಂಗಿಲ್ಲದೆ ಹೂ, ಹಣ್ಣು, ನೆಳಲು ಕೊಡುವ ಮರಗಳು ಮನುಷ್ಯನ ಬಹುಕಾಲದ ಗೆಳೆಯರಂತೆ ಬಾಳಿವೆ. ಅವಕ್ಕೇನಾದರೂ ಮಾತಿನ ಶಕ್ತಿ ಇದ್ದರೆ ಅವು ಕೇಳುತ್ತಿದ್ದ ಮೊದಲನೇ ಪ್ರಶ್ನೆ 'ಇದೇ' ಎಂದು ನನ್ನ ಭಾವನೆ : 'ಯಾಕೆ ಜಾತಿ ಮತ ಅಂತ ಮನಸ್ಸು ಕೆಡಿಸಿಕೊಂಡಿದ್ದೀರಿ? ಎಲ್ಲರೂ ಪ್ರೀತಿಯಿಂದ ಇರಬಾರದೆ?!' ಆದರೆ ಮರಗಳು - ಆ ಮಾತನ್ನು ಒಳಗೊಳಗೇ ಬಚ್ಚಿಟ್ಟುಕೊಂಡು ನೂರಾರು ವರ್ಷಗಳಿಂದ ಮೌನತಾಳಿ ನಿಂತಂತಿವೆ. ಈ ಮರಗಳ ಅಜ್ಜಂದಿರು - ಸಹಸ್ರಮಾನದ ಮರಗಳು - 'ಈ ಮನುಷ್ಯರ ವಿಷಯದಲ್ಲಿ ಮೌನಲೇಸು' ಎಂದು ಬುದ್ಧಿ ಹೇಳಿರಲೂಬಹುದು. ಆದರೇನಂತೆ, ಅಂದಿನಿಂದ ಇಂದಿಗೂ ತಮ್ಮ ವಿಶಾಲ ಬಾಹುಗಳ ಮೇಲೆ ಹಕ್ಕಿಗಳನ್ನು ಕೂರಿಸಿಕೊಂಡು ಮಧುರವಾದ ಹಾಡುಗಳನ್ನು ಹಾಡಿಸಿ ಈ ಮನುಷ್ಯರ ಬುದ್ಧಿಗೆ ಕೊಂಚವಾದರೂ ವಿವೇಕದ ಸ್ಪರ್ಶವಾಗಲಿ, ಹೃದಯ ಮಿಡಿಯುತ್ತಿರಲಿ - ಒಳ್ಳೆಯ ಸಂಗತಿಗಳಿಗೆ, ಎಂಬಂತೆ ಮರಗಳು ಪ್ರಯತ್ನಿಸುವಂತೆ ನನಗೆ ತೋರುತ್ತಿದೆ. ಅವುಗಳ ಪ್ರಯತ್ನಕ್ಕೆ ಕಿಂಚಿತ್ತು ಯಶಸ್ಸು ಸಿಕ್ಕಿದರೂ ಸಿಕ್ಕಿರಬಹುದು, ಆದ್ದರಿಂದಲೇ ಅವು ತಮ್ಮ ಕಾಯಕವನ್ನು ಇಂದಿಗೂ ಮುಂದುವರಿಸಿವೆ.

ತೆಂಗು, ಅಡಿಕೆ ಮರಗಳ ಸುಂದರ ತೋಟಗಳ ನಡುವೆ ನನ್ನ ಬಾಲ್ಯ ಕಳೆದಿದೆ. ಹಿರೇಗುತ್ತಿಯಲ್ಲಿ ನಾವು ಮೊದಲು ಇದ್ದ ಮನೆಗೆ ಹೋಗುವಾಗ ಓಣಿಯಲ್ಲಿ ಒಂದು ಬಾಗಿದ ಉದ್ದಾನುದ್ದ ತೆಂಗಿನ ಮರವನ್ನು ಬಳಸಿ ಹೋಗಬೇಕಿತ್ತು. ಆ ತೆಂಗಿನ ಮರದ ಒಂದು ಪಾರ್ಶ್ವದಿಂದ ನಾನು ಮನೆಕಡೆ ಹೋಗುವಾಗ ನಡೆಯುತ್ತಿದ್ದೆ, ಇನ್ನೊಂದು ಪಾರ್ಶ್ವದಿಂದ ಶಾಲೆಗೆ ಹೋಗುವಾಗ ನಡೆಯುತ್ತಿದ್ದೆ. ಆ ಮನೆಯನ್ನು ಕಲ್ಪಿಸಿಕೊಳ್ಳುವಾಗಲೆಲ್ಲ ನನ್ನ ನೆನಪನ್ನು ಬಾಗಿದ ವಯೋವೃದ್ಧ ತೆಂಗಿನಮರದ ಆಕೃತಿ-ಅರೆಕ್ಷಣ ತಡೆದು, 'ನನ್ನನ್ನು ದಾಟಿ ಹೋಗು' ಎಂದು ಕರೆದಂತಾಗುತ್ತದೆ. ಆ ಮರಕ್ಕೊಂದು ಪೊಟರೆ ಇತ್ತು. ನಮ್ಮ ಚಿಕ್ಕಂದಿನ ಆಟಗಳಲ್ಲಿ ಈ ಮರ, ಅದರ ಆಶ್ರಯ, ಅದರ ಪೊಟರೆ ಯಾವೆಲ್ಲ ಬಗೆಯಿಂದ ಒದಗಿಬಂದವೆಂದು ವಿವರಿಸುತ್ತ ಹೋಗುವುದು ನನಗೆ ಇಷ್ಟ, ಆದರೆ ಆ ಆಸೆಯನ್ನು ತಡೆದು ಮುಂದೆ ಹೋಗಬಯಸುವೆ. ಹಿರೇಗುತ್ತಿಯ ನಮ್ಮ ಆ ಮನೆಗೆ ಬೆಂಗಳೂರಿನಿಂದ ನಮ್ಮ ತಂದೆಯವರ ಸ್ನೇಹಿತರ ಕುಟುಂಬ ಒಮ್ಮೆ ಬಂದಿತ್ತು. ಆಗ ನಾವು ನಮ್ಮ ಮನೆಯ ಪಾಗಾರದ ಬಳಿ ನಿಂತು, ಈ ಬಾಗಿದ ತೆಂಗಿನ ಮರದ ಜಂಕ್ಷನ್ ಅನ್ನು ದಾಟುತ್ತಿದ್ದ ವೃದ್ಧ ದಂಪತಿಗಳನ್ನು ಕಂಡು ಸಂಭ್ರಮಿಸಿದೆವು. ಸೂರ್ಯ ಕಂತುತ್ತಿದ್ದ ಸಂಜೆಯ ಆ ಹೊಂಬೆಳಕಿನಲ್ಲಿ ನನ್ನ ತಂದೆ-ತಾಯಿಯರನ್ನು ಮಕ್ಕಳಂತೆ ಕಾಣುತ್ತಿದ್ದ ಬೆಂಗಳೂರಿನ ಹಿರಿಯರು ಪ್ರವೇಶಿಸಬೇಕೆಂದರೆ ಅವರು ಈ ಬಾಗಿದ ತೆಂಗಿನ ಮರದ ವೃತ್ತವನ್ನು ದಾಟಿಯೇ ಬರಬೇಕು. ನನಗನಿಸುತ್ತದೆ, ಆ ತೆಂಗಿನ ಮರದ ಬಳಿ ಇಂಥ ಎಷ್ಟೋ ಆಪ್ತ, ಮುಗ್ಧ ಪ್ರೀತಿಯ ಕ್ಷಣಗಳ ನೆನಪುಗಳಿರಬಹುದು. 'ಸದ್ಯದಲ್ಲೇ ಯಾವಾಗಲೋ ಅದು ಮುರಿದು ಬೀಳುತ್ತದೆ' ಎಂದು ನಾನು ಚಿಕ್ಕಂದಿನಲ್ಲಿದ್ದಾಗಲೇ ಹಿರಿಯರು ಆ ಮರದ ಕುರಿತು ಹೇಳುತ್ತಿದ್ದರು. ಈಗ ಎರಡು-ಮೂರು ವರ್ಷಗಳ ಹಿಂದೆ ಹಿರೇಗುತ್ತಿಗೆ ಹೋದಾಗಲೂ ಸೊನಗಾರ ಕೇರಿಯ ನನ್ನ ಆ ಪ್ರೀತಿಯ ಮರವನ್ನು ಕಂಡೆ. ಅದೆಷ್ಟು ಸಂತೋಷವಾಯಿತೆಂದು ಹೇಳುವುದು ಕಷ್ಟ, ಚಿಕ್ಕಂದಿನ ದಿನಗಳಂತೆ ಪ್ರೀತಿಯಿಂದ ಆ ಮರದ ಮೈ ಸವರಿದೆ. ಅದರ ಗರಿಗಳ ತುದಿಯಿಂದ ಆಕಾಶವನ್ನು ನೋಡಿದೆ.

ಆ ಚಿಕ್ಕಂದಿನ ದಿನಗಳಲ್ಲಿ ನನ್ನದೊಂದು ವಿಚಿತ್ರ ಕಲ್ಪನೆ ಇತ್ತು. ನಮ್ಮ ಮನೆ ಮುಂದಿರುವ ತೆಂಗಿನ ಮರವನ್ನು ಕಂಡಾಗಲೆಲ್ಲ ಇಷ್ಟು ಉದ್ದದ ಮರವನ್ನು ಹತ್ತಿದರೆ ಆಕಾಶಕ್ಕೆ ಕೊಕ್ಕೆ ಹಾಕಿ ಮೋಡಗಳಿಗೆ ತೂತು ಕೊರೆಯಲಾಗುವುದಿಲ್ಲವೇ ಎಂಬೊಂದು ಆಸೆ ನನ್ನನ್ನು ತುಂಬುತ್ತಿದ್ದುದನ್ನು ನೆನೆದು ಈಗ ನಗು ಬರುತ್ತದೆ. ನಮ್ಮ ಕೇರಿಯ ಸುಮಂಗಲಿಯರು ಭಕ್ತಿ ಭಾವದಿಂದ ದಿನಾಲೂ ಬೆಳಿಗ್ಗೆ ಅಶ್ವತ್ಥದ ಕಟ್ಟೆ ಸುತ್ತುತ್ತಿದ್ದುದನ್ನೂ ನೆನೆಯುತ್ತಿದ್ದೇನೆ. ಮೈ ತುಂಬ ಟಿಸಿಲೊಡೆದು ದಪ್ಪ ಕಾಂಡದ ಶರೀರದ ಮೇಲೆ ದಟ್ಟ ಹಸಿರೆಲೆಗಳ ಸಿರಿ ಮುಡಿದು ನಿಲ್ಲುವ ಅಶ್ವತ್ಥಕ್ಕೆ ಗಂಭೀರ ತಪಸ್ವಿಯ ತೇಜಸ್ವೀ ನಿಲುವಿದೆ. ''ಅಶ್ವತ್ಥ ಮರದೊಳಗೆ ಬ್ರಹ್ಮರಾಕ್ಷಸ ಇದ್ದಾನಂತೆ, ಹೊತ್ತಲ್ಲದ ಹೊತ್ತಿಗೆ ಅಶ್ವತ್ಥ ಕಟ್ಟೆಗೆ ಹೋಗಬಾರದಂತೆ, ಅಶ್ವತ್ಥದ ಕಟ್ಟಿಗೆ ಕಡಿದು ಒಲೆಗೆ ಒಟ್ಟಬಾರದಂತೆ.

ಮರಗಳು ಮನುಷ್ಯನ ಜೀವಿತದ, ವಿಕಾಸದ ಉದ್ದಕ್ಕೂ ಜೊತೆಯಾಗಿ ಬಂದಿವೆ. ಮರಗಳ ಮೇಲೆ ಕೂತವರಲ್ಲವೇ ನಮ್ಮ ಪೂರ್ವಜರು? ಮುಂದೆ ವನಮಾನವನಾಗಿ ಗುಹೆಗಳಲ್ಲಿರುವಾಗಲೂ ಮರಗಳು ಅವನ ಜೀವನದಲ್ಲಿ ಯಾವವೋ ಕಾರಣಗಳಿಗೆ ಒದಗಿಬಂದಿರಬೇಕು. ಇಂದು ಅವನು ಅತ್ಯಾಧುನಿಕತೆಯ ಭ್ರಮೆಯಲ್ಲಿ ಬಳಲುವಾಗಲೂ ಆ ಮರಗಳು ಕಿಟಕಿಬಾಗಿಲುಗಳಾಗಿ ಅವನ ಪಾಲಿಗೆ ಕಿಂಚಿತ್ತು ಬೆಳಕು ತುಂಬಲು ಯತ್ನಿಸುತ್ತಿವೆ. ಅವನ ಆಸನವಾಗಿ ಅವು ಭಾರ ಹೊರುತ್ತವೆ. ಓ-ಅವನ ಟಿ.ವಿ. ಸೆಟ್ಟನ್ನೂ ಅವು ಹೊತ್ತಿವೆ. ಬೆಡ್‌ರೂಮಿನಲ್ಲಿ ಮಂಚಗಳಾಗಿ ಅವು ಅವನ ನಿದ್ದೆಯನ್ನು ಕಾಯುತ್ತವೆ. ಚಿಕ್ಕ ಮಗುವಾಗಿದ್ದಾಗ ಮರಗಳೇ ತೊಟ್ಟಿಲಾಗಿ ಬಂದು ಅವನನ್ನು ತೂಗಿದ್ದವು. ಅವನ ಹೇಲು-ಉಚ್ಚೆಗಳನ್ನು ಮೌನವಾಗಿ ಸಹಿಸಿಕೊಂಡವು. ಮರಗಳು ಅವನನ್ನು ಅವನ ಕೊನೆಯ ಪ್ರಯಾಣದಲ್ಲೂ ಜತೆಗೂಡುವವು. ಜೀವನದ ನಶ್ವರತೆಯನ್ನು ಅರಿತು ಚೇತನವು ಅಚೇತನದಿಂದ ಬಿಡುಗಡೆ ಪಡೆದು ಭಸ್ಮವಾಗುವಾಗ ಮರಗಳು ಆ ಪೂರ್ಣತೆಯ ಯಾತ್ರೆಯಲ್ಲಿ ತಮ್ಮನ್ನೂ ಕಳೆದುಕೊಳ್ಳುವವು. ಮತ್ತೆ ಭೂಮಿಗೆ ಭೂಮಿ, ಆಕಾಶಕ್ಕೆ ಆಕಾಶ, ನೀರಿಗೆ ನೀರು ಸೇರುವಾಗ ಮನುಷ್ಯನ ಚೇತನದೊಡನೆ ಮರದ ಚೇತನವೂ ಕೂಡಿ ಅನೂಹ್ಯದತ್ತ ಪ್ರಯಾಣ ಕೈಗೊಳ್ಳುವುದು. ಮರಗಿಡಗಳಿಗೂ ಜೀವವಿದೆ ಎಂದು ಜಗದೀಶ್ ಚಂದ್ರ ಭೋಸರು ಹೇಳಿದರು. ವೈಜ್ಞಾನಿಕವಾಗಿ ಸಿದ್ಧ ಮಾಡಿ ತೋರಿಸಿದರು. ಅದಕ್ಕೂ ಮೊದಲೇ ಮರ ಒಂದು ಜೀವಂತ ಸಂಗಾತಿಯಾಗಿಯೇ ನಮ್ಮ ಬಾಳನ್ನು ಪ್ರವೇಶಿಸಿರುವುದೆಂದು ಎಲ್ಲರೂ ಬಲ್ಲೆವು. ಆದರೂ ತನ್ನ ಜತೆಗಾತಿಯ ಮನಸ್ಸು, ಸಂವೇದನೆಗಳನ್ನು ಅರಿಯಲು ಮನುಷ್ಯ ತೆಗೆದುಕೊಂಡ ಅವಧಿ ಎಷ್ಟು ದೊಡ್ಡದು! ಅವನ ಇಂಥ ಅಸೂಕ್ಷ್ಮ ವ್ಯಕ್ತಿತ್ವವನ್ನು ಮರಗಳು ಕ್ಷಮಿಸುತ್ತಲೇ ಬಂದಿವೆ.

ನನ್ನೂರಿನಿಂದ ಬೆಂಗಳೂರಿಗೆ ಈ ಮರಗಳೇ ರಸ್ತೆಯ ಇಕ್ಕೆಲಗಳಲ್ಲಿ ನಿಂತು ನನ್ನನ್ನು ಕರೆತಂದವು. ಆಗಾಗ ನನ್ನೂರಿಗೆ ಅವು ನನ್ನನ್ನು ಕರೆದೊಯ್ಯುವವು. ಒಂದು ಮರ ಮಾತಾಡುವಾಗ ಶಬ್ದಗಳೇ ಇರುವುದಿಲ್ಲ ಆದರೂ ಅದು ಮಾತಾಡುತ್ತದೆ. ''ನೀವು ಯಾವ ಡಿಪಾರ್ಟ್‌ಮೆಂಟಿನಲ್ಲಿದ್ದೀರಿ?'' ಎಂದು ಯಾವ ಮರವೂ ನನ್ನನ್ನು ಈವರೆಗೆ ಕೇಳಿಲ್ಲ. ಮರಗಳಿಗೆ ಇಡೀ ವಿಶ್ವ ಒಂದೇ ಡಿಪಾರ್ಟ್‌ಮೆಂಟ್ ಮತ್ತೆ, ಒಳ ಇಲಾಖೆಗಳಿಲ್ಲ. ಮರಗಳು ಫಾರೆಸ್ಟ್ ಡಿಪಾರ್ಟ್‌ಮೆಂಟಿಗೆ ಸಂಬಂಧಿಸಿದ ಸಂಗತಿಗಳೆಂದು ತಿಳಿದವರು ನಾವು ಮತ್ತು ಫಾರೆಸ್ಟ್ ಡಿಪಾರ್ಟ್‌ಮೆಂಟಿನವರು ಮಾತ್ರ. ನಿಜವಾಗಿ ಹೇಳಬೇಕೆಂದರೆ ಮರಗಳಿಗೆ ಫಾರೆಸ್ಟ್ ಡಿಪಾರ್ಟ್‌ಮೆಂಟಿನ ಅಸ್ತಿತ್ವವೂ ತಿಳಿದಿರಲಾರದು. ಮರಗಳ ಮೇಲೆ ಎಷ್ಟೊ ಕಡೆ ಸಂಖ್ಯೆಗಳನ್ನು ಬರೆದಿರುತ್ತಾರೆ. ಅದಕ್ಕೆ ಯಾವ್ಯಾವುದೋ

### ಚಂಪಾ ಅಂದರೆ ಯಾವಳ್ ರೀ!....

ಸಂಸ್ಕೃತಿ ಇಲಾಖೆಯ ಖಾತೆ ಹೊಂದಿದ್ದ ಸಚಿವ ಎಸ್.ರಮೇಶ್ ಧಾರವಾಡಕ್ಕೆ ಹೋಗಿದ್ದರು. ಇದ್ದಕ್ಕಿದ್ದಂತೆ ಧಾರವಾಡದ ಪ್ರಮುಖ ಸಾಹಿತಿಗಳನ್ನು ಭೇಟಿ ಮಾಡಿ, ಹಾರಹಾಕಿ ಅವರನ್ನು ಗೌರವಿಸಬೇಕೆನ್ನಿಸಿತು. ''ಇಲ್ಲಿ ದೊಡ್ಡ ಸಾಹಿತಿಗಳು ಯಾರ್‍ರಿ?'' ಸಚಿವರು ಕೇಳಿದರು.

''ಬೇಂದ್ರೆ, ಶಂಬಾ, ಬಸವನಾಳ....'' ಪಿ.ಎ. ಹೇಳಿದರು.

''ನಡೀರಿ ಅವರ ಮನೆಗಳಿಗೆ ಹೋಗೋಣ'' ಸಚಿವರ ಉವಾಚ.

''ಅವರ್‍ಯಾರೂ ಬದುಕಿಲ್ಲ ಸಾರ್'' ಪಿ.ಎ. ಉತ್ತರ.

''ಬದುಕಿರೋರು ಯಾರ್‍ರೀ?'' ಸಚಿವರ ಪ್ರಶ್ನೆ.

''ಚಂಪಾ ಸಾರ್'' ಪಿ.ಎ. ಉತ್ತರ.

''ಯಾವಳ್ ರೀ ಚಂಪಾ ಅಂದರೆ? ನಡೀರಿ ಅವಳಿಗೇ ಹಾರ ಹಾಕೋಣ!'' ಸಚಿವರ ಉವಾಚ.

'ಆಡಳಿತಾತ್ಮಕ', 'ತಾಂತ್ರಿಕ' ಕಾರಣಗಳಿರಬಹುದು, ಅವನ್ನು ಅಲ್ಲಗಳೆಯುವಂತೆಯೇ ಇಲ್ಲ. ಆದರೆ ಒಂದು ಸುಂದರವಾದ ಮರಕ್ಕೆ '177ನೇ ನಂಬರಿನ ಮರ' ಎಂದು ಯಾರಾದರೂ ಹೇಳಿದರೆ ನನಗೆ ತುಂಬ ಕಸಿವಿಸಿಯಾಗುತ್ತದೆ. '177ನೇ ನಂಬರಿನ ಖೈದಿ' ಎಂದು ಸೆರೆಮನೆಯಲ್ಲಿರುವಾತನ ಕುರಿತು ಮಾತನಾಡಿದಂತೆ ಭಾಸವಾಗುತ್ತದೆ. ನಮ್ಮ ನಗರಗಳ ಉದ್ಯಾನವನಗಳಲ್ಲಿರುವ ಮರಗಳಂತೂ ತುಂಬ ದೊಡ್ಡ ದೊಡ್ಡ ರಹಸ್ಯಗಳನ್ನು ಅಡಗಿಸಿಟ್ಟುಕೊಂಡಿವೆ! ಒಂದು ದಿನವಂತೂ ಒಂದು ದೊಡ್ಡ ಮರ ಹೇಳಿತು, ''ನೋಡು, ಈಗ ತಾನೇ ಹೋದನಲ್ಲ ಆ ಪ್ರೇಮಿ - ತನ್ನ ಗೆಳತಿಯೊಡನೆ? ಅವನ ತಂದೆ ಕೂಡ ನನ್ನ ನೆಳಲಲ್ಲೇ ಪ್ರೇಮಿಸಿದ್ದನು'' ಕಾಲ ಒಂದು ಮರದ ಜೀವಿತದಲ್ಲಿ ಹಾದು ಹೋದ ಬಗೆಯನ್ನು ಕಂಡು ವಿಸ್ಮಿತನಾದೆ. ಮುಗುಳುನಕ್ಕೆ. ಎಷ್ಟೋ ಭಗ್ನ ಪ್ರಣಯಗಳ, ಅಪವಿತ್ರ ಸಂಬಂಧಗಳ ಕಥೆಗಳೂ ಒಂದು ಮರದ ನೆನಪಲ್ಲಿ ಉಳಿದಿರಲು ಸಾಕು, ವರ್ಷಕಾಲದ ಮಳೆಯೂ ಆ ನೆನಪುಗಳನ್ನು ತೋಯಿಸಿಕೊಂಡು ಹೋಗಲಾರದು. ಈ ಮನುಷ್ಯ ಎಷ್ಟು ಕೊಳಕ ಎಂಬುದು ಒಂದು ಮರಕ್ಕೆ ಗೊತ್ತಿದ್ದಷ್ಟು ಚೆನ್ನಾಗಿ ಇನ್ನಾರಿಗೂ ತಿಳಿದಿರಲಾರದು. ಹಾಗೆಯೇ ಮನುಷ್ಯನ ಘನತೆಯನ್ನು ಕೂಡ ಅದು ಬಲ್ಲದು. ಬುದ್ಧನಂಥ ವ್ಯಕ್ತಿ ಒಂದು ಮರದ ಕೆಳಗೆ ಕುಳಿತು ಜೀವಿತದ ಆದಿ ಪ್ರಶ್ನೆಗಳನ್ನು ಕೆದಕಿದ. ಅವನಿಗೆ ಜ್ಞಾನೋದಯವಾದಾಗ ಮರ ನೆರಳು ನೀಡುತ್ತಲೇ ಇತ್ತು.ಮನುಷ್ಯನ ಮನಸ್ಸು ಇಳಿಯಬಲ್ಲ ಆಳಗಳನ್ನು, ಏರಬಲ್ಲ ಎತ್ತರಗಳನ್ನು ಅದು ಗುರುತಿಸಿತು. ಅಂಥ ಘನತೆ ಮನುಷ್ಯನಿಗೆ ಸಾಧ್ಯವೆಂದೇ ಮರ ಅವನನ್ನು ಸಹಿಸುತ್ತ ಬಂದಿದೆ. ತನ್ನನ್ನು ಕಡಿದಾಗಲೂ 'ಹುಡುಗುಬುದ್ಧಿ' 'ಅವಿವೇಕದ್ದು' ಎಂದು ಕರೆದು ಕ್ಷಮಿಸಿದೆ. 'ತಾನಿಲ್ಲದೇ ಇವನು ಇರಲಾರ' ಎಂದು ಅದಕ್ಕೆ ಗೊತ್ತು. ಮನುಷ್ಯನ ಸಾಹಸಶೀಲತೆಯ ಕುರಿತು ಅದಕ್ಕೆ ಮೆಚ್ಚುಗೆ ಮಾತ್ರ ಇರಲು ಸಾಧ್ಯ.

ನಮ್ಮ ಇತಿಹಾಸ ಪಾಠದ ಎಲ್ಲ ಒಳ್ಳೆಯ ರಾಜರೂ ರಸ್ತೆಯ ಇಕ್ಕೆಲಗಳಲ್ಲಿ 'ಸಾಲು ಮರಗಳನ್ನು ನೆಡಿಸಿದವರು'. ಇದಕ್ಕೆ ಪ್ರತಿಯಾಗಿ ಸಾಲುಮರಗಳನ್ನು ನೆಡಿಸಿದವರೆಲ್ಲ ರಾಜರಾಗಬಹುದೆ? ಅದು ಹುಚ್ಚು ವಾದ. ಆದರೆ ಸಾಲುಮರದ ತಿಮ್ಮಕ್ಕನಂಥವರ ಜೀವನ ಹೇಳುವ ಕತೆಯೇ ಬೇರೆ. ಮಕ್ಕಳಿಲ್ಲದ ಆ ದಂಪತಿಗಳು ಗಿಡಗಳನ್ನು ಬೆಳೆಸಿದರು. ರಸ್ತೆಯ ಇಕ್ಕೆಲಗಳಲ್ಲಿ ಬೆಳೆದ ಮರಗಳನ್ನು ತಮ್ಮ ಮಕ್ಕಳಂತೆ ಕಂಡರು. ಆ ಮುಗ್ಧ ಹಳ್ಳಿಯ ತಾಯಿ ಒಂದು ಸಂದರ್ಶನದ ಪ್ರಶ್ನೆಗೆ ಕೊಟ್ಟ ಉತ್ತರ ತುಂಬ ಚೆನ್ನಾಗಿದೆ. 'ಮರುಜನ್ಮವಿದ್ದರೆ ಏನಾಗಬಯಸುತ್ತೀರಿ?' ಎಂಬುದು ಪ್ರಶ್ನೆ. ಅದಕ್ಕೆ ಏನೆಲ್ಲ ಉತ್ತರಗಳಿರಲು ಸಾಧ್ಯವಿದೆ. ಆದರೆ ತಿಮ್ಮಕ್ಕನ ಉತ್ತರ ಒಂದೇ ಶಬ್ದದಲ್ಲಿದೆ. 'ಮರವಾಗಲು' ಎಂದು ಉತ್ತರಿಸಿದ್ದಾಳೆ ಅವಳು. ಮಕ್ಕಳಿಲ್ಲದ, ಪ್ರಾಯ ಅಕ್ಷರವನ್ನೂ ಕಲಿತಿರದ ತಿಮ್ಮಕ್ಕ ಬಾಳಿಗೆ ಕೃತಕೃತ್ಯತೆಯನ್ನು ತರಬಲ್ಲ ಗುಣ ಮರದ ಜೀವಿತದಲ್ಲಿದೆ ಎಂದು ಅದಾವುದೋ ಏಕಾಂತದ ಕ್ಷಣದಲ್ಲಿ ಕಂಡುಕೊಂಡಿರಬೇಕು. ಅವಳೇ ಬೆಳೆಸಿದ ಮರವೊಂದರಲ್ಲಿ ಕುಳಿತ ಕೋಗಿಲೆ ಅವಳು ಅಂದುಕೊಂಡಿದ್ದು ಸತ್ಯವೆಂದು ಅದೇ ಕ್ಷಣದಲ್ಲಿ ತನ್ನ ಇಂಚರದಿಂದ ಸಮರ್ಥಿಸಿರಬಹುದು.

ಕೊಡಲಿ ಹಿಡಿದು, ಬುಲ್‌ಡೋಝರ್ ಹೊಡೆದು ಮರಗಳನ್ನು ಸವರುತ್ತ ಬಂದ ಮಾನವನಿಗೆ ಅದಾವುದೋ ಕ್ಷಣದಲ್ಲಿ 'ಇವೆಲ್ಲ ಅತಿಯಾಯಿತು' ಎಂದೂ ಅನಿಸಿರಬೇಕು. ಹಾಗೆಯೇ ವನಮಹೋತ್ಸವಗಳು, ಅಭಯಾರಣ್ಯಗಳು, ಅರಣ್ಯೀಕರಣದ ಪರಿಕಲ್ಪನೆಗಳು ಅರಳಿದವು. ಈಗ ಟೆರೇಸ್ ಮೇಲೆ ಗಾರ್ಡನ್ ಬೆಳೆಸುವ ಸೂಚನೆಗಳೂ ಬರುತ್ತಿವೆ. ನಮ್ಮ ನಗರಗಳೆಲ್ಲವೂ ಹಳ್ಳಿಗಳನ್ನು, ಮರಗಳನ್ನು, ಕಾಡುಗಳನ್ನು ನಾಶಮಾಡಿ ಹುಟ್ಟಿಕೊಂಡವು. ಆದರೂ ಮನುಷ್ಯ ಅವುಗಳನ್ನು ಪೂರ್ತಿ ನಾಶಮಾಡಲೂ ಒಲ್ಲ. ಮೂವತ್ತು ನಲವತ್ತರ ಪುಟ್ಟ ಸೈಟಲ್ಲೂ ನಾಲ್ಕು ಮೂಲೆಗೆ ನಾಲ್ಕು ಮರಗಳನ್ನು ನೆಡುವುದು ತೀರ ಸಾಮಾನ್ಯ ಸಂಗತಿ. ಅಂಥ ತೆಂಗಿನಮರಗಳಿಂದ ಕಾಯಿಗಳನ್ನಿಳಿಸಲು ಟೆರೇಸ್ ಏರಿ ಕೊಕ್ಕೆ ಮುಂಚಾಚುವ ಸಾಹಸಿಗರನ್ನು ಕಂಡು ಮೆಚ್ಚಿದ್ದೇನೆ. ಬಟ್ಟೆ ತೊಳೆದ ನೀರು ಚೆಲ್ಲುವಲ್ಲಿ ಪುಟ್ಟ ಬೇವಿನಗಿಡ, ಬಸಳೆ, ಲಿಂಬುಗಿಡ, ಮನೆ ಎದುರಿಗೆ ಪುಟ್ಟ ತುಳಸಿಕಟ್ಟೆ, ಇಲ್ಲ, ಎಂಥ ಅಮಾನುಷತೆಯಲ್ಲೂ ಮಾನವನ ಬದುಕಿಗೆ ಹಸಿರಿನ ಸ್ಪರ್ಶದಿಂದ ನಿಜಚೈತನ್ಯ ತುಂಬಲು ಮರಗಳು, ಗಿಡಗಳು ಕಾದುನಿಂತಿವೆ. ಅವುಗಳನ್ನು ಕಡಿದು ಆತ ಎಂಟು ಸ್ಟೋರಿನ ಮನೆ ಕಟ್ಟಿದರೇನಂತೆ, ಆ ಮನೆಯ ಸುತ್ತಲಲ್ಲಾದರೂ ಜೀವ ಕುಟುಕುಟು ಹಿಡಿದು ಮರಗಳು ಹಸಿರುನಗೆ ಚೆಲ್ಲಿವೆ. ಅದು ಸೋತ ನಗುವಲ್ಲ. ಎಂಥ ಕ್ಷಣದಲ್ಲೂ ತನ್ನ ಒಳಚೈತನ್ಯವನ್ನು ಬತ್ತಲು ಬಿಡದ ಸೃಜನಶೀಲ ವ್ಯಕ್ತಿತ್ವದ ಮುಗುಳ್ನಗೆ. ಅಂಥ ಭರವಸೆಯಿಂದಲೇ ಇವತ್ತಿಗೂ ಗಿಡಗಳು ನೂರಾರು ಹೂಗಳನ್ನು ಅರಳಿಸುತ್ತವೆ, ಮರಗಳು ಸಾವಿರಾರು ಹಣ್ಣುಗಳನ್ನು ನೀಡುತ್ತವೆ, ಹೆಸರು-ಕುಲ-ಗೋತ್ರ ಗೊತ್ತಿರದ ಹಕ್ಕಿಗಳನ್ನು ತಮ್ಮ ಭುಜಗಳ ಮೇಲೆ ಕೂರಿಸಿಕೊಳ್ಳುತ್ತವೆ, ಎಲ್ಲ ಮಿತಿಗಳನ್ನು ಮೀರುವ ಹಕ್ಕಿಗಳ ಕುಕಿಲುವಿಕೆಯಲ್ಲಿ ಮನುಷ್ಯ ಲೋಕದ ಸಣ್ಣತನ ಕೊಚ್ಚಿಹೋಗುವ ಪ್ರವಾಹವನ್ನು ಸೃಷ್ಟಿಸುತ್ತವೆ. ಇದು ಕಟ್ಟುಕತೆಯಲ್ಲ, ನಿತ್ಯ ನಡೆಯುತ್ತಿರುವ ವಿದ್ಯಮಾನ. ಇದನ್ನರಿಯಲು ಗಿಡಮರಗಳ ಮೌನವನ್ನು ಅರಿಯಬೇಕು, ಹಕ್ಕಿಗಳ ಹಾಡನ್ನು ಕಲಿಯಬೇಕು.

ನಮ್ಮ ಪರಿಸರ ಪ್ರೇಮಿಗಳು ಕಾಡುಗಳನ್ನು, ಮರಗಳನ್ನು ಉಳಿಸಿಕೊಳ್ಳಬೇಕೆಂದು ಹೋರಾಡುವ ಹಿನ್ನೆಲೆಯಲ್ಲಿರುವುದು ಇಂಥವೇ ಕಾಳಜಿಗಳು. ''ಅಪ್ಪಿಕೋ'' ಚಳವಳಿಗಳು ನಾಡಿನಾದ್ಯಂತ ಇಂಥ ಜಾಗೃತಿ ತುಂಬಲೆತ್ನಿಸಿವೆ. ಕಾರಂತರಂಥ ಧೀಮಂತರು ''ಉತ್ತರ ಕನ್ನಡದ ಕಾಡುಗಳಲ್ಲಿರುವಂಥ ಸಸ್ಯವೈವಿಧ್ಯ ಇಡೀ ದೇಶದ ಕಾಡುಗಳಲ್ಲಿ ಇಲ್ಲ'' ಎಂದು ಹೇಳಿದಾಗ ಸಹಜವಾಗಿಯೇ ಹೆಮ್ಮೆ ಪಟ್ಟಿದ್ದೇನೆ. ''ಈ ಸಹ್ಯಾದ್ರಿ ಕಾಡೇ ನಮ್ಮ ಕರಾವಳಿ ಜಿಲ್ಲೆ ನಾಡಿಗಿತ್ತ ದೊಡ್ಡ ಕೊಡುಗೆ' ಎಂದು ನಮ್ಮೂರಿನ ಒಬ್ಬ ಚಿಂತನಶೀಲರು ಹೇಳಿದ ಮಾತೂ ನೆನಪಿಗೆ ಬರುತ್ತಿದೆ. ಇಂಥ ಕಾಡು, ಇಂಥ ಮರಗಳ ಸಂಪತ್ತಿಗೆ ವಾರಸುದಾರರೆಂದುಕೊಳ್ಳುವುದು ನಿಜಕ್ಕೂ ಅಭಿಮಾನದ ಸಂಗತಿ. ಜನವಸತಿಗಿಂತಲೂ ಅರಣ್ಯಭಾಗವೇ ಹೆಚ್ಚಿರುವ ಏಕೈಕ ಜಿಲ್ಲೆಯೆಂದರೆ ಉತ್ತರ ಕನ್ನಡ. ಆ ಕಾಡುಗಳ ಗಂಭೀರ ಮೌನವನ್ನು ಹೊತ್ತ ಕಾದಂಬರಿಯನ್ನು ಬರೆಯಲು ಸಾಧ್ಯವಾಗಿದ್ದು 'ಬೆಟ್ಟದ ಜೀವ' ಬರೆದ ಕಾರಂತರಿಗೆ ಮತ್ತು 'ಮಲೆಗಳಲ್ಲಿ ಮದುಮಗಳು', 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'ಯನ್ನು ಬರೆದ ಕುವೆಂಪುರವರಿಗೆ ಮಾತ್ರ. ಬೆಟ್ಟದ ನಡುವೆ ಬದುಕಿದ ಬೆಟ್ಟದಂಥ ವ್ಯಕ್ತಿ 'ಬೆಟ್ಟದ ಜೀವ'ದ ಮಹಾಬಲಯ್ಯ. ಕುವೆಂಪುರವರ ಹೂವಯ್ಯ ಮಲೆನಾಡಿನ ಆ ಗಂಭೀರ ಘನವಿಪಿನದ



## 'ಸ್ಪರ್ಶ' ಸುಖ

ಸುನಿಲ್‌ಕುಮಾರ್ ದೇಸಾಯಿ ಅವರ 'ಪ್ರತ್ಯರ್ಥ' ಟುಸ್ ಅಂದ್ಮೇಲೆ ಹೇಗಾದರೂ ಮಾಡಿ ಮತ್ತೊಮ್ಮೆ 'ನಮ್ಮೂರ ಮಂದಾರ ಹೂವೆ'ಯ ಖ್ಯಾತಿ ಮರಳಿ ಪಡೆಯಬೇಕೆಂದು ದೇಸಾಯಿ ಕೊಲ್ಲೂರಿನ ಮೂಕಾಂಬಿಕಾದೇವಿಯ ಮುಂದೆ ಪ್ರತಿಜ್ಞೆ ಮಾಡಿದರಂತೆ. ಸುಮಾರು ದಿನ ಬೆಂಗಳೂರಿನಿಂದ 'ಗಾಯಬ್' ಕೂಡ ಆಗಿದ್ದರು.

'ಪ್ರತ್ಯರ್ಥ, ಹೋದರೆ ಹೋಗಲಿ, ಅದು ಒಳ್ಳೆಯ ನಟನನ್ನು ನನಗೆ ಪರಿಚಯಿಸಿತು' ಎನ್ನುವ ದೇಸಾಯಿಯವರಿಗೆ ಆ ಚಿತ್ರದಲ್ಲಿ ಸುದೀಪ್ ಸಂಜೀವ್ ಎಂಬ ನಟನ ನಟನೆ ರಮೇಶನಿಗಿಂತಲೂ ಚೆನ್ನಾಗಿ ಕಂಡಿರಬೇಕು.

ಕೊನೆಗೂ ಮೂಕಾಂಬಿಕೆಯ ಕೃಪಾಕಟಾಕ್ಷದಿಂದ ದೇಸಾಯಿ ತಲೆಯಲ್ಲಿ 'ಸ್ಪರ್ಶ' ಎಂಬ ಪ್ರೇಮಕತೆ ಹುಟ್ಟಿಕೊಂಡಿತು. ಆಕೆಯ ದಯೆ ಸುದೀಪನ ಮೇಲೆಯೂ ಪ್ರಭಾವ ಬೀರಿ ಆತನೇ 'ಸ್ಪರ್ಶ'ಕ್ಕೆ ನಾಯಕನಾಗಿರುವನು. ವಿಷಯ ಇದಲ್ಲ, ಮೊನ್ನೆ ತಾನೆ ಅಂದರೆ ಸುಮಾರು ಒಂದು ವರ್ಷದ ಹಿಂದೆ ಮದುವೆಯಾಗಿದ್ದ ದೇಸಾಯಿಗೆ ಮಗುವೊಂದಾಗಿದೆ. ಅದು 'ಸ್ಪರ್ಶ' ಸುಖವೋ, ಮಗುವಿನ ಮುಗ್ಧ ನಗೆಯೋ...!

ಗಹನಮೌನ, ಪಕ್ಷಿಗಳ ಕುಕಿಲುವಿಕೆ, ಅನನ್ಯ ವೃಕ್ಷರಾಶಿಗಳ ಅಪೂರ್ವ ವಿಸ್ತಾರಗಳ ನಡುವೆಯೇ ಆಧ್ಯಾತ್ಮಿಕ ತತ್ವಾನ್ವೇಷಣೆಗಳಿಗೂ ಎಳಸಿದವನು. ಕರಾವಳಿ ಮಲೆನಾಡುಗಳ ಮರಗಿಡಗಳ ಕಾಡುಬಾಳುವೆಯನ್ನು ಇಷ್ಟು ಅಪೂರ್ವವಾಗಿ ಸಾಹಿತ್ಯಕ್ಕೆ ತಂದ ಕುವೆಂಪು, ಕಾರಂತರ ಸ್ವಂತ ವ್ಯಕ್ತಿತ್ವಗಳಲ್ಲಿ ಕೂಡ ಕಾಡಿನ ಧೀರತೆ, ಗಹನತೆ, ಗಂಭೀರತೆ ಮತ್ತು ಆಳವಾದ ಮೌನಗಳು ಮಡುಗಟ್ಟಿದ್ದವು.

ಒಂದು ಮರದ ದೃಢವ್ಯಕ್ತಿತ್ವದಲ್ಲಿ ಸೋಲಿಲ್ಲ, ತಾನು ತಾನಾಗಿ ನಿಂತ ದೃಢ ನಿಲುವು ಅವರದು. ಒಂದು ಮರ ಮಾತನಾಡುವುದಿಲ್ಲ ಭಾಷೆಯ ಹಂಗೇ ಇಲ್ಲ. ಆದರೂ ಅದು 'ಮಾತನಾಡಬಲ್ಲದು', 'ಹೇಳಬೇಕಾದುದನ್ನು ಹೇಳಬಲ್ಲದು'. ಅತ್ಯಂತ ಅನಿವಾರ್ಯವಾದಾಗ ಒಂದು ಮರ ಹಕ್ಕಿಗಳ ಮೂಲಕ 'ಮಾತನಾಡುತ್ತದೆ'. ಆ ಮಾತು ಒಂದು ಮೆಲ್ಲುಲಿ, ಮೆಲುಗಾನ. ಹಕ್ಕಿಗಳ ಹಾಡನ್ನು ಬಿಟ್ಟರೆ ಮರಗಳ ಇನ್ನೊಂದು 'ಭಾಷೆ' -ತಂಗಾಳಿ. ''ದೇವರ ಶಕ್ತಿ ಬಿರುಗಾಳಿಯಲ್ಲಿಲ್ಲ, ತಂಗಾಳಿಯಲ್ಲಿದೆ'' ಈ ಸೂಕ್ತಿಗೆ ಇನ್ನೂ ಬೇರೆ ಬೇರೆ ಅರ್ಥವ್ಯಾಪ್ತಿಗಳಿವೆ. ಆದರೆ ನನಗೀಗ ಮರಗಳು ಬೀಸುವ ಚವರಿಗಾಳಿ ದೇವರ ಶಕ್ತಿಯ ಒಂದು ಪ್ರತೀಕ, ದೇವರ ಕರುಣೆಯ ಒಂದು ಸಂದೇಶ, ಮರಗಳ ಪ್ರೀತಿಯ ಒಂದು ಅಭಿವ್ಯಕ್ತಿ, -ಎಂಬಿಷ್ಟೇ ತಿಳಿವಳಿಕೆ ಸಾಕು, ಮರಗಳ ಕುರಿತ ನನ್ನ ಆದರ, ಪ್ರೀತಿಗಳು ಎಣೆಯಿಲ್ಲದೆ ಹರಿಯುತ್ತವೆ. ಇಂಥ ಯಾವುದೋ ಮಧುರಕ್ಷಣದಲ್ಲಿ ಒಂದು ರಾತ್ರಿ ಲಿಂಬೆಗಿಡಗಳ ಮೇಲೆ ಚಂದ್ರನ ಚೆಂಬೆಳಕು ಸುರಿಯುತ್ತಿರುವಾಗ ಆ ಅಜ್ಞಾತಕವಿ ''ನಿಂಬೀಯಾ ಬನದ ಮ್ಯಾಗಳ ಚಂದ್ರಾಮ ಚಂಡಾಡಿದ'' ಎಂದು ಭಾವಪೂರ್ಣವಾಗಿ ಹಾಡಿರಬೇಕು.

ವನ್ಯಸ್ಥಿತಿಯನ್ನು ನಿರಾಕರಿಸಿಯೇ ಮನುಷ್ಯ ನಾಗರಿಕತೆಯ ಕಟ್ಟಡವನ್ನು ಕಟ್ಟಿದ್ದು. ಅವನ ಕನಸಿನ ನಗರಗಳ ನಿರ್ಮಾಣಕ್ಕಾಗಿ ಮರಗಿಡಗಳು ಉರುಳಿದವು. ಮರಗಳ ಬಲಿಕೊಟ್ಟು ತಂದುಕೊಂಡ ಈ ಅಪ್ರಾಕೃತಿಕ ನಾಗರಿಕತೆ ತನ್ನ ಆಕರ್ಷಣೆಯನ್ನು ಕಳೆದುಕೊಳ್ಳದಿದ್ದರೂ ಅದರ ದುರಂತದ ಅರಿವಿನಿಂದಲೇ ಮನುಷ್ಯ ಕಂಪಿಸತೊಡಗಿದ್ದಾನೆ. ಈಗ ಅವನಿಗೆ ಮತ್ತೆ ಮರಗಳ ಆಸರೆ ಬೇಕಾಗಿದೆ. ಬಹು ಹಿಂದೆ ಶ್ರೀಕೃಷ್ಣ ಈ ಮರಗಳ ಹರೆಗಳ ಮೇಲೆ ಗೋಪಿಯರ ಸೀರೆಗಳನ್ನು ಬಚ್ಚಿಟ್ಟುಕೊಂಡು ಕೀಟಲೆ ನಗು ನಗುತ್ತಾ ಕುಳಿತಿದ್ದನು. ಆಗ ಅವನು ಬಾಲಕೃಷ್ಣ. ಮುಂದೆ ಭಾರತ ಸಂಗ್ರಾಮದ



ನಿರ್ಣಾಯಕ ಪಾತ್ರಧಾರಿಯಾಗಿ ಭರತಖಂಡದ ಮಹತ್ವದ ರಾಜಪರಂಪರೆಯ ಅತಿಘೋರ ಸಂಘರ್ಷದ ಕಾಲಘಟ್ಟದಲ್ಲಿ ಬಹುಮುಖ್ಯ ಕಾರ್ಯ ನಿರ್ವಹಿಸಿದನು. ಭಗವದ್ಗೀತೆಯ ಮೂಲಕ ಬಾಳಿನ ಸನಾತನ ಪ್ರಶ್ನೆಗಳನ್ನು ಎದುರಿಸಿದನು. ಅಂಥ ಶ್ರೀ ಕೃಷ್ಣ ಒಂದು ಮಧ್ಯಾಹ್ನ ಮರದ ಹರೆಯೊಂದರ ಮೇಲೆ ಮಲಗಿದ್ದಾಗ ಬೇಡನೊಬ್ಬ ಅವನ ಕಾಲಿಗೆ ಬಾಣ ಬಿಟ್ಟ - ಅದೊಂದು ಪಕ್ಷಿಯೆಂದು ಭ್ರಮೆಗೊಳಗಾಗಿ. ಯುಗಪ್ರವರ್ತಕ ಅವತಾರಿಯ ಜೀವನದಲ್ಲಿ ಮರಗಳು ಪಾತ್ರ ನಿರ್ವಹಿಸಿದ್ದು ಹೀಗೆ. ಆ ಗೋವರ್ಧನ ಗಿರಿಯನ್ನೇ ತನ್ನ ಕಿರಿಬೆರಳಲ್ಲಿ ಎತ್ತಿ ಹಿಡಿದು ನಿಂತು ಇಂದ್ರನ ಕೋಪ ತಾಪಗಳನ್ನು ಅವನು ಎದುರಿಸಿದ. ನಮ್ಮ ಇನ್ನೊಬ್ಬ ಪುರಾಣ ಪುಣ್ಯಪುರುಷ ಶ್ರೀರಾಮ ತನ್ನ ಜೀವನದ ಮಹತ್ವದ ದಿನಗಳಲ್ಲಿ ವನವಾಸ ಮಾಡಿದ. ಭರತಖಂಡದ ಚಕ್ರವರ್ತಿಯಾಗಬೇಕಾದ ಪುರುಷೋತ್ತಮ ಕಾಡುಗಳಲ್ಲಿ ಅಲೆದಾಡುವಾಗ ಮರಗಳು ಅವನೊಡನೆ ಯಾವ ಮಾತಾಡಿದವು? ರಾವಣ ಸೀತೆಯನ್ನು ಕರೆದೊಯ್ಯುವಾಗ ಅದನ್ನು ಕಂಡ ಮರಗಳು ಕಣ್ಣೀರಿಟ್ಟವೆ? ತನ್ನವಳನ್ನು ಕಳೆದುಕೊಂಡ ಶ್ರೀರಾಮ ಮರಗಳ ಬಳಿ, ಗಿಡಗಳ ಬಳಿ, ಹಕ್ಕಿಗಳ ಬಳಿ 'ಸೀತೆಯನ್ನು ಕಂಡಿರಾ?' ಎಂದು ವಿಲಾಪಿಸಿದನಂತೆ. ಅಂಥ ಪುರುಷೋತ್ತಮನೂ ಭಾವವಶವಾದುದನ್ನು ಕಂಡು ಮರಗಳು ದಂಗಾದವೆ? ಅವನ ಪ್ರೀತಿಗೆ ಶರಣೆಂದವೆ? ಹಾಗಾದರೆ - ಸೀತೆಯನ್ನು ಲಕ್ಷ್ಮಣ ಮರಳಿ ಕಾಡಿಗೆ ತಂದುಬಿಟ್ಟ ಪರಿತ್ಯಾಗದ ಕ್ಷಣಗಳಲ್ಲಿ ಅವುಗಳಿಗೇನನ್ನಿಸಿರಬಹುದು? ಸೀತೆಗಾಗಿ ಕಾಡಿನಲ್ಲಿ ಒಂದು ಆಶ್ರಯವಿತ್ತು, ವಾಲ್ಮೀಕಿ ಮುನಿಗಳ ಆಶ್ರಮವಿತ್ತು... ತುಂಬಿದ ಬಸುರಿ ಹೆಂಗುಸಿನ ತಬ್ಬಲಿ ಕ್ಷಣಗಳಲ್ಲಿ ಮರಗಳು ತಂಗಾಳಿ ಬೀಸಿ ಸಮಾಧಾನ ಹೇಳಿರಬೇಕು. ಈ ಮನುಷ್ಯನ ದುರಂತಕ್ಕೆ ಪಾರವೇ ಇಲ್ಲ, ಈ ನೋವಿನ ಹಾಡಿಗೆ ಕೊನೆಯೇ ಇಲ್ಲ ಎಂದು ಮರಗಳಿಗನ್ನಿಸಿರಬೇಕು.

ಒಂದು ಮರದ ಮೌನದಲ್ಲಿ ಇವೆಲ್ಲ ಇವೆ. ನಾನೊಂದು ಮರವಾಗಿದ್ದರೆ ಅದನ್ನೆಲ್ಲ ಅರಿಯಬಹುದಾಗಿತ್ತು, ಅನುಭವಿಸಬಹುದಾಗಿತ್ತು. ಸಾಲುಮರದ ತಿಮ್ಮಕ್ಕ ಕೂಡ ಅಂಥ ಅನುಭವಕ್ಕಾಗಿ ಕಾತರಿಸಿರಬಹುದು. ಮರವಾಗುವುದು ಎಂದರೆ ಪ್ರಾಯಶಃ ಘೋರವಾದ ದುರಂತ ಪ್ರಜ್ಞೆಯನ್ನು ಒಳಗೊಳ್ಳುವುದು. ಆದರೆ ಅಲ್ಲಿಯೂ ಒಂದು ಆಶಾವಾದವಿದೆ. ಆ ಮರದ ನೆರಳಲ್ಲಿ ಹೊಸ ಸಿದ್ಧಾರ್ಥ ಹೊಸ ಬುದ್ಧನಾಗುವ ದೀರ್ಘ ಶೋಧನೆಯನ್ನು ಕೈಗೊಳ್ಳಬಹುದು.

ಹಿರೇಗುತ್ತಿಯಲ್ಲಿ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗಿನ ಆ ಮಧ್ಯಾಹ್ನದ ಊಟದ ಕ್ಷಣವನ್ನು ನೆನಪಿಸಿಕೊಳ್ಳುತ್ತಿದ್ದೇನೆ. ಕಿಟಕಿಯಾಚೆಗೆ ಒಂದು ಸಾಮಾನ್ಯ ಎತ್ತರದ ಗಿಡ, ಅದು ಯಾವ ಗಿಡ ಎಂಬುದೂ ಮರೆತಿದೆ. ಅದನ್ನು ನೋಡುತ್ತ, ನೋಡುತ್ತ 'ನಾನು ಯಾರು? ಈ ಗಿಡ ಏನು? ಇವೆಲ್ಲ ಏನು?' ಎಂದು ಯೋಚಿಸುತ್ತ ಒಂದು ಬಗೆಯ ನಿರಾಮಯ ಸ್ಥಿತಿಯನ್ನು ತಲುಪಿದೆ. ಯಾವುದಕ್ಕೂ ಯಾವ ಉದ್ದೇಶವೂ ಇಲ್ಲ ಎನಿಸತೊಡಗಿತು. ಆ ಸ್ಥಿತಿಯಲ್ಲೇ ಒಂದೆರಡು ನಿಮಿಷ ಇರಬಹುದು. ಅದರಿಂದ ಹೊರಬಂದು ಹೆಸರು, ಸಂಬಂಧಗಳ ಅಕ್ಷಾಂಶ-ರೇಖಾಂಶಗಳಿಗೆ ಸಿಲುಕುವಾಗ ತುಂಬ ಕಷ್ಟ ಅನುಭವಿಸಿದೆ. ಎಷ್ಟೋ ದಿನಗಳ ಮೇಲೆ 'ಹೀಗಾಯಿತೆಂದು' ಹೇಳಿದಾಗ, ''ನಿನಗೂ ಹಾಗಾಯಿತೆ?'' ಎಂದಳು ನನ್ನ ಅಕ್ಕ. ಅವಳೂ ಅಂಥ ಕ್ಷಣ ಅನುಭವಿಸಿದ್ದಳಂತೆ. ಮರಗಳು ನಮ್ಮನ್ನು ಮೂಲಭೂತ ಪ್ರಶ್ನೆಗಳಿಗೆ ಕರೆದೊಯ್ಯುವವು. ಅವುಗಳಿಗೆ ಆ ಪ್ರಶ್ನೆಗಳ ಉತ್ತರ ಕೂಡ ಗೊತ್ತು. ತಮ್ಮ ಮೌನದ ತುಂಬ ಆ ಉತ್ತರವನ್ನು ಅವು ಹರಡಿಕೊಂಡು ಮೆಲ್ಲಗೆ ತಲೆಯಾಡಿಸುತ್ತ ಈ ಮಧ್ಯಾಹ್ನ ನನ್ನ ಕಿಟಕಿಯಾಚೆಗೆ ಸುಮ್ಮನೆ ನಿಂತುಕೊಂಡು ಬಿಟ್ಟವೆ. ನನಗೆ ಅವುಗಳ ಉತ್ತರ ಬೇಕು....

## ಪ್ರೇಮಪತ್ರದ ಪ್ರೇಮಿಣಿ

ಕ್ಯಾಂಪಸ್‌ನ ಸುಂದರ ಯುವತಿಯರತ್ತ ರಸಿಕ ನೋಟ ಹರಿಸುತ್ತಲೇ ಇದ್ದ ಕವಿಯೊಬ್ಬರಿಗೆ ಒಂದು ಪ್ರೇಮಪತ್ರ ಬಂತು. ತಲೆಗೂದಲು ಹರೆಯಕ್ಕೇ ನರೆತಿದ್ದರೂ ಪ್ರಾಯದ ಹುಡುಗನಂತೆ ಈ ಕವಿಗಳು ಕನಸಿನ ಕನ್ಯೆ ಪತ್ರ ಬರೆದಿರುವಂತೆ ಪ್ರೇಮಪತ್ರವನ್ನು ಮತ್ತೆ ಮತ್ತೆ ಓದಿದರು. ಪತ್ರಗಳು ಸಾಲುಗಟ್ಟಿ ಒಂದರ ಹಿಂದೊಂದು ಬಂದವು. ''ಆಹಾ! ಈ ಸುರಸುಂದರಿ ನನ್ನನ್ನೆಷ್ಟು ಪ್ರೀತಿಸುತ್ತಾಳೆ!....'' ತಾವು ಮರಳಿ ಪತ್ರ ಬರೆಯಲಾಗದೆ ತೊಳಲುತ್ತ ಪ್ರೇಮಿಣಿಯ ಪತ್ರಗಳನ್ನು ಒಬ್ಬರೇ ಓದುತ್ತ ಸುಖದಲ್ಲಿ ಲೋಲಾಡಿದರು. ''ನಿಮ್ಮನ್ನು ಭೇಟಿಯಾಗಬೇಕು ಲೈಬ್ರರಿಗೆ ಬರುವಿರಾ?'' ಪ್ರೇಮಿಣಿ ಮುಂದಿನ ಪತ್ರದಲ್ಲಿ ಬರೆದದ್ದನ್ನು ಓದಿ ಯಾರೆಷ್ಟು ಕರೆದರೂ ಯಾರೊಂದಿಗೂ ಹೋಗುವುದನ್ನು ತಪ್ಪಿಸಿಕೊಳ್ಳುತ್ತ, ಸಮಯಕ್ಕೆ ಸರಿಯಾಗಿ ಲೈಬ್ರರಿಗೆ ಹೋಗಿ ಕಪಾಟುಗಳ ನಡುವೆ ಕಾದರು.

''ಏನ್ ಸಾರ್ ಇಲ್ಲಿ?!'' ಸುರಸುಂದರಿಯ ಹೆಸರಿನಲ್ಲಿ ಪತ್ರ ಬರೆಯುತ್ತಿದ್ದ ಸಹೋದ್ಯೋಗಿ ಚಡಪಡಿಸುತ್ತಿದ್ದ ಕವಿಯನ್ನು ಮರೆಯಿಂದ ಹೊರಬಂದು ಕೇಳಿದರು. ಈ ಕೀಟಲೆಗೆ ಕಾರಣರಾದ ಸಹೋದ್ಯೋಗಿ ಬೇರಾರೂ ಅಲ್ಲ; ದಲಿತ ಕವಿ ಡಾ. ಸಿದ್ದಲಿಂಗಯ್ಯ. ಇನ್ನು ಆ ಬಿಳಿ ತಲೆಯ ರಸಿಕ ಕವಿಯನ್ನು ನೀವೇ ಊಹಿಸಿ.

# ಗರಿಗೆದರಿದ ಬಿದಿರು

■ ಪ್ರೊ. ಕೆ.ಎಸ್. ನಿಸಾರ್ ಅಹಮದ್

ಅರಣ್ಯಾಧಿಕಾರಿ ಮಿತ್ರರೊಮ್ಮೆ ಸಂಗತಿಯೊಂದನರುಹಿದರು,
ಸಸ್ಯಲೋಕದಪೂರ್ವ ಸೋಜಿಗವ ಮನದೆದುರು ಹರವಿದರು;
ಚೀಣ ದೇಶದ ಬಿದುರಿನೊಂದು ಜಾತಿ
ಅದಕುಂಟು ವಿಶೇಷ ಗುಣದೊಂದು ಖ್ಯಾತಿ.
ನೆಟ್ಟ ಮೇಲದನು ನೀರು ಗೊಬ್ಬರ ನೈವೇದ್ಯಿಸುತ ಅವಿರತ
ಸ್ವಂತ ಸಂತತಿಗು ಮಿಗಿಲಾಗಿ ಸಲಹುತ್ತ, ಅತ್ವರಿತ
ಪೋಷಿಸಬೇಕು ಅಕ್ಕರಾಸ್ಥೆಯಲಿ ನಿತ್ಯ
ತಪ್ಪಿಸದಂತೆ ಸಕಾಲದಾದರಾತಿಥ್ಯ.

ಇಷ್ಟಾಗಿಯೂ ನಾಲ್ಕು ವರ್ಷಗಳ ನಿಡಿದಾದ ಅವಧಿಯವರೆಗೆ
ಜಪ್ಪಯ್ಯ ಎಂದರೂ ತಲೆಯೆತ್ತದೆ,
'ಇಗೋ ನಾನಿಲ್ಲಿದ್ದೇನೆ' ಎಂದು ಮಣ್ಣಿನ ಹೊರಗೆ
ಆ ಮಳ್ಳ ಬಿದುರು ಕಾಣಿಸಿಕೊಂಡರೆ ಹೇಳಿ!
ಆಮೇಲೆ ನೋಡಬೇಕು ಸ್ವಾಮಿ, ಅದು ಚಿಗಿತು ಅಳತೆ ಮೀರಿ
ಐದನೇ ವರ್ಷ ಆರು ವಾರಗಳಲ್ಲೆ ತೊಂಬತ್ತು ಅಡಿಗೂ ಮಿಕ್ಕು ನಿಮಿರಿ
ಸರಸರ ಎತ್ತರಕ್ಕೇರಿ ಬೆಡಗಿಸುವ ವೈಖರಿ;
ಹಸೆಗಾಗಮಿಸುವ ಮದುಮಗಳಂತೆ ಕಂಗೊಳಿಸುವ ಪರಿ.

ಗಮನಿಸಬೇಕು ಆಗ ದಟ್ಟೈಸಿದೆಲೆಗಳ ಹಬ್ಬುಗೆಯ ಸಿರಿವಂತಿಕೆ,
ಕಸುವುಳ್ಳ ಕಾಂಡದ ಬಣ್ಣಗೆರೆಗಳ ಸಮ್ಮೋಹಕ ಸ್ವಂತಿಕೆ;
ಬಿರುಗಾಳಿಗೊಲೆದು ತಲೆ ಕೊಡುವುವಾಗಿನ ಅದರ ರಭಸಕೆ
ನೆನಪಾಗದಿರದು ಹೆದ್ದೆರೆಯ ಮೇಲಿನ ಕಲ್ಲೋಲಿತ ನೌಕೆ.
ನೆರೆಯುವುದಾಗ ಪಶು ಪಕ್ಷಿಕೀಟಗಳ ನಿತ್ಯ ಸಂತೆ;
ಆ ಜೀವಿಗಳನೊಯ್ಯುವುದು ಸಂತುಷ್ಟಿ ಸ್ವರ್ಗಕ್ಕೆ
ಚೆಂಬಿದಿರು ಒಂದೆಡೆಗೆ ನಿಂತೇ.
ಎಂಥ ನಿರ್ಭಾವುಕ ಗೊಡ್ಡೇ ಇರಲಿ
ಆಶ್ಚರ್ಯದಲಿ 'ಆಹಾ!' ಎಂದೊರಲಿ
ಕಣ್ಣಾಲಿ ನೆಟ್ಟು, ರಸಿಕನಾಗಿ ಮಾರ್ಪಡದೆ ತೆರಳಲಾರ,
ಮನದಣಿಯ ಹೊತ್ತು ಧಾರಾಳ ಭಾವಗಳ ಭಾರ.

ದೀರ್ಘಾವಧಿಯ ತನಕ ಈ ಚೆಲು ಬಿದುರು
ಗಾಳಿ ಬೆಳಕಿನ ನಂಟಿನ ಯೋಗದರಿವಿರದೆ,
ಜೊತೆಹುಟ್ಟುಗಳ ಒಡನಾಟ ತೊರೆದು
ಮೂಗುಬ್ಬಸದ ಮಬ್ಬಿನಲಿ ತಪಿಸುತ್ತ ಕೆಡೆದು
ಸಿಕ್ಕಿದವಕಾಶದಲೆ ಬಲಿತು ಸಾವಕಾಶ
ಬೇರುಗಳನೆಲ್ಲೆಡೆಗೆ ಕವಲಿಸುತ ಹಬ್ಬಿ
ಉಡದ ಹಿಡಿತದಲಿ ನೆಲದೊಳಗ ತಬ್ಬಿ
ಅಜ್ಞಾತವಾಸದ ತಯಾರಿ ಮುಗಿದೊಡನೆ ಒಮ್ಮೆಲೇ ಸಡಗರಿಸಿ
ಹೊರ ಮೆರೆಯುತ್ತದೆ ಮುದ್ದು ಮೊಗದೋರಿ
ಪರಿಸರಕ್ಕೆ ಹಂಚಿ ಆನಂದದೈಸಿರಿಯ, ಮೇರೆ ಮೀರಿ.

2

ಬಿದಿರ ಬಾಳಿನ ಈ ಅನನ್ಯ ಸೂತ್ರ
ಮೂಡಿಸಿತು ಮನದಲ್ಲಿ ಮೂಲ ತತ್ತ್ವವೊಂದರ ಚಿತ್ರ;
ಮಹಾಕವಿ ಕಲಾಕಾರ ವಿಜ್ಞಾನಿ ದಾರ್ಶನಿಕರಾದಿ
ಸಕಲ ಸಾಧಕರ ಬದುಕೂ ಅನಾದಿ -
ಕಾಲದಿಂದಲೂ ಬಿದಿರಂತೆನುವ ಭಾವನೆ ವ್ಯಾಪಿಸಿ
ಅಂತರ್ಯದಾದ್ಯಂತ ವಿಜೃಂಭಿಸಿತು ನವಾನುಭವ ಛಾಪಿಸಿ
ಬಾಲ್ಯದಿಂದೆಷ್ಟೋ ಸಂವತ್ಸರಗಳ ತನಕ ವ್ರತ ತೊಟ್ಟು
ಸ್ವಂತ ಸೌಖ್ಯಕ್ಕೆ ಎಳ್ಳು ನೀರನು ಬಿಟ್ಟು
ಸಾಧನೆಯ ಪಥದಲ್ಲೆ ಸರ್ವ ಗಮನವ ನೆಟ್ಟು
ಮುನ್ನಡೆಯುವಂದು ಈ ನವನವೋನ್ಮೇಷಶಾಲಿ ಜನ
ಅಖ್ಯಾತ ನೇಪಥ್ಯದಲಿ ಅನುದಿನ
ಕೈಕೊಳುವ ತರಬಿಯತ್ತಿನ ಕಠಿಣ ನೇಮ,
ಪ್ರಯತ್ನ ಪರಿಶ್ರಮ ತಾಲೀಮುಗಳ ವ್ಯಾಯಾಮ,
ಮೇಲಿಂದ ಮೇಲಿನೇಳು ಬೀಳು-
ಗಳ ಲೆಕ್ಕಿಸದ ಸಂಯಮ; ಮಹತ್ವಾಕಾಂಕ್ಷೆಯ ಗೀಳು
ತದ್ಸಂಗತಿಗಳೆಲ್ಲ ಸಾವಧಾನದಲಿ ಸತ್ಫಲಿಸಿ



ಮುಂದೊಂದು ದಿನ ಆ ಸಾಧಕರ ಭಾಗ್ಯವನು ಬಲಿಸಿ,
ಯಶೋಗಂಧವನೆಂಟು ದಿಕ್ಕಿಗೆ ದಿಢೀರನೆ ಪಸರಿಸುವುವು;
ನಾಡಗಲ ಅವರ ಹಿರಿಮೆಯ ಪರಿಚಯಿಸಿ, ಹೆಸರಿಸುವುವು.

3

ಕೆಲವೆ ಸಮಯದ ಮುನ್ನ ಅವರ ಇರುವಿಕೆಯ ಅರಿವು ಸಹ ಇರದ ಜನ
ಬಾಯ್ದಣಿಯ ಪ್ರವರಿಸುವುದೀಗ ಗುಣಗಾನ.
ಅವರ ಸಾಧನೆ ಸಿದ್ಧಿ ಸರ್ವಕಾಲಕೂ ಅನುಪಮಾನ;
ನಮ್ಮ ಭುವನದ, ಅಷ್ಟೆ ಏಕೆ, ತ್ರೈಭುವನ ಸೌಭಾಗ್ಯ
ಎನುತ ನಿತ್ಯೋತ್ಸವಿಸಿ ಹೊರಿಸುವುದು ಭೂರಿ ಸನ್ಮಾನ.
ಆ ವಿಶ್ರುತನಾಮರ ಸಂದರ್ಶನಕೆ, ಸಂದೇಶದಾಲಿಕೆಗೆ
ಕಾತರಿಸಿ ಕಾಯುವುದು ಅಪಾರ ಜನಸ್ತೋಮ.
ಸುತ್ತಲೆಲ್ಲ ಅವರದೇ ಪ್ರಸ್ತಾವ, ಚರ್ಚೆ, ಸೊಲ್ಲು;
ಹೀಗಾಗಿ ಆಗುತ್ತಾರೆ ಆ ಮಹತ್ಸಾಧಕರು ಅನವರತ
ನಾಡವರ ಆಸ್ತಿ, ಹಾತೊರೆತಗಳ ಸೂಜಿಗಲ್ಲು. ■

# ಟೂ-ಇನ್-ಒನ್



■ ಎಂ.ಎಸ್. ನರಸಿಂಹಮೂರ್ತಿ

''ಸಾರಿ, ಸಾರ್. ಆ ಹುಡುಗಿ ಬಹಳ ಮೋಸಾ ಮಾಡಿದ್ದಾಳೆ. ಜನ ನಾನೇ ಅವಳು ಅಂತ ತಿಳ್ಕೊಂಡು ಬೈತಾ ಇದ್ದಾರೆ. ಅವಳ ಹೆಸರು ಸ್ವೀಟೀನಂತೆ. ಆದರೆ ನನ್ನ ಹೆಸರು ಬ್ಯೂಟಿ !''

**ಬಾ**ಗಿಲು ಸದ್ದಾಯಿತು. ವಿಶ್ವ ಬೇಸರಿಸಿಕೊಂಡೇ ಬಾಗಿಲು ತೆಗೆದ. ಅಲ್ಲೊಂದು ಸುಂದರ ತರುಣಿ ನಿಂತಿದ್ದಳು.

ತೀಡಿದ ಹುಬ್ಬುಗಳು, ಬಣ್ಣದ ತುಟಿಗಳು, ಅಂದದ ಕದಪುಗಳು ನೋಡಿ ವಿಶ್ವ ತಬ್ಬಿಬ್ಬಾದ.

''ಯಾರು ಮೇಡಂ? ಯಾರು ಬೇಕಿತ್ತು?''

''ನೀವೇ'' ಆಕೆ ಮುಗುಳ್ನಕ್ಕಾಗ ಕೋಣೆಯಲ್ಲಿ ಬೆಳಕು ಹರಿಯಿತು. ವಿಶ್ವನ ಏಕಾಗ್ರತೆಯೂ ಹರಿಯಿತು.

''ಬನ್ನಿ, ಕೂತ್ಕೊಳ್ಳಿ'' ಎಂದ.

ಆಕೆ ಬಂದು ಕುಳಿತು ಸುತ್ತಲೂ ನೋಡಿ,

''ಏನ್ಸಾರ್, ಮನೇಲಿ ಯಾರೂ ಕಾಣ್ತಿಲ್ಲ?''

''ನಮ್ಮಾಕೆ ಹೆರಿಗೆಗೆ ಹೋಗಿದ್ದಾಳೆ''

''ನೀವೇ ಕಳಿಸಿದ್ದಾ?''

ಮತ್ಯಾರು ಕಳಿಸಲು ಸಾಧ್ಯ? ವಿಶ್ವ ಸುಮ್ಮನೆ ನಕ್ಕ. ಯಾರಿವಳು? ಏಕೆ ಬಂದಿದ್ದಾಳೆ ಎಂಬುದು ತಿಳಿಯಲಿಲ್ಲ.

''ಸಾರ್. ನೀವು ಅಮೆರಿಕಾಗೆ ಹೋಗ್ತೀರಾ?''

''ಯಾರು ಕಳಿಸ್ತಾರೆ ನನ್ನ?'' ವಿಶ್ವನ ಬಾಯಲ್ಲಿ ನೀರೂರಿತು. ತಲೆಯಲ್ಲಿ ಆಸೆ ಚಿಗುರಿತು.

''ನಾವು ಕಳಿಸ್ತೀವಿ ಸಾರ್ ನಮ್ಮ ಕಂಪೆನಿಯಿಂದ. ಪಾಸ್‌ಪೋರ್ಟ್ ನಿಮ್ಮದು, ವೀಸಾ ನಮ್ಮದು, ಒಪ್ಪಿಗೆ ನಿಮ್ಮದು. ಟಿಕೆಟ್ ನಮ್ಮದು''

''ಯಾವಾಗ ಹೋಗಬೇಕಾಗುತ್ತೆ. ಈಗ 3 ತಿಂಗಳು ಬಿಡುವಾಗೇ ಇದ್ದೀನಿ. ಹೇಗೂ ನಮ್ಮಾಕೆ ಮನೇಲಿಲ್ಲ. ಹೀಗಾಗಿ ಪಾತ್ರೆ ಉಜ್ಜೋದು, ಬಟ್ಟೆ ಒಗೆಯೋದು, ಹಿಟ್ಟು ರುಬ್ಬೋದು ನಾನು ಮಾಡ್ತಿಲ್ಲ''

''ಮತ್ತೆ ಊಟ?''

''ಹೋಟೆಲ್ ಇದೆಯಲ್ಲ? ಧೋಬಿ ಅಂಗಡಿ ಇದೆಯಲ್ಲ?''

''ಸಾರ್, ನಿಮ್ಮ ಜೊತೆ ಅದೃಷ್ಟ ಇದೆ. ಅದಕ್ಕೇ ನಾನು ನಿಮ್ಮನ್ನು ಹುಡುಕಿಕೊಂಡು ಬಂದೆ.'' ಎಂದು ಅವಳು ಇನ್ನೂ ಹತ್ತಿರ ಬಂದಾಗ ಅವಳು ಪೂಸಿಕೊಂಡಿದ್ದ ಸುಗಂಧದ ಪರಿಮಳಕ್ಕೆ ವಿಶ್ವ ತಲೆದೂಗಿದ. ಅವಳು ಬ್ಯಾಗಿನ ಜಿಪ್ ಎಳೆದಳು. ಮಾಂತ್ರಿಕಳಂತೆ ಸೋಪಿನ ಬಿಲ್ಲೆಗಳನ್ನು ಅದರಿಂದ ತೆಗೆದಳು.

''ನೋಡಿ ಸಾರ್, ಇದು ಟೂ-ಇನ್-ಒನ್ ಸೋಪು. ಈ ಕಡೆ ಮುಖ ಉಜ್ಜಿ, ಮತ್ತೊಂದ್ ಕಡೆ ಮೈ ಉಜ್ಜಿ''

''ಅರೆ! ಸೋಪು ಅಂದ ಮೇಲೆ ಶರೀರದ ಎಲ್ಲ ಭಾಗಕ್ಕೂ ಒಂದೇ

ತಾನೆ?''

''ಸ್ಸಾರಿ ಸಾರ್, ಶರೀರದ ಎಲ್ಲ ಭಾಗಗಳ ಚರ್ಮ ಒಂದೇ ರೀತಿ ಸೆನ್ಸಿಟೀವ್ ಆಗಿರೊಲ್ಲ. ಅಂಗೈ, ಬೆನ್ನು, ಕಾಲು ಇಲ್ಲೆಲ್ಲ ಚರ್ಮ ಒರಟಿರುತ್ತೆ. ಅಂಗಾಲಿನ ಚರ್ಮ ಎರಡಿಂಚು ದಪ್ಪ ಇರುತ್ತೆ. ಆದರೆ ಮುಖದ ಮೇಲಿನ ಚರ್ಮ ಬಹಳ ನಯ, ನಾಜೂಕು. ನೋಡಿ ಸಾರ್'' ಎಂದು ಕೆನ್ನೆ ಹತ್ತಿರ ತಂದಳು. ವಿಶ್ವ ಅತ್ತಿತ್ತ ನೋಡಿದ. ಧೈರ್ಯ ಮಾಡಿದ. ಕೆನ್ನೆ ಸವರೇ ಬಿಟ್ಟ. ಹೌದು, ಅವಳ ಕೆನ್ನೆ ಅದೆಷ್ಟು ನುಣುಪು!

''ತುಂಬಾ ಸಾಫ್ಟ್ ಆಗಿದೆ ನಿಮ್ಮ ಕೆನ್ನೆ''

''ಇದೇ ಸೋಪು ಬಳಸ್ತೀನಿ ಸಾರ್. ನೀವು ಆರು ಸೋಪುಗಳು ತಗೊಂಡ್ರೆ ಒಂದು ಅಮೆರಿಕಾ ಟಿಕೆಟ್ ಫ್ರೀಯಾಗಿ ಕೊಡ್ತೀವಿ''



''ಅಂದ್ರೆ.... ಆ ಟಿಕೆಟ್ ತಗೊಂಡು ನಾನು ಡೈರೆಕ್ಟಾಗಿ....''

''ಹೋಗೇ ಬಿಡೋದು ಸಾರ್. ವಾಷಿಂಗ್‌ಟನ್ ಹತ್ರ ಏರೋಪ್ಲೇನ್ ನಿಲ್ಲಲಿಲ್ಲ ಅಂದ್ರೆ, ಪ್ಯಾರಾಚೂಟ್ ಹಾಕಿಕೊಂಡು ಧುಮುಕಿಬಿಡೋದು ಸಾರ್''

ವಿಶ್ವನಿಗೆ ಆ ಕಲ್ಪನೆಯೇ 'ಜುಂ' ಎಂದು ಬಿಟ್ಟಿತು. ಪ್ರತಿ ಸೋಪಿನ ಬೆಲೆಯೂ ಇಪ್ಪತ್ತೈದು ರೂಪಾಯಿ! ಆರು ಸೋಪಿಗೆ ನೂರಾ ಐವತ್ತು ರೂಪಾಯಿ. ಸೋಪುಗಳನ್ನು ಸವರಿ ನೋಡಿದ. ಟಿಕೆಟ್ ಅನ್ನು ಬೆವರಿ ನೋಡಿದ.

''ಲಕ್ಕಿಸ್ಟಾರ್ ಇಲ್ಲಿ ಅಂಟಿಸಿ - ಅಂತ ಇದೆಯಲ್ಲ? ಆ ಸ್ಟಾರ್ ಎಲ್ಲಿ ಸಿಗುತ್ತೆ?'' ವಿಶ್ವ ಕೇಳಿದ.

''ಪ್ರತಿ ಸೋಪಿನಲ್ಲೂ ಎರಡು ಭಾಗ ಇರುತ್ತೆ ಸಾರ್. ಒಂದು ಮುಖದ ಭಾಗ ಮತ್ತೊಂದು ಮೈಭಾಗ. ಈ ಎರಡೂ ಭಾಗದ ನಡುವೆ ಸ್ಟಾರ್ ಇದ್ರೆ ಅದನ್ನ ಟಿಕೆಟ್‌ಗೆ ಅಂಟಿಸಿ ಕಳಿಸಬೇಕು. ಆಗ ನಿಮಗೆ ಬೇರೆ ಟಿಕೆಟ್ ಕೊಡ್ತೀವಿ'' ಎಂದಳಾಕೆ.

''ಸೋಪುಗಳು ಖರ್ಚಾಗಬೇಕಲ್ಲ?''

''ನಿತ್ಯ ಮೂರು ಸಲ ಸ್ನಾನ ಮಾಡಿ ಸಾರ್. ಆರು ಸಲ ಮುಖ ತೊಳೀರಿ. ಚರ್ಮ ಹದವಾಗುತ್ತೆ. ಹಗುರವಾಗುತ್ತೆ, ಹೊಳಪಾಗುತ್ತೆ. ಸೋಪು ಕರಗಿದಾಗ ನಿಮಗೆ ಲಕ್ಕಿ ಸ್ಟಾರ್ ಸಿಗುತ್ತೆ''

''ಯಾವ ಸೋಪಲ್ಲಿ ಲಕ್ಕಿ ಸ್ಟಾರ್ ಇರುತ್ತೆ?''

''ಅದು ಗೊತ್ತಿದ್ರೆ ನಾನು ಸೋಪು ಮಾರೋಕೆ ಯಾಕೆ ಬರ್‍ತಿದ್ದೆ ಸಾರ್? ಅದೃಷ್ಟ ಇದ್ದ ವ್ಯಕ್ತಿಯ ಮನೆಗೆ ಆ ಸೋಪು ಬರುತ್ತೆ. ಯಾವುದೋ ಶುಭಗಳಿಗೆಯಲ್ಲಿ ಯಾವುದೋ ದಿನ ಅದು ದರ್ಶನ ಕೊಡುತ್ತೆ. ಸ್ಟಾರ್ ಸಿಗಲಿ ಅಂತ ಸೋಪು ಕತ್ತರಿಸಿ ನೋಡಬಾರದು ಸಾರ್. ಬಂಗಾರದ ಮೊಟ್ಟೆ ಇಡೋ ಕೋಳೀನ ಕತ್ತರಿಸಿದಂತೆ ಆಗಿಬಿಡುತ್ತೆ.'' ಎಂದು ನಗುತ್ತಾ ಹೇಳಿದ ಅವಳು, ''ಎಷ್ಟು ಕೊಡಲಿ ಸಾರ್? ಹನ್ನೆರಡು?''

''ಬೇಡ ಬೇಡ ಜಾಸ್ತಿಯಾಗುತ್ತೆ''

''ಹೋಗ್ಲಿ ಆರು ತಗೊಳ್ಳಿ ಸಾರ್'' ಎಂದು ಬಲವಂತನಾಗಿ ಮಾರಿಬಿಟ್ಟಳು. ಅವಳ ಕೆನ್ನೆ ಮುಟ್ಟಿದ ಮುಲಾಜಿಗೆ ವಿಶ್ವ ಕೊಳ್ಳಲೇ ಬೇಕಾಯಿತು. ಹಣ ನೀಡಿದ. ಅವಳು ಬ್ಯಾಗಿಗೆ ಜಿಪ್ ಹಾಕಿ ಎದ್ದಳು.

''ಈ ಏರಿಯಾದಲ್ಲಿ ನಿಮ್ಮ ಥರ ಸೋಪು ಕೊಳ್ಳೋ ಒಳ್ಳೇ ಜನ ಯಾರಿದ್ದಾರೆ ಸಾರ್?''

''ಯಾರಿಲ್ಲ'' ಎಂದ ವಿಶ್ವ.

''ಬರ್‍ತೀನಿ ಸಾರ್. ವಿಷ್‌ಯೂ ಹ್ಯಾಪಿ ಬಾನ್ ವಾಯೇಜ್ ಟು ಅಮೆರಿಕಾ'' ಎಂದಳು.

''ಸದ್ಯಕ್ಕೆ ಬಾನ್ ವಾಯೇಜ್ ಟು ಬಾತ್‌ರೂಮ್. ಬಾತ್‌ರೂಮಲ್ಲಿ ಸ್ಟಾರು ಸಿಕ್ಕರೆ ಮುಂದಿನ ವಾಯೇಜು'' ಎಂದ ವಿಶ್ವ.

''ನಾನು ಬರ್‍ಲಾ ಸಾರ್?''

''ನಿಮ್ಮ ಹೆಸರು ಹೇಳಲಿಲ್ಲ?''

''ನನ್ನ ಹೆಸರು ಸ್ವೀಟಿ'' ಎಂದು ಸ್ವೀಟಾಗಿ ನಕ್ಕಳು. ಕೈ ಆಡಿಸಿ ಬಾಗಿಲಾಚೆ ನಡೆದಳು.

ವಿಶ್ವ ದಿನಕ್ಕೆರಡು ಸ್ನಾನ ಮಾಡಿ ಸೋಪು ಸವೆಸಿದರೂ ಲಕ್ಕಿ ಸ್ಟಾರ್ ಸಿಗಲಿಲ್ಲ. ತನಗೆ ಅದೃಷ್ಟ ಇಲ್ಲ ಎಂದುಕೊಂಡ.

ಇದು ಆಗಿ ಒಂದು ವರ್ಷ ಕಳೆದಿರಬೇಕು. ಬಾಗಿಲ ಬಳಿ ಅದೇ ಹುಡುಗಿ ಮತ್ತೆ ಪ್ರತ್ಯಕ್ಷ ಆದಳು.

''ಸಾರ್, ನ್ಯೂಜಿಲೆಂಡ್‌ಗೆ ಹೋಗ್ತೀರಾ?'' ಎಂದಳು.

''ಆ ದಿನ ಸೋಪು ಮಾರಿ ಅಮೆರಿಕಾಗೆ ನೀವು ತಾನೆ ನನ್ನ ಕಳಿಸಿದ್ದು?'' ಎಂದು ವಿಶ್ವ ದಬಾಯಿಸಿದ.

''ಸಾರಿ, ಸಾರ್.. ಆ ಹುಡುಗಿ ಬಹಳ ಮೋಸಾ ಮಾಡಿದ್ದಾಳೆ. ಜನ ನಾನೇ ಅವಳು ಅಂತ ತಿಳ್ಕೊಂಡು ಬೈತಾ ಇದ್ದಾರೆ. ಅವಳ ಹೆಸರು ಸ್ವೀಟೀನಂತೆ. ಆದರೆ ನನ್ನ ಹೆಸರು ಬ್ಯೂಟಿ!''

''ಇಲ್ಲ ಇಲ್ಲ, ನೀವೇ ನನಗೆ ಮಾರಿದ್ದು'' ಎಂದ ವಿಶ್ವ.

''ಖಂಡಿತ ಇಲ್ಲ ಸಾರ್, ನನ್ನ ಕೆನ್ನೆ ಮುಟ್ಟಿ ನೋಡಿ''

ವಿಶ್ವ ಕೆನ್ನೆ ಮುಟ್ಟಿದ. ಸ್ಪಂಜಿನಂತೆ ಸೊಗಸಾಗಿ ಇತ್ತು.

''ಚೆನ್ನಾಗಿದೆ'' ಎಂದ.

''ಆ ದರಿದ್ರ ಸೋಪು ಬಳಸಿದ್ದರೆ ನನ್ನ ಕೆನ್ನೆ ಫುಟ್‌ಬಾಲ್ ಮೈದಾನದ ಹಾಗೆ ಒರಟು ಆಗಿಬಿಡ್ತಿತ್ತು ಸಾರ್. ಅದು ನಾನಲ್ಲ. ಅವಳು ನನ್ನ ಹಾಗೆ ಇದ್ದಾಳಂತೆ'' ಎಂದು ವಿಶ್ವನನ್ನು ಒಪ್ಪಿಸಿದಳು.

''ಈಗೇನು ಕೊಳ್ಳಬೇಕು ನಾನು?''

''ಟೂ-ಇನ್-ಒನ್ ಬ್ರಶ್ಶು ಸಾರ್. ಈ ಬ್ರಶ್‌ನ ಬಾಯಿಗೆ ಹಾಕ್ಕೊಂಡ್ರೆ ಟೂತ್ ಬ್ರಶ್ಶು. ನೆಲಕ್ಕೆ ಹಾಕಿದರೆ ಬಚ್ಚಲು ಬ್ರಶ್ಶು. ಸವೆಯೊಲ್ಲ ಸಾರ್. ಇದರಲ್ಲೇ ನೀವು ಸೈಕಲ್ಲು, ಸ್ಕೂಟರ್ರು ಕ್ಲೀನ್ ಮಾಡಬಹುದು. ನೀರಲ್ಲಿ ಅದ್ದಿದರೆ ಫ್ರೆಶ್ ಆಗಿ ಬಿಡುತ್ತೆ, ಮಲ್ಟಿಪರ್ಪಸ್ಸು!''

''ಆರು ತಗೋಬೇಕಲ್ಲವಾ?''

''ಹೌದು ಸಾರ್''

''ಲಕ್ಕಿ ಸ್ಟಾರ್ ಇರುತ್ತೆ ಅಲ್ಲವಾ?''

''ಹೌದು ಸಾರ್''

''ನ್ಯೂಜಿಲೆಂಡ್‌ಗೆ ಟಿಕೆಟ್ ಸಿಗುತ್ತೆ ಅಲ್ಲವಾ?''

''ಖಂಡಿತ ಸಾರ್''

''ಕ್ಷಮಿಸಿ. ನಾನು ನಿನ್ನೆ ತಾನೆ ನ್ಯೂಜಿಲೆಂಡ್‌ನಿಂದ ಬಂದೆ. ಸದ್ಯಕ್ಕೆ ನಾನು ಮತ್ತೆ ಅಲ್ಲಿಗೇ ಹೋಗೊಲ್ಲ'' ಎಂದ ವಿಶ್ವ ಕೈಮುಗಿದು ಅವಳನ್ನು ಆಚೆಗೆ ಅಟ್ಟಿದ. ■

## ಹದಿಹರೆಯದವರ ದೈವ



ಬಾಲ ನಟರು ಪ್ರಬುದ್ಧರಾಗಿ ಜನಪ್ರಿಯತೆ ಉಳಿಸಿಕೊಳ್ಳುವುದು ಅಪರೂಪ. ಅಷ್ಟೆಲ್ಲ ಖ್ಯಾತಿ ಗಳಿಸಿದ್ದ ಬೇಬಿ ಶ್ಯಾಮಿಲಿ ಈಗ ಮರೆತೇ ಹೋಗಿದ್ದಾಳೆ. ಇದಕ್ಕೆ ಅಪವಾದ ಎಂಬಂತೆ ಊರ್ಮಿಳಾ ಮಾತೋಂಡ್ಕರ್ ಇಂದು ಹದಿಹರೆಯದವರ ಆರಾಧ್ಯ ದೈವ. ಆಕೆ 'ಮಾಸೂಮ್' ಚಿತ್ರದಲ್ಲಿ ಬಾಲನಟಿಯಾಗಿ ಚಿತ್ರರಂಗಕ್ಕೆ ಪರಿಚಯ ಆದವಳು.

# ಕರ್ಣಯಜ್ಞ

**ದೂರದರ್ಶನ ಬಂದ ಮೇಲೆ ಇತರ ಮಾಧ್ಯಮಗಳು ಸೊರಗುತ್ತಿವೆ ಎಂಬುದು ಅನೇಕ ಹಿತಚಿಂತಕರ ಕೊರಗು. ಆದರೆ ಧ್ವನಿ ತರಂಗಗಳ ಮೂಲಕ ಕೇಳುಗರ ಕರ್ಣಗಳೊಂದಿಗೆ ಸಂಬಂಧ ಬೆಸೆದುಕೊಳ್ಳುವ ರೇಡಿಯೋ ಮಾತ್ರ ಇಂದಿಗೂ ತನ್ನ ಅಸ್ತಿತ್ವ ಉಳಿಸಿಕೊಂಡಿದೆ. ನಾಲ್ಕು ದಶಕಗಳಿಂದ ಇಂಥ ಕಾರ್ಯಕ್ರಮಗಳನ್ನು ನಮ್ಮ ಕರ್ಣಗಳಿಗೆ ಉಣಿಸುತ್ತಿರುವ ಜಿ.ಎಂ.ಶಿರಹಟ್ಟಿ ಅವರ ವೃತ್ತಿ ಅನುಭವಗಳ ಅಪರೂಪದ ಸ್ಯಾಂಪಲ್ ಇಲ್ಲಿವೆ.**



ನಮ್ಮ ಸಾಮಾಜಿಕ ಜೀವನದಲ್ಲಿ ಸಪ್ಪಳ, ಸಾಂಸ್ಕೃತಿಕ ನಡೆನುಡಿಗಳಲ್ಲಿ ಧ್ವನಿ. ಇವೆರಡು ನಮ್ಮ ಜೊತೆಗೆ ಇರುವುದನ್ನು ನಾವು ಗಮನಿಸುವುದು ವಿರಳ. ನೋಡುವುದಕ್ಕಿಂತ ಹೆಚ್ಚಾಗಿ ನಾವು ಕೇಳುತ್ತೇವೆ. ಇದನ್ನು ಗಮನಿಸುವುದು ಅತ್ಯಂತ ವಿರಳ. ನೋಡಲು ಬೇಡಾಗಿದ್ದರೆ ಕಣ್ಣು ಮುಚ್ಚಿಕೊಳ್ಳುತ್ತೇವೆ. ಆದರೆ ಕೇಳಲು ಬೇಡಾಗಿದ್ದರೆ ಕಿವಿಗಳನ್ನು ಮುಚ್ಚಿಕೊಳ್ಳುವುದು ಅಷ್ಟೇನೂ ಸುಲಭ ಕೆಲಸವಲ್ಲ. ಕಿವಿ ಮುಚ್ಚಿಕೊಳ್ಳಲು ಎರಡು ಕೈಗಳನ್ನು ಒಡ್ಡಬೇಕಾಗುತ್ತದೆ. ಅಂತೆಯೇ ಧ್ವನಿ, ಸಪ್ಪಳ ಇವು ಎಲ್ಲಿ ಬೇಕಾದಲ್ಲಿ ಧಾರಾಳವಾಗಿ ಸಿಗುತ್ತವೆ. ಕಿವಿ ಇದ್ದೂ ಕಿವುಡರಾಗುವುದು ಕಷ್ಟದ ಕೆಲಸ. ಧ್ವನಿ ಪ್ರಪಂಚವೊಂದಿದೆ ಎಂಬುದೂ ಸಹ ನಮಗೆ ಗೊತ್ತೇ ಇರುವುದಿಲ್ಲ. ಇಲ್ಲಿ ಕಣ್ಣುಗಳಿಗೇನೂ ಕೆಲಸವಿಲ್ಲ, ಕಿವಿಗಳಿಗೆ ಮಾತ್ರ ಕಿವಿ ತುಂಬ ಕೆಲಸ. ಅಂತಹ ಕೆಲಸ ಮಾಡುತ್ತ ಮಾಡುತ್ತ ನಲ್ವತ್ತು ವರ್ಷಗಳನ್ನು ಕಳೆದ ನನ್ನ ಎರಡೂ ಕಿವಿಗಳಿಗೆ ವಯಸ್ಸೇ ಆಗಿಲ್ಲ. ಸದ್ಯ ನಾನು ಕಿವುಡನಾಗಿಲ್ಲ.

ಮಾತನಾಡಿ, ಮಾತನಾಡಿ ಬಾಯಿ ನೋಯುತ್ತದೆ. ಆದರೆ ಸದ್ಯ ಕೇಳಿ ಕೇಳಿ ಕಿವಿಗಳಂತೂ ನೋಯುವುದಿಲ್ಲವಲ್ಲ. ಈ ಗೌಪ್ಯವನ್ನು ತಿಳಿದ ವಾಚಾಳಿಗಳು ತಮ್ಮ ಮಾತಿಗೆ ಎಂದೂ ಪೂರ್ಣ ವಿರಾಮ ಕೊಡುವುದಿಲ್ಲ. ಬಾಯಿ ಕಿವಿಯ ನಡುವಿನ ತೊಟ್ಟಿಲು ತೂಗಿ ತೂಗಿ ನಿಂತು, ಹರಿದು ಬಿದ್ದರೂ ಅವರ ಮಾತುಗಳು ನಡೆದೇ ಇರುತ್ತವೆ. ಆದರೆ ನಾನು ಮಾತನಾಡಿದ್ದೇ ಕಡಿಮೆ, ಕೇಳಿದ್ದೇ ಹೆಚ್ಚು. ಇನ್ನು ಓದಿದ್ದು ಹೆಚ್ಚು - ಕಡಿಮೆ. ಎಷ್ಟೋ ಸಾರೆ ಹೆಚ್ಚು ಮಾತನಾಡಿ, ಕಡಿಮೆ ಕೇಳಿ, ಅತಿ ಹೆಚ್ಚು ಓದಬೇಕು ಎಂಬ ನನ್ನ ಆಸೆ. ಇನ್ನು ಎಳೆಯ ವಯಸ್ಸಿನಲ್ಲಿಯೇ ಇದೆ. ಅದು ಬಲಿತು ದೊಡ್ಡದಾಗುವ ಅವಕಾಶ ಕಡಿಮೆ. ಏಕೆಂದರೆ ನಾನಿರುವ ಪ್ರಪಂಚದಲ್ಲಿ ಕೇವಲ ಕೇಳುವುದೇ ಕೆಲಸ.

ಧ್ವನಿ ಪ್ರಪಂಚದಲ್ಲಿ ನಿರಂತರವಾಗಿ ನಡೆಯುವ ಒಂದು ಕೆಲಸವೆಂದರೆ 'ಕರ್ಣಯಜ್ಞ'. ಈ ಯಜ್ಞ ನಡೆಯುವುದು ಯಾವುದೇ ಆಶ್ರಮದಲ್ಲಿ ಅಲ್ಲ, ರೇಡಿಯೋ ಸ್ಟೇಶನ್ನಿನಲ್ಲಿ. ಇಲ್ಲಿ ದಿನದ ಇಪ್ಪತ್ನಾಲ್ಕು ತಾಸುಗಳವರೆಗೆ ಧ್ವನಿಗಳನ್ನು ಹೊರಗೆ ಹಾಕಿ ಹಾಕಿ ಸ್ಟೇಶನ್ನಿನ ಹೊರಗೆ ಒಂದು ಪ್ರಪಂಚವೇ ನಿರ್ಮಾಣವಾಗುತ್ತದೆ. ಇಂತಹದೊಂದು ಪ್ರಪಂಚ ಇದೆ ಎಂಬುದು ಎಲ್ಲರಂತೆ ಮೊದಮೊದಲು ನನಗೂ ಗೊತ್ತಿರಲಿಲ್ಲ. ಧ್ವನಿ ಯಾವುದು, ಸಪ್ಪಳ ಯಾವುದು, ಗದ್ದಲ ಯಾವುದು, ದಾಂಧಲೆ ಯಾವುದು ಎಂಬುದರ ಬಗ್ಗೆ ನಿಖರವಾದ ತಿಳುವಳಿಕೆ ಇರಲಿಲ್ಲ. ಕಿವಿಯ ಮೇಲೆ ಬೀಳುವುದೆಲ್ಲ ಸಪ್ಪಳ, ಧ್ವನಿ ಎಂದೇ ತಿಳಿದಿದ್ದ ನನಗೆ ರೇಡಿಯೋ ಸ್ಟೇಶನ್ನಿಗೆ ಬಂದಾಗಲೇ ಗೊತ್ತಾದದ್ದು ಧ್ವನಿ ಬೇರೆ, ಸಪ್ಪಳ ಬೇರೆ ಎಂಬುದು.

ಪ್ರಾರಂಭದಲ್ಲಿ ಪತ್ರಿಕೆಯೊಂದರಲ್ಲಿ ಕೆಲಸ ಮಾಡುತ್ತಿದ್ದ ನನಗೆ, ಈ ಕರ್ಣಯಜ್ಞ ನಡೆಯುವ ಕೇಂದ್ರದ (ರೇಡಿಯೋ ಸ್ಟೇಶನ್) ಪರಿಚಯವೇ ಇರಲಿಲ್ಲ. ಅಲ್ಲಿಂದ ಹೊರ ಬರುವ ಧ್ವನಿಗಳು ಮಾತ್ರ ಪರಿಚಿತವಿದ್ದವು. ಅವುಗಳಲ್ಲಿ ಎಷ್ಟೋ ಮಧುರ ಧ್ವನಿಗಳು ನನ್ನನ್ನು ಸೆರೆ ಹಿಡಿದಿದ್ದವು. ಹೆಣ್ಣುಮಕ್ಕಳ ಧ್ವನಿ, ಗಂಡಸರ ಧ್ವನಿ, ಮಕ್ಕಳ ಧ್ವನಿ, ಪ್ರಾಣಿಗಳ ಧ್ವನಿ, ವಾದ್ಯಗಳ ಧ್ವನಿ, ಎಲ್ಲವೂ ಕೇಳಲು ಬಹಳ ಹಿತಕರವಾಗಿದ್ದವು. ಒಮ್ಮೆ ರೇಡಿಯೋ ಸ್ಟೇಶನ್ನಿಗೆ ಹೋಗಿ ಇಂತಹ ಮಧುರ ಧ್ವನಿಗಳು ಯಾರವು ಎಂಬುದನ್ನು ಪತ್ತೆ ಹಚ್ಚಿ ಅವರನ್ನು ನೋಡಬೇಕೆಂದು ಕುತೂಹಲ ಹೆಚ್ಚಾಗುತ್ತಿತ್ತು. ಹೋಗಿಬರಬೇಕೆಂದರೆ ನಮ್ಮ ಸಂಪಾದಕರು ''ಅವರ್ನ ನೋಡಿ ಏನು ಮಾಡ್ತಿ, ಸುಮ್ಮನೆ ಟೈಂ ವೇಸ್ಟು...'' ಎಂದು ಹೇಳಿ ನನ್ನ ಪ್ರಯಾಣಕ್ಕೆ ಕಡಿವಾಣ ಹಾಕುತ್ತಿದ್ದರು. ಇದಕ್ಕೂ ಮೊದಲು ನಾನು ಪ್ರಾಥಮಿಕ ಶಾಲೆಯಲ್ಲಿದ್ದಾಗ ನಾಲ್ಕನೆಯ ಇಯತ್ತೆ ಓದುತ್ತಿದ್ದಾಗ ಒಮ್ಮೆ ರೇಡಿಯೋ ಸ್ಟೇಶನ್ನಿನವರು 'ಗಿಳಿವಿಂಡು' ಕಾರ್ಯಕ್ರಮವನ್ನು ಧ್ವನಿಮುದ್ರಿಸಿಕೊಳ್ಳಲು ನಮ್ಮ ಶಾಲೆಗೆ ಬಂದರು. ಶಾಲೆಯಲ್ಲಿ ಹಾಡುವುದು, ನಾಟಕಗಳನ್ನು ಮಾಡುವುದು ಇದರಲ್ಲಿ ತೊಡಗಿದ್ದ ನನಗೆ ನನ್ನ ಶಿಕ್ಷಕರು ನನ್ನನ್ನೂ ಆ ಕಾರ್ಯಕ್ರಮಕ್ಕೆ ಶಿಫಾರಸು ಮಾಡಿದರು. ಆದರೆ ರೇಡಿಯೋ ಸ್ಟೇಶನ್ನಿನ ಆ

ಅಧಿಕಾರಿಗಳು ನನ್ನ ಧ್ವನಿ ಕೇಳಿ ಹಾಡು, ನಾಟಕ ಕೇಳಿ 'ಈತ ರೇಡಿಯೋಕ್ಕೆ ಯೋಗ್ಯನಲ್ಲ' ಎಂದು ನನ್ನನ್ನು ತಿರಸ್ಕರಿಸಿದರು. ಉಳಿದ ಮಕ್ಕಳ ಕಾರ್ಯಕ್ರಮಗಳನ್ನು ಧ್ವನಿಮುದ್ರಿಸಿಕೊಂಡು ಆಯ್ಕೆಯಾದ ಮಕ್ಕಳ ಜೊತೆಗೆ ಫೋಟೋ ತೆಗೆಯಿಸಿಕೊಂಡು ಹೊರಟು ಹೋದರು. ಧ್ವನಿ ಪ್ರಪಂಚದಿಂದ ನನ್ನನ್ನು ಹೊರಗೆ ಹಾಕಿದ್ದರು ಎಂಬುದು ನನಗೆ ನಂತರ ತಿಳಿದು ದುಃಖವಾಯಿತು. ಹಲವು ವರ್ಷಗಳ ನಂತರ ನಾನು ರೇಡಿಯೋ ಸ್ಟೇಶನ್ನಿನಲ್ಲಿ ಅಧಿಕಾರಿಯಾಗಿ ಕೆಲಸ ಮಾಡುವಾಗ ನಾನು ಕಲಿತ ಶಾಲೆಗೇನೆ 'ಗಿಳಿವಿಂಡು' ಕಾರ್ಯಕ್ರಮ ಧ್ವನಿಮುದ್ರಿಸಿಕೊಳ್ಳಲು ಹೋಗಬೇಕಾಯಿತು. ಅಲ್ಲಿ ಹೋದಾಗ ನನ್ನ ಅನೇಕ ಶಿಕ್ಷಕರು ನಿವೃತ್ತರಾಗಿದ್ದರು. ನಾನು ನನ್ನ ಮೊದಲಿನ ಪ್ರಸಂಗವನ್ನು ನೆನಪಿಸಿಕೊಂಡೆ, ಒಂದೂ ಬಿಡದೆ ಎಲ್ಲ ಮಕ್ಕಳ ಕಾರ್ಯಕ್ರಮಗಳನ್ನು ಧ್ವನಿಮುದ್ರಿಸಿಕೊಂಡು ಪ್ರಸಾರ ಮಾಡಿದೆ.

ನಾನು ಹೈಸ್ಕೂಲಿನಲ್ಲಿ ಓದುತ್ತಿರುವಾಗಲೇ ನಾನು ಪತ್ರಿಕೆಯೊಂದರಲ್ಲಿ ಕೆಲಸ ಮಾಡುತ್ತಿದ್ದೆ. ರೇಡಿಯೋದಲ್ಲಿ ಬರುವ ಸುದ್ದಿಗಳನ್ನು ಬರೆದುಕೊಂಡು ಪತ್ರಿಕೆಗೆ ಕೊಡುವ ಕೆಲಸ ಮಾಡುತ್ತಿದ್ದ ನನಗೆ 1960ರಲ್ಲಿ ರೇಡಿಯೋದಲ್ಲಿ ಕಾಪಿಯಿಸ್ಟ್ ಒಬ್ಬರು ಬೇಕಾಗಿದ್ದಾರೆ ಎಂಬ ಪ್ರಕಟಣೆ ಕೇಳಿದೆ. ದಿನಾಲು 75 ರೂ. ಸಂಬಳ, ಕಾಂಟ್ರಾಕ್ಟ್ ಆಧಾರದ ಮೇಲೆ ನೇಮಕಾತಿ ಎಂದೆಲ್ಲ ಇತ್ತು. ಒಂದು ಇನ್‌ಲ್ಯಾಂಡ್ ಪತ್ರದಲ್ಲಿ ಅರ್ಜಿ ಗುಜರಾಯಿಸಿದೆ. ಮುಂದೆ ಒಂದೇ ತಿಂಗಳಲ್ಲಿ ಸಂದರ್ಶನಕ್ಕೆ ಕರೆಯೂ ಬಂತು. ಧಾರವಾಡ ಮುಟ್ಟಿದಾಗ ನನ್ನನ್ನು ಸ್ವಾಗತಿಸಿದ್ದು ಅಲ್ಲಿಯ ಜಿಟಿ ಜಿಟಿ ಮಳೆ. ಅಲ್ಲಲ್ಲಿ ನಿಂತು ರೇಡಿಯೋ ಸ್ಟೇಶನ್ ಎಲ್ಲಿದೆ ಎಂದು ಕೇಳುತ್ತಲೇ ಧಾರವಾಡ ಸ್ಟೇಶನ್ ತಲುಪಿದೆ. ಲಿಖಿತ ಪರೀಕ್ಷೆ, ಧ್ವನಿ ಪರೀಕ್ಷೆ ಸಂದರ್ಶನ ಎಲ್ಲವೂ ಮುಗಿದಾಗ ಸಂಜೆ ಆಗಿತ್ತು. ಇನ್ನೂ ಹಲವರು ಸಂದರ್ಶನಕ್ಕಾಗಿ ಇದ್ದಾಗಲೇ ಅಧಿಕಾರಿ ಒಬ್ಬರು ಬಂದು ನನ್ನನ್ನು ಕೋಣೆಗೆ ಕರೆದುಕೊಂಡು ಹೋಗಿ ಒಂದೆರಡು ಫಾರ್ಮಗಳನ್ನು ಕೊಟ್ಟು 'ನಿಮ್ಮ ಆಯ್ಕೆ ಆಗುವುದಿದೆ ಇವುಗಳನ್ನು ತುಂಬಿ ಕಳಿಸಿರಿ' ಎಂದರು. ನಾನು ನಂಬಲಿಲ್ಲ. ಆದರೆ ನಂಬಲೇಬೇಕಾಗಿತ್ತು.

ಒಂದೆರಡು ತಿಂಗಳ ನಂತರ ನನ್ನ ಆಯ್ಕೆಯಾಯಿತು. ಕಾಪಿಯಿಸ್ಟ್ ಎಂದು. ನನಗೆ ಈ ಕಾಪಿಯಿಸ್ಟ್ ಅಂದರೇನು ಗೊತ್ತೇ ಇರಲಿಲ್ಲ. ಆಮೇಲೆ ತಿಳಿಯಿತು. ಸ್ಟೇಶನ್ನಿಗೆ ಬಂದ ಹಸ್ತ ಪ್ರತಿಗಳ ನಕಲನ್ನು ಮಾಡುವುದು ಎಂದು. ಆಗಿನ್ನೂ ಕನ್ನಡ ಬೆರಳಚ್ಚು ಯಂತ್ರ ಬಂದಿರಲಿಲ್ಲ. ಸುರು ಆಯಿತು ನನ್ನ ಕೆಲಸ. ಆಗಾಗ ನನ್ನನ್ನು ಆಕರ್ಷಿಸುವ ಧ್ವನಿಗಳನ್ನು ನೋಡಬೇಕೆಂಬ ಕುತೂಹಲ ನಿಲ್ಲಲಿಲ್ಲ. ಒಂದೆರಡು ದಿನಗಳಲ್ಲಿ ಆ ಅವಕಾಶವೂ ಬಂತು. ಪ್ರತಿದಿನ ಸಾಯಂಕಾಲ ನನ್ನನ್ನು ಆಕರ್ಷಿಸುತ್ತಿದ್ದ ಆ ಧ್ವನಿಗಳನ್ನು ನೋಡಲು ಸ್ಟುಡಿಯೋದ ಒಳಗೆ ಹೋದೆ. ನನಗೆ ಶಾಕ್ ಆದಂತಾಯಿತು. ಒಬ್ಬ ವಯಸ್ಸಾದ ಹೆಣ್ಣು ಮಗಳು ಏನೋ ಓದುತ್ತಿದ್ದರು. ಇಂತಹ ಮಧುರ ಧ್ವನಿ ಇದ್ದವರು ಹೀಗೆ ಇದ್ದಾರೆಯೇ? ಧ್ವನಿ ಕೇಳಿದರೆ 18-19 ವರ್ಷದ ಹುಡುಗಿಯದು. ಆದರೆ ಇವರು 40-45 ವರುಷದ ಧಡೂತಿ ಹೆಣ್ಣು ಮಗಳು, ಎಂತಹ ವಿಪರ್ಯಾಸ? ಆಗಲೇ ನನ್ನಲ್ಲಿ ಧ್ವನಿ ಪ್ರಪಂಚದ ವಿಪರ್ಯಾಸಗಳು ಬೀಜಗಳು ಅಂಕುರಿಸಿದ್ದು. ನಮ್ಮ ವಯಸ್ಸೇ ಬೇರೆ, ನಮ್ಮ ಧ್ವನಿಯ ವಯಸ್ಸೇ ಬೇರೆ. ನಮ್ಮ ಧ್ವನಿಗೂ ಒಂದು ವಯಸ್ಸು ಇರುತ್ತದೆ ಎಂಬುದು ಈ ಧ್ವನಿ ಪ್ರಪಂಚದ ಒಂದು ಸತ್ಯ. ದಿನಕಳೆದಂತೆ ಈ ಪ್ರಪಂಚದ ಒಂದೊಂದು ಮಜಲು ತಿಳಿಯತೊಡಗಿತು. ಅದರಲ್ಲಿ ನನ್ನ ರಕ್ತ, ಮಾಂಸ, ಉಸಿರುಗಳು ಓಡಾಡತೊಡಗಿದವು. ಮೆಲ್ಲನೆ ನಾನೊಬ್ಬ ಈ ಕರ್ಣಯಜ್ಞದಲ್ಲಿಯ ಹವಿಸ್ಸು ಆದೆ.

ಇದೊಂದು ವಿಚಿತ್ರ ಪ್ರಪಂಚ, ಧ್ವನಿ ಇದ್ದವರೆ ಈ ಪ್ರಪಂಚದ ನಾಗರಿಕರು. ಅದನ್ನು ಆಳುವವರು ಇವರೆ. ಇಲ್ಲಿ ಇರುವವರಿಗೆ ವಯಸ್ಸಾದರೂ ಇವರ ಧ್ವನಿಗಳಿಗೆ ಯಾವಾಗಲೂ ತಾರುಣ್ಯ. ಇಂತಹ ನೂರಾರು ಜನರನ್ನು ನಾನು ಈಗಲೂ ಅವರ ಧ್ವನಿಯಿಂದಲೇ ಗುರುತು ಹಿಡಿಯಬಲ್ಲೆ. ನಾನು ಮೊದಲ ಸಲ 'ಚಂಡಿ ಶಾಸನ' ಎಂಬ ನಾಟಕವನ್ನು ಸಿದ್ದಪಡಿಸುವಾಗ ಅಲ್ಲಿ ಬರುವ ಪೌರಾಣಿಕ ಪಾತ್ರಗಳನ್ನು ಮೆಚ್ಚಿಕೊಂಡೆ. ಅತ್ಯಂತ ಬಲಿಷ್ಠ ದೃಢಕಾಯರಾದ ನಟ ನಟಿಯರನ್ನು ಆರಿಸಬೇಕೆನಿಸಿತ್ತು. ನನ್ನ ಕೆಲವು ಹಿರಿಯರನ್ನು ಕೇಳಿದೆ, ಆಗ ಅವರು 'ಅವರದೇನು ಕೆಲಸಪಾ ಇಲ್ಲಿ. ಇಲ್ಲಿ ಬರಬೇಕಾದವರು ಧ್ವನಿಯಿಂದ ಧೃಢಕಾಯದವರಾಗಿರಬೇಕು' ಎಂದರು. ಧ್ವನಿಯ ವಯಸ್ಸನ್ನು ಗುರುತಿಸಿ ಅಂಥವರನ್ನು ಆಯ್ಕೆ ಮಾಡಲಾಯಿತು. ಚಂಡಶಾಸನನ ಪಾತ್ರ ಮಾಡಿದವ ತೀರ ಕೃಶಾಂಗಿಯಾಗಿದ್ದ ಎಂದರೆ ನೀವು ನಂಬಲಿಕ್ಕಿಲ್ಲ. ಆದರೆ ಧ್ವನಿ ಪ್ರಪಂಚದಲ್ಲಿರುವವರು ಅವನನ್ನು ಇನ್ನೂ ಬಲಿಷ್ಠ ಎಂದೇ ತಿಳಿದಿದ್ದಾರೆ. ಮುಂದೆ ನಾನೇ ಈ ಧ್ವನಿ ಪ್ರಪಂಚ ಕುರಿತು 'ಕರ್ಣಯಜ್ಞ' ಎಂಬ ನಾಟಕವನ್ನು ಬರೆದೆ. ಅದರ ಒಂದು ದೃಶ್ಯ ಹೀಗಿದೆ; ರಂಗದ ಮೇಲೆ ನಟ ಮತ್ತು ಸೂತ್ರಧಾರ ನಿಂತಿದ್ದಾರೆ.

**ನಟಿ** : ಅಲ್ಲಪಾ ಸೂತ್ರಧಾರ ಆಗಲೇ ಹಣ ಎಣಿಸುವ ಧ್ವನಿ ಕೇಳಿ ಬಂತಲ್ಲಾ. ಎಲ್ಲಿ ಹಣ!

**ಸೂತ್ರಧಾರ** : ಅಮ್ಮಾ ನಟಿ. ಈ ಕರ್ಣಯಜ್ಞದಲ್ಲಿ ಎಲ್ಲಿ ಹಣ, ಬರೀ ಎಣಿಸುವುದಷ್ಟೇ.

**ನಟಿ** : ಹಾಗಾದರೆ ಮೋಡ ಗರ್ಜನೆ ಮಳೆ ಕೇಳಿ ಬಂತಲ್ಲ ಇಲ್ಲಿ ನೆಲವಂತೂ ಒಣಗಿಯೇ ಇದೆ.

**ಸೂತ್ರ** : ಅದೂ ಸಹ ಕೇವಲ ಧ್ವನಿ ಮಹಾರಾಯತಿ. ಕೇವಲ ಧ್ವನಿಯಿಂದ ಇಲ್ಲಿ ಮಳೆ ಬರಿಸುತ್ತಾರೆ.

**ನಟಿ** : ಮಳೆ ಇರದಿದ್ದರೂ ನನಗೆ ಕೇಳಿದಾಕ್ಷಣ ಬೆವರಂತೂ ಬಂತು ಬಿಡು.

**ಸೂತ್ರ** : ಅದೇ ಕರ್ಣಯಜ್ಞದ ಯಶಸ್ಸು.

ಹೀಗೆ ಸೂತ್ರಧಾರನ ವಿವರಣೆ ರೇಡಿಯೋ ನಾಟಕಕ್ಕೆ ಸಂಬಂಧಿಸಿದ ಧ್ವನಿ ಪರಿಣಾಮಗಳ ಬಗ್ಗೆ ನಡೆಯುತ್ತದೆ. ಒಮ್ಮೆ ನಾನು ದಿವಂಗತ ಖಾದ್ರಿ ಶಾಮಣ್ಣನವರ ಜೊತೆಗೆ ಮಾತನಾಡುತ್ತ ಕುಳಿತಿದ್ದೆ. ಖಾದ್ರಿ ಅವರು ಚಹ ತರಿಸಿದ್ದರು. ಚಹ ತಂದ ಹುಡುಗ ಚಹಕೊಟ್ಟು ಚಿಲ್ಲರೆ ಹಣ ಖಾದ್ರಿ ಅವರಿಗೆ ಕೊಟ್ಟ. ಕೊಡುವಾಗ ಅವನ ಕೈಯಿಂದ ಒಂದು ರೂಪಾಯಿಯ ನಾಣ್ಯ ಕೆಳಗೆ ಬಿತ್ತು. ಅದು ಉರುಳುತ್ತ ಉರುಳುತ್ತ ನನ್ನ ಖುರ್ಚಿಯ ಸಮೀಪ ಬಂತು. ನಾನು ಹಾಗೆಯೇ ಇದ್ದೆ, ಖಾದ್ರಿ ಅವರು 'ಅದನ್ನು ತಗೋ' ಎಂದರು. ನಾನು ''ಸರ್ ನಾನು ರೇಡಿಯೋ ಮನುಷ್ಯ. 'ಐ ಕೆನ್ ಅರೆಸ್ಟ್ ದಿ ಸೌಂಡ್ ಆಫ್ ದಿ ಕಾಯಿನ್, ನಾಟ್ ದಿ ಕಾಯಿನ್'' ಅಂದೆ. ಅದಕ್ಕೆ ಖಾದ್ರಿಯವರು 'ಪರವಾಗಿಲ್ಲ ಬಿಡು, ನೀನು ತೀರಾ ರೇಡಿಯೋದವನಾಗಿಬಿಟ್ಟೆ' ಎಂದರು.

ರೇಡಿಯೋ ಮನುಷ್ಯ ಅಂದರೆ ಕುರುಡ ಎಂದು ಹಿಂದೆ ಯಾರೋ ಹೇಳಿದ್ದ ನೆನಪು. ರೇಡಿಯೋದ ಎದುರು ಕುಳಿತಿರುವವನಿಗೆ ದೇವರು ಎರಡು ಕಿವಿಗಳನ್ನು ಕೊಟ್ಟದ್ದರೆ ಸಾಕು. ಕಣ್ಣುಗಳಿಗೆ ಇಲ್ಲಿ ಏನೂ ಕೆಲಸವಿಲ್ಲ. ಇಲ್ಲಿ ಕೇಳುವವನಿಗೆ ಕಿವಿ ಇರುವಂತೆ ಹೇಳುವವನಿಗೆ ಬಾಯಿ ಬೇಕು. ಬಾಯಿ ಅಂದರೆ ಕೇವಲ ಬಾಯಿ ಅಲ್ಲ, ಮಾತನಾಡುವ ಬಾಯಿ. ಅದು ನನಗೆ ಇತ್ತು. ಆದರೆ ಅದನ್ನು ನಾನು ಬಹಳ ಉಪಯೋಗಿಸಲಿಲ್ಲ, ಮತ್ತೊಬ್ಬರಿಗೆ ಅದನ್ನು ಕೊಟ್ಟು, ಅವರ ಕಿವಿಗಳನ್ನು ಪಡೆದುಕೊಂಡೆ. ಇಂದಿನವರೆಗೆ ಆ ಕಿವಿಗಳನ್ನೇ ಹಚ್ಚಿಕೊಂಡು ಈ ಧ್ವನಿ ಪ್ರಪಂಚದಲ್ಲಿದ್ದೇನೆ. ಧ್ವನಿ ಪ್ರಪಂಚದಲ್ಲಿ ಮಾತನಾಡುವವ ಕೇಳುವವ ಇವರಿಬ್ಬರನ್ನು ಜೋಡಿಸುವ ಕೊಂಡಿ ಪ್ರಸಾರ ಯಂತ್ರ



ಕರಿಷ್ಮಾ ಹೇಳುತ್ತಾಳೆ....

### ''ಆತನಿಗೆ ಮೀಸೆ ಇರಕೂಡದು!''

- **ನಿಮ್ಮ ಕನಸಿನ ಸಂಗಾತಿ ಹೇಗಿರಬೇಕು?**

ಆತ ನನ್ನನ್ನು ಅರ್ಥಮಾಡಿಕೊಳ್ಳುವ, ನನ್ನ ಬಗ್ಗೆ ಕಾಳಜಿ ವಹಿಸುವ ಪ್ರಾಮಾಣಿಕ ವ್ಯಕ್ತಿಯಾಗಿರಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಆತ ನನಗೆ, ಕೇವಲ ನನಗೆ ನಿಷ್ಠನಾಗಿರಬೇಕು. ಆತನಿಂದ ಹಂಡ್ರೆಡ್ ಪರ್ಸೆಂಟ್ ನಿಷ್ಠಾವಂತಿಕೆ ನಿರೀಕ್ಷಿಸುತ್ತೇನೆ.

- **ಆತ ನೋಡಲು ಹೇಗಿರಬೇಕು?**

ಹಾಗೆ ನೋಡಿದರೆ ಬಾಹ್ಯ ಚಹರೆ ಅಷ್ಟು ಮುಖ್ಯವಲ್ಲ, ಆದಾಗ್ಯೂ ನನ್ನ ಕನಸಿನ ಪುರುಷನಿಗೆ ಹೊಳಪು ಕಂಗಳಿರಬೇಕು, ಸೂಟ್ ಹಾಕಿದಾಗ ಚೆಂದ ಕಾಣಬೇಕು.... ಆತನಿಗೆ ಮೀಸೆ ಮಾತ್ರ ಇರಕೂಡದು!

ಇರುತ್ತದೆ. ಇವು ಈ ಪ್ರಪಂಚದ ಆಧಾರ ಸ್ತಂಭಗಳು. ಈ ಆಧಾರ ಸ್ತಂಭಗಳಿಗೆ ಜೋತು ಬಿದ್ದವನಿಗೆ ಪ್ರಸಾರಕ ಎಂದು ಕರೆಯಲಾಗುತ್ತದೆ. ಈ ಪ್ರಸಾರಕನಿಗೆ - ಕೇಳುವವರ ಕಿವಿಗಳನ್ನು ಹಚ್ಚಿಕೊಂಡೇ ಕೆಲಸ ಮಾಡಬೇಕಾಗುತ್ತದೆ. ಜನರು ಏನನ್ನು ಕೇಳಬೇಕೆನ್ನುತ್ತಾರೆ ಎಂಬುದನ್ನು ಅರಿತು ಅದನ್ನು ಅವರಿಗೆ ಕೇಳಿಸಬೇಕು. ಅಂತಹದನ್ನೆ ಆರಿಸಿ ಆರಿಸಿ ಅಂತಹವರನ್ನೇ ಆಯ್ಕೆ ಮಾಡಬೇಕು. ಒಂದು ವಿಷಯದಲ್ಲಿ ಒಬ್ಬ ಕೇವಲ ಪರಿಣತನಾದರೆ ಸಾಲದು, ಆತ ಒಳ್ಳೇ ಮಾತುಗಾರನಾಗಿರಬೇಕು.

ಒಮ್ಮೆ ಈ ವಿಷಯದಲ್ಲಿ ಬಹಳ ದೊಡ್ಡ ತೊಂದರೆಯನ್ನು ಅನುಭವಿಸಬೇಕಾಯಿತು. ಒಳ್ಳೆಯ ಮಾತನಾಡುವವರಿದ್ದರೆ ಪರಿಣತರು ಇರುವುದಿಲ್ಲ. ಪರಿಣತಿ ಇದ್ದವರು ಮಾತುಗಾರರು ಇರಲಿಕ್ಕಿಲ್ಲ. ಮಲೇರಿಯಾ ರೋಗ ಕುರಿತು ಮಾತನಾಡಲು ನಾನು ಒಮ್ಮೆ ಒಬ್ಬ ಪರಿಣತ ಡಾಕ್ಟರರನ್ನು ಕರೆದೆ. ಅವರು ಬರೆದುಕೊಂಡೇ ಬಂದಿದ್ದರು. ತಾವು ಬರೆದುದನ್ನು ಓದತೊಡಗಿದರು. ಓದುವಾಗ ತಡವರಿಸುತ್ತಿದ್ದರು. ನಾನು ಅವರಿಗೆ ದಯವಿಟ್ಟು ಮಾತನಾಡಿ ಎಂದೆ. ಅದಕ್ಕೆ ಅವರು ಬರೆದದ್ದನ್ನು ಹೇಗೆ ಮಾತನಾಡುವುದು? ಎಂದು ಕೇಳಿದರು. ಆಯಿತು ಓದಿರಿ ಎಂದೆ. ಅವರ ತಡವರಿಸುವಿಕೆ, ಧ್ವನಿ ಆಗಾಗ ಒಡೆಯುವುದು ಆಗಹತ್ತಿತ್ತು. ಆಗ ನಾನು 'ನೀವು ಓದಬೇಡಿ, ನಿಮ್ಮ ಧ್ವನಿ ಸರಿಯಿಲ್ಲ. ಓದಲು ಆಗುವುದಿಲ್ಲ' ಎಂದೆ. ಅವರು ಕೇಳಲಿಲ್ಲ. 'ನಾನೇ ಬರೆದಿದ್ದೇನೆ, ನಾನೇ ಓದುತ್ತೇನೆ' ಎಂದು ಹಠ ಮಾಡಿದರು. ಕೊನೆಗೆ ಹಾಗೂ ಹೀಗೂ ಮಾಡಿ ಅವರ ಮಾತುಗಳನ್ನು ಧ್ವನಿ ಮುದ್ರಣ ಮಾಡಿ ನಂತರ ಅವರಿಗೆ ಹಚ್ಚಿ ತೋರಿಸಿದೆ. ಆಗ ಅವರಿಗೇನೆ ಗೊತ್ತಾಯಿತು, ಅವರ ವಾಣಿ ಎಷ್ಟು ಅಶುದ್ಧವೆಂದು, ಚಳಿ ಬಂದವರಂತೆ ನಡುಗಿ 'ನೀವೇ ಓದಿ ಬಿಡಿರಿ, ಯಾಕೋ ನನ್ನ ಗಂಟಲು ಸರಿ ಇಲ್ಲ' ಎಂದರು. ಮತ್ತೆ ಕೆಲವು ತಿಂಗಳುಗಳ ನಂತರ ಅವರನ್ನು ಒಂದೆರಡು ಸಲ ಮಾತನಾಡಲು ಕರೆದೆ. ಅವರು ಏನೇನೋ ನೆಪ ಹೇಳಿ ಜಾರಿಕೊಂಡುಬಿಟ್ಟರು.

ಒಮ್ಮೆ ಒಬ್ಬ ನಾಟಕಕಾರರು ಬಂದು ಪೌರಾಣಿಕ ನಾಟಕವನ್ನು ಬರೆದು ಕಳಿಸಿದ್ದರು. ಅದರ ಮೊದಲ ದೃಶ್ಯ ಹೀಗಿತ್ತು. ಋಷಿಯೊಬ್ಬ ನದಿಯ ಮಧ್ಯದಲ್ಲಿರುವ ಬಂಡೆಯ ಮೇಲೆ ತಪಸ್ಸಿಗೆ ಕುಳಿತಿದ್ದಾನೆ 'ಓಂ ನಮಃ ಶಿವಾಯ' ಎಂಬ ಮಂತ್ರವನ್ನು ಜಪಿಸುತ್ತಿದ್ದಾನೆ. ನದಿಯ ಎರಡೂ ದಂಡೆಗಳಿಗೆ ಹೊಂದಿಕೊಂಡಿರುವ ಅರಣ್ಯದಲ್ಲಿ ಕ್ರೂರ ಮೃಗಗಳು ಕೂಗುತ್ತಿವೆ. ಮೇಲೆ ಆಕಾಶದಲ್ಲಿ ದೇವತೆಗಳು ಮಂತ್ರ ಘೋಷಗಳಿಂದ ಪುಷ್ಪಕ ವಿಮಾನದಲ್ಲಿ ಕುಳಿತು ಹೂಮಳೆಗರಿಸುತ್ತಿದ್ದಾರೆ. ಇತ್ತ ರಾಕ್ಷಸರು ಗುಡುಗು, ಮಿಂಚು, ಮಳೆಯಿಂದ, ಇನ್ನೊಂದು ಕಡೆ ನಾವೆಯಲ್ಲಿ ಕುಳಿತ ಅಪ್ಸರೆ ತನ್ನ ಗಾಯನದಿಂದ ಋಷಿಯ ತಪಸ್ಸನ್ನು ಭಂಗ ಮಾಡಲು ಪ್ರಯತ್ನಿಸುತ್ತಿದ್ದಾರೆ. ಇವೆಲ್ಲ ಮೊದಲ ದೃಶ್ಯದಲ್ಲಿ ಬರುವ ನೋಟಗಳು. ಲೇಖಕರ ಕಲ್ಪನಾ ಶಕ್ತಿಗೆ ತಲೆಯಂತೂ ತೂಗಿತು. ಆದರೆ ಕಿವಿಗಳಿಗೆ ಯಾವುದೂ ಕೇಳಿಸಲಿಲ್ಲ. ಈ ಎಲ್ಲ ಧ್ವನಿಗಳನ್ನು ಎರಡೂ ಕಿವಿಗಳ ಕೊಳವೆಗಳಲ್ಲಿ ಸುರುವಿದರೆ ಕೇಳುವವನಿಗೆ ಏನು ಕೇಳಿಸುವುದು. ಕೇವಲ ಗದ್ದಲ.... ಗದ್ದಲ.... ಕೊನೆಗೆ ತಿದ್ದಿ ತೀಡಿ ನಾಟಕವನ್ನು ಕೇಳಲು ಯೋಗ್ಯವಾಗುವಂತೆ ಮಾಡಿ ಪ್ರಸಾರ ಮಾಡಲಾಯಿತು.

ಕರ್ಣಯಜ್ಞ ಇಲ್ಲಿಗೆ ನಿಲ್ಲಲಿಲ್ಲ. ಪ್ರತಿದಿನ ಒಂದೊಂದು ಹೊಸ ಸಮಸ್ಯೆಗಳು ಎದುರಾಗತೊಡಗಿದಾಗ ಧ್ವನಿ ಪ್ರಪಂಚ ಎಷ್ಟೊಂದು ಜಟಿಲವಾಗಿದೆ ಎಂಬುದು ತಿಳಿಯಿತು. ಕೇವಲ ಧ್ವನಿಯಿಂದಲೇ ಎಲ್ಲವನ್ನೂ ಹೇಳುವುದು ಎಷ್ಟೊಂದು ಸಾಹಸದ ಕೆಲಸ....

ಧ್ವನಿ ಪ್ರಪಂಚದಲ್ಲಿ ರೇಡಿಯೋ ಒಂದು ಪ್ರಬಲ ಯಾಂತ್ರಿಕ ಸಂಪರ್ಕ ಸಾಧನ. ಇಲ್ಲಿ ಒಂದೆಡೆಯಿಂದ ಹೇಳುವ ಕ್ರಿಯೆ ನಡೆದಿರುತ್ತದೆ, ಇನ್ನೊಂದೆಡೆಗೆ ಕೇಳುವ ಕ್ರಿಯೆ ನಡೆದಿರುತ್ತದೆ. ಈ ಕ್ರಿಯೆಯ ನಡುವೆ ದೊಡ್ಡ ಕಂದಕ ಏರ್ಪಟ್ಟರೆ ಈ ಕ್ರಿಯೆ ತನ್ನ ಗುರಿಯಲ್ಲಿ ಸೋಲುತ್ತದೆ. ಪುರಾಣ, ಪುಣ್ಯಕಥೆಗಳನ್ನು ಓದಿದವರಿಗೆ, ಕೇಳಿದವರಿಗೆ ಅಲ್ಲಿ ಬರುವ ಅಶರೀರವಾಣಿಗಳು ಅಪರಿಚಿತವೇನಲ್ಲ. ಈ ಅಶರೀರವಾಣಿಗಳು ಶಾಪ, ವರ, ಆಜ್ಞೆಗಳ ರೂಪದಲ್ಲಿ ಹಿತ ಅಹಿತವಾಗಿದ್ದರೂ, ಭಾಷೆ, ಶೈಲಿ, ಗಾತ್ರಗಳಲ್ಲಿ ಖಂಡಿತವಾಗಿಯೂ ಅವು ವಿಪುಲವಾಗಿರುವುದನ್ನು ನಾವು ಗಮನಿಸಬಹುದು. ಹೇಳುವವರು ಏನೇ ಹೇಳಲಿ ಅವರು ಮಿತಭಾಷಿಗಳಾಗಿರಬೇಕೆಂಬುದು ನಮ್ಮ ಶ್ರವಣ ಸಂಸ್ಕೃತಿಯ ಶಿಷ್ಟಾಚಾರ. ಬೌದ್ಧಿಕ ಭಾರ ಕಡಿಮೆ ಆದಾಗಲೆಲ್ಲ ಧ್ವನಿ ಪ್ರಪಂಚ ಬೆಳೆಯುತ್ತದೆ. ಕೇಳುಗರ ಎದುರು ಧ್ವನಿ ಚಿತ್ರವನ್ನು ನಿರ್ಮಿಸುವ ಕಲಾವಿದನ ಹತ್ತಿರ ಕುಂಚ, ಬಣ್ಣಗಳು ಇರದಿದ್ದರೂ ಆತ ನಿರ್ಮಿಸಿದ ಕಲಾಕೃತಿ ಅಚ್ಚಳಿಯದೆ ಉಳಿಯುತ್ತದೆ. ಕೇಳು, ಕೇಳಿರಿ, ಲಾಲಿಸು, ಆಲಿಸು ಮುಂತಾದ ಅನೇಕ ಶಬ್ದಗಳನ್ನು ನಮ್ಮ ದೇಶದ ಯಾವುದೇ ಸಂಸ್ಕೃತಿಯಲ್ಲಿ ಕೇಳಬಹುದು. ನಮ್ಮ ಸಂಸ್ಕೃತಿ ಪ್ರಾರಂಭವಾಗಿದ್ದೇ ಧ್ವನಿ ಪ್ರಪಂಚದಲ್ಲಿ 'ಕಿವಿಯಿಂದ ಈಂಟಿಸುವೆಂ ಸಮಸ್ತ ರಸಮಂ' ಅದಕ್ಕಾಗಿ ಈ ಪ್ರಪಂಚದಲ್ಲಿ ಓಡಾಡುವವರು ಮಾತನಾಡಬೇಕು, ಕೇಳಬೇಕು. ಕೇಳಲು ಯೋಗ್ಯವಾದುದನ್ನು ಆಡಬೇಕು, ಯೋಗ್ಯ ಮಾತುಗಳನ್ನಷ್ಟೇ ಕೇಳಬೇಕು. ಮುಂದಿನ ಶತಮಾನದ ಮಧ್ಯದಲ್ಲಿ ನಮ್ಮ ಬಾಯಿ ದೊಡ್ಡದಾಗುವುದಿದೆ ಅಂದರೆ ಮಾತನಾಡುವುದು ಹೆಚ್ಚಾಗುತ್ತದೆ. ನಮ್ಮ ಬರವಣಿಗೆಯ ಸಾಧನ ಸಲಕರಣೆಗಳನ್ನು ಕಟ್ಟಿಡಬೇಕಾಗುತ್ತದೆ. ಧ್ವನಿ ಪ್ರಪಂಚ ಮತ್ತೆ ಮೊಳಗಲಿದೆ ಕರ್ಣಯಜ್ಞ ಭರದಿಂದ ನಡೆಯಲಿದೆ.

■ ಜಿ.ಎಂ.ಶಿರಹಟ್ಟಿ





ಹಲ್ಲು ಕೀಳಿಸಲು ಯಾವ್ದೋ ಡಾಕ್ಟರ್ ಬಳಿ ಹೋಗಿ ಹಣ ಖರ್ಚು ಮಾಡ್ಬೇಡ ಕಣಯ್ಯ....



ಕೇವಲ ಮೂರು ಶಬ್ದ ಖರ್ಚು ಮಾಡು ಸಾಕು....



ಅಂದ್ರೇ.... ಯಾವುದಾದ್ರೂ ಹುಡುಗಿಗೆ "ಐ ಲವ್ ಯೂ" ಅನ್ನು.... ಹಲ್ಲು ಉದುರುತ್ತೆ!

# ಡಕ್ಕಿಯ ಸೊಲ್ಲಕೇಳಿ



■ ಕುಂ. ವೀರಭದ್ರಪ್ಪ

ಕತೆ

ಡಕ್ಕಿ ಧರುಮ ಕಳೆದವಾರ ನಡೆದ ದುಶ್ಯಾಸನನ ಕಾಳಗಕ್ಕೆ ಅರ್ಥಾತ್ ದ್ರೋಪದಿ ವಸ್ತ್ರಾಪಹರಣಕ್ಕೆ ಬಂದವನು ತನ್ನೂರಾದ ಹ್ಯಾಲಪಿಗೆ ಹೋಗದೆ ಲಚುಮವ್ವನ ತೋಪಿನ ಸಾದು ಸಜ್ಜನರ ದೋಸ್ತಿ ಮಾಡಿಕೊಂಡು ಹೆಂಡ ತಂಬಾಕು ಹೊಡೆಯುತ್ತ ಹಾಗೆ ಉಳಿದುಬಿಟ್ಟಿದ್ದ. ಧರುಮರಾಯ ಎಂಬುದು ಅವನ ಹುಟ್ಟು ಮಾರ್ಗದೆಶೆಯಿಂದಲೆ ತ್ವಚೆಗಂಟಿಕೊಂಡು ಬಂದಿದ್ದ ಹೆಸರು. ಹ್ಯಾಲಪಿಯ ಮಹಾ ಕಟುಕನೆಂದೇ ಹೆಸರಾಗಿದ್ದ ಪರಮನೀಚ ನರಸಿಂಗ ತನ್ನ ಹಾಗೆ ತನ್ನ ಏಕಮಾತ್ರ ಸುಪುತ್ರ ಮಾಡಬಾರದ ಕೆಲಸ ಮಾಡಿ ಕೆಟ್ಟ ಹೆಸರು ತಂದುಕೊಳ್ಳಬಾರದೆಂದೇ ಧರುಮರಾಯನೆಂದು ನಾಮಕರಣ ಮಾಡಿ ಎರೆಯಂಗಳಿಯಲ್ಲಿ ನಡೆದ ಖೂನಿ ಕೇಸಿನಲ್ಲಿ ಸಿಲುಕಿ ಜೈಲುಪಾದವನು ಅಲ್ಲಿಯೇ ವಿಲವಿಲ ಒದ್ದಾಡಿ ಸತ್ತು ಹೋಗಿದ್ದನು. ಗಂಡನ ಕೈಲಿ ಕುತ್ತಿಗೆ ಹಿಚುಕಿಸಿಕೊಂಡು ಸಾಯುವ ಮೊದಲು 'ನೀನೂ ನಿಮಪ್ಪಂಗಾಗ ಬ್ಯಾಡಲೋ ಬಾಡ್ಯಾವ್' ಎಂದು ತನ್ನ ಕಂದಮ್ಮಗೆ ಹೇಳಿ ಮುತ್ತೈದೆ ಸಾವು ಕಂಡಿದ್ದಳು ಲಚ್ಚುಮಿ. ಅತ್ತ ತಂದೆಯನ್ನೂ, ಇತ್ತ ತಾಯಿಯನ್ನೂ ಎರಡು ಮೂರು ತಿಂಗಳೊಪ್ಪತ್ತಿನಲ್ಲಿ ಕಳೆದುಕೊಂಡಿದ್ದ ಧರುಮ ತಂದೆಯಂತಾಗಬಾರದೆಂದು ಪ್ರಯತ್ನಿಸುತ್ತಲೇ ತಂದೆ ಕೂಡ ಮಾಡರಿಯದ ಎಷ್ಟೋ ಕೆಲಸಗಳನ್ನು ಮಾಡುತ್ತಲೇ ತಂದೆಯಂತೆಯೇ ಮಗ ಎಂದು ಹೆಸರು ಸಂಪಾದಿಸಿಕೊಂಡು ಬಿಟ್ಟಿದ್ದನು. ಇವನಿಗಿನ್ನೇನು ಮೀಸೆ ಬರುತ್ತವೆ, ಅವು ಬಿರುವುದಕ್ಕೂ ಮೊದಲೆ ತನ್ನನ್ನು ಗಂಡನಿಗಿಂತ ಹೆಚ್ಚಾಗಿ ನೋಡಿಕೊಂಡ ಲಚ್ಚುಮಿಯ ರುಣವನ್ನು ಹೇಗಾದರು ಮಾಡಿ

ತೀರಿಸಿಕೊಳ್ಳಬೇಕೆಂದು ಲೆಕ್ಕ ಹಾಕಿ ಪಿಯಾನು ಪೆಟ್ಟಿಗೆ ಮಾಸ್ತರ ಆದೆಯ್ಯನು ಧರುಮನನ್ನು ಮನೆಯ ಹಿತ್ತಲಲ್ಲಿಟ್ಟುಕೊಂಡು ಡೆಕ್ಕ ಬಾರಿಸುವುದನ್ನು ಕಲಿಸಿದನಲ್ಲದೆ ಯಾವ್ಯಾವ ಜಾತಿಯ ಹೆಂಗಸರನ್ನು ಹೇಗೆ ಹೇಗೆ ಮರುಳು ಮಾಡಬೇಕೆಂಬ ರಸವಿದ್ಯೆಯನ್ನೂ ಹೇಳಿಕೊಟ್ಟನು, ಆ ಎರಡು ವಿದ್ಯೆಗಳಲ್ಲಿ ಪಾರಂಗತನಾದ ಧರುಮನು ತನ್ನ ಪರಶುರಾಮಸ್ವರೂಪಿ ಗುರು ಪತ್ನಿಯಾದ ಪಾರೊತಮ್ಮನಲ್ಲಿ ಅನುರಕ್ತಿ ಪಡೆಯಲು ಗುರುವಾದ ಆದೆಯ್ಯನು ಕತ್ತೆಗೆ ಮೃತಪಾನ ಕಲಿಯುಗದ ಧರ್ಮ ಎಂದು ಮಧ್ಯರಾತ್ರಿವರೆಗೆ ತತ್ವಪದ ಹಾಡಿ ಉರುಲು ಹಾಕಿಕೊಂಡು ಸತ್ತನು. ಹುಣುಸೆ ಮರದ ಗುಣ ಸ್ವಭಾವವನ್ನು ಹೋಲುವ ಪಾರೊತಮ್ಮ ಜೀವನೊಪಾಯಕ್ಕಾಗಿ ಧರುಮನನ್ನು ಬಿಟ್ಟು ಊರು ಮಾಡುವ ಗೌಡನೆಂಬ ವಿಧುರನ ಏಳಂಕಣದ ಮನೆ ಸೇರಿದಳು, ಸಂಗ್ಯಾ ಬಾಳ್ಯಾ ಬಯಲಾಟ ಮುಗಿಸಿಕೊಂಡು ಬಂದ ಅವನು ಗುರುಪತ್ನಿ ಗೌಡನ ಪಾಲಾಗಿರುವುದು ತಿಳಿದು ಕುಡಿದು ಚಾವಡಿ ಎಂಬ ಸೂರ್ಯ ಸಿಂಹಾಸನದೆದುರು ನಿಂತು ವಾರೊಪ್ಪತ್ತಿನಲ್ಲಿ ಊರಿಗೆ ದೊಡ್ಡವನೆನ್ನಿಸಿಕೊಂಡಿರೋ ಗೌಡನ ಕೊಲೆ ಮಾಡುವುದಾಗಿ ಹೇಷಾರವ ಮಾಡಲು ಗೌಡನ ದೋತರ ಒದ್ದೆಯಾಯಿತು. ಅವನು ಕೂಡಲೆ ಧರುಮನನ್ನು ಎರೆಹೊಲದ ಹುಣುಸೆ ಮರದಡಿ ಕಂಡು ಉಡಿತುಂಬಿ ತಿಂಗಳಲ್ಲಿ ಅನುರೂಪಳಾದ ಕನ್ನೆ ಹುಡುಕಿ ಮದುವೆ ಮಾಡಿಕೊಡುವುದಾಗಿ ವಚನವಿತ್ತನು. ಆ ಕ್ಷಣದಿಂದಲೇ ಕಾರ್ಯ ಪ್ರವೃತ್ತನಾದ ಗೌಡನಿಗೆ ಕುಂತಳನಾಡಿನ ಪಡುವಣ ದಿಸೆಯಲ್ಲಿರುವ ಹಡ್ಲಗಿ ಎಂಬ ಗ್ರಾಮದಲ್ಲಿ ಹಗರಿ ಫಕ್ಕೀರವ್ವ ಎಂಬ ಪರಿಶೆ ಪೈಕಿ ಪೈಲ್ವಾನಳೋರ್ವಳಿಗೆ ಚವುಡಿ ಮತ್ತು ದುರುಗಿ ಎಂಬೀರ್ವರು ಒಲೆ ಹಿಂದೆಲ ಗೋಡೆಯಂಥ ಹೆಣ್ಣು ಮಕ್ಕಳಿರುವುದು ನೆನಪಾಯಿತು. ಕೂಡಲೆ ಅವನು ಪಾರೊತಿಯನ್ನು ಕಾಯಲಿಕ್ಕೆ ಹುಲುಗ, ಪರುಸರೆಂಬ ಗಂಡು ಜೋಗೆಮ್ಮಗಳನ್ನು ಕಾವಲಿಟ್ಟು ಎತ್ತು ಬಂಡಿ ಕಟ್ಟಿಸಿಕೊಂಡು ಹಗರಿಸಾಲಿನಲ್ಲಿ ಅಮರಾವತಿಯಂತೆ ಕಂಗೊಳಿಸುತ್ತಿದ್ದ ಹಡ್ಲಗಿಗೆ ಪ್ರಯಾಣ ಬೆಳೆಸಿದನು. ಐದೆಮ್ಮೆಯ ಹೆಂಡೆಗಸ ಮುಗಿಸಿ ಕೈ ತೊಳೆದುಕೊಂಡು ಉಂಬುವುದೋ, ಹಾಗೆ ಉಂಡು ನಂತರ ಕೈ ತೊಳೆದುಕೊಳ್ಳುವುದೋ ಎಂಬ ಚಿಂತೆಯಲ್ಲಿದ್ದ ಫಕ್ಕೀರಿಯು ಅಂಗಳದ ತಿಪ್ಪೆಯ ಮಗ್ಗುಲು ಗೌಡನನ್ನು ಕಂಡು ಹರುಷಾರಣ್ಯದಲ್ಲಿ ಹೊಲಬು ದಪ್ಪಿದಳು, "ಯೇನಪಾ ಗೋಡಾಽಽ.... ಹೆಂಡ್ತೀನ ಸುಡುಗಾಡಿಕ್ಕಿಕ್ಕಿದ್ದೇ ಇಕ್ಕಿದ್ದು ವಂದುಸಾರಿ ಗೂಡ ತಿರುಗಿ ನೋಡಬಾರ್ದೇನು?" ಎಂದು ಸೀರೆಯನ್ನು ಸೊಲುಪ ಮೇಲೆತ್ತಿ ಕಟ್ಟಿಕೊಂಡಳು, ವಿಧುರ ಪದವಿ ಅಲಂಕರಿಸುವ ಮೊದಲು ಬಿಕ್ಕಮರಡಿ ದುರುಗವ್ವಗೆ ಕಾಯಿ ಒಡೆಸಿಕೊಂಡು ಹೋಗುವ ನೆಪದಲ್ಲಿ ಅಮಾಸೆಗೊಮ್ಮೆ, ಹುಣ್ಣಿವಿಗೊಮ್ಮೆ ಹಡ್ಲಗಿಗೆ ಬಿಜಯಂಗೈದು ಪಕ್ಕೀರಿಯ ಕವುದಿಯಲ್ಲಿ ಉರುಳಾಡಿಹೋಗುತ್ತಿದ್ದ ಗೌಡ.... ಗೌಡನಾದವನು ಸುಮ್ಮೆ ಮಲಗಿಕೊಂಡು ಹೋಗಲಿಕ್ಕಾಗ್ತದೇನು! ಕಷ್ಟಸುಖ ಹೇಳಿಕೊಂಡು ಆಕೆಯೊಂದಿಗೆ ಐದುಸಾವಿರದವರೆಗೆ ಲೇವಾದೇವಿ ಇಟ್ಟುಕೊಂಡಿದ್ದ. ಆದರೆ ಒಮ್ಮೆ ಫಕ್ಕೀರಿ "ಏನಲೋ ಗೌಡ.... ನಿಂಗೆ ಮೈಯಿ ಕೊಟ್ಟದ್ದೂ ಅಲ್ಲದೆ ಗಂಟೂ ಬಿಡಬೇಕೇನು! ಈ ರೆಂಡೆಯ ಸೊಂಟಕ್ಕೊಂದು ಸೀರೆ ತಂದದ್ದುಂಟೇ, ಎದಿ ಮುಚ್ಚುವಂಗೊಂದು ಕುಬುಸ ತಂದದ್ದುಂಟಾಽಽ.... ಕುಡುದಾಳಂತ ಎಡಗಿವೀಲೆ ಕೇಳಿ ಬಲಗಿವೀಲೆ ಬಿಡಬ್ಯಾಡಾ.... ಮರುವಾದಿಯಿಂದ ಅಸಲೂ ಬಡ್ಡೀನ ವಾರೊಪ್ಪತ್ತಿನಲ್ಲಿ ತಂದು ಚುಕ್ತಾಮಾಡು.... ಇಲ್ಲಾಂದ್ರೆ ಹ್ಯಾಲಪೀಗೆ ಬಂದು ನಿಮ್ಮ ಮನೇಗಿನ ತಿಜೋರಿಮ್ಯಾಲ ಕುಂಡ್ರುತೀನಿ ಹುಸಾರ್" ಎಂದು ಎದೆಯಮೇಲೆ ಸೆರಗೆಳೆದುಕೊಂಡಿದ್ದಳು. ಏಳೂರಾಳುವ ತನ್ನಂಥ ಗೌಡನಿಗೆ ಹಿಂಗೆ ಮಾತಾಡಿದಳಲ್ಲಾ.... ಈಕೆ ಬಂದು ತಿಜೋರಿ ಮೇಲೆ ಕೂತು ರಂಪಾಟಮಾಡಿ ತನ್ನ ಗವುಡಿಕೆಯ ಮರುವಾದೀನ ಕಳೆಯಲ್ಲಿಕ್ಕೂ ಹೇಸುವಳಲ್ಲ ಎಂದು ಹೆದರಿ ವಾರೊಪ್ಪತ್ತಿನಲ್ಲಿ ಅಸಲುಬಡ್ಡಿ ಚುಕ್ತಾ ಮಾಡಿ ಹೋದವನೇ ಹೋದದ್ದು ಹಡ್ಲಗಿ ಕಡೆ ಮುಖ ಮಾಡಿ ಮಲಗಿರಲಿಲ್ಲ.

ಏಳೂರನ್ನಾಳುವ ಗೌಡನ ಸೊಂಟದ ಮೇಲೆ ಕಾಲೇರಿ ಮಲಗುವ ಸೌಭಾಗ್ಯದಿಂದ ವಂಚಿತಳಾದೆನಲ್ಲಾ.... ಐದು ಸಾವ್ರ ಉಚ್ಚೆಗೆ ಸಮನೆಂದು ತಿಳಿದುಕೊಳ್ಳಲಾಗಲಿಲ್ಲವಲ್ಲ.... ಎಂದು ಮುಂತಾಗಿ ಕೆಲವುದಿನ ಮಿಡುಮಿಡನೆ ಮಿಡುಕಿ ಫಕ್ಕೀರಿ ಅವನನ್ನು ಪುಟ್ಟಾ ಪೂರ್ತಿ ಮರೆತು ಬಿಟ್ಟಿದ್ದಳು.

ತಾನೇ ಗಂಡಸು ಅವನೇ ಹೆಂಗಸು ಎಂಬಂತೆ ಸ್ವಾಗತಿಸಿದಳು, ಅವನ ಬೊಕ್ಕಸದಿಂದಲೇ ರೊಕ್ಕ ಖರ್ಚು ಮಾಡಿಸಿ ಕೋಳಿ ಕೊಯ್ಯಿಸಿದಳು, ಹೆಂಡ ತರಿಸಿದಳು, ಹಿರಿಯಮಗಳು ಚವುಡಿ ಮತ್ತು ಲೊಳಗಾ ಬಳುಗಾನೆಂದೇ ಹೆಸರಾಗಿದ್ದ ಮನೆಯಳಿಯ ರಾಮನನ್ನು ಹೊಲಕಾಯಲು ಕಳಿಸಿದಳು. ತದನಂತರ ಕುಡಿಯೋದು ಕುಡಿದು; ತಿನ್ನೋದು ತಿಂದು ಗೌಡನ ತೊಡೆ ಮೇಲೆ ಹುರುಪ ಬರುವಂತೆ ತಲೆ ಇಟ್ಟು 'ಏನಲೋ ಬಾಡ್ಯಾ.... ನಾನೇನು ಅನಬಾರದ್ದಂದೇ ಅಂತ ವರುಸ ದಿನಮಾನ ಬರಧಂಗಾದಿ.... ಕೊಟ್ಟದ್ದು ಕೇಳಿದ್ರೆ ತಪ್ಪೇನು! ರಂಡಿಮುಂಡಿ ಗಂಟ್ನ ಮುಳುಗಿಸಿದ್ರೆ ವಯನಾಗೋದಿಲ್ಲಾಂತ.... ನಿಂಗೊಳ್ಳೆದ್ಕೇಂತ ಹಂಗ ಮಾತಾಡ್ದೆ.... ನೀನೊಂದು ಮಾತು ಹೇಳಿದ್ರೆ ಉಚ್ಚೆಗೆ ಸಮಾಂತ ಬುಟ್ ಬುಡುತಿದ್ನೆಲ್ಲ'. ಎಂದು ಮುಂತಾಗಿ ರಪರಪನೆ ಹೇಳಿದಳು. ಸಾಕುಮಂದಿ ಮರುವಾದಸ್ಥರು ಓದಬಾರದಂತ; ಕೇಳಬಾರದಂತ ನಾಕಾರು ಮಾತುಗಳನ್ನು ತುಸು ಹೆಚ್ಚಿಗೇ ಅಂದು ಆಡಿ ತನ್ನ ಗೇಣುದ್ದದ ನಾಲಗೆಯ ಚಟತೀರಿಸಿಕೊಂಡಳು. ಕುಡಿದಾಗ ಬಾಯಿಗೆ ಬಂದಂತೆ ಮಾತಾಡುವುದು ಆಕೆಯ ಪ್ರೇಮದ ಹಲವು ನಮೂನೆಗಳಲ್ಲಿ ಒಂದು. ಏಳೂರುಗಳಲ್ಲಿ ಅರಿಭಯಂಕರನೆಂದೇ ಹೆಸರಾಗಿರುವ ತನ್ನನ್ನು ಬಯ್ಯುವ ಸ್ವಾತಂತ್ರವಿರುವುದು ತನ್ನೊಂದಿಗೆ ಮಲಗಿಕೊಳ್ಳುವ ಹೆಣ್ಣುಗಳಿಗೆ ಮಾತ್ರ. ಅದರಲ್ಲೂ ಫಕ್ಕೀರಿಯಂಥವರು ತೊಂಬ್ಲವನ್ನು ತನ್ನ ಗಿರಿಜಾ ಮೀಸೆಯ ಮುಖಕ್ಕೆ ಸಿಂಪಡಿಸುತ್ತ, ಬಯ್ಗಳಲ್ಲಿ ಹೊಸಹೊಸ ಪ್ರಯೋಗಗಳನ್ನು ಮಾಡುವುದನ್ನು ಕೇಳುವುದೆಂದರೆ ಗೌಡಗೆ ಎಲ್ಲಿಲ್ಲದ ಖುಷಿ, ಫಕ್ಕೀರಿ ಬಯ್ದಷ್ಟು ಸುರಸುಂದರಿಯಾಗಿ ಕಾಣುವಂಥ ಹೆಂಗಸು. ಆದ್ದರಿಂದ ಅವನು ಕೇಳಿಸಿಕೊಳ್ಳುತ್ತ; ಉದ್ರೇಕಗೊಳ್ಳುತ್ತ ಹೋದ, ನಲವತ್ತಾದ್ರು, ಹೆಂಗಿದಿಯಲ್ಲೇ ಎಂದು ಆಕೆಯನ್ನು ರಮಿಸುತ್ತ ಹೋದ.... ಆಕೆಯೂ ಅಷ್ಟೇ ದ್ವಿಗುಣಗೊಂಡಳು, ನಿನ ಬಾಯಾಗ ನನ.... ಅಂದಳು.... ಅದಕ್ಕೆ ಆತ ಮಹಾ ಪ್ರಸಾದ ಅಂದ.... ಹೀಗೆ ಸೊಲುಪ ಹೊತ್ತು ಅವರಿಬ್ಬರ ನಡುವೆ ಘನಘೋರ ಯುದ್ಧ ನಡೆಯಿತು. ಕೊಡುವುದನ್ನೆಲ್ಲ ಕೊಟ್ಟು, ತಗೊಳ್ಳುವುದನ್ನೆಲ್ಲ ತಗೊಂಡಾದ ಮೇಲೆ ಧರುಮನೆಂಬ ವರಶ್ರೇಷ್ಠನ ಬಗ್ಗೆ ಪ್ರಸ್ತಾಪಿಸಿದ. ಬಡ್ಡಿ ಬಾಬತ್ತು ವಸೂಲಿ ಮಾಡುವಂಥ ನಂಬಿಗಸ್ಥನೋರ್ವ ತನ್ನ ಎರಡನೆಯ ಮಗಳು ದುರುಗಿಯ ಕೈ ಹಿಡಿಯುವ ಅಗತ್ಯ ಇತ್ತು ನೂರು ಬೇಟೆನಾಯಿಗಳಿರುವುದು ಒಂದೆ, ಅವನಿರುವುದು ಒಂದೆ.... ಎಂದು ಗೌಡ ಮೇಲುಪ್ಪರಿಗೆ ಮಾತಾಡಿದ. ಕತ್ತಲೆಯೊಳಗೆ ಕತ್ತಲೆಯ ಮೂಟೆ ಉರುಳಿರುವಂತೆ ಹಿತ್ತಿಲ ನೆರಿಕೆಯ ಮಗ್ಗುಲು ಮಲಗಿದ್ದ ದ್ವಿತೀಯ ಸುಪುತ್ರಿ ದುರುಗಿ ಅದನ್ನು ಕಿವಿಯಾರೆ ಕೇಳಿಸಿಕೊಂಡು ಹಾಗೆಯೇ ಅಂಥದೊಂದು ಕನಸು ತಂದುಕೊಂಡು ಹಿತವಾಗಿ ನರಳಿದಳು.

ಮರುದಿನ ಹೊಟ್ಟೆಯಲ್ಲಿ ಒಂದೇ ಸಮನೆ ಕೂಗಿಕೊಳ್ಳುತ್ತಿದ್ದ ಕೋಳಿಯನ್ನು ತಿಪ್ಪೆಗೆ ಕಳಿಸಿ ಬಂದ ಗೌಡ ಬಾಯಲ್ಲಿ ಬೇವಿನ ಕಡ್ಡಿಯನ್ನು ಆಡಿಸುತ್ತಲೆ.... ಅವನ್ನ ಕಳಿಸಿಕೊಡ್ತೀನಿ ಮನುಶ್ಯಾ ಹೆಂಗದಾನೆಂಬುದ್ನ ಒಂದ್ ಸಾರಿ ನೋಡು ಎಂದು ಹೇಳಿದ. ಮೋಟುಗೋಡೆಯೇ ಗೌಡನ ರೂಪಧರಿಸಿದೆಯೋ ಎಂಬಂತಿದ್ದ ಅವನು ಆಡಿದ ಪ್ರತಿಮಾತುಗಳನ್ನು ಕೇಳಿಸಿಕೊಳ್ಳುತ್ತಾ "ಕಳಿಸಿ ಒಂದ್ ಮಾತಂದ್ರೆ ಅನ್ನಿಸಿಗ್ಯಾಬೇಕು, ಒದ್ರೆ ಒದಿಸಿಗ್ಯಾಬೇಕು ನೋಡು.... ನನ್ ಮಗ್ಳು ಕೈ ಹಿಡಿಯೋನು! ನಂ ಚವುಡಿ ಗಂಡ ರಾಮ ತಗ್ಗಿಸಿದ ತೆಲೀನ ಮ್ಯಾಲೆತ್ತೋನಲ್ಲಽಽ" ಎಂದು ಮುಂತಾಗಿ ಹೇಳಿದಳು. ಅವನಂಗಿದ್ರೆ ಬಾಕಿ ಯಂಗ್ ವಸೂಲಿ ಆಕಾವೆಭೇ ನಿನ್ನಮ್ನ.... ಅದ್ಕೆ ನಂ ಧರುಮನ್ನ ನಿನ್ನೆಳ್ದನೇ ಮಗ್ಳೀಗೆ ಗೊತ್ತು ಮಾಡಿರೋದು" ಎಂದು ಕಚ್ಚೆ ಸರಿಪಡಿಸಿಕೊಳ್ಳುತ್ತ ಗೌಡ ಹೇಳಿದ. ಆದರೆ ಅವನ ಮನಸ್ಸಿನಲ್ಲಿ ಈ ಹಾಳಾದ ರಂಡೆ ನಿಂತ ಬೈಟಕ್ಕಿನಲ್ಲಿ ಸಾಲವಸೂಲಿ ಮಾಡಿದಳಲ್ಲಾ. ಧರುಮನನ್ನು ಆಕೆಯ ಮನೆತುಂಬಿಸಿ ಸರಿಯಾದ ಬುದ್ಧಿ ಕಲಿಸಬೇಕೆಂಬುದಿತ್ತು.

ಅವನು ಆಕೆಯಿಂದ ಬೀಳ್ಕೊಂಡು ಊರುತಲುಪಿ ಧರುಮನನ್ನು ಅದೇ ಹುಣುಸೆಮರದಡಿ ಭೆಟ್ಟಿ ಮಾಡಿ ಮಿಕದ ಕೆಚ್ಚಲುಗಳನ್ನು ವರ್ಣಿಸಿದ, ದುರುಗಿಯ ಕೊಳ್ಳಲ್ಲಿ ತಾಳಿ ಬೀಳುವವರೆಗೆ ಮಹಾ ಮಳ್ಳಿಗನಂತೆ ನಟಿಸುತ್ತಿರಬೇಕೆಂದು ಹೇಳಿದ, ತನ್ನದೇ ದೋತರ, ತನ್ನದೇ ಅಂಗಿ, ತನ್ನದೇ ಬಾಚಣಿಕೆ ದಾರಿ ಖರ್ಚಿಗೆ ಹತ್ತಿಪ್ಪತ್ತು ಕೊಟ್ಟು ಹಗರಿ ಸಾಲಿನ ಹಡ್ಲಗಿ ಎಂಬ ಶೋಭಾಯಮಾನ ಗ್ರಾಮಕ್ಕೆ ಸಾಗಹಾಕಿದ.

ತಲುಪಬೇಕಾದ ಟೇಮಿಗೆ ಸರಿಯಾಗಿ ತಲುಪಿದ ಧರುಮನೆಂಬ ಚಿಗುರು ಮೀಸೆಯ ತರುಣನನ್ನು ಪಕ್ಕೀರಿ ಬಾರೆಲೋ ನನಾಟಗಳ್ಳ.... ಮೀಸೆಯಾಡೋ ಮೊದ್ಲೆ ಅಪ್ಪ ಅವ್ವನ್ನ ನುಂಗಿ ಹಾಕಿದೆಂತ ಅವುದೇನಲೋ ಬಾಡ್ಯಾ.... ಎಂದು ಮುಂತಾಗಿ ಮಾತಾಡಿ ಸ್ಯಾವಿಗೆ ಬಸ್ದು ಉಂಬಲಿಕ್ಕಿಟ್ಟಳು. ಆಕೆ ಆಡುತ್ತಿದ್ದ ಒಂದೊಂದು ಮಾತಿಗೂ ಒಂದೊಂದು ಏಟು ಕೊಡುವಷ್ಟು ಸಿಟ್ಟು ಬಂದಿತಾದರೂ ಸ್ಥೈರಿಸಿಕೊಂಡ, ಹಿತ್ತಲಲ್ಲಿದ್ದ ಎಮ್ಮೆಗಳನ್ನು ಪಡಸಾಲೆಯಲ್ಲಿದ್ದ ಎತ್ತುಗಳನ್ನೂ ನೋಡಿದ, ಅಂಗಳದ ತಿಪ್ಪೆ ಮೇಲೆ ಅರಗಿಳಿಗಳಂತೆ ಆಡುತ್ತಿದ್ದ ಹತ್ತಾರು ಕೋಳಿಗಳನ್ನು ನೋಡಿ ಬಾಯಲ್ಲಿ ನೀರೂರಿಸಿಕೊಂಡ, ಒನಕೆಯಂತಿದ್ದ ದುರುಗಿ ಕಪ್ಪಾಗಿದ್ದರೇನಂತೆ.... ಕಬ್ಬಿಣದ ಪೆಟಾರಿಯಲ್ಲಿರುವ ನೋಟುಗಳು ಕಪ್ಪೆ ಎಂದುಕೊಂಡ.

ತನ್ನನ್ನು ಪರಾಮರ್ಶಿಸಲು ಬಂದಿದ್ದ ಪಕ್ಕದಮನೆ ದೊಡ್‌ಸಿದ್ದಪ್ಪಜ್ಜ ಸೇದುತ್ತಿದ್ದ ಚುಟ್ಟಾದ ಹೊಗೆ ಎಲ್ಲಿ ತಾಕುವುದೋ ಎಂದು ಮೂಗು ಮುಚ್ಚಿಕೊಂಡು ಅವರಿವರಿಂದ ಶಹಬಾಷ್ ಎನ್ನಿಸಿಕೊಂಡ, ಅವನ ಆ ಸದ್ವರ್ತನೆಯಿಂದ ಬುರಬುರನೆ ಊದಿ ಹೋಗದ ಫಕ್ಕೀರಿಯು ಕಾಪಿ ಸಪಲ್ಯಾ ಮಾಡಲು ಬಂದ ರಾಮನಿಗೆ "ನೋಡಲೋ ಸೂಗಾSSS.... ನೀನೂ ಅದೀ.... ಹೊಲ ಪಲದಾಗ ಮಳ್ಳಿಗನಂಗೆ ಕೂಕಂಡು ಬೀಡಿಸೇದ್ತೀ...." ಎಂದು ಸ್ವಾಟಿಗೆ ತಿವಿದಳು, ಹೌದು.... ಅವನು ಅದೊಂದೆ ಚಟದಿಂದ ಪರಮಾನಂದ ಅನುಭವಿಸುತ್ತಿದ್ದುದು ನಿಜ, "ಅನ್ನಭೇ ಎವ್ವಾ.... ಅನ್ನೂ.... ನನಗಂಡಗೆ ಅದೇನಂತೀಯೋ ಅನ್ನು" ಎಂದು ಚವುಡಿ ರೋಸಾಯೇಸದಿಂದ ಏಳು ತಿಂಗಳ ಕಂದಮ್ಮನನ್ನು ಕಂಕುಳಿಗೆಳೆದುಕೊಂಡು ಅದರ ಕೆನ್ನೆಗೆ ಪಟಾರನೆ ಒಂದು ಏಟು ಕೊಟ್ಟಳು. ಕೈಕಾಲು ಸಣ್ಣ, ಹೊಟ್ಟೆ ಡುಮ್ಮಣ್ಣನಾದ ಅದು ತನ್ನ ಬೊಂಬಾಯಿಯಂಥ ಬಾಯಿತೆರೆದು ಹೋSSS ಎಂದು ಅಳತೊಡಗಿತು.

"ಯೋನಲೇ ಭೋಸುಡೀSSS.... ನನ್ ಅಳಿಯ್ನಾಗೆ ನಾನೇನಾರ ಅಂತೀನಲೇSSS.... ನಾನನಬಾರ್ದೂ ಬಯ್ಯಬಾರ್ದಂದ್ರೆ.... ಈಗಿಂದೀಗ್ಲೆ ಮನಿ ಬುಟ್ ವಂಡ್ರಿ" ಎಂದು ಫಕ್ಕೀರಿ ಒಂದು ಮಾರು ದೂರದಲ್ಲಿದ್ದ ಗೋದಲೆ ಕಡೆ ಪಿಚಕ್ಕನೆ ಉಗುಳಲು ಅದು ಸೊಯ್ಯನೆ ಹೋಗಿ ಗುರಿಮುಟ್ಟಿತು.

"ಯ್ಯೋನೆ ಅದಕ್ಯಾಕೆ ಈಟು ಸಿಟ್ ಮಾಡ್ಕಂತಿ, ಮನೀಗೆ ದೊಡ್‌ಮನುಶ್ಯೋಳು ಒಂದ್ ಮಾತಂದ್ರೆ ತಪ್ಪೇನೈತೆ...." ಎಂದು ಮುಂತಾಗಿ ಬುದ್ಧಿಹೇಳಲು ಬಂದ ಗಂಡನ ಮುಂಗೈ ಹಿಡಿದು ದರ್‌ಗುಟ್ಟಿ ಹಿತ್ತಿಲಿಗೆ ಎಳೆದುಕೊಂಡೊಯ್ದು ಚವುಡಿ "ಥೂ ನಿನ ಬಾಯಾಗSSS.... ಎಂಥಾ ಗಂಡ್ಸೋ ನೀನು.... ಯಂಗಸ್ರು ಕುಟಾಗ ಬಯ್ಯಸ್ಕೆಳ್ಳಗೆ ನಾಚ್ಕೆ ಆಗಲ್ಲೇನಲೋ ಗಂಡ್ ಜೋಗಮ್ಮನಂಥೋನೆ.... ನನ್ನಂಥೋಳಾಗಿದ್ರೆ ಈಗಿಂದೀಗ್ಲೆ ಯಾದ್ದೋ ಒಂದೂರಿಗೆ ಓಗಿ ಕೂಲಿನಾಲಿ ಮಾಡ್ಕೆಂಡು ಹೆಂಡ್ತೀಗೆ ಒಂದುತ್ತು ಅನ್ನ ಆಕ್ತಿದ್ನೆಲೋSSS...." ಎಂದು ಮುಂತಾಗಿ ದಪೇದಾರಳಂತೆ ಕೈತೆಗೆದುಕೊಂಡಳು.

"ಇವತ್ತೆ ವಂಡ್ರೆಭೇ.... ಇವತ್ತೇ ವಂಡ್ರಿ.... ಇದು ನಾನ್ರೆಟ್ಟೆಮುರ್ದು ಸಂಪಾಸಿಟ್ಟಿರೋ ಆಸ್ತಿ.... ಬಯ್ತಿನಿ.... ಒದಿತೀನಿ.... ಅಳಿಯೆಂಭೋನು ಮುಕ್ಳಿ ಮುಚ್ಕೊಂಡು ಬಿದ್ದಿರ್ಬೇಕು....SSS" ಎಂದು ಫಕ್ಕೀರಿ ಕೂಕಂಡಿದ್ದ ಉನ್ನತಾಸನದ ಮೇಲಿಂದಲೇ ಜಬರ್ದಸ್ತಿನಿಂದ ಅರ್ಥಗರ್ಭಿತವಾಗಿ ಮಾತಾಡಿದಳು.

"ಎಲಾ ಮುಂಡೆ" ಧರುಮ ಮನಸ್ಸಿನಲ್ಲೆ ಅಂದುಕೊಂಡ.

ಕೇರಿಯ ಎಲ್ಲಾ ರೋಗಿಗಳು ಬಂದು ನಖಶಿಖಾಂತ ಆರೋಗ್ಯದಿಂದಿರುವ ವರರತ್ನವನ್ನು ನೋಡಿ 'ರಾಜ್ಕೊಮಾರಿದ್ದಂಗಿದಾನವ್ವ.... ಇಂಥೋನ್ನ ಕೈ ಇಡಿಯೋಕೆ ನೀನು ಪುಣ್ಯ ಮಾಡಿದ್ದಿ' ಎಂದು ಹೊಗಳಿದಾಗ ದುರುಗಿ ಹೊಕ್ಕಳಿಂದ ನಶ್ಶೆ ಪುಡಿ ಡಬ್ಬಿ ನಿಗುರಿ ಕಿತ್ತು ತೆಗೆದು ಗಸಗಸ ಉಜ್ಜಿಕೊಂಡಳು.

ಸತ್ಕಾರ ಮಾಡುವುದನ್ನು ಮಾಡಿಸಿಕೊಂಡು, ನೋಡುವುದನ್ನೆಲ್ಲ ನೋಡಿಸಿಕೊಂಡು ಧರುಮ ಹೊರಡುವ ಮೊದಲು ಅತ್ತೆ ಫಕ್ಕೀರಿಗೆ ಪಾದಾಭಿವಂದನೆ ಮಾಡಿದನು. ಅದರಿಂದ ಅತ್ತೆಯ ಮೈಯ ಸಮಸ್ತ ರೋಮಗಳು ನಿಟಾರನೆ ನಿಗುರಿದವು. ಪ್ರತಿ ರೋಮದ ಕುಣಿ ತುಂಬ ಬೆವರು ತುಳುಕಾಡಲು ಆಕೆ "ನೋಡಿದ್ಯೇನಲೋ ಬಾಡ್ಕಾವ್.... ನೀನು ಒಂದ್ಸಾರಿ ಹಿಂಗ್ ನಮಸ್ಕಾರ ಮಾಡಿದ್ಯೇನಲೋ SSS" ಎಂದು ಪ್ರಥಮ ಅಳಿಯನನ್ನು ತರಾಟೆ ತೆಗೆದುಕೊಂಡಳು, ಚವುಡಿಯು ಅಯ್ಯೋ.... ಅಯ್ಯೋ ಎಂದು ಬಾಯಿ ಬಡಿದುಕೊಳ್ಳುತ್ತಿರಲು ರಾಮನು ಅವನತಮುಖನಾಗಿ ಬಲಿಪಾದದ ಹೆಬ್ಬೆರಳಿನಿಂದ ನೆಲವನ್ನು ಕೆದರುತ್ತಿದ್ದನು.

ಈ ಪ್ರಕಾರವಾಗಿ ಹೋದ ಧರುಮನಿಗೂ, ಪಕ್ಕೀರಿಯ ದ್ವಿತೀಯ ಸುಪುತ್ರಿ ದುರುಗಿಗೂ, ಮುಂದೆ ಧಾಂಧೂಂ ಅಂತ ಮದುವೆಯಾಯಿತು. ಅತ್ತೆಯ ಮಣ್ಣಿನ ಮನೆಯನ್ನು ತುಂಬಿಕೊಂಡ ಧರುಮನನ್ನು ಒತ್ತಟ್ಟಿಗೆ ಕರೆದು ಗೌಡನು 'ಇನ್ನು ಮೇದುಕೊಂಡು ಮೈಯಿ ಬಿಡು' ಎಂದು ಬುದ್ಧಿ ಹೇಳಿ ಸಮಾಧಾನದ ಉಸಿರು ಬಿಡುತ್ತ ಅಲ್ಲಿಂದ ಸಣಿಯನ್ನು ಕಳಚಿಕೊಂಡವನಂತೆ ಹೊರಟು ಹ್ಯಾಲಿಪಿ ಕಡೆ ಮೂತಿ ಮಾಡಿದನು.

ಅತ್ತೆ ಮನಿ ತುಂಬಿಕೊಂಡ ಕೆಲದಿನಗಳಕಾಲ ಧರುಮ ಬಾಲಬಿಚ್ಚಲಿಲ್ಲ. ಶಾನಬೋಗ ರಾಘಪ್ಪನ ಇಸ್ಪೀಟು ಮನೆಯಲ್ಲೊಂದಿಷ್ಟು, ಲಚುಮವ್ವನ ತೋಪಿನ ಸಾದು ಸಜ್ಜನರ ತಂಬಾಕು ಚಿಲುಮೆ ಎಡಬಲ ಒಂದಿಷ್ಟು; ಬಸ್ಯಾನ ಹೆಂಡದಂಗಡಿಯಲ್ಲೊಂದಿಷ್ಟು ಬಾಲಬಿಚ್ಚಲು ಸೊಲುಪ ಸಮಯ ತೆಗೆದುಕೊಂಡನು, ಅದನ್ನು ಹೇಗೋ ಪತ್ತೆ ಹಚ್ಚಿ ಚಾಡಿ ಹೇಳಲಿದ್ದ ಕೋ ಬ್ರದರು ರಾಮನಿಗೆ 'ಖಬರ್ದಾರ್.... ಏನಾದ್ರು ಹೇಳದೀ ಅಂದ್ರೆ, ನಾಲಿಗೆ ಕಿತ್ತು ಹದ್ದಿಗೆ ಹಾಕಿ ಬಿಡ್ತೀನಿ' ಎಂದು ಬಲವಾದ ಎಚ್ಚರಿಕೆ ನೀಡಿ ಬಾಯಿ ಮುಚ್ಚಿಸಿದನು.

ಅಂಗಾಲಿಂದ ತೊಡೆವರೆಗೆ ಒತ್ತು ಸೇವೆಮಾಡುತ್ತಿದ್ದ ಅಳಿಯ ಧರುಮನ ಮೇಲೆ ಬಿದ್ದು ಸಾಯುತ್ತಿದ್ದ ಫಕ್ಕೀರಿ ಅವರತ್ರ ಅಷ್ಟುವಸೂಲಿ ಮಾಡಿಕೊಂಡು ಬಾ, ಇವರ ಹತ್ತಿರ ಇಷ್ಟು ವಸೂಲಿ ಮಾಡಿಕೊಂಡು ಬಾ.... ಸುಸ್ತಿದಾರರ ಮನೇಲಿ ಉಣ್ಣು ಇತ್ಯಾದಿ ಸಲಹೆ ನೀಡುತ್ತ ಹಾಗೆಯೇ ನಿದ್ದೆ ಹೋಗುತ್ತಿದ್ದಳು. ನೀಟಾಗಿ ಡ್ರೆಸ್ ಮಾಡಿಕೊಂಡು ಬಾಕಿ ವಸೂಲಿಗೆ ಹೋಗುತ್ತಿದ್ದ ಅವನಾದರೋ ಬೇ ಅತ್ತೆ.... ಅಷ್ಟು ವಸೂಲಾತು.... ಇಷ್ಟು ವಸೂಲಾತು ಎಂದು ಬಂದು ವರದಿ ನೀಡುತ್ತಿದ್ದನು.

ಆದರೆ ಅತ್ತೆಮ್ಮ ಕೈಯಲ್ಲಿ ತಂಬಿಗೆ ಹಿಡಕೊಂಡು ಬಸವನಬಾವಿ ತಗ್ಗಿನ ರಿಜರುಬೇಲಿ ಗಿಡದ ಮರೆಯಲ್ಲಿ ದೊಡ್ಡಿಗೆ ಕೂಕಂಡು ತಿಣುಕುತ್ತಿದ್ದ ಸಂದರ್ಭದಲ್ಲಿ ಚುಟ್ಟ ಹಚ್ಚಿಕೊಂಡು ಓಸಿನಂಬರುಗಳನ್ನು ಲೆಕ್ಕ ಹಾಕುತ್ತ ಅವಧೂತನಂತೆ ಹೊರಟಿದ್ದ

## ಪ್ರಶಸ್ತಿ... ಪ್ರಶಸ್ತಿ... ತಾರಾಗೆ ಪ್ರಶಸ್ತಿ!

'ಕಾನೂರು ಹೆಗ್ಗಡತಿ' ಚಿತ್ರದಲ್ಲಿ ಪ್ರಧಾನ ಪಾತ್ರ ಮಾಡುವುದರ ಮೂಲಕ 'ನಾಯಕಿ'ಯ ತೃಷೆ ತೀರಿಸಿಕೊಂಡ ತಾರಾ ನಾಯಕಿಯಾದ ಮೇಲೆ ಸಾಕಷ್ಟು ಬದಲಾಗಿದ್ದಾರೆ. ಚಾಕೋಲೇಟು, ಸೋನಪಾಪಿಡಿ, Cow ಪದಾರ್ಥಗಳಿರುವ ಐಸ್‌ಕ್ರೀಂ ಬಿಟ್ಟಿದ್ದಾರೆ. ಆಗಾಗ ಮನಸ್ಸು ಗೊಂದಲಕ್ಕೀಡಾಗದಂತೆ, ಯೋಗ, ಧ್ಯಾನ ಮಾಡ್ತಿದ್ದಾರೆ. 'ನಾನು ಸಭೆಗೆ ಹೋದ ಕಡೆಯಲ್ಲೆಲ್ಲಾ ನೀವು ಹಾಡಲೇಬೇಕು ಅಂತ ಜನ ಕೇಳೀ ಕೇಳ್ತಾರೆ. ಅದಕ್ಕೆ ಈಗ ಸಂಗೀತ ಹಾಡುವಿಕೆ ಕಲೀತಿದ್ದೀನಿ' ಎನ್ನುವ ತಾರಾ ಅವರ ಕಲಿಕೆಗೆ ಎಲ್ಲೆ ಎಂಬುದೇ ಇಲ್ಲ. ನಟನೆ, ಕ್ರೀಡೆ, ಸಂಗೀತದ ಬಳಿಕ ನಿರ್ದೇಶನಕ್ಕೂ ಕೈ ಹಾಕಿರುವ ತಾರಾ ಕಾದಂಬರಿಯನ್ನೂ ಬರೆಯುತ್ತಿದ್ದಾಳಂತೆ. ಇದು ಮೂರನೆಯ ಜೋಕ್ ಎನಿಸಿದರೆ ಆ ಅನಿಸಿಕೆಗೆ ಧಿಕ್ಕಾರವಿರಲಿ. ಇದೆಲ್ಲವನ್ನು ಹಳೆಯ ಕತೆ ಎಂದು ತಳ್ಳಿ ಹಾಕಲಿ.

ಆದರೆ ಇಷ್ಟೆಲ್ಲ ಪ್ರಬುದ್ಧತೆಯನ್ನು ಪಡೆದ ತಾರಾ 'ಹೆಗ್ಗಡತಿ'ಯಲ್ಲಿ ಮನೋಜ್ಞವಾಗಿ ನಟಿಸಿದ್ದಾಳಂತೆ. ಈ ಸಲ ಪ್ರಶಸ್ತಿ ಬರಲೇಬೇಕು. ಅಂತಲೂ ಟೇಬಲ್ ಗುದ್ದಿ ಗುದ್ದಿ ಗುಡುಗುತ್ತಿರುವ ತಾರಾ, ಪ್ರಶಸ್ತಿಯ ಖುಷಿಯಲ್ಲಿ ಮದುವೆಯ ವಿಷಯ ಬಿಡಿ, ಬೇರೆಯವರ ಚಿತ್ರಗಳಲ್ಲಿ ನಟಿಸುವುದಕ್ಕೂ ಹಿಂದು ಮುಂದು ನೋಡುತ್ತಿದ್ದಾರಂತೆ. ಪ್ರಶಸ್ತಿ ಪಾಪಂ!

ವ್ಯಕ್ತಿಯನ್ನು ವೆಂಕೋಬನೆಂದು ಗುರುತಿಸಿದಳು.

ಆಸನದ ಸೃಷ್ಟಿ ಸ್ಥಿತಿಲಯದಲ್ಲೇ ವೆಂಕೋಬ ಎಂದು ಪಲಕಿದಳು. ಯಾವುದೋ ಅಶರೀರವಾಣಿ ಎಂದು ವೆಂಕೋಬ ಗಕ್ಕನೆ ನಿಂತು ಸುತ್ತ ಮುತ್ತ ನೋಡಿದನು. ಮತ್ತೆ ಕೂಗಿತು, ರಿಜರುಬೇಲಿ ಕಡೆ ಆತ ನೋಡುತ್ತಿರಲು ನಿಧಾನವಾಗಿ ಎದ್ದು ನಿಂತ ಆಕೃತಿ ಫಕ್ಕೀರಿ ಎಂದು ಗುರುತಿಸಿ ರೋಮಾಂಚನಗೊಂಡನು.

ಎಡದವಡೆಯಿಂದ ತೊಂಬಲದುಂಡೆಯನ್ನು ಬಲದವಡೆಗೆ ವರ್ಗಾಯಿಸಿ ''ಯ್ಯೋನೆಲೊ.... ನೀನು ಐನೂರ್ರೂಪ್ಯಾ ಸಾಲ ತಗೊಂಡು ಯ್ಯೋಸು ತಿಂಗ್ಯಾತು.... ಅಸಲು ಬಡ್ಡಿ ಕೊಡ್ತೀಯೋ.... ಇಲ್ಲಾ ನನ್ನಳಿಯನ್ನ ಕಳಿಸಿ ಕಂಬಕ್ಕಟ್ಟಿಸ್ಲಾSSS...'' ಎಂದು ಆಕೆ ಗುಡುಗುಡತ್ತಲೆ ಆತನ ಕೈಯಲ್ಲಿದ್ದ ಗಂಗಮ್ಮ ನೆಲದ ಪಾಲಾದಳು.

''ಯ್ಯೋನವ್ವೋS ಯಾಕಿಂಗ್ ಮಾತಾಡ್ತಿ? ಹ್ವಾದ ತಿಂಗ್ಳೇ ನಿನ್ನಳಿಯ ಬಂದು ವಸೂಲಿ ಮಾಡ್ಕೊಂದು ಹ್ವಾದನಲ್ಲ?'' ಎಂದು ಆತ ನೆಲದ ಮೇಲಿದ್ದ ತಂಭಿಗೆ ತಗೊಳ್ಳಲೆಂದು ಬಾಗಲು ವಾಯುದೇವರು ವಿಚಿತ್ರವಾದ ಸವಂಡು ಮಾಡುತ್ತ ಹೊರಗಡೆ ಹೋದನು.

ಅದಕ್ಕೆ ಪೂರಕವಾಗಿ ಆತ ಆಣೆ ಪ್ರಮಾಣ ಮಾಡಲು ಆಕೆ ನಂಬಲೇ ಬೇಕಾಯಿತು.

ಹೌದು! ಅವನಿಂದ ವಸೂಲಿ ಮಾಡಿಕೊಂಡು ಒಯ್ದು ಇಸ್ಪೀಟಾಟದಲ್ಲಿ ಧರುಮ ಮುಂಡಾ ಮೋಚಿದ್ದನು.

ಮನೆಗೆ ಹೋಗಿ ತೊಳೆದುಕೊಂಡರಾಯಿತಂದು ಯೋಚಿಸಿ ಫಕ್ಕೀರಿಯು ತನ್ನ ತಂಬಿಗೆಯಲ್ಲಿದ್ದ ಗಂಗಾಜಲವನ್ನು ಆತನ ತಂಬಿಗೆಗೆ ವರ್ಗಾಯಿಸಿ ಬಿರುಗಾಳಿಯಂತೆ ದಿಬ್ಬ ಏರಿದಳು.

ಹೆಂಡೆಗಸದ ಪುಟ್ಟಿಯನ್ನು ತಲೆಮೇಲೆ ಹೊತ್ತುಕೊಂಡಿದ್ದ ದ್ವಿತೀಯ ಸುಪುತ್ರಿ, ದುರುಗಿಯನ್ನು ತರುಬಿ ''ಯ್ಯೋನಲೇ ಆ ಮನಿಮುರ್ಕ ಧರುಮೆಲ್ಲಿದಾನ ಬೊಗ್ಳುSS'' ಎಂದು ಇಂಟರಾಗೇಷನ್ ಶುರುಮಾಡಿದಳು, ಅದೇ ಸಮಯದಲ್ಲಿ ಲಚುಮವ್ವನ ತೋಪಿನಲ್ಲಿ ತಂಬಾಕು ಸೇದುತ್ತ ಕೂತಿದ್ದ ತ್ರಿಕಾಲ ಜ್ಞಾನಿ ಧರುಮನಿಗೆ ಸದರಿ ಸಂಗತಿ ಗೊತ್ತಾಯಿತು. 'ಇದರ ಕಾಲಾಗೆ ಏನಾಗತ್ತೈತಿ ನೋಡೇ ಬಿಡ್ತೀನೆಂದು ಅವನು ಎದ್ದು ನಿಲ್ಲಲು ಕಳ್ಳತನ ಮಾಡೀ ಮಾಡೀ ವಿರಕ್ತಿ ಹೊಂದಿ ಸಾಧು ಆಗಿದ್ದ ಪರುಸನು ಶಬ್ಬಾಷ್ ಅಂದನು.

ಅವರೆಲ್ಲರಿಂದ ಬೀಳ್ಕೊಂಡ ಧರುಮ ದಾರಿ ಮದ್ಯೆ ಸರಾಯಿ ಅಂಗಡಿಯಲ್ಲಿ ರೆಸ್ಟ್ ಒಂದು ಗಳಾಸು ಖಾಲಿ ಮಾಡಿ ದಾರಿಯುದ್ದಕ್ಕು ಫಕ್ಕೀರಿಯನ್ನು ವಾಮಾಗೋಚರ ಬಯ್ಯುತ್ತ ಮನೆ ಅಂಗಳದಲ್ಲಿ ನೆಲಮುಗಿಲಿಗೇಣಾಗಿ ನಿಲ್ಲಲು ದುರುಗಿಯು ತನ್ನ ಗಂಡನನ್ನು ಹೆಮ್ಮೆಯಿಂದ ನೋಡಿದಳು.

ನಗಂದಿ ಮೇಲಿದ್ದ ಡಬ್ಬಿಗಳು ಅಲಗಲು, ಅಡಕಲಿ ಗಡುಗೆ ನಡುಗಲು ಫಕ್ಕೀರಿ ಅಂಗಳದಲ್ಲಿ ಎಂಥದೋ ಬಲವಾದ್ದೊಂದು ನಿಂತಿದೆ ಎಂದೂಹಿಸಿ ತಲಬಾಗಿಲಿಗೆ ಬಂದು ನೋಡುತ್ತಾಳೆ ಬುಸುಗುಟ್ಟುತ್ತಿರುವ ಧರಮನೆಂಬಳಿಯನು,

ತನ್ನಂಥ ಅತ್ತೆಯ ಗಂಟಿನಲ್ಲಿ ಅವನು ಕುಡಿದು ಬಂದಿರುವುದೆಂದರೇನು! ರೆಟ್ಟೆ ಏರಿಸಿ ದುರುಗುಟ್ಟಿ ನೋಡುತ್ತಿರುವುದೆಂದರೇನು!

ವೆಂಕೋಬನಿಂದ ವಸೂಲಿ ಮಾಡಿರುವಂತೆ ಇನ್ನೆಷ್ಟು ಮಂದಿ ಬಳಿ ವಸೂಲಿ ಮಾಡಿ ತಿಂದು ಕುಡಿದು ಉಬ್ಬಿ ಹೊಯ್ದಿರುವನೇನೊ!

ಕಚ್ಚೆ ಏರಿಸಿ ರೆಟ್ಟೆ ಬಿಗಿದ ಫಕ್ಕೀರಿ 'ಯ್ಯೋನಲೋ ನನ್ನಾಟಗಳ್ಳ' ಎಂದಬ್ಬರಿಸಿದಳು, ಅದಕ್ಕಿದ್ದು ಅವನು 'ನಿನ್ನ ನಾಲಿಗೆ ಕಿತ್ತು ಕೆರ ಮಾಡಿಸಿ ಎಡಗಾಲಿಗೆ ಮೆಟ್ಟಿಕೊಂಡು ತಿರುಗೇನು' ಎಂದನು.

ಈ ಪ್ರಕಾರವಾಗಿ ಅವರಿಬ್ಬರ ನಡುವೆ ಮಾತಿಗೆ ಮಾತು ಬೆಳೆದು ಕೈ ಕೈ ಮಿಲಾಯಿಸಿದರು. ಸಮಸ್ತ ಓಣಿ ಜನರ ಸಮಕ್ಷಮದಲ್ಲಿ ನಿನ್ನ ಮಗ್ಳು ಸೈ, ಸೆಂಟ ಸೈ ಎಂದೊಂದೇ ಮಾತು ಅಂದು ಕರಗಲ್ಲು ದಾಟಿದ ಧರುಮನು ಆಗೊಮ್ಮೆ ಈಗೊಮ್ಮೆ ಬಂದು ಗಲಾಟೆ ಮಾಡುವುದು, ಫಕ್ಕೀರಿ ರಾಮನ ಮೂಲಕ ಅವನ ಕೈ ಬೆಚ್ಚಗೆ ಮಾಡಿ ಸಾಗುಹಾಕುವುದೇ ಹೀಗೆ ಕೆಲದಿನಮಾನ ನಡೆಯಿತು.

ಬಹಳ ದಿನಗಳ ನಂತರ 'ದ್ರೋಪದಿ ವಸ್ತ್ರಾಪಹರಣ' ಎಂಬ ಪೌರಾಣಿಕ ಬಯಲಾಟಕ್ಕೆ ಡೆಕ್ಕ ಬಡಿಯಲು ಬಂದ ತನ್ನ ಗಂಡ ಧರುಮನನ್ನು ಗುಟ್ಟಾಗಿ ಕಂಡು ದುರಗಿಯಲ್ಲಾದ್ರು ದೂರ ಕರ್ಕೊಂಡೋಗೋ.... ನಿನ್ ಕಸಾಗಿ ಬಿದ್ದಿರ್ತೀನಿ' ಎಂದು ಗೋಳಾಡಿದ್ದಳು. ಅದು ಹೇಗೋ ತಿಳಿದು ಫಕ್ಕೀರಿ ಮಗಳ ತುರುಬು ಹಿಡಿದು ಎಳೆದೊಯ್ದು ''ಯ್ಯೋನಲೀ ನನ್ನಾಟಗಿತ್ತಿSS'' ವುಲಿಯಂಥ ನನ್ನೊಟ್ಟೀಲಿ ಯಂಥೋಳುಟ್ಟೀಯಲ್ಲೇSS.... ಅವಂದೇನು ಕಬ್ಬುಣದ್ದಾSS.... ಅಂಥ ಚಟ ಇದ್ರೆ ಮತ್ತೊಂದು ಮದ್ವೆ ಮಾಡ್ತೀನಿ.... ಬ್ಯಾಡಾಂದ್ರೆ ಬೇಕಾದ್ದೋರತ್ರ ಮಲಿಕ್ಕಂಡು ಚಟ ತೀರಿಸ್ಕೋ. ಬ್ಯಾಡಂತಿನೇನು!SS....'' ಎಂದು ಮುಂತಾಗಿ ಅಮೂಲ್ಯ ಸಲಹೆಗಳನ್ನು ನೀಡುತ್ತ ಹಿಗ್ಗಾ ಮುಗ್ಗಾ ಭಾರಿಸಿ ಒದ್ದು ಅಡುಗೆ ಮನೇಲಿ ಕೂಡಿ ಹಾಕಿದ್ದಳು.

ಲಚುಮವ್ವನ ತೋಪಿನಲ್ಲಿ ಪತ್ತೆದಾರಿಕೆಗೆ ಹೆಸರಾಗಿದ್ದ ಸಾಧು ಸಂತರಾದರು ಎಂಥವರು! ಭಿಕ್ಷೆ ಎತ್ತುವ ನೆಪದಲ್ಲಿ ಈ ಸಂಗತಿಯನ್ನು ಹೇಗೋ ಪತ್ತೆಮಾಡಿಕೊಂಡು ಬಂದು 'ಲೇ ಮಾನ್ನವಾSS ಈ ನರ ಜನುಮ ನಸ್ವರವು, ವಂದುಯಕಚಿತ್ ಯಣ್ಣಿಂಗಸಿನ ಕೈಲಿ ಅನ್ನಿಸ್ಕೆಂಡು ಬದುಕೋಕ್ಕಿಂತ ಆತ್ಮಹತ್ಯೆ ಮಾಡಿಕೊಂಡು ಸ್ವರ್ಗಾರೋಹಣ ಮಾಡೋದೇ ಮೇಲು' ಎಂದು ರಸವತ್ತರವಾಗಿ ವರ್ಣನೆ ಮಾಡಿ ಅವನನ್ನು ಫಕ್ಕೀರಿಯೊಡನೆ ಯುದ್ಧಕ್ಕೆ ಸಜ್ಜು ಮಾಡಿದರು.

ಧರುಮನೆಂಬ ಪುರುಷೋತ್ತಮನಿಗೆ ತನ್ನ ಹೆಂಡತಿಯಾದ ದುರುಗಿಯನ್ನು ಯಾಕೆ ಬಯಸುತ್ತಿದ್ದನೆಂದರೆ ಗಂಡು ಸಂತಾನವಿಲ್ಲದ ಫಕ್ಕೀರಿ ಎಂಬ ಪರಮಸಾಧ್ವಿ ಮಾಡಿಟ್ಟಿರೋ ಚರ-ಸ್ಥಿರ ಆಸ್ತಿಯಲ್ಲಿ ತನಗರ್ಧಪಾಲು ಬರಬೇಕಲ್ಲ.... ಅದುಬಂದರೆ ಕಾಲಮೇಲೆ ಕಾಲುಹಾಕಿ ಸಾಯೋಗಂಟ ಬದುಕಬಹುದಲ್ಲ.... ಎಂಬುದು.

ಒಂದುಕೈಯಿ ನೋಡಿಕೊಂಡೇ ಬಿಡುವುದೆಂದು ನಿರ್ಧರಿಸಿದ ಅವನು ಕೈಯಲ್ಲೊಂದು ತಳವಾರನ ಬಡಿಗೆ ಹಿಡಿದುಕೊಂಡು ಮೇಲೇಳಲಿಕ್ಕೂ ಉರುಕುಂದಿ ಎಂಬ ಚಂಗಿಬಿಂಗಿಯು ಬಿರ್ರನೆ ಓಡಿ 'ಬೇ ಪಕ್ಕಿರಮ್ಮತ್ತೆ ಧರುಮ ನಿನ್ ಕೊಲೆಮಾಡಿ ದುರುಗೀನ ಎಳಕೊಂಡೊಯ್ಯಲಿಕ್ಕೆ



## ಜಟಾಪಟಿಯ ಹಿಂದಿನ ಜಡೆ ಯಾವುದು?

ವಿಜಯಲಕ್ಷ್ಮಿಯ ಮಾದಕ ನಗೆ, ನೂರೊಂದು ಅರ್ಥಕೊಡುವ ಆಕೆಯ ಕಣ್ಣು, ಬಂಗಾರವನ್ನು ನಾಚಿಸುವ ಆಕೆಯ ಬಣ್ಣ. ಕ್ಷಮಿಸಿ, ಇದು ಈ ನಟಿಯ ವರ್ಣನೆಯಲ್ಲ ವಾಸ್ತವ. ಇಂಥ ಕನ್ನಡತಿ ಅದೇಕೆ ವಿವಾದಕ್ಕೀಡಾಗುತ್ತಾಳೆ? ವಿವಾದದ ಸ್ವಭಾವದವಳೇ ವಿಜಯಲಕ್ಷ್ಮಿ? ಪ್ರಶ್ನೆಗಳು ನೂರಾರು ಹುಟ್ಟುತ್ತಿರಬಹುದು. ಆದರೆ ಕನ್ನಡ ಚಿತ್ರರಂಗದಲ್ಲಿ ವಿಜಯಲಕ್ಷ್ಮಿ ವಿವಾದದ ಹುಡುಗಿ ಎಂಬ ಸರಳ ಉತ್ತರ ನಮ್ಮ ಮುಂದೆ ನಿಲ್ಲುತ್ತದೆ.

ಈ ಹಿಂದೆ ಚಪ್ಪಲಿ ಹಿಡಿದು ಬಾರಿಸಲು ಮುಂದಾದ ವಿವಾದ, ಜಗ್ಗೇಶ್ ಜೊತೆ ನಟಿಸೋಲ್ಲ ಎಂಬ ಈಕೆಯ ವಿವಾದಗಳು ಹಳೆಯವು. ಮೊನ್ನೆ ಬಿ.ಸಿ. ಪಾಟೀಲರ 'ದಳವಾಯಿ'ಗೂ 'ಖಡ್ಗ' ಚಿತ್ರದ ನಿರ್ಮಾಪಕರಿಗೂ ಪರೋಕ್ಷವಾದ ಕಿಚ್ಚು ಹಚ್ಚಿದ್ದು ವಿಜಯಲಕ್ಷ್ಮಿಯ ಮತ್ತೊಂದು ವಿವಾದ. ಆಕೆ ತನ್ನ ಡ್ರೈವರನ್ನು ಝಾಡಿಸಿದ್ದು ನಾಲ್ಕನೆಯ ವಿವಾದ.

ಕೆಲವು ಜನ ಹೇಳುವುದರ ಪ್ರಕಾರ ವಿವಾದ ವಿಜಯಲಕ್ಷ್ಮಿ ಹುಟ್ಟು ಹಾಕುವುದಿಲ್ಲ. ಅವರಪ್ಪ ತಂಟೆ ಹಚ್ತಾನೆ. ಅಲ್ಲಲ್ಲ ....! ಅವರ ಅಕ್ಕ... ಇರಲಿ ಬಿಡಿ! ವಿಜಯಲಕ್ಷ್ಮಿಯ ಅಹಂಕಾರವೇ ವಿವಾದದ ಕೇಂದ್ರ ಬಿಂದು. ಹೀಗೆ ಗಾಂಧಿನಗರದ ವಿವಾದದ ಹುಡುಗಿಯ ವಾದ ಮುಂದುವರಿಯುತ್ತಲೇ ಇದೆ. ಶೀಘ್ರಂ ಸಮಾಪ್ತಿ ರಸ್ತು!

ಬರಲಿಕ್ಕತ್ತ್ಯಾನ.... ಯಾದಾರ ಅಗೇವಿನಾಗ ಹೊಕ್ಕೊಂಡು ಪಿರಾಣ ಕಾಪಾಡಿಕೋ'' ಎಂದು ಹೇಳಿದ. ಅವನಾದರೂ ಎಂಥವನು.... ದುರುಗಿಯನ್ನು ಉಡುಕೆಪಡುಕೆ ಮಾಡಿಕೊಂಡು ಆರಾಮಶೀರು ಬದುಕ ಬೇಕೆಂದುಕೊಂಡಿದ್ದಂಥವನು.

ಅವನ ಬಸವನಬಾವಿ ತೆಗ್ಗಿನಂಥ ಬಾಯಿಯಿಂದ ಪಂಚಾಮೃತದಂಥ ಮಾತುಗಳನ್ನು ಕಿವಿಯಿಂದ ಉಂಡವಳೆ 'ಹ್ಹಾ ಹ್ಹಾ.... ಅವನ್ನ ಕಡ್ದು ಚೂರು ಚೂರು ಮಾಡಿ ಸೆರಗಾ ಚೆಲ್ದಿದ್ರೆ ನಾನು ನಾಕನಟ್ಟಿ ತಿಪ್ಪೇರುದ್ರಿಯ ಮಗ್ಳು ಫಕ್ಕೀರಿನೇ ಅಲ್ಲ' ಎಂದು ಮಾಡಿದ ಶಪಥವು ಹೆಡ್ಲಗಿಗ್ರಾಮದ ತುಂಬ ಪ್ರತಿಧ್ವನಿಸಿತು. ಆಕಾಸದಲ್ಲಿ ಬಾಲದ ಚುಕ್ಕಿ ಮೂಡಿದ್ದು ಇದಕ್ಕೇ ಇರಬೇಕೆಂದು ಕೆಲವರೂ; ಕೊಡಲಿ ನಕ್ಕೀತು ಸುಡುಗಾಡು ಅತ್ತೀತು ಎಂದು ಮೈಲಾರದ ಕಾರಣಿಕೆ ಅಪ್ಪಣೆ ಕೊಡಿಸಿದ್ದು ಇದಕ್ಕೇ ಇರಬೇಕೆಂದು ಕೆಲವರೂ ಮಾತಾಡಿಕೊಳ್ಳುತ್ತ ರಕ್ತದಕಲೆಯಾಗುವ ನೆಲವನ್ನು ನೋಡಬೇಕೆಂಬ ಮಹಾದಾಸೆಹೊತ್ತು ಅಷ್ಟದಿಕ್ಕುಗಳಿಂದ ಬಿಜಯಂಗೈದು ಫಕ್ಕೀರಿಯ ಮನೆಯ ಸುತ್ತ ಜಮಾಯಿಸುವುದಕ್ಕೂ 'ಎಲವೋ ಫಕ್ಕೀರಿ ಈ ಭೂಮಿಮ್ಯಾಲ ನೀನಿರಬೇಕೊಂದು.... ಇಲ್ಲಾ ನಾನಿರಬೇಕೊಂದು' ಎಂದು ಮುಂತಾಗಿ ಅರ್ಭಟಿಸುತ್ತ ಧರುಮನೆಂಬ ವಕ್ರದಂತನು ಈಶಾನ್ಯ ದಿಕ್ಕಿನಿಂದ ಬರುವುದಕ್ಕು ಸರಿಹೊಯಿತು. ನೆರೆದಿದ್ದ ನೂರಾರು ವಂದಿಮಾಗದರು ಕೇಕೆ ಹೊಡೆದು ಶಿಳ್ಳೆ ಹಾಕಿ ಸ್ವಾಗತಿಸಿ ಅವನಿಗೆ ಸುಭ ಕೋರಿದರು.

ನಗಂದಿಮೇಲಿದ್ದ ಕಂಟ್ರಿ ಬಾಟಲಿಯನ್ನು ಇಡಿಯಾಗಿ ಬಾಯಲಿಟ್ಟುಕೊಂಡು ಗಟಗಟ ಕುಡಿದು 'ಹೋಬ್ಬ' ಎಂದು ಡೇಗಿ ನೆರಕೆ ಸಂಧಿಯಲ್ಲಿದ್ದ ಮೊಂಡು ಕುಡುಗೋಲನ್ನೇ ವಜ್ರಾಯುಧದೋಪಾಯಲ್ಲಿ ಹಿಡಿದು ಕೊಂಡು ಎಲ್ಲದಿಯೋ ಬಾಡ್ಯಾ.... ನಿನ್ನ ರಗುತ ಕುಡಿತೀನಿ ಎಂದು ಕಟ್ಟೆ ಮೇಲಿಂದ ಅಂಗಳಕ್ಕೆ ಫಕ್ಕೀರಿ ಜಿಗಿಯುತ್ತಲೆ ಅದೇ ಜನ ಹೋ ಎಂದರಚಿ ಅಪಾರ ಸಂತೋಷ ವ್ಯಕ್ತಪಡಿಸಿತು.

'ಅಯ್ಯಯ್ಯೋ ನನ ಗಂಡನ್ನೀಕಿ ಕಡುದು ಬುಡ್ತಾಳಲ್ಲಪೋ' ಎಂದರಚುತ್ತ ದುರುಗಿಯು ಇನ್ನೊಂದು ಮೂಲೆಯಿಂದ ದುತ್ತನೆ ನೆಗೆದು ತನ್ನ ಹೆತ್ತಾಯಿಯ ಮುಂದೆ ನಿಂತು, 'ನನ್ ಜೀವ ತೆಗೆದು ನನ ಗಂಡನ ಮೈ ಮುಟ್ಟಬೇ ರಾಕ್ಷಚೀ' ಎಂದು ಬಾಯಿ ಬಾಯಿ ಬಡಿದುಕೊಳ್ಳಲು ಅದೇ ಜನ ಶಬ್ಬಾಷ್ ಎಂದು ಕೂಗಿ ಮೆಚ್ಚುಗೆ ವ್ಯಕ್ತಪಡಿಸಿತು.

ಇನ್ನೊಂದು ಪೆಳುಗಟ್ಟೆಯ ಮೂಲೆಯಲ್ಲಿ ಕಣ್ಣು ಪಿಳಿಪಿಳಿ ಬಿಡುತ್ತಾ ನಿಂತಿದ್ದ ರಾಮಯ್ಯ ದಂಪತಿಗಳಿಗೆ ಆ ಮುವ್ವರ ಪೈಕಿ ಯಾರ ಹೆಣ ಮೊದಲು ಬೀಳಬಹುದು ಎಂಬಂಥ ಕುತೂಹಲ.

ಅಷ್ಟುದೂರದ ಈರಬದ್ರಿ ಮನೆಯ ಕಟ್ಟೆ ಮೇಲೆ ಬರಕ್ಲಿ ಹಚಗೊಂಡು ಕೂತಿದ್ದ ಸದರಿ ಗ್ರಾಮಪಂಚಾತಿ ಸರಪಂಚ ಪರಮೇಸೂರಯ್ಯ ಫಕ್ಕೀರಿಯನ್ನು ಇರಕಟ್ಟಿಗೆ ಸಿಕ್ಕಿಸಿ ಸಹಸ್ರಾರು ರೂಪ್ಯಾ ಗಿಂಜುವ ಮಹತ್ವಾಕಾಂಕ್ಷೆಯಿಂದ ಕಾಯುತ್ತಿದ್ದನು.

ಇಂಥೆಪ್ಪತ್ತು ವಸ್ತು ಸ್ಥಿತಿಗಳ ನಡುವೆ ಫಕ್ಕೀರಿ ಮಗಳು ದುರುಗಿಯನ್ನು ಜಾಡಿಸಿ ತಳ್ಳಿ ಒಮ್ಮೆಗೆ ಧರುಮನ ಕೊರಳಪಟ್ಟಿ ಹಿಡಿದುಕೊಂಡಳು, ಅವನಾದರು ಏನು ಕಡಿಮೆ? ಆಕೆಯ ಭಾರಿ ಎದೆಯ ಸೌಭಾಗ್ಯ ಮೇಲೊದಿಕೆಯನ್ನು ಗಟ್ಟಿಯಾಗಿ ಹಿಡಿದುಕೊಂಡನು. ಅವನು ಅದನ್ನು ಎತ್ತಿದನು ಇವನು ಇದನ್ನೆತ್ತಿದನು, ಆಕೆ ಅದನ್ನು ಅಂದಳು, ಈಕೆ ಇದನ್ನು ಅಂದಳು. ಈರ್ವರೂ ಹೇಮಾಹೇಮಿಗಳಂತೆ ಹೋರಾಡತೊಡಗಿದರು, ಅವನ ಕಾಲಿಗೆ ತೊಡರುಕೊಟ್ಟು ಈಕೆ ಕೆಡವಿದಳು, ಈಕೆಯ ಪೃಷ್ಠಕ್ಕೆ ಕೈಕೊಟ್ಟು ಇವನು ಕೆಡವಿದನು, ಈ ಪ್ರಕಾರವಾಗಿ ಒಂಚಾವತ್ತು ಆಕೆಯ ಮೇಲಿವನೂ, ಒಂಚಾವತ್ತು ಇವನ ಮೇಲೆ ಆಕೆಯೂ, ಇನ್ನೊಂಚಾವತ್ತು ಪರಸ್ಪರ ತಳುಕುಬಿದ್ದು ಸಕ್ಕರೆಮೂಟೆಯಂತುರುಳಾಡತೊಗಿದರು ಅವರಿಬ್ಬರೂ....

ಹೊಡೆದಾಟ ಶುರುವಾಗಿ ಅರ್ಧತಾಸಾದರೂ ಒಂದೇ ಒಂದು ಹನಿ ರಗುತ್ತ ನೆಲಕ್ಕೆ ತಾಕಲಿಲ್ಲವಲ್ಲ.... ಇವರೇನು ಹೊಡೆದಾಡುತ್ತಿರುವರೋ ಅಥವಾ ರೋಮಾನ್ಸ್ ಮಾಡುತ್ತಿರುವರೋ ಎಂಬ ಸಂದೇಹ ಪ್ರೇಕ್ಷಕ ಸಮುದಾಯವನ್ನು ಕಾಡತೊಡಗಿತು.

ಸೂರ್ಯ ಪರಮಾತುಮನಿಗೂ ಇದರಿಂದ ಬೇಸರವಾಗಿ ಪಡುವಣದ ಗಡಂಗು ಸೇರಿಕೊಂಡನು.

ಅವನ ಹೊಟ್ಟೆಗೆ ಜಾಡಿಸಿ ಒದ್ದು ಫಕ್ಕೀರಿ ಕುಪ್ಪಳಿಸಿ ಮನೆ ಒಳಗೆ ಹೋಗಿ 'ಗಂಡಸಾದ್ರೆ ಮನ್ಯಾಗ ಕಾಲಿಡಲೋ ಕಡ್ದು ಬಿಡ್ತೀನಿ' ಎಂದು ಸವಾಲು ಹಾಕಿದಳು.

'ಕಡಿಯಬೇ ನೋಡೇ ಬಿಡ್ತೀನಿ' ಎಂದು ಅವನು ಒಳಗೆ ಹೋಗುವುದಕ್ಕೂ ಬಾಗಿಲು ಧಡಾರನೆ ಮುಚ್ಚಿಕೊಳ್ಳುವುದಕ್ಕೂ ಸರಿಹೋಯಿತು.

ಬಹಳ ಹೊತ್ತಿನವರೆಗೆ ಸೋರುತ್ತಿದ್ದ ಸದ್ದು ತದನಂತರ ಕ್ಷೀಣಿಸಿ ನಿಂತುಹೋಯಿತು. ಹೊರಗಿದ್ದವರು ಹೊರಗೇ ಉಳಿದರು! ಒಳಗಿದ್ದವರು ಒಳಗೇ ಉಳಿದರು.

ಮರುದಿನ ಬೆಳಕು ಹರಿಯುತ್ತಲೇ ಅವರಿಬ್ಬರು ಒಳಗೂ ಇರಲಿಲ್ಲ, ಹೊರಗೂ ಇರಲಿಲ್ಲ ಎಂಬಲ್ಲಿಗೆ ಈ ಕಥಾನಕ ಸಮಾಪ್ತಿಯಾಯಿತು. ■

## ಚೆಲುವು



ಚೆಲುವು ಎಲ್ಲಿದೆ ಹೇಳು?
ಬಣ್ಣದಲ್ಲೆ?
ಅಧರದಲ್ಲೆ
ಕಣ್ಣಿನಲ್ಲೆ
ಬಳುಕಿನಲ್ಲೆ
ಮನವೆ ಬಿಚ್ಚಿ ಹೇಳು
ಪ್ರೀತಿಯಲ್ಲೆ
ನಗುವಿನಲ್ಲೆ
ಹೃದಯದಲ್ಲೆ
ಮೌನದಲ್ಲೆ
ಒಮ್ಮೆ ಬಿಡಿಸಿ ನೋಡು

■ ಎಂ.ಎನ್.ವ್ಯಾಸರಾವ್

---

## ಪ್ರಶಸ್ತಿಗಾಗಿ ಹೋಮ

ತಮ್ಮ ಜೀವನದ ಪರಮೋಚ್ಚ ಆಸೆಯಾಗಿದ್ದ ಪ್ರಶಸ್ತಿಯೊಂದು ತಮ್ಮ ಕೃತಿಗೆ ಬರಲೆಂಬ ಅಭಿಲಾಷೆಯಲ್ಲಿ ಲೇಖಕರೊಬ್ಬರು ತಮ್ಮ ಕೃತಿಯೊಂದು ಪ್ರಕಟಗೊಂಡೊಡನೆ ಮನೆಯಲ್ಲಿ ಹೋಮ ಮಾಡಿಸಿದರು. ಅಗ್ನಿದೇವನಿಗೆ ಹರಕೆಯಿತ್ತು ಪ್ರಶಸ್ತಿ ನಿರೀಕ್ಷಿಸಲಾರಂಭಿಸಿದರು. ಒಂದು ವರ್ಷ ಉರುಳಿತು. ಪ್ರಶಸ್ತಿ ಬರಲಿಲ್ಲ. ಎರಡನೇ ವರ್ಷವೂ ಬರಲಿಲ್ಲ. 'ಹೋಮ ಮಾಡಿಸಿದರೂ ಫಲಸಿಗಲಿಲ್ಲವಲ್ಲ? 'ಲೇಖಕರು ಮನದಲ್ಲೇ ಕೊರಗಿದರು. ಆಶ್ಚರ್ಯ! ಮೂರನೇ ವರ್ಷ ನಿರೀಕ್ಷಿಸಿದ್ದ ಪ್ರಶಸ್ತಿ ಬಂದೇ ಬಿಟ್ಟಿತು 'ಭುವನದ ಭಾಗ್ಯ'ದ ಲೇಖಕ ಜಿ.ಎಸ್. ಆಮೂರರಿಗೆ!

# ಮತ್ತೊಂದು ಬರೆದಳು ಚೆಲುವೆ

1

ಪ್ರೇಮದ ಓಲೆಯ ಬರೆದಳು ಬಾಲೆ
ದೂರದ ಇನಿಯನಿಗೆ
ಕ್ಷೇಮ ಸಮಾಚಾರ ತಿಳಿಸೆಂದು ಬರೆದಳು
ಇಂತು ಈ ನಿನ್ನವಳಿಗೆ

ಉತ್ತರ ಬರಲಿಲ್ಲ ಪತ್ರವೂ ಬರಲಿಲ್ಲ
ಮತ್ತೊಂದು ಬರೆದಳು ಚೆಲುವೆ:

ನಮ್ಮವರು ನನ್ನನ್ನು ಏನೇನೊ ಅಂತಾರೆ
''ಹೊರಮರೆತು ಒಳಗೇನ ನೆನೆವೆ?
ಪರಗ್ಯಾನ ಪರಚಿತ್ತ ಏನೀ ವಿಕಳಾವಸ್ಥೆ?''
ನಿಮಗು ಸಹ ಹೀಗೆ ಆಗುವುದೆ?

ಕೌಲೆತ್ತು ಬಂದಿತ್ತು ಮನದಲ್ಲೆ ಕೇಳಿದೆನು:
ಉತ್ತರ ಬರಬಹುದೆ ಇದಕಾದರು?
ಬಲಗಾಲನೆತ್ತಿತ್ತು ಶುಭ ಸನ್ನೆ ಮಾಡಿತ್ತು
ಕತ್ತನ್ನ ತೂಗಿತ್ತು ಕೆಳಗು ಮ್ಯಾಲೂ.

ನನ್ನ ಅಂಚೆ ವಿಳಾಸ ಸರಿಯಾಗಿ ಗೊತ್ತೆ?
ಕೆಳಗೆ ಇದೆ ನೋಡಿರಿ ಮರೆತಿದ್ದರೆ.

ಪತ್ರವೂ ಬಾರದೆ ಉತ್ತರವೂ ಬಾರದೆ
ಮತ್ತೊಂದು ಬರೆದಳು ಚೆಲುವೆ.



2

ಗೊಲ್ಲರ ಬಡವಿಯ
ಕಥೆಯೊರೆದ ದಾಸಯ್ಯ:

ಗಲಿರೆಂಬ ಜಂಗಿನ ಜೋಗಿ ಜಂಗಮ ಬಂದ
ಹಟ್ಟಿಯ ತುಂಬೆಲ್ಲ ಬೆಳಕಾಡಿತೊ
ಅಂಗಳ ರಜ ಗುಡಿಸಿ ರಂಗೋಲೆ ಗೆರೆ ಎಳೆವ
ಬಡವಿಯ ಹೃದಯವೆ ಕಳವಾಯಿತೊ.

ಜಂಗಮ ಬಾರದೆ ಕೂತೆ ಇರುವಳು ನೋಡಿ
ಸುತ್ತಿನ ಮಂದಿಯ ಇತರೇತರ ಮಾಡಿ,

ಬಡವಿಯ ಹೆಸರು ಕೇಳಿದೆ
'ಅಯ್ಯೋ ಮರೆತೇ ಹೋಗಿದೆ!'

ಮರೆತ ಹೆಸರಿನ ಬಡವಿ ನಾನೆ ಹೌದೆ?
ಈ ಪತ್ರಕಾದರು ಉತ್ತರಿಸಿ ತಪ್ಪದೆ
ಕಥೆಯ ನೆನೆದಾಗೆಲ್ಲ ಅಳು ಬರುತಿದೆ.

ಪತ್ರವೂ ಬರಲಿಲ್ಲ ಉತ್ತರವೂ ಬರಲಿಲ್ಲ
ಮತ್ತೊಂದು ಬರೆದಳು ಚೆಲುವೆ.

3

ನಿನ್ನೆ ರಾತ್ರಿ
ಕಂಡರಿಯದ ಹಕ್ಕಿಯೊಂದು
ಕೇಳರಿಯದ ಹಾಡು ಹೇಳಿ
ಬೆರಗಿನಲಿ ಹೊರ ನೋಡಿದೆ;
ಅಂಬರದ ಅಂಗಳದಿ ಚಂದ್ರಾಯುನಂಬೂವ
ಬಿಳಿನವಿಲು ಗರಿಗೆದರಿ ಕುಣಿದು
ಅಗೊ ನವಿಲ ಗರಿಯಲ್ಲಿ ಮಿನ ಮಿನ ಮಿನುಗುತವೆ
ತಾರಾಖಚಿತ ಚಿಕ್ಕೆಗಣ್ಣು!

ನನ್ನ ಕಣ್ಣಂದ್ಯಾರೊ ಚಂದ್ರನ್ನ ನೋಡುವರೆ?
ಹೌದೆನಿಸಿ ಮನೆ ತುಂಬ ಹುಡುಕಿ
ಯಾರ ಸುಳಿವಿರಲಿಲ್ಲ-ಹಾಸಿಗೆ ಅಸ್ತವ್ಯಸ್ತ
ಉರುಳಾಡಿಧಾಂಗಿತ್ತು ಯಾರೊ.
ಮ್ಯಾಲಿನುಪ್ಪರಿಗೆಯಲಿ ಜ್ಯೋತಿ ಉರಿಯುತ್ತಿತ್ತು
ಗಾಳಿಗಲುಗದೆ ಶಾಂತಚಿತ್ತ.

ಈ ಪತ್ರಕಾದರು ಉತ್ತರ ಕೊಡಿರಯ್ಯ
ಬಂದವರು ನೀವು ತಾನೆ?

ಪತ್ರವೂ ಬರಲಿಲ್ಲ ಉತ್ತರವು ಬರಲಿಲ್ಲ
ನಿಶ್ಶಬ್ದವಾದಳು ಚೆಲುವೆ.



■ ಡಾ. ಚಂದ್ರಶೇಖರ ಕಂಬಾರ

# ಶತಮಾನದ ವ್ಯಕ್ತಿ

## ಓದುಗರ ಆಯ್ಕೆ

**ಓದುಗರನ್ನು ತಟ್ಟಿದ ಚೇತನವೇ ಇಲ್ಲಿ ಶತಮಾನದ ವ್ಯಕ್ತಿ. ಹೆಚ್ಚು ಮೆಚ್ಚಾದವರು ಬಾಪು. ಅಪರೂಪಕ್ಕೆ ಎಂಬಂತೆ ದೇಶದ ರಕ್ಷಣೆಗೆ ನಿಂತ ಸೈನಿಕ, ಫೈಸಾಲ್ ರೈಲು ದುರಂತಕ್ಕೆ ಕಾರಣವಾದ ಸ್ಟೇಷನ್ ಮಾಸ್ಟರ್ ಕೂಡ ಈ ಶತಮಾನದ ವ್ಯಕ್ತಿಗಳಾಗಿದ್ದಾರೆ.**

### ಅಟಲ್ ಜೀ

ನಾನು ಆಯ್ಕೆ ಮಾಡುವ ಶತಮಾನದ ವ್ಯಕ್ತಿ ಶ್ರೀಮಾನ್ ಅಟಲ್ ಬಿಹಾರಿ ವಾಜಪೇಯಿ.

ಬ್ರಹ್ಮಚಾರಿಯಾಗಿ, ಸಚ್ಚಾರಿತ್ರ್ಯ ವ್ಯಕ್ತಿತ್ವ ಉಳ್ಳವರಾದ ಅವರು ದೇಶದ ಆಸ್ತಿ. ದೇಶದ ಶಕ್ತಿ.

'ಅಜಾತ ಶತ್ರು' ಎಂದೇ ಹೆಸರಾದ ''ಬಾವಾರ್ಥಿ'' ಗುಣದ ಅಪ್ಪಟ ದೇಶಪ್ರೇಮಿ ವಾಜಪೇಯಿ. ಸಮರ್ಥ ನಿಷ್ಠಾವಂತ ಶಾಂತಿಯ ಹರಿಕಾರತೆಯು, ಸಮರದ ಸರದಾರತೆಯು, ಅವರಲ್ಲಿ ನಾಕಂಡ ವಿಶೇಷತೆಗಳು. ಧೀರೋದಾತ್ತ ವ್ಯಕ್ತಿತ್ವದ ಧೀಮಂತ ನಾಯಕರಾದ ಸುಸಂಸ್ಕೃತ ಭಾಷಾ ಪಂಡಿತರಾದ ''ಸಂಸದೀಯ ಪಟು'' ಎಂಬ ಬಿರುದಿಗೆ ಪಾತ್ರರಾದ ಈ ಶತಮಾನದ ಪೂಜನೀಯ ಹಾಗೂ ಸಾರ್ಥಕ ವ್ಯಕ್ತಿ ಅಟಲ್‌ಜೀ.

ಅಧಿಕಾರದ ಆಸೆಯಿಲ್ಲದ ಸೂಕ್ಷ್ಮ ವಿಚಾರವುಳ್ಳವರಾಗಿ ಚಿಂತನ ಮಂಥನಗಳಿಂದ ಹೆಸರಾದ ಅನುಕರಣೀಯ ವ್ಯಕ್ತಿ ವಾಜಪೇಯಿ. ನುಡಿದಂತೆ ನಡೆಯುವ, ನಡೆದಂತೆ ನುಡಿಯುವ, ದೇಶ, ವಿದೇಶಗಳಲ್ಲೆಲ್ಲ ಗೌರವಾನ್ವಿತರಾದ ಪ್ರಭಾವಿ ಅಟಲ್ ಬಿಹಾರಿ ವಾಜಪೇಯಿಯವರೇ ಈ ಶತಮಾನದ ವ್ಯಕ್ತಿ.



**ಪ್ರಶಾಂತ ಗಾಂವ್ಕರ್**
ಆನಗೋಡು.

### ಶ್ರೀ ಸಾಮಾನ್ಯ

ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಅಧಿಕಾರಕ್ಕಾಗಿ ಕಚ್ಚಾಟ, ಸರ್ಕಾರಿ ಹಾಗೂ ಸಾರ್ವಜನಿಕ ಹಣದ ಲೂಟಿ, ಕೊಲೆ, ಸುಲಿಗೆ ಅತ್ಯಾಚಾರ, ವರದಕ್ಷಿಣೆಗಾಗಿ ವಧೂದಹನ ಇವೆಲ್ಲಾ ನಿರಂತರವಾಗಿ ನಡೆಯುತ್ತಿದ್ದರೂ, ನೋಡಿಯೂ, ನೋಡದಂತಿರುವ ಭಾರತದ ಸಾಮಾನ್ಯ ಜನರ ಪ್ರತಿನಿಧಿ 'ಶ್ರೀ ಸಾಮಾನ್ಯ' ಈ ಶತಮಾನದ ವ್ಯಕ್ತಿಯಾಗಲಿಕ್ಕೆ ಅರ್ಹ.

ವಿದ್ಯುತ್, ಗ್ಯಾಸ್, ನೀರು ಇವು ದಿನದಿನಕ್ಕೂ ದುಬಾರಿಯಾಗುತ್ತಿದ್ದರೂ, ರೇಶನ್ ಅಕ್ಕಿಯಲ್ಲಿನ ಕಲ್ಲು ತಿಂದು, ಹಾಲಿನಲ್ಲಿ 'ಯೂರಿಯಾ' ಕೃತಕ ಪೋಷಕಾಂಶಗಳು ಹೇರಳವಾಗಿ 'ಹಾಲಾಹಲ' ಆಗಿದ್ದರೂ ಅದನ್ನೇ ಕುಡಿದು, ಆಹಾರ ಪದಾರ್ಥಗಳ ಬೆಲೆ ಗಗನಕ್ಕೇರುತ್ತಿದ್ದರೂ ಬೇಸರಿಸದೇ ಕಲಬೆರಕೆ ಆಹಾರ ತಿಂದೂ ಇನ್ನೂ ಬದುಕಿರುವ 'ಶ್ರೀ ಸಾಮಾನ್ಯ'ನೇನು ಸಾಮಾನ್ಯನೇ?

ರಿಪೇರಿ ಕಾಣದೇ ವರ್ಷಗಳೇ ಉರುಳಿರುವ ರಸ್ತೆಯಲ್ಲಿರುವ ಹೊಂಡಗುಂಡಿಗಳಲ್ಲಿ ಸರ್ಕಸ್ ಮಾಡುತ್ತಾ ಸಾಗುವಾಗ, ಬರುವ ರಸ್ತೆಯ ಹಣ ತಿಂದ ಅಧಿಕಾರಿ, ಕಂಟ್ರಾಕ್ಟರ್‌ಗಳ ಮೇಲಿನ ಸಿಟ್ಟನ್ನು ನುಂಗಿಕೊಂಡ ಶ್ರೀಸಾಮಾನ್ಯನಿಗೇ ''ಶತಮಾನದ ವ್ಯಕ್ತಿ'' ಪಟ್ಟಸಿಗಬೇಕು. ಒಂದು ಬಾಟ್ಲ ಹೆಂಡಕ್ಕೆ, 50- 100 ರೂ. ಗೆ ತನ್ನ ಒಂದು ಓಟನ್ನು ಮಾರಿಕೊಂಡು ಭ್ರಷ್ಟರನ್ನು, ಖದೀಮರನ್ನು ಆರಿಸುತ್ತಿರುವ ಮೂರ್ಖ ಶಿಖಾಮಣಿಗೇ ಈ ಪ್ರಶಸ್ತಿ ಕೊಡಿ.



**ನವಿಲೂರ ಪ್ರಕಾಶ್**
ಬಿದ್ಕಲ್‌ಕಟ್ಟೆ.

### ವೀರಭದ್ರ ಚನ್ನಮಲ್ಲ ಸ್ವಾಮೀಜಿ

ಶತಮಾನದ ವ್ಯಕ್ತಿಯಾಗಿ ಮಾನವ ಧರ್ಮಪೀಠದ ವೀರಭದ್ರ ಚನ್ನಮಲ್ಲ ಸ್ವಾಮೀಜಿಯವರನ್ನು ಆಯ್ಕೆ ಮಾಡಲಿಚ್ಛಿಸುತ್ತೇನೆ.

ಜಾತ್ಯಾತೀತತೆ ಮತ್ತು ಸೌಹಾರ್ದ ಬದುಕಿನತ್ತ ಒಲವಿರಿಸಿ ಸಾಮಾಜಿಕ ಸಮಾನತೆಗೆ ತಮ್ಮ ಬದುಕನ್ನು ಮುಡುಪಾಗಿಟ್ಟು ಆ ನಿಟ್ಟಿನಲ್ಲಿ ಸಕ್ರಿಯರಾಗುತ್ತಿರುವ ಶ್ರೀಯುತರು ಮಹಾ ಮಾನವತಾವಾದಿ ಬಸವಣ್ಣನವರ ಆಶಯಗಳನ್ನು ಅನುಷ್ಠಾನಗೊಳಿಸುವತ್ತ ಜಡ್ಡುಗಟ್ಟಿರುವ ಜಾತೀವ್ಯವಸ್ಥೆಯ ಬೇರುಗಳನ್ನು ಅಲುಗಾಡಿಸುವ ಮೂಲಕ ಶ್ರೇಣೀಕೃತ ಜಾತಿ ವ್ಯವಸ್ಥೆಯನ್ನು ಒಪ್ಪಿಕೊಂಡಿರುವ ಹಿಂದೂ ಧಾರ್ಮಿಕ ಮೂಲಭೂತವಾದವನ್ನು ವೈಚಾರಿಕತೆ ಮತ್ತು ವಾಸ್ತವಿಕ ನೆಲೆಗಟ್ಟಿನಲ್ಲಿ ವಿಮರ್ಶಿಸುತ್ತಾ, ಶತಶತಮಾನಗಳಿಂದ ಶೋಷಣೆಗೀಡಾದ ಉಪೇಕ್ಷಿತ ವರ್ಗದವರ ನಡುವೆ ನಿಂತು ಆ ವರ್ಗದಲ್ಲಿ ಹೊಸ ಭರವಸೆ ಮತ್ತು ಪ್ರಜ್ಞಾವಂತತೆಯನ್ನು ತರುವ ಮೂಲಕ ಬಸವಣ್ಣನವರ ಸಾಮಾಜಿಕ ಕ್ರಾಂತಿಯನ್ನು ಮುನ್ನಡೆಸುವ ಹಂಬಲದಿಂದಿರುವ ಶ್ರೀ ವೀರಭದ್ರ ಚನ್ನಮಲ್ಲಸ್ವಾಮಿಯವರ ಸಾಮಾಜಿಕ ನಿಷ್ಠೆ ಮತ್ತು ಪ್ರಯತ್ನ ಹೊಸ ಶತಮಾನಕ್ಕೆ ಆದರ್ಶಪ್ರಾಯವಾಗಿದೆ.



**ಗೌಡಗೆರೆ ಮಾಯುಶ್ರೀ**
ಬೆಂಗಳೂರು.

### ನನ್ನ ತಂದೆ ಈ ಶತಮಾನದ ವ್ಯಕ್ತಿ

ಅನ್ಯಾಯ, ಅಕ್ರಮ, ಅಧರ್ಮ, ಅನೀತಿ, ಭ್ರಷ್ಟಾಚಾರ, ಸ್ವಜನ ಪಕ್ಷಪಾತಗಳಂತಹ ವ್ಯೂಹದಲ್ಲಿ ಬಂಧಿಯಾಗಿ ಹೋಗಿರುವ ಸಮಾಜದಲ್ಲಿ ನನ್ನ ತಂದೆಯಂತಹ ಅಪರೂಪದ ವ್ಯಕ್ತಿತ್ವ ರೂಢಿಗತದಲ್ಲಿ ಸಿಗುವುದು ತೀರಾ ವಿರಳ.

ಪ್ರಾಮಾಣಿಕತೆ, ನೀತಿ, ನಿಯತ್ತುಗಳನ್ನು ಶಿಸ್ತುಬದ್ಧಾಗಿ ರೂಪಿಸಿಕೊಂಡು ತಾಳ್ಮೆ, ಸಂಯಮ, ವಿನಯಗಳೇ ಮೂರ್ತಿವೆತ್ತ ಆದರ್ಶ ಶಿಕ್ಷಕ ನನ್ನ ತಂದೆ. ಸ್ವಾರ್ಥ, ಒಣ ಪ್ರತಿಷ್ಠೆಗಳಿಂದ ಮುಕ್ತರಾಗಿ ನಿಂತ ಚೇತನ. ಮಹಾ ಚೇತನ.

ಯಾರೇ ಅನ್ಯಾಯ ಮಾಡಲಿ, ಯಾರೇ ವಂಚಿಸಲಿ, ಕೊಟ್ಟ ಮಾತಿಗೆ ತಪ್ಪಿಸಿಕೊಳ್ಳಲಿ ಕ್ಷಮಿಸಿ ಬಿಡುವ ಗುಣ ''ತಾಳಿದ ವ್ಯಕ್ತಿ ಬಾಳಿಯಾನು!'' ಎನ್ನುವ ತಾದ್ಯಾತ್ಮ. ನನ್ನ ಜೀವನದಲ್ಲಿ ಮಹಾತ್ಮಾ ಗಾಂಧಿಯ ನಂತರ ಕಂಡುಕೊಂಡ ಸರಳ ಜೀವಿ ಎಂದರೆ ''ಜೆ.ಎಂ.ಮಠದ'' ನನ್ನ ತಂದೆ ಮಾತ್ರ.

''ಬದುಕಲು ಸಾಕಾಗಿ ಮಿಕ್ಕಿರುವುದನ್ನು ಇಲ್ಲದವರಿಗೆ ನೀಡಿ

ಮೇಲೆತ್ತುವ ಕೆಲಸ ಮಾಡಬೇಕು'' ಎಂದು ನುಡಿದು ನಡೆದುಕೊಂಡವರು. ಇವರೇ ಪ್ರೇರಣೆಯಾಗಿ ರಾಣೇಬೆನ್ನೂರು ತಾಲ್ಲೂಕಿನಲ್ಲಿ ಧನರಾಜ್ ಜೈನ್ ಶೈಕ್ಷಣಿಕ ದತ್ತು ಯೋಜನೆ ಅಸ್ತಿತ್ವಕ್ಕೆ ಬಂದು ಆರು ವರ್ಷಗಳಿಗೂ ಮಿಕ್ಕಿ ಚಲಾವಣೆಯಲ್ಲಿರುವುದು ಒಂದು ಜೀವಂತ ಉದಾಹರಣೆಯಾಗಿದೆ. ಖಂಡಿತಾ ನನ್ನ ತಂದೆಯೇ ಈ ಶತಮಾನದ ವ್ಯಕ್ತಿ.



**ಜೆ.ಎಂ. ರಾಜಶೇಖರ**
**ಚೌಡಯ್ಯದಾನಪುರ.**

## ಈ ಶತಮಾನದ (ಕೊನೇ) ವ್ಯಕ್ತಿ : ಜೆ.ಹೆಚ್.ಪಟೇಲ್

ವಿಶೇಷತೆಗಳು :

1. ಮದ್ಯ ಮತ್ತು ಮಾನಿನಿ ನನ್ನ ಹವ್ಯಾಸ ಎಂದು ಪ್ರಚಾರಪಡಿಸಿದ್ದು.
2. ಜನರ ವಿರೋಧದ ನಡುವೆಯೂ ಇರುವುದನ್ನು ತೋರಿಸಿದರೆ ತಪ್ಪೇ? ಎನ್ನುತ್ತಾ ''ವಿಶ್ವ ಸುಂದರಿ ಸ್ಪರ್ಧೆ'' ನಡೆಸಿದ್ದು.
3. ''ದಾಂಡಿಗ'' ದೇವೇಗೌಡರ ಕಿರುಕುಳದ ಮಧ್ಯದಲ್ಲಿಯೇ ಸರ್ಕಾರದ ''ಅವಧಿ'' ಮುಗಿಸಿದ್ದು.
4. ''ಹಗರಣಮುಕ್ತ ಮುಖ್ಯ ಮಂತ್ರಿ'' ಎಂದು ಸ್ವತಹ ಘೋಷಿಸಿಕೊಂಡಿದ್ದು.
5. ತನ್ನ ಬಹುತೇಕ ಮಂತ್ರಿಗಳಿಗೆ ''ಪ್ರಪಂಚಜ್ಞಾನ'' ಉಣಬಡಿಸಿದ್ದು.
6. ಬಿ.ಜೆ.ಪಿ. ಕ್ಯಾನ್ಸರ್ ಎನ್ನುತ್ತಾ ಒಂದೇ ದಿನದಲ್ಲೇ ಕ್ಯಾನ್ಸರ್ ವಾಸಿಯಾಗಿದೆ ಎಂದು ''ಎನ್.ಡಿ.ಎ.''ನೊಳಗೆ ಸೇರಿಕೊಂಡಿದ್ದು.
7. ಲೋಕಶಕ್ತಿ, ಸಮತಾಪಕ್ಷಗಳನ್ನು ''ಜನತಾದಳ''ದಲ್ಲಿ ಐಕ್ಯಗೊಳಿಸುವಂತೆ ಮಾಡಿ ಬಿ.ಜೆ.ಪಿ. ಮತ್ತು ಲೋಕಶಕ್ತಿ ಕಾರ್ಯಕರ್ತರನ್ನು ಕಂಗಾಲು ಮಾಡಿದ್ದು.
8. ತನ್ನ ಕ್ಷೇತ್ರ ಚನ್ನಗಿರಿಯಲ್ಲಿ ಪ್ರಗತಿ ಕೆಲಸಗಳೇ ಆಗಿಲ್ಲ ಎಂದರೆ ''ಕನ್ನಡಕ ಹಾಕಿ ನೋಡಿ'' ಎಂದದ್ದು.
9. ''ಎಲ್ಲರಂಥಲ್ಲದ ಜೆ.ಹೆಚ್.ಪಟೇಲ್'' ಎಂಬ ತನ್ನ ''ಜೀವನ ಚರಿತ್ರೆ'' ಬರೆಸಿದ್ದು.
10. ''ಇಂದಿರಾ'' ಮನೆಗೆ ''ಸೋನಿಯಾ'' ಸೊಸೆಯಾಗಿ ಕಾಲಿಟ್ಟಮೇಲೆ ಅತ್ತೆ ಇಂದಿರಾ, ಮೈದುನ ''ಸಂಜಯ್'' ಗಂಡ ರಾಜೀವ್‌ರನ್ನು ಬಲಿ ತೆಗೆದುಕೊಂಡರು ಎಂದು ಸಮಾಜವಾದಿ ಪಟೇಲ್ ಮೂಢರಂತೆ ಹೇಳಿದ್ದು.
11. ಸಮಾಜವಾದಿಯಾಗಿ ಬಂದಿದ್ದ ಪಟೇಲ್, ಸ್ವಾಮೀಜಿಗಳ ಕಾಲಿಗೆ ಬೀಳುತ್ತಾ, ಯಜ್ಞಯಾಗಾದಿಗಳನ್ನು ನಡೆಸುತ್ತಾ, ದೇವಾಲಯಗಳನ್ನು ಸುತ್ತುತ್ತಾ, ಸಮಾಜದ ಹಾದಿ ''ಸರಿ ಪಡಿಸಲಾರದಷ್ಟು (ಯಾರಿಂದಲೂ) ಕೆಟ್ಟಿದೆ'' ಎಂದು ಹೇಳಿ ವಿರಮಿಸಲು ಸಿದ್ಧವಾಗಿರುವುದು.



**ಕೆ.ಯಂ.ಕೊಟ್ರಯ್ಯ**
**ಪುನಬಗಟ್ಟಿ.**

## ವ್ಯಕ್ತಿ-ಶಕ್ತಿ ವಿಶ್ವೇಶ್ವರಯ್ಯ

ಈ ಶತಮಾನದಲ್ಲಿ ಬದುಕಿ ಬಾಳಿದವರು, ಬಾಳಿಗೆ ಬೆಳಕು ತುಂಬಿದವರು ಅನೇಕರು. ಸಾಹಸ, ಸಾಹಿತ್ಯ, ಕ್ರೀಡೆ, ಕಲೆ, ಸಮಾಜ ಸೇವೆ, ವೈಜ್ಞಾನಿಕ, ತಾಂತ್ರಿಕ, ಶೈಕ್ಷಣಿಕ ಯಾವ ರಂಗವೂ ವಿಪುಲತೆ ಹೊಂದದೆಯೇ ಉಳಿದಿಲ್ಲ. ಗಣ್ಯರು ಅದರಲ್ಲೂ ಅಗ್ರಗಣ್ಯರು ಬಹು ವಿರಳ. ಅದಕ್ಕೆ ಅಪರೂಪದ ಮಹಾನ್ ಅಮರಚೇತನ ಎಂ.ವಿಶ್ವೇಶ್ವರಯ್ಯ ಅವರನ್ನು ಶತಮಾನದ ವ್ಯಕ್ತಿಯಾಗಿ ಜೊತೆಗೆ ಶತಶತಮಾನದ ಎಂದಿಗೂ ಉಳಿಯುವ ಶಕ್ತಿ ಎಂದು ಭಾವಿಸಿದ್ದೇನೆ.

ಸರ್‌ಎಂ.ವಿ.ಯನ್ನು ನೆನಪಿಸುವ ಕನ್ನಂಬಾಡಿ ಅಣೆಕಟ್ಟೆ, ಭದ್ರಾವತಿ ಉಕ್ಕಿನ ಕಾರ್ಖಾನೆ, ಬೆಂಗಳೂರಿನಲ್ಲಿನ ಮೈಸೂರು ಬ್ಯಾಂಕ್, ವಿಧಾನಸೌಧ, ಶರಾವತಿಯ ವಿದ್ಯುತ್ ಕಾರ್ಯಾಗಾರ, ಮಂಡ್ಯದ ಕಾಗದ ಕಾರ್ಖಾನೆ, ಇಂಜಿನಿಯರಿಂಗ್ ಕಾಲೇಜ್, ರೇಷ್ಮೆ ಉದ್ಯಮ, ಮಹಿಳಾ ಶಿಕ್ಷಣ ಕೇಂದ್ರ, ಹೆಸರಿಸಲಾಗದಷ್ಟು ಯೋಜನೆಗಳನ್ನು ಕಾರ್ಯಗತಗೊಳಿಸಿ ಆರ್ಥಿಕ ಸ್ವಾವಲಂಬನೆಗೆ ದಾರಿದೀಪವಾಗಿದ್ದಾರೆ. ಅಭಿವೃದ್ಧಿಶೀಲಗುಣ, ನಿಸ್ವಾರ್ಥ ಸೇವೆ, ಮಹತ್ವಾಕಾಂಕ್ಷೆಗಳ ಗುರಿ ಇರುವ ಈ ವ್ಯಕ್ತಿ ಎಂದಿಗೂ ಅಮರ ಎಂದೆಂದಿಗೂ 'ಅಮರ' ಅನ್ನುವುದಕ್ಕೆ ಭಾರತರತ್ನ ಸರ್ ಎಂ.ವಿಶ್ವೇಶ್ವರಯ್ಯನವರೇ ಮೇಲ್ಪಂಕ್ತಿಯಾಗಿದ್ದಾರೆ.



**ಅಕ್ಬರ್ ಸಿ. ಕಾಲಿಮಿಚಿ**
**ಕೊಪ್ಪಳ**

## ಮಹಾನ್ ಚೇತನ ಅಂಬೇಡ್ಕರ್

ಡಾ. ಬಿ.ಆರ್.ಅಂಬೇಡ್ಕರ್ ಸಮರ್ಥ ಪತ್ರಿಕೋದ್ಯಮಿ ಮತ್ತು ಗಣ್ಯ ಸಮಾಜಸುಧಾರಕರಾಗಿದ್ದರು. ಎಲ್ಲ ಜಾತಿಗಳಲ್ಲಿ ಸಾಮಾಜಿಕವಾಗಿ ಸಮಾನತೆಯನ್ನು ತರುವುದಕ್ಕಾಗಿ ದುಡಿದರು. ಇವರು 'ಸಮಾಜ ಸಮತಾ ಸಂಘ' ಸ್ಥಾಪಿಸಿದರು. ದೀನದಲಿತರ ಹಿತಾಸಕ್ತಿಗಳನ್ನು ರಕ್ಷಿಸುವುದೇ ಅವರ ಮುಖ್ಯ ಗುರಿಯಾಗಿತ್ತು. ಇವರನ್ನು ದೀನದಲಿತರ ನೇತಾರ ಎಂದು ನೆಹರೂ ಹೊಗಳುತ್ತಿದ್ದರು.

ಅಂಬೇಡ್ಕರರು ಸರ್ವೋತ್ಕೃಷ್ಟ ದೇಶ ನಿರ್ಮಾಪಕರಲ್ಲಿ ಒಬ್ಬರಾಗಿದ್ದರು. ಅವರಲ್ಲಿ ಮೆಚ್ಚುವಂತಹ ವಿಶೇಷ ಗುಣಗಳಿದ್ದವು. ತಾವು ಮಾಡಿದ ಎಲ್ಲ ಬಗೆಯ ಕೆಲಸ ಕಾರ್ಯಗಳಲ್ಲಿ ಧೈರ್ಯ ಮತ್ತು ನಿರ್ಭಯತೆ ಇರುತ್ತಿತ್ತು. ಅವರು ಜನತೆಗೆ ಸುಶಿಕ್ಷಿತರಾಗಿರಿ, ಅನ್ಯಾಯದ ವಿರುದ್ಧ ಹೋರಾಡಿ ಎನ್ನುತ್ತಿದ್ದರು. ಕಾಯ್ದೆಗಳು ಮನುಷ್ಯರಿಂದ ಮನುಷ್ಯರಿಗಾಗಿ ಮಾಡಲ್ಪಟ್ಟವೆ, ಸಂತೋಷಕ್ಕಾಗಿ ಕಾಯ್ದೆಗಳನ್ನು ನಿರ್ಮಿಸಿದ್ದಾನೆಯೆ ಹೊರತು, ಕಾಯ್ದೆಗಳು ಮನುಷ್ಯನನ್ನು ನಿರ್ಮಿಸಿಲ್ಲ. ಕೇವಲ ಶಿಕ್ಷೆಯೊಂದೇ ಮನುಷ್ಯನನ್ನು ಕೆಟ್ಟ ಕಾರ್ಯಗಳನ್ನು ಮಾಡದಂತೆ ತಡೆಯಲು ಸಾಧ್ಯವಿಲ್ಲ. ಅವನಿಗೆ ತಕ್ಕ ಶಿಕ್ಷಣ ಮತ್ತು ಧರ್ಮಾಭಿಮಾನ ಮತ್ತು ಪ್ರಾಮಾಣಿಕತೆಯ ಬಗ್ಗೆ ಅರಿವು ಮೂಡಿಸಬೇಕು ಎಂದ ಅವರ ಮಾತೆಷ್ಟು ಚೆನ್ನ.

'ಅವರು ಕೊನೆಯ ಉಸಿರಿರುವ ತನಕ ದೀನ ದಲಿತರಿಗಾಗಿ ದುಡಿದರು. ನವಭಾರತದ ಮಹಾನ್ ಶಿಲ್ಪಿಗಳಲ್ಲಿ ಅಂಬೇಡ್ಕರರು ಒಬ್ಬರು. ಅವರು ಮಾಡಿದ ಸಾಧನೆಗೆ ಅವರಿಗೆ ಕೊಡಮಾಡಿದ 'ಭಾರತ ರತ್ನ' ಪ್ರಶಸ್ತಿಯೆ ಸಾಕ್ಷಿ. ಛಲಗಾರ ಹೋರಾಟಗಾರ ಅಂಬೇಡ್ಕರ್ 'ನಿಮ್ಮ ನಿಮ್ಮ ಹಕ್ಕುಗಳಿಗಾಗಿ ಹೋರಾಡಿರಿ' ಎನ್ನುತ್ತಿದ್ದರು. ದಲಿತರಿಗೆ ಓದು ಬರಹ ಕಲಿಯಲು ಪ್ರೇರೇಪಿಸಿದರು.



**ಪಾರ್ವತಿ ಗೌರಿಶಂಕರ್**
**ಹುಲಿಕಂಥೆಮಠ.**

## ಶತಮಾನ ಮೀರಿ ಬೆಳೆದ ಬಾಪೂ

''ಇಂಥ ವ್ಯಕ್ತಿಯೊಬ್ಬ ಈ ಜಗತ್ತಿನ ಮೇಲೆ ನಡೆದಾಡಿದ ಎಂದರೆ ಮುಂದಿನ ಪೀಳಿಗೆ ನಂಬಲಿಕ್ಕಿಲ್ಲ'' ಎಂದು ಉದ್ಗಾರವೆತ್ತಿದ ಐನ್‌ಸ್ಟೀನ್ ಮಾತೇ ಗಾಂಧೀಜಿಯನ್ನು ಈ ಶತಮಾನಕ್ಕಿಂತಲೂ ಎತ್ತರವಾಗಿ ಕೊಂಡೊಯ್ಯುತ್ತದೆ. ಸತ್ಯ, ಅಹಿಂಸೆ, ಪ್ರಾಮಾಣಿಕತೆ, ಸಮಾಜ ಸುಧಾರಣೆ, ಸ್ವಾತಂತ್ರ್ಯ ಹೋರಾಟ ಇತ್ಯಾದಿ ಸಕಾರಾತ್ಮಕ ಧೋರಣೆಗಳನ್ನು ಭೂತದಂತೆ ಆವಾಹಿಸಿಕೊಂಡ ಈ ''ನಂಗಾ

ಫಕೀರ'' ಜನರಿಗೆ ಕಲಿಸಿದ್ದು ಪ್ರೀತಿ ಮತ್ತು ಸಹಬಾಳ್ವೆ

ಅಮೆರಿಕಾ, ಫ್ರಾನ್ಸ್‌ಗಳ ಸ್ವಾತಂತ್ರ್ಯಯುದ್ಧ; ಚೀನಾ, ರಷ್ಯಾಗಳ ರಕ್ತಕ್ರಾಂತಿಗಳು ಸ್ವಾತಂತ್ರ್ಯವನ್ನು ರಕ್ತಚೆಲ್ಲಿಯಷ್ಟೆ ಪಡೆಯಲು ಸಾಧ್ಯ ಎಂದು ಸೂಚಿಸಿದಾಗ ಇಡೀ ಜಗತ್ತೇ ನಿಬ್ಬೆರಗಾಗುವಂತೆ ಅಹಿಂಸೆ ಮೂಲಕವೂ ಸ್ವಾತಂತ್ರ್ಯ ಪಡೆಯಲು ಸಾಧ್ಯ ಎಂದು ವಿಶ್ವಕ್ಕೆ ತೋರಿಸಿದ್ದು ಒಂದು ವಿಸ್ಮಯವೇ ಸರಿ. ಸ್ವದೇಶಿ ಚಳುವಳಿಯನ್ನು ಕೈಗೆತ್ತಿಕೊಂಡ ಗಾಂಧಿ ಸ್ವಾವಲಂಬನೆಗೆ ಒತ್ತು ಕೊಟ್ಟು ಬಂಡವಾಳಶಾಹಿಗಳನ್ನು ಅಹಿಂಸೆಯ ಮೂಲಕವೇ ಮಣಿಸಲೆತ್ನಿಸಿದವರು.

''ಖಾದಿ'ಯನ್ನು ಕೈಗೆತ್ತಿಕೊಂಡ ಗಾಂಧಿ ತನ್ಮೂಲಕ ಲಕ್ಷಾಂತರ ಗ್ರಾಮೀಣ ಜನರಿಗೆ ಉದ್ಯೋಗ ದೊರಕಲು ಕಾರಣರಾದವರು. ಭಾರತದ ಎಲ್ಲಾ ಖಾಸಗಿ ಬಟ್ಟೆ ಮಿಲ್ಲುಗಳು ಇದರ ಅರ್ಧದಷ್ಟಾದರೂ ಉದ್ಯೋಗ ನೀಡಲು ಸಫಲರಾಗಿಲ್ಲ ಎಂದರೆ ''ಖಾದಿ''ಯ ಮಹತ್ವ ಅರಿವಾದೀತು.

"My life is my message" ಎಂದು ಧೈರ್ಯವಾಗಿಯೇ ಘೋಷಿಸಿದ ಗಾಂಧಿ ತಮ್ಮ ಬದುಕನ್ನು ಪಾರದರ್ಶಕವಾಗಿಯೇ ಇಟ್ಟವರು. ಯಾವುದೇ ಪ್ರಯೋಗವನ್ನಾದರೂ ಮೊದಲು ತಮ್ಮ ಮೇಲೆಯೇ ಪ್ರಯೋಗಿಸಿಕೊಂಡು ನಂತರವಷ್ಟೇ ಜನರಿಗೆ ಬೋಧಿಸುತ್ತಿದ್ದರಿಂದ ಜನರೂ ಸಕಾರಾತ್ಮಕವಾಗಿಯೇ ಪ್ರತಿಕ್ರಿಯಿಸುತ್ತಿದ್ದರು. ಅಮೆರಿಕಾ ಮತ್ತು ಯುರೋಪನ್ನು ಕಾಡಿದ ಕರಿಯರ ಸಮಸ್ಯೆ (Aparthid) ಯಷ್ಟೇ ಭಾರತಕ್ಕೆ ಕಾಡಿದ ಅಸ್ಪೃಶ್ಯತೆ (Untouchability) ಗೆ ಚಿಕಿತ್ಸೆ ನೀಡಲು ಯತ್ನಿಸಿದವರಲ್ಲಿ ಗಾಂಧೀಜಿ ಎದ್ದು ಕಾಣುತ್ತಾರೆ. ನನ್ನ ಜನರಿಗೆ ಸರಿಯಾದ ಬಟ್ಟೆಯಿಲ್ಲ. ನಾನೇಕೆ ಕೋಟು-ಸೂಟು-ಬೂಟ್‌ನಲ್ಲಿ ಇರಬೇಕು...? ಎಂದು ತಮ್ಮನ್ನೇ ಪ್ರಶ್ನಿಸಿಕೊಂಡ ಗಾಂಧಿ ತೊಟ್ಟದ್ದು ಎರಡು ತುಂಡು ಬಟ್ಟೆಗಳನ್ನಷ್ಟೆ! ಪಾಲಿಸಿದ್ದು ಮಿತಾಹಾರ ಮಾತ್ರ!!



ಆದ್ದರಿಂದಲೇ ಗಾಂಧೀಜಿ ಈ ಶತಮಾನದ ವ್ಯಕ್ತಿಯಷ್ಟೇ ಅಲ್ಲ, ಈ ಶತಮಾನವನ್ನು ಮೀರಿ ಬೆಳೆದ ವ್ಯಕ್ತಿ!

**ಲೀಲಾಧರ ಮಾ. ಭಂಡಾರಿ**
ರುಕ್ಮಾಪುರ.

## ಶತಮಾನದ ಸಂತ ಗಾಂಧೀಜಿ

ಗಾಂಧೀ ಎಂಬ ಹೆಸರು ಕೇಳಿದ ಕೂಡಲೇ ನಮ್ಮ ಕಣ್ಣೆದುರಿಗೆ ದರ್ಶನವಾಗುವುದು ಸತ್ಯ-ಶಾಂತಿ-ಅಹಿಂಸೆ. ಜೀವನದ ಬಹುತೇಕ ದ್ವಂದ್ವಗಳನ್ನೇ ಒಡಲಾಳದೊಳಗಿಟ್ಟುಕೊಂಡ ಈ ಶತಕದ ಸಂತನ ಜೀವನವೇ ನಮಗೆಲ್ಲರಿಗೂ ಒಂದು ದೊಡ್ಡ ಸಂದೇಶವಾಗಿದೆ.

ಭಾರತದ ಫಕೀರನೆಂದು ಬ್ರಿಟಿಷರಿಂದ ಕರೆಸಿಕೊಂಡ ಈ ಸಾಮಾನ್ಯ ಮೋಹನದಾಸ ಮುಂದೆ ಮಹಾತ್ಮನಾದದ್ದೇ ಬಹುದೊಡ್ಡ ಮೌಲ್ಯಯುತ ಆದರ್ಶ. ಇತಿಹಾಸಕಾರ ಟಾಯ್ನಬಿ ಹೇಳುವಂತೆ 'ಗಾಂಧೀಜಿಯ ಪರಿಚಯ ಹಿಟ್ಲರ್-ಸ್ಟಾಲಿನ್‌ರ ಜೊತೆಯಲ್ಲಿ ಆಗಿದೆ! ನಮ್ಮ ಇತಿಹಾಸ ಪರಂಪರೆಯಲ್ಲಿ ಅನೇಕ ಅರಸರು ಆಗಿಹೋಗಿದ್ದಾರೆ. ಆದರೆ ಇಡೀ ಮನುಕುಲದ ಮನವನ್ನೇ ಹಿಡಿದಿಟ್ಟ ಗಾಂಧೀಜಿಯಂತವರು ಯಾರಿದ್ದಾರೆ? ಗಾಂಧಿ ದೊಡ್ಡವರಾದದ್ದು ಸ್ವಾತಂತ್ರ್ಯದಿಂದಲ್ಲ; ಅವರ ಅಹಿಂಸಾ ತತ್ವದಿಂದ. ಗಾಂಧೀಜಿಯ ಜೀವನವೇ ಒಂದು ತತ್ವ. ಖ್ಯಾತ ನಾಟಕರಾರ ಬರ್ನಾಡ್ ಷಾ ಹೇಳುವಂತೆ 'ಗಾಂಧೀಜಿ ವ್ಯಕ್ತಿಯಲ್ಲ, ಅದೊಂದು ದೊಡ್ಡ ತತ್ವ'.

ಬರೀ ಪುಸ್ತಕಗಳಲ್ಲಿಯೇ ಬಂಧಿಯಾಗಿದ್ದ ಅಹಿಂಸಾ ತತ್ವಕ್ಕೆ ಜೀವಂತಿಕೆ ತುಂಬಿದ ಈ ಮಾಂತ್ರಿಕ ಇಡೀ ಜಗತ್ತೇ ಭಾರತದತ್ತ ನೋಡುವಂತೆ ಮಾಡಿದ; ಹಾಗೆಯೇ ಒಬ್ಬ ಮನುಷ್ಯ ಹೀಗಿರಲೂ ಸಾಧ್ಯವೇ? ಎಂದು ಆಶ್ಚರ್ಯ ಚಕಿತವಾಗುವಂತೆ ಮಾಡಿದರು.

ಇಡೀ ಜೀವನಕ್ಕೆ ಒಂದು ವಿಶಿಷ್ಟ ಅರ್ಥ ತುಂಬಿದ ಈ ವ್ಯಕ್ತಿ; ಅಂಬೇಡ್ಕರ್‌ರ ದೃಷ್ಟಿಯಲ್ಲಿ ಅವರ ನಿಜವೈರಿ ಎನಿಸಿದರೂ ಅವರು ಹೇಳಿದ 'ನಯ ವಂಚಕರಂತೂ' ಅಲ್ಲ;

ಗಾಂಧೀಜಿಯ ಬಗ್ಗೆ ಏನೇ ವಿರೋಧಾಭಾಸಗಳಿದ್ದರೂ ಪರಿಪೂರ್ಣ ಮಾನವತ್ವದ, ಅಪ್ಪಟ ಮಹಾಮಾನವತಾವಾದಿಯಾಗಿದ್ದ ಗಾಂಧೀಜಿಯಂಥವರು ಈ ಶತಮಾನದ ವ್ಯಕ್ತಿ ಎಂದು ಹೇಳದೆ ಮತ್ತಾರಿಗೆ ಹೇಳಲು ಸಾಧ್ಯವಿದೆ?

ನಾಹೀರಾ
ಗಾಣದಾಳ

## ಮಾನವತಾವಾದಿ ಮೂರ್ತಿರಾವ್

''ಸ್ವರ್ಗ ನರಕಗಳಲ್ಲಿ ನನಗೆ ನಂಬಿಕೆಯಿಲ್ಲವಾದ್ದರಿಂದ ಸ್ವರ್ಗದ ಹಂಬಲವೂ ಇಲ್ಲ, ನರಕದ ಭಯವೂ ಇಲ್ಲ'' ಎಂದು ಹೇಳಿದವರು ನೂರು ವರ್ಷ ತುಂಬಿದ ಚಿಂತನಾಶೀಲ ಬರಹಗಾರ ಹಾಗೂ ಮಾನವತಾವಾದಿ, ಅಕ್ಕಿ ಹೆಬ್ಬಾಳು ನರಸಿಂಹಮೂರ್ತಿರಾಯರು (ಎ.ಎನ್.ಮೂರ್ತಿರಾವ್). ಅರ್ಥಪೂರ್ಣವಾಗಿ ಬರೆದ ಇವರ ಲೇಖನಗಳು ಎಲ್ಲರಿಗೂ ಹಿತವೆನಿಸುವಂತಿವೆ. ರಾಯರ ಭಾಷೆಯಲ್ಲಿ ಸಂಗೀತದ ಸ್ಥಾಯಿ ಮತ್ತು ಸಂಚಾರಿ ಭಾವದ ಅನುಭವಗಳು ಅನುಭವಿಸುವಂತದ್ದಾಗಿವೆ. ಅವರ ಹೇಳಿಕೆಯಂತೆ, ''ಸಾಹಿತ್ಯ-ಸಂಗೀತಗಳಿಂದ ನಮಗೆ ದೊರೆಯುವ ಆನಂದ ಇಡೀ ವಿಶ್ವದ ಆನಂದವಾಗುತ್ತದೆ'' ಇದು ನೂರಕ್ಕೆ ನೂರು ಸತ್ಯವೆಂದು ತಿಳಿಸಿದ್ದಾರೆ. ಇದಕ್ಕೆ ನಾವು ಆಲಿಸಲೇಬೇಕು.

ಬಾಲ್ಯದಲ್ಲಿ ವೀಣೆ ಶೇಷಣ್ಣ, ಸುಬ್ಬಣ್ಣ, ರಾಳ್ಲಪಳ್ಳಿ, ಚೌಡಯ್ಯ ಹಾಗೂ ವಾಸುದೇವಾಚಾರ್ಯರಂತಹ ಮೇಧಾವಿಗಳ ಜೊತೆ ಗೆಳೆತನ ಪಡೆದ ಪುಣ್ಯಮೂರ್ತಿಗಳು. 'ನನಗೆ ಐವತ್ತು ವರ್ಷಗಳಿಂದ ಸಿಟ್ಟೇ ಬಂದಿಲ್ಲ' ಎಂದು ತಾವೇ ಹೇಳಿಕೊಂಡಿದ್ದಾರೆ. ಬಹುಶಃ ಇದೇ ಇವರ ದೀರ್ಘಾಯುಷ್ಯದ ಗುಟ್ಟಿರಬಹುದು. ಇವರ ಆತ್ಮಕಥೆಯಾದ 'ಸಂಜೆ ಗಣ್ಣಿನ ಹಿನ್ನೋಟ'ದಲ್ಲಿ ಹೀಗೆ ಹೇಳುತ್ತಾರೆ ''ನಾನು ಬರೆಯುತ್ತಿರುವುದು ಯಾವ ವರ್ಗದವನಾಗಿಯೂ ಅಲ್ಲ; ಯಾವ ಜಾತಿಯವನಾಗಿಯೂ ಅಲ್ಲ - ಕೇವಲ ಮಾನವನಾಗಿ'' ಈ ಮಾನವತಾವಾದಿಗೆ ಆಯುರಾರೋಗ್ಯ ಹೆಚ್ಚಲಿ ಎಂದು ಭಗವಂತನಲ್ಲಿ ಬೇಡೋಣ ಹಾಗೂ ಇನ್ನೂ ಹೆಚ್ಚು ಹೆಚ್ಚು ಸೃಜನಶೀಲ ಬರವಣಿಗೆಗಳನ್ನು ನಮಗೆ ನೀಡಬೇಕೆಂದು ರಾಯರನ್ನು ಬೇಡೋಣ.



**ಡಬ್ಲ್ಯು. ಬಸವರಾಜ್**
ಕಂಪ್ಲಿ.

## ಅರ್ಥಪೂರ್ಣ ಬದುಕಿನ ಕಾರಂತರು

ಈ ಶತಮಾನ ಕಂಡ ಅದ್ಭುತ, ಹಿರಿಯ ಚೇತನ ಡಾ. ಕೆ.ಶಿವರಾಮ ಕಾರಂತರು. ಅವರು ಬರೀ ಒಬ್ಬ ವ್ಯಕ್ತಿಯಲ್ಲ; ಒಂದು ಶಕ್ತಿ. ಅವರ ಕಾರ್ಯ ಕ್ಷೇತ್ರದ ವ್ಯಾಪ್ತಿ ತುಂಬಾ ವಿಶಾಲವಾದುದು. ವಿದ್ಯಾರ್ಥಿ ದೆಸೆಯಲ್ಲಿಯೇ ಗಾಂಧೀಜಿಯವರ ಕರೆಗೆ ಓಗೊಟ್ಟು ಶಾಲಾ-ಕಾಲೇಜನ್ನು ತ್ಯಜಿಸಿ, ಸ್ವಾತಂತ್ರ್ಯಾ ನಂತರದಲ್ಲೂ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಕನ್ನಡ ಸಾರಸ್ವತ ಲೋಕಕ್ಕಂತೂ ಅವರ ಕೊಡುಗೆ ಅಪಾರ, ಅನುಪಮೇಯವಾದದ್ದು, ಭಾರತೀಯ ಸಾಹಿತ್ಯ ಕ್ಷೇತ್ರದ ಸರ್ವಶ್ರೇಷ್ಠ ಜ್ಞಾನಪೀಠ ಪ್ರಶಸ್ತಿಯನ್ನು ಕನ್ನಡಕ್ಕೆ ತಂದುಕೊಟ್ಟು ಕನ್ನಡ ಸಾಹಿತ್ಯದ ಪ್ರತಿಷ್ಠೆಯನ್ನು ಮೆರೆದರು. ಕನ್ನಡಿಗರಿಗೆ, ಕನ್ನಡದಲ್ಲಿಯೇ ವಿಜ್ಞಾನ ಸಾಹಿತ್ಯದ ರಸದೌತಣವನ್ನು ಉಣಬಡಿಸಿದ ಶ್ರೇಯಸ್ಸು ಅವರದು. ಪ್ರಾದೇಶಿಕ ಜಾನಪದ ಕಲೆಯಾದ ಯಕ್ಷಗಾನವನ್ನು ಅಂತಾರಾಷ್ಟ್ರೀಯ ಮಟ್ಟಕ್ಕೆ ಏರಿಸಿದ ಕೀರ್ತಿ ಅವರದು. ಹೀಗೆ ಸ್ವಾತಂತ್ರ್ಯ ಹೋರಾಟದಿಂದ ಮೊದಲುಗೊಂಡು, ಕಲೆ, ಸಾಹಿತ್ಯ, ವಿಜ್ಞಾನ, ಸಂಸ್ಕೃತಿ, ಪರಿಸರ - ಹೀಗೆ ಹತ್ತು ಹಲವು ಕ್ಷೇತ್ರಗಳಿಗೆ ಅಮೋಘ ಕೊಡುಗೆಯನ್ನಿತ್ತ ಕಾರಂತರು ನಿಜವಾಗಿಯೂ

ಚಲಿಸುವ ವಿಶ್ವಕೋಶವಾಗಿದ್ದರು. ಸುಮಾರು 96 ವರ್ಷಗಳ ಸುದೀರ್ಘ ಮತ್ತು ಅರ್ಥಪೂರ್ಣವಾದ ಬದುಕನ್ನು ಸಾಗಿಸುವ ಮೂಲಕ ವಿಭಿನ್ನ, ವಿಶಿಷ್ಟ, ಮೇರು ವ್ಯಕ್ತಿತ್ವವನ್ನು ಹೊಂದಿದ 'ಕಡಲ ತೀರದ ಭಾರ್ಗವ' ಡಾ॥ ಕೆ.ಶಿವರಾಮ ಕಾರಂತರು ಈ ಶತಮಾನದ ವ್ಯಕ್ತಿಯಾಗಿದ್ದಾರೆ.

**ಶಂಕರಗೌಡ ವೈ. ಪಾಟೀಲ**
ಬಾದಾಮಿ.

## ಸ್ವಾತಂತ್ರ್ಯ ಪ್ರೇಮಿ ಬೋಸ್

ದಾಸ್ಯದಲ್ಲಿನ ಭಾರತೀಯ ಜನತೆಗೆ ''ಭಾರತ ವೀರರೇ ಏಳಿರಿ, ನೀವು ನನಗೆ ರಕ್ತ ಕೊಡಿರಿ ನಾನು ನಿಮಗೆ ಸ್ವಾತಂತ್ರ್ಯ ಕೊಡಿಸುತ್ತೇನೆ'' ಎಂದು ಮೈನವಿರೇಳಿಸುವ ಕರೆ ನೀಡಿದ ನೇತಾಜಿ ಸುಭಾಷ್ ಚಂದ್ರ ಭೋಸ್ ಅವರು ಈ ಶತಮಾನದ ಶ್ರೇಷ್ಠ ವ್ಯಕ್ತಿಯಾಗಿದ್ದಾರೆ.

ಕಲಿಕೆಯ ಆರಂಭದಲ್ಲಿಯೇ ಭಾರತೀಯ ಸಂಸ್ಕೃತಿಯ ಕುರಿತು ಲಘುವಾಗಿ ಮಾತನಾಡಿದ ಅಧ್ಯಾಪಕರನ್ನೇ ಥಳಿಸಿದ ನೇತಾಜಿಯವರ ದೇಶಪ್ರೇಮ ಮೆಚ್ಚುವಂಥದ್ದು. ಬ್ರಿಟಿಷರ ದಾಸ್ಯತ್ವವನ್ನು ವಿರೋಧಿಸಿ ಅತ್ಯುನ್ನತ ಐಸಿಎಸ್ ಹುದ್ದೆಯನ್ನು ತಿರಸ್ಕರಿಸಿ, ಭಾರತ ಮಾತೆಯ ಬಿಡುಗಡೆಗಾಗಿ ಹಗಲಿರುಳು ಶ್ರಮಿಸಿದ ಅವರ ಕಾರ್ಯಗಳು ಸ್ತುತ್ಯಾರ್ಹ, ಕ್ರಾಂತಿಕಾರಿಯಾಗಿ ಚಳುವಳಿ ಮಾಡುತ್ತಿದ್ದ ಸುಭಾಷ್‌ರನ್ನು ಕೆಂಪು ಮೋತಿಯರು ಗೃಹಬಂಧನದಲ್ಲಿಟ್ಟರೂ ಅವರ ಸರ್ಪಕಾವಲನ್ನು ಭೇದಿಸಿ ವೇಷ ಮರೆಸಿಕೊಂಡು ಜರ್ಮನಿಗೆ ತಲುಪಿದ ಅವರ ವೀರಗಾಥೆ ಅಬಾಲ ವೃದ್ಧರಿಗೂ ರೋಮಾಂಚನಕಾರಿಯಾಗಿದೆ.

ರಂಗೂನಿನಲ್ಲಿ ಐಎನ್ಎ (ಇಂಡಿಯನ್ ನ್ಯಾಷನಲ್ ಆರ್ಮಿ) ಎಂಬ ಸೈನ್ಯವನ್ನು ಕಟ್ಟಿ ''ಚಲೋ ದಿಲ್ಲಿ'' ಎಂಬ ವೀರ ಸಂದೇಶ ನೀಡಿ ಅಸಂಖ್ಯಾತ ಭಾರತೀಯ ತರುಣರಲ್ಲಿ ಹೊಸ ಚೈತನ್ಯದ ಹೊಳೆಯನ್ನೇ ಹರಿಸಿದ ನೇತಾಜಿಯವರು ಭಾರತಾಂಬೆಯ ವಿಮೋಚನೆಗಾಗಿ ಕೆಲಸ ಮಾಡಿದ ವೈಖರಿಯು ಸರ್ವರಿಗೂ ಅನುಕರಣೀಯ.

''ಜೈಹಿಂದ್'' ಎಂಬ ದಿವ್ಯಮಂತ್ರವನ್ನು ಘೋಷಿಸಿ, ಸಾಹಸವೇ ಮಾನವ ರೂಪದಲ್ಲಿ ಬಂದಂತೆ ಇದ್ದ ನೇತಾಜಿಯವರು ಉತ್ತಮ ತೀವ್ರ ಗಾಮಿಗಳಾಗಿದ್ದರು. ಸಣ್ಣತನವೆಂಬುದು ಅವರ ಬಳಿ ಕೊಂಚವೂ ಸುಳಿಯುತ್ತಿರಲಿಲ್ಲ. ಇಂತಹ ಭಾರತೀಯ ವೀರಪುತ್ರರು ನಮ್ಮೆಲ್ಲರಿಂದ ಅನುಮಾನಾಸ್ಪದವಾಗಿ ಕಾಣೆಯಾಗಿರುವುದು ನಮ್ಮ ದುರದೃಷ್ಟಕರ. ನಾವೆಲ್ಲರೂ ಇಂದು ನೇತಾಜಿಯವರ ತ್ಯಾಗ-ಬಲಿದಾನಗಳನ್ನು ಸ್ಮರಿಸಿ, ಅವುಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾಗಿದೆ.

**ಶ್ರೀಶೈಲ ಮಲ್ಲಪ್ಪ ಮುದ್ದೇಬಿಹಾಳ**
ಮುದ್ದೇಬಿಹಾಳ

## ಮಮತಾಮೂರ್ತಿ ಮದರ್ ತೆರೇಸಾ

ದೇವರು ಎಲ್ಲ ಕಾಲದಲ್ಲೂ ಎಲ್ಲ ಕಡೆಗಳಲ್ಲೂ ಇರುವುದಕ್ಕೆ ತನಗೆ ಸಾಧ್ಯವಾಗದೇ ಇರುವುದರಿಂದ ತನ್ನ ಪ್ರತಿನಿಧಿಗಳಾಗಿ ತಾಯಂದಿರನ್ನು ಸೃಷ್ಟಿಸಿದನಂತೆ. ಅಂತಹ ತಾಯಂದಿರ ಹೃದಯದ ಪ್ರೀತಿ ಘನೀಭವಿಸಿ ಮದರ್ ತೆರೇಸಾ ಅವರ ರೂಪವನ್ನು ತಾಳಿರಬೇಕು. ಸಮಾಜ ಕಡೆಗಣ್ಣಿಂದ ನೋಡುವ ನಿರ್ಗತಿಕರಿಗೆ, ಅನಾಥರಿಗೆ, ಕುಷ್ಠರೋಗಿಗಳಿಗೆ, ನಿರಾಶ್ರಿತರಿಗೆ, ಮರಣಾಸನ್ನರಿಗೆ, ಏಡ್ಸ್‌ರೋಗಿಗಳಿಗೆ ಇವರದು ತುಟಿಯ ಮೇಲಿನ ಅನುಕಂಪದ ನುಡಿಯಲ್ಲ, ಹೃದಯದಾಳದ ಸೇವೆಯ ಸೆಲೆ. ನೋವು ಮರೆಸುವ ನೆಮ್ಮದಿಯ ನೆಲೆ. ಅಂತಹವರ ಬಳಿಗೆ ಹೋಗಿ ಅವರನ್ನು ಸಂತೈಸಿ ಆರೈಕೆ ಮಾಡಿದ ತೆರೇಸಾ ಮಹಾನ್ ಮಾತೆಯೇ ಸರಿ. ಅವರು ಜಾತಿ, ಮತ, ಧರ್ಮ, ರಾಷ್ಟ್ರ, ಭಾಷೆಗಳನ್ನು ಮೀರಿ ದೀನರ ಸೇವಾದೀಕ್ಷೆಯ ಪಣತೊಟ್ಟವರು. ವಿಶ್ವದೆಲ್ಲೆಡೆ ಮಾನವೀಯ ಪ್ರೇಮವನ್ನು ಚೆಲ್ಲಿ, ಸಹೋದರ-ಸಹೋದರಿಯರನ್ನು ಒಗ್ಗೂಡಿಸಿ, ಸಾವಿರಾರು ಸೇವಾಸಂಸ್ಥೆಗಳನ್ನು ಆರಂಭಿಸಿದ ಕೀರ್ತಿ ಇವರದು. 'ಪದ್ಮಶ್ರೀ', 'ಭಾರತರತ್ನ' ಮತ್ತು 'ನೊಬೆಲ್ ಶಾಂತಿ ಪ್ರಶಸ್ತಿ' ಪಡೆದ ಶಾಂತಿದೂತೆ ಇವರು. ಸೌಜನ್ಯ ಸರಳತೆಯ ಪ್ರತಿಮೂರ್ತಿಯವರು. ''ದೀನದಲಿತರ ಸೇವೆಯೇ ದೇವರ ಸೇವೆ'' ಎಂದು ದಾರಿದ್ರ್ಯದಲ್ಲಿ ದೈವತ್ವದ ದರ್ಶನ ಮಾಡಿಸಿ ವಿಶ್ವವಿಖ್ಯಾತರಾದ ಮದರ್ ತೆರೇಸಾ ಖಂಡಿತವಾಗಿಯೂ ಈ ಶತಮಾನದ ವ್ಯಕ್ತಿಯೇ ಸರಿ.



**ಬಿ.ಎಸ್. ಮಂಜುನಾಥ**
ದಾವಣಗೆರೆ.

## ಸ್ಟೇಷನ್ ಮಾಸ್ತರ್

1.8.99ರಂದು ನಡೆದ ಬ್ರಹ್ಮಪುತ್ರ ಮೇಲ್ ಮತ್ತು ಅವಧ್ ಅಸ್ಸಾಂ ಎಕ್ಸ್‌ಪ್ರೆಸ್ ರೈಲುಗಳ ಭೀಕರ ಡಿಕ್ಕಿಗೆ ಮತ್ತು ನೂರಾರು ಜನರ ಸಾವು, ನೋವು, ಗಾಯ ಮತ್ತು ಅಂಗಾಂಗಗಳ ಊನಗಳಿಗೆ ಕಾರಣನಾದ ಸ್ಟೇಷನ್ ಮಾಸ್ಟರ್ ಕಿಶನ್‌ಗಂಜ್ (ಬಿಹಾರ)

**ಎಸ್.ಶ್ರೀನಿವಾಸಲು**
ಬೆಂಗಳೂರು.

## ಕರ್ಮಯೋಗಿ ಮಲ್ಲಾಡಿಹಳ್ಳಿ ಸ್ವಾಮೀಜಿ

ಯೋಗಿಯಾಗಿ, ಗುರುವಾಗಿ, ದಾರ್ಶನಿಕನಾಗಿ, ಧನ್ವಂತರಿಯಾಗಿ, ಕರ್ಮಯೋಗಿಯಾಗಿ, ಸಮರ್ಥಸಂಘಟಕರಾಗಿ, ಸ್ವಾತಂತ್ರ್ಯ ಯೋಧರಾಗಿ, ಅಪ್ಪಟ ದೇಶಪ್ರೇಮಿಯಾಗಿ, ತಿರುಕನಾಗಿ, ಸಾಹಿತಿಯಾಗಿ, ಕವಿಯಾಗಿ, ಯೋಗಪಟುವಾಗಿ,... ಹಲವಾರು ಮುಖ ಹೊಂದಿದ್ದ ಮಲ್ಲಾಡಿಹಳ್ಳಿಯ ಶ್ರೀ ರಾಘವೇಂದ್ರ ಸ್ವಾಮೀಜಿ ಈ ಶತಮಾನದ ವ್ಯಕ್ತಿಯೆಂಬುದರಲ್ಲಿ ಎಳ್ಳಷ್ಟೂ ಅತಿಶಯೋಕ್ತಿ ಇಲ್ಲ. ಹಿಂದುಳಿದ ಹಳ್ಳಿಯನ್ನು ಒಂದು ಮಾದರಿಗ್ರಾಮವಾಗಿ ಮಾಡಿದುದು ಅವರ ಸಾಧನೆಯ ಹೆಗ್ಗುರುತು. ಹಳ್ಳಿಗಳ ಉದ್ಧಾರವಾಗಬೇಕಾದರೆ ಶಿಕ್ಷಣ ನೀಡಬೇಕೆಂಬುದನ್ನು ಮನಗಂಡು, ಸ್ವಾಮೀಜಿ ಹಲವಾರು ವಿದ್ಯಾಸಂಸ್ಥೆಗಳನ್ನು ತೆರೆದು ಅನಾಥ ವಿದ್ಯಾರ್ಥಿಗಳಿಗೆ ವಿದ್ಯೆಯ ಜೊತೆಗೆ ಅನ್ನವನ್ನು ನೀಡಿದರು. ಇದಕ್ಕೆಲ್ಲಾ ಅವರು ನಂಬಿಕೊಂಡದ್ದು ಅವರ ಜೋಳಿಗೆಯೊಂದನ್ನು ಮಾತ್ರ. ಸದಾ ಭಿಕ್ಷೆ ಬೇಡುತ್ತಾ ''ಸೇವೆ' ಎಂಬ ಮಹಾ ಸಂದೇಶದಲ್ಲಿ ನಂಬಿಕೆ ಹೊಂದಿದ್ದರು. ಸುಮಾರು 50 ಎಕರೆ ಭೂಮಿಯಲ್ಲಿ ಮೂರು ಕೋಟಿ ರೂಪಾಯಿಗಳಿಗೂ ವೆಚ್ಚದ ಹೆಚ್ಚಿನ ಶಾಲಾ ಕಾಲೇಜುಗಳು, ಶಿಕ್ಷಕರ ತರಬೇತಿ ಕೇಂದ್ರ, ಆಶ್ರಮ, ಧನ್ವಂತರಿ ಆಸ್ಪತ್ರೆ, ವೃದ್ಧಾಶ್ರಮ, ಮಾತೃಮಂದಿರ, ವಾಚನಾಲಯ, ಮುದ್ರಣಾಲಯ, ಸಾಹಿತ್ಯಮಾಲೆ, ಗಿಡಮೂಲಿಕೆ ವನ, ಅತಿಥಿಗೃಹಗಳು, ಗರಡಿ, ಯೋಗಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ''ತಿರುಕ'' ಎಂಬ ಕಾವ್ಯನಾಮದಿಂದ ಯೋಗ, ಆಯುರ್ವೇದ ಮತ್ತು ಆರೋಗ್ಯ ಕುರಿತ ಕೃತಿಗಳನ್ನು ರಚಿಸಿದ್ದಾರೆ. ಇತರ ಸ್ವಾಮಿಗಳಂತೆ ಅವರೆಂದೂ ತಮ್ಮ ಕಾಲಿಗೆ ಇತರ ಸಹಮಾನವರು ಹಣೆಹಚ್ಚುವುದನ್ನು ಒಪ್ಪಿಕೊಂಡವರಲ್ಲ. ರಾಜಕೀಯಕ್ಕೆ ತಮ್ಮ ಮೂಗು ತೂರಿಸಿದವರಲ್ಲ. ಆಡಂಬರ, ವೈಭವ, ಪ್ರಚಾರಗಳಿಗೆ ಅವರೆಂದೂ ಆಶಿಸಲಿಲ್ಲ. ಪದ್ಮಶ್ರೀ, ಪದ್ಮಭೂಷಣ, ಗೌರವ ಡಾಕ್ಟರೇಟ್, ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಕೊಡಬಯಸಿದ ಪ್ರಶಸ್ತಿಗಳನ್ನು, ಬಿರುದುಗಳನ್ನು ಅವರು ತಿರಸ್ಕರಿಸಿದರು. ಇಷ್ಟೊಂದು ಸಾಧಿಸಿದ ಶ್ರೀ ರಾಘವೇಂದ್ರ ಸ್ವಾಮೀಜಿಯಂತಹ ವ್ಯಕ್ತಿಗಳು ಪ್ರತಿ ಹಳ್ಳಿಯಲ್ಲೂ ಇದ್ದಿದ್ದರೆ ಗಾಂಧೀಜಿ ಕಂಡ ರಾಮರಾಜ್ಯದ ಕನಸು ಎಂದೋ ನನಸಾಗುತ್ತಿತ್ತು.



**ಬಿ. ಶಿವಲಿಂಗಪ್ಪ**
ಗಡೀಹಳ್ಳಿ.

# ಪಾದರಿಯೋರ್ವರನ್ನು ಮಣ್ಣು ಮಾಡಿದ್ದು



**ಎಲ್ಲೋ** ಸತ್ತ ಪಾದರಿಯ ಹೆಣವನ್ನು ಇಲ್ಲಿ ತಂದು ಮಣ್ಣು ಮಾಡಬೇಕೆಂದು ನಿರ್ಧಾರ ಮಾಡಿ ಹೇಳಿದವರು ಯಾರು ಎಂಬುದು ಯಾರಿಗೂ ಗೊತ್ತಿಲ್ಲ. ಆದರೆ ಪಾದರಿಯ ಹೆಣ ಊರಿಗೆ ಬರುತ್ತಿದ್ದಂತೆಯೇ ಇಂತಹ ಒಂದು ಪ್ರಶ್ನೆ ಇಗರ್ಜಿಯ ಸುತ್ತ, ಕೆಳಕೇರಿಯಲ್ಲಿ, ಹೊಳೆ ಆಚೆಗಿನ ಕ್ರಿಸ್ತುವರ ಮನೆಗಳ ಬಳಿ ಕೇಳಿ ಬಂದದ್ದು ಸುಳ್ಳಲ್ಲ. ಪಾದರಿ ಡಿಕಾಸ್ಟ ಈ ಊರಿನಲ್ಲಿ ಹದಿನೈದು ವರ್ಷ ಇದ್ದವರು. ಈ ಊರಿನಲ್ಲಿ ಈಗ ಇರುವ ಇಗರ್ಜಿಯನ್ನು ಕಟ್ಟಿಸಿದವರು ಇವರೇ. ಈ ಊರಿಗೆ ಸಿಸ್ಟರುಗಳು ಬರಲು, ಅವರದೊಂದು ಶಾಲೆ ಇಲ್ಲಿ ಆಗಲು ಕಾರಣರು ಕೂಡ ಅವರೇನೆ. ಹೀಗೆಂದು ಸೈದೂರಿನಲ್ಲಿ ಸತ್ತ ಅವರ ಶವವನ್ನು ಇಲ್ಲಿಗೆ ಹೊತ್ತು ತರುವುದೆಂದರೇನು? ಏನು ಅಲ್ಲಿ ಅವರನ್ನು ಹುಗಿಯಲು ಸ್ಥಳ ಇಲ್ಲವೆ? ಅಥವ ಆ ಊರಿನ ಜನರಿಗೆ ಮನಸ್ಸಿಲ್ಲವೆ? ದೇವರ ಮಣಿಯಾರಿ, ಏಸು ಕ್ರಿಸ್ತನ ಪ್ರತಿನಿಧಿ, ಸಮಸ್ತ ಕ್ರಿಸ್ತುವರ ಅಧ್ಯಾತ್ಮದ ಮಾರ್ಗದರ್ಶಕರಾದ ಓರ್ವ ಪಾದರಿಯನ್ನು ತಮ್ಮೂರಿನ ಸಿಮಿಟ್ರಿಯಲ್ಲಿ ಮಣ್ಣು ಮಾಡದೆ ಬೇರೊಂದು ಊರಿಗೆ ಸಾಗ ಹಾಕಲು ಆ ಊರಿನ ಜನ ಹೇಗೆ ಒಡಂಬಡ್ಡರು? ಹೀಗೆಲ್ಲ ಮಾತನಾಡಿಕೊಳ್ಳುತ್ತಿರುವಾಗಲೇ ಇಗರ್ಜಿಯ ಗಂಟೆ ಗೋಪುರದ ಮರದ ಕಿಟಕಿ ಯೊಳಗಿನಿಂದ ಗಂಟೆಯ ಸದ್ದು ಹೊರ ಬಿದ್ದಿತು. ಅಂತೋನಿ ಡ್ರೈವರನ ಫಾತಿಮಾ ಟ್ರಾನ್ಸ್‌ಪೋರ್ಟ್ ಎಂಬ ಲಾರಿಯಲ್ಲಿ ಪಾದರಿ ಡಿಕಾಸ್ಟರ ಶವ ಬಂದೇ ಬಿಟ್ಟಿತು.

ಸೈದೂರಿನವರು ಅಷ್ಟೇನೂ ಕ್ರೂರಿಗಳಾಗಿರಲಿಲ್ಲ. ಏಕೆಂದರೆ ಅವರು ಪಾದರಿ ಡಿಕಾಸ್ಟರ ಶವಕ್ಕೆ ಸ್ನಾನ ಮಾಡಿಸಿ, ಬಿಳಿ ಉಡಿಗೆ ತೊಡಿಸಿ, ಮುಗಿದ ಕೈಗೆ ಶಿಲುಬೆ ನೀಡಿ, ಕುತ್ತಿಗೆಗೆ ಜಪ ಸರ ತೊಡಿಸಿ, ಕಾಲು ಕೈಗಳಿಗೆ ಬಿಳಿಯ ಕಾಲು ಚೀಲ, ಕೈಗವಸಣಿಗೆ ಹಾಕಿ, ಮಜಬೂತಾದ ಒಂದು ಶವ



ಪೆಟ್ಟಿಗೆಯನ್ನು ಅಷ್ಟೇ ಸುಂದರವಾದ ಮುಚ್ಚಳವನ್ನು ಮಾಡಿಸಿ, ಶವವನ್ನು ಪೆಟ್ಟಿಗೆಯಲ್ಲಿ ಮಲಗಿಸಿ ಮೇಲೆ ಪುಷ್ಪಗುಚ್ಛಗಳನ್ನಿರಿಸಿ ಕಳುಹಿಸಿದ್ದರು. ಜೊತೆಗೆ ಒಂದು ಯುವಕ ಯುವತಿಯರ ತಂಡ ಉದ್ದಕ್ಕೂ ಪ್ರಾರ್ಥನೆ ಸಲ್ಲಿಸುತ್ತ ಬಂದಿತು. ಜೊತೆಗೆ ಹಿರಿಯನಾಗಿ ಸೈದೂರಿನ ಮಿರೋಣ್ ಇದ್ದ. ತಲೆಯ ಬಳಿ ಅಡಿ ಎತ್ತರದ ಶಿಲುಬೆ. ಅದರ ಮುಂದೆ ಸಾಲು ಮೇಣದ ಬತ್ತಿಗಳು, ಧೂತದ ಕರಂಡಕ ಎಂದೆಲ್ಲ ಇರಿಸಿದ್ದರು. ಸೈದೂರಿನ ಪಾದರಿ ತಾನು ಮೋಟಾರ ಬೈಕಿನಲ್ಲಿ ಬರುವುದಾಗಿ ಹೇಳಿ, ಲಾರಿಯನ್ನು ಮುಂಚಿತವಾಗಿ ಕಳುಹಿಸಿದ್ದ. ಈ ಊರಿನವರ ಪಾಲಿಗೆ ಉಳಿದ ಕೆಲಸವೆಂದರೆ ಪಾದರಿ ಡಿಕಾಸ್ಟರ ಶವವನ್ನು ಗೌರವದಿಂದ ಮಣ್ಣುಮಾಡುವುದಷ್ಟೆ.

ಈ ಊರಿನ ಜನರಲ್ಲಿ ಕೂಡ ಈ ಬಗ್ಗೆ ಯಾವ ತಕರಾರೂ ಇರಲಿಲ್ಲ. ಪಾದರಿ ಎಂದರೆ ದೇವರ ಸಮಾನ. ಆತನ ಶವ ಸಂಸ್ಕಾರ ಮಾಡುವುದು ಕೂಡ ಒಂದು ದೇವರ ಸೇವೆಯೆ. ಪವಿತ್ರವಾದ ಕೆಲಸವೆ. ಹೀಗೆಂದೇ ಜನ ಲಾರಿ ಬರುವ ಮುನ್ನವೇ ಇಗರ್ಜಿಯ ಮುಂದೆ ನೆರೆದಿದ್ದರು. ಸಿಮಿಟ್ರಿಯ ಪ್ರಮುಖ ಭಾಗದಲ್ಲಿ ಹೊಂಡ ತೋಡಲು ಆಗಲೇ ಮೇಸ್ತ್ರಿ ಕೈತಾನ ತನ್ನ ಆಳುಗಳನ್ನು ಬಿಟ್ಟಿದ್ದ. ಸಂಜೆ ನಾಲ್ಕು ಗಂಟೆಗೆ ಪೂಜೆ ನಂತರ ಮಣ್ಣಿಗೆ ತಲುಪಿಸುವುದು ಎಂದು ಚಾಮಾದೋರ ಮನೆ ಮನೆಗೆ ಹೇಳಲು ಹೋಗಿದ್ದ. ಊರಿನ ಕ್ರಿಸ್ತುವರೆಲ್ಲ ಈ ಕೆಲಸ ಮಾಡಿ ಮುಗಿಸಲು ನೊಂದ ಮನಸ್ಸಿನಿಂದ ಸಿದ್ಧವಾಗತೊಡಗಿದ್ದರು.

ಆದರೆ ಇವರ್ಯಾರಿಗೂ ಒಂದು ಪ್ರಶ್ನೆಗೆ ಉತ್ತರ ಸಿಗಲಿಲ್ಲ. ಪಾದರಿ ಡಿಕಾಸ್ಟರ ಶವವನ್ನು ಸಂಸ್ಕಾರ ಮಾಡಲು ಈ ಊರಿಗೆ ತರಬೇಕು ಎಂಬ ವಿಚಾರ ಯಾರ ತಲೆಯಲ್ಲಿ ಹುಟ್ಟಿದ್ದು? ಇದಕ್ಕೆಲ್ಲ ವ್ಯವಸ್ಥೆ ಮಾಡಿದವರು ಯಾರು?

ಇಗರ್ಜಿ ವಾಡೆಯ ಗುರ್ಕಾರ ಕಚ್ಚೆ ಪಂಚೆ ಉಟ್ಟು ಮೇಲೊಂದು ಪೈರಾಣ ಅದರ ಮೇಲೆ ನೀಲಿ ಬಣ್ಣದ ತನ್ನ ಕೋಟುಧರಿಸಿ ಕೋಲು

ಊರಿಕೊಂಡು ಹೊಳೆ ಆಚೆಗಿನ ಗುರ್ಕಾರನ ಮನೆಗೆಂದು ಹೊರಟಾಗ ಕೆಳಕೇರಿಯ ಗುರ್ಕಾರ ನಡುವೆಯೇ ಇವನಿಗೆ ಭೇಟಿಯಾದ.

ಲಾಗಾಯ್ತಿನಿಂದ ಎಲ್ಲ ಜನ ನಂಬಿಕೊಂಡು ಬಂದಂತೆ ಇಗರ್ಜಿವಾಡೆಯ ಗುರ್ಕಾರನಿಗೆ, ಹೆಚ್ಚು ಅಧಿಕಾರ. ಏಕೆಂದರೆ ಈತ ಇಗರ್ಜಿಗೆ ಹತ್ತಿರಲ್ಲಿರುವಾತ. ಇವನ ವಾಡೆಯಲ್ಲಿ ನೂರಾ ಐವತ್ತು ಮನೆಗಳಿವೆ. ಊರಿನಲ್ಲಿ ಗುರ್ಕಾರ ಅಧಿಕಾರವನ್ನು ಚಲಾಯಿಸುತ್ತ ಬಂದ ಮನೆತನಗಳಲ್ಲಿ ಇದು ಹಳೆಯದು. ಹೊಳೆಯಾಚೆಯ ಗುರ್ಕಾರ ಅನಂತರ ಬರುತ್ತಾನೆ. ಕೆಳಕೇರಿಯವನು ಮೊನ್ನೆ ಮೊನ್ನೆ ನೇಮಕಗೊಂಡವ.



■ ನಾ. ಡಿಸೋಜ

ಊರಿನಲ್ಲಿ ಏನೇ ಆಗಲಿ ಅದು ಮೊದಲು ಇಗರ್ಜಿವಾಡೆ ಗುರ್ಕಾರನಿಗೆ ತಿಳಿಯಬೇಕು. ಅನಂತರ ಪಾದರಿಗೆ, ಇದರ ನಂತರ ಉಳಿದ ಗುರ್ಕಾರರಿಗೆ. ಇದು ನಡೆದುಕೊಂಡು ಬಂದ ಪದ್ಧತಿ.

ಆದರೆ ಈ ಬಾರಿ ಹಾಗಾಗಲಿಲ್ಲ.

ಜಗಲಿ ಮೇಲೆ ಕುಳಿತು ಮೊಮ್ಮಗನ ಕೈಲಿ ಬೆನ್ನು ಕೆರೆಸಿಕೊಳ್ಳುತ್ತಿದ್ದ ಇಗರ್ಜಿವಾಡೆ ಗುರ್ಕಾರ ಮರಣದ ಗಂಟೆ ಕೇಳಿ ಬೆಚ್ಚಿ ಬಿದ್ದ. ಅರೆ! ಯಾರು ಸತ್ತರು ಎಂದು ಎದ್ದು ಹೊರಬಂದ. ಮೊಮ್ಮಗ ಹಿತವಾಗಿ ತನ್ನ ಮೆದು ಉಗುರುಗಳನ್ನು ಬೆನ್ನ ಮೇಲೆ ಆಡಿಸುವಾಗ ಈ ಕೆಲಸಕ್ಕೆ ತಡೆ ಹಾಕಿ ಎದ್ದು ಬರಲು ಅವನಿಗೆ ಮನಸ್ಸಿರಲಿಲ್ಲ. ಆದರೂ ಎದ್ದು ಅಂಗಳಕ್ಕೆ ಇಳಿದ. ಗಂಟೆಯ ಸದ್ದು ಕೇಳಿ ಬರುತ್ತಲೇ ಇತ್ತು. ಆದರೆ ರಸ್ತೆಯ ಮೇಲೆ ಯಾರೂ ಕಂಡು ಬರಲಿಲ್ಲ. ಆ ಈ ಕಡೆ ಮನೆಗಳವರು ಕೂಡ ಅಂಗಳಕ್ಕೆ ಬಂದು -

'ಗುರ್ಕಾರ್ ಮಾಮ... ಕೋಣ ಕೋಣ?'

(ಗುರ್ಕಾರ್ ಮಾಮ ಯಾರು? ಯಾರು?) ಎಂದು ತನ್ನನ್ನೇ, ಕೇಳಿದಾಗ ಅದೊಂದು ರೀತಿಯಲ್ಲಿ ಅವಮಾನವೆನಿಸಿತು. ಗುರ್ಕಾರ ಹೆಗಲ ಮೇಲೆ ಪಂಚೆ ಹಾಕಿಕೊಂಡು ಚಪ್ಪಲಿಗೆ ಕಾಲು ಸಿಕ್ಕಿಸುವಾಗ ಪೆದ್ರು ಮಾಸ್ತರ ರಸ್ತೆಯಲ್ಲಿ ಪ್ರತ್ಯಕ್ಷನಾದ.

'...ಪೆದ್ರು.... ಯಾರು?'

ಎಂದು ಕೇಳಿದ ಗಂಟೆಯ ಸದ್ದನ್ನು ಸೂಚಿಸಿ.

## ವಿಮರ್ಶಕನ ಪರೀಕ್ಷೆ

ತಮ್ಮ ವಿಮರ್ಶಾ ಬರಹಗಳಿಂದ ಪ್ರಬುದ್ಧ ವಿಮರ್ಶಕನೆಂದು ಗುರುತಿಸಿಕೊಂಡಿದ್ದ ಲೇಖಕರೊಬ್ಬರು ಮೈಸೂರಿನಲ್ಲಿ ಗತ್ತಿನಿಂದ ಬೀಗುತ್ತಿದ್ದರು. 'ಯಾವುದು ಒಳ್ಳೆ ಕವಿತೆ ಅಂತ ನಿಖರವಾಗಿ ಗುರುತಿಸಿ ಹೇಳುತ್ತೇನೆ' ಎನ್ನುತ್ತಿದ್ದರು. ಇವರ ಈ ಮಾತು ಕೇಳಿಸಿಕೊಂಡ ಶಂಕರ ಮೊಕಾಶಿ ಅವರು ಕೆಲಸಾಲುಗಳ ಕವಿತೆಯೊಂದನ್ನು ಈ ವಿಮರ್ಶಕರಿಗೆ ತೋರಿಸಿ 'ಇದನ್ನು ಕಾವ್ಯವೆನ್ನಬಹುದೇ?' ಎಂದು ಕೇಳಿದರು. ಓದಿದ ವಿಮರ್ಶಕ ವರೇಣ್ಯರು 'ಏ.... ಇದೆಂಥ ಕವಿತೆ! ಜಾಳು... ಜೊಳ್ಳು' ಎಂದರು. ಕೆಲದಿನ ಬಿಟ್ಟು ಮತ್ತೆ ಶಂಕರ ಮೊಕಾಶಿ ಈ ಸಾಲುಗಳಿಗೆ ಕೊನೆಸಾಲು ಸೇರಿಸಿ "ಇದು ಕಾವ್ಯವೇ?" ಎಂದರು. 'ಓಹ್! ಕಾವ್ಯ ಎಂದರೆ ಇದು! ಎಂಥ ಗಟ್ಟಿತನದ್ದು".... ವಿಮರ್ಶಕ ವರೇಣ್ಯರರು ಉದ್ಗರಿಸಿದರು. ಮೊಕಾಶಿ ಇವರಿಗೆ ಎರಡೂ ಸಲ ಕೊಟ್ಟದ್ದೂ ಅಲ್ಲಮನ ಒಂದು ವಚನ - ಮೊದಲ ಸಲ ಕೊನೆ ಸಾಲು ತೆಗೆದು ಕೊಟ್ಟಿದ್ದರು. ಅಂದಹಾಗೆ ಈ ಸಾಹಿತಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ.

ಗುರ್ಕಾರ ಮಾಮ ನಿಮಗೆ ಗೊತ್ತಿಲ್ವ?

ಎಂದು ಈ ಪೆದ್ರು, ತಲೆ ಹರಟೆಯ ಪ್ರಶ್ನೆ ಕೇಳಿ

ಡಿಕಾಸ್ಟ ಫಾದರ..... ಹೋದರಂತೆ

ಎಂದ.

.....ಹೌದಾ... ಛೆ!

ಎಂದು ತನ್ನ ದೇಹದ ಯಾವುದೋ ಅಂಗ ಕಳಚಿ ಬಿದ್ದಂತೆ ಪೇಚಾಡಿದ ಗುರ್ಕಾರ. ಡಿಕಾಸ್ಟರು ಹಾಸಿಗೆ ಹಿಡಿದಿದ್ದಾರೆ ಎಂಬುದು ಗೊತ್ತಿತ್ತು. ಒಮ್ಮೆ ಹೋಗಬೇಕು, ಮಾತನಾಡಿಸಿಕೊಂಡು ಬರಬೇಕು ಎಂದು ಕೂಡ ವಿಚಾರ ಮಾಡಿದ್ದ ಆತ. ಆದರೆ ಡಿಕಾಸ್ಟ ಇಷ್ಟು ಬೇಗ ಹೋಗುತ್ತಾರೆಂದು ನಿರೀಕ್ಷಿಸಿರಲಿಲ್ಲ. ಈಗ ಅವರ ಮರಣಕ್ಕಾದರೂ ಸೈದೂರಿಗೆ ಹೋಗಬೇಕು ಎಂಬ ವಿಚಾರ ಮನಸ್ಸಿನಲ್ಲಿ ಮೂಡುತ್ತಿರಲು ಪೆದ್ರು ಮಾಸ್ತರ ಮತ್ತೂ ಎಂದ.

'......ಅವರ ಶವಾನ ಇಲ್ಲಿಗೇನೆ ತರತಾರಂತಲ್ಲ...' ಎಂದು ಹೇಳಿ ತನ್ನ ಮನೆಯ ದಾರಿ ಹಿಡಿದ. ಇದೂ ಕೂಡ ಅನುಕೂಲವೇ ಆಯಿತು ಅಂದುಕೊಂಡ ಗುರ್ಕಾರ ಆ ಕ್ಷಣದಲ್ಲಿ. ಪಾದರಿ ಡಿಕಾಸ್ಟ ಈ ಊರಿಗಾಗಿ ತುಂಬಾ ಕೆಲಸ ಮಾಡಿದವರಲ್ಲವೆ? ಅವರಿಗೆ ಮಣ್ಣು ಮಾಡುವ ಕೆಲಸ ಈ ಊರಿನವರಿಗೆ ಒದಗಿ ಬಂದದ್ದು ಸೂಕ್ತವೆ ಎಂದವನು ವಿಚಾರ ಮಾಡಿದ. ಅಂಗಳದಿಂದ ಜಗಲಿಗೆ ಏರಿ ಮತ್ತೆ ಮೊಮ್ಮಗನಿಗೆ ಬೆನ್ನು ಕೊಡಬೇಕೆಂಬ ವಿಚಾರ ಮನಸ್ಸಿನಲ್ಲಿ ಮೂಡುತ್ತಿರಲು ಅವನು ತಟ್ಟನೆ ನಿಂತನು.

ಅಲ್ಲ, ಪಾದರಿ ಡಿಕಾಸ್ಟರ ಶವವನ್ನು ಇಲ್ಲಿಗೆ ತರಬೇಕೆನ್ನುವ ನಿರ್ಧಾರವನ್ನು ಯಾರು ಮಾಡಿದರು?

ಇದು ಊರ ಪಾದರಿಯ ತೀರ್ಮಾನವಾಗಿರಬಹುದೆ? ತನ್ನನ್ನು ಕೇಳದೆ ಉಳಿದ ಗುರ್ಕಾರರ ಅಭಿಪ್ರಾಯ ಪಡೆಯದೆ, ಊರ ಹಿರಿಯರನ್ನು ವಿಚಾರಿಸದೆ ಅವರು ಈ ತೀರ್ಮಾನವನ್ನು ಹೇಗೆ ಕೈಗೊಂಡರು?

ಇದು ಯಾರೊ ಒಬ್ಬರ ಮನೆಯ ವಿಷಯವಲ್ಲ. ಮೊನ್ನೆ ಬೆಂಗಳೂರಿನಲ್ಲಿ ಎರಡು ವರ್ಷಗಳಿಂದ ವಾಸಿಸುತ್ತಿದ್ದ ಮಿರಾಂಡ ಸತ್ತರು. ತನ್ನನ್ನು ಊರಿಗೇ ಕೊಂಡೊಯ್ದು ಮಣ್ಣು ಮಾಡಿ ಎಂದು ಅವರು ಹೇಳಿದ್ದರಂತೆ. ಮಿರಾಂಡರ ಮಕ್ಕಳು ಅವರ ಶವವನ್ನು ಇಲ್ಲಿ ತಂದು ಮಣ್ಣು ಮಾಡಿದರು. ಅವರು ಯಾರಿಗೂ ಕೇಳಲಿಲ್ಲ. ಇಗರ್ಜಿಗೆ ಬಂದು ಪಾದರಿಗೆ ಹೇಳಿದರು. ಮರಣದ ಗಂಟೆಯಾಯಿತು. ಚಮಾದೋರ ಹೇಳಿಕೆ ಮಾಡಿ ಬಂದ. ಪೂಜೆಯಾಯಿತು. ಮಣ್ಣು ಮಾಡಿದ್ದೂ ಆಯಿತು. ಆದರೆ ಇದು ಹಾಗಲ್ಲ. ಇಡೀ ಊರು ಮುಂದೆ ನಿಂತು ಮಾಡಬೇಕಾದ ಕೆಲಸವಿದು. ಪಾದರಿಯೊಬ್ಬರೇ ಹೇಗೆ ತೀರ್ಮಾನ ಕೈಕೊಳ್ಳುತ್ತಾರೆ.

ಗುರ್ಕಾರ ಮತ್ತೆ ಅಂಗಳಕ್ಕೆ ಇಳಿದ. ಅಡ್ಡಗಳದ ಮೇಲಿನ ಪಂಚೆಯನ್ನು ಹೆಗಲ ಮೇಲೆ ಹಾಕಿಕೊಂಡು ಚಪ್ಪಲಿಯ ಬಾರೊಳಗೆ ಕಾಲು ತುರುಕಿ ಅವನು ಕಣಪೆ ದಾಟಿದ.

ಪಾದರಿ ಬಂಗಲೆ ಮುಂದಿನ ಗೇಟನ್ನು ತಳ್ಳಿಕೊಂಡು ಒಳಹೋಗುತ್ತಿರುವಾಗಲೇ ಪಾದರಿ ಬಂಗಲೆಯಿಂದ ಹೊರಬಂದ.

'ಬನ್ನಿ.... ನಾನು ನಿಮಗೆ ಹೇಳಿ ಕಳುಹಿಸಬೇಕು ಎಂದಿದ್ದೆ... ' ಎಂದ ಗುರ್ಕಾರನಿಗೆ ಮಾತನಾಡಲು ಬಿಡದೆ -

'ಅಲ್ಲ... ಡಿಕಾಸ್ಟರ ಡೆಡ್‌ಬಾಡೀನ ಇಲ್ಲಿಗೆ ತರಲಿಕ್ಕೆ ನೀವು ಹೇಳಿದ್ದಾ?' ಎಂದು ಗುರ್ಕಾರಗೇನೆ ಕೇಳಿದ.

'ಇಲ್ಲ ಫಾದರ... ಆ ಬಗ್ಗೆ ಮಾತಾಡಲಿಕ್ಕೆ ಅಂತಾನೆ ನಾನು ಬಂದದ್ದು....'

ಎಂದ ಗುರ್ಕಾರ. ಇವನ ಮಾತಿಗೆ ಪಾದರಿ -

ನೋಡಿ ಆ ಟೈಲರ ಸಾಲ್ವಾದೋರ ಬಂದು ಡಿಕಾಸ್ಟರ ಮರಣದ ಸುದ್ದಿ ಹೇಳಿದ. ಇದೇ ಊರಲ್ಲಿ ಇದ್ದವರು... ಈ ಊರಿಗಾಗಿ ತುಂಬಾ ಕೆಲಸ ಮಾಡಿದವರು. ಅವರಿಗಾಗಿ ಒಂದು ಮರಣದ ಗಂಟೆ ಹೊಡಿಸಬೇಕಲ್ಲ... ಗಂಟೆ ಹೊಡೆಯಲು ನಾನು ಒಬ್ಬರಿಗೆ ಹೇಳುತ್ತಿರಲು ಆತ ಟೈಲರ ಸಾಲ್ವಾದೋರ ಡಿಕಾಸ್ಟರ ಶವವನ್ನು ಇಲ್ಲಿಗೆ ತರೋ ವಿಷಯ ಹೇಳಿದ... ಹಿಂದೇನೆ ಮೇಸ್ತ್ರಿ ಕೈತಾನ ಬಂದು ಹೊಂಡ ಅಗೆಯಲಿಕ್ಕೆ ಅನುಮತಿ ಕೇಳಿದ.... ಪಾದರಿಗಳಿಗಲ್ವೆ? ಸಿಮಿಟ್ರಿ ಮಧ್ಯದಲ್ಲಿ ಹೊಂಡ ತೆಗಿ ಅಂದೆ...

ಇದಕ್ಕೆಲ್ಲ ನೀವೇ ಸಿದ್ಧತೆ ಮಾಡಿರಬಹುದು ಅಂದುಕೊಂಡೆ...

ಪಾದರಿಯ ಮಾತು ಕೇಳಿ ಗುರ್ಕಾರ -

ಛೆ ಛೆ ಛೆ..... ನನಗೆ ಈ ವಿಷಯಾನೆ ಗೊತ್ತಿಲ್ಲ... ಇಗರ್ಜಿ ಗಂಟೆ ಆದ ಮೇಲೆ ಪೆದ್ರು ಮಾಸ್ತರರು ಹೇಳಿದ ನಂತರ ನನಗಿದು ತಿಳಿದದ್ದು.

ಹಾಗಾದರೆ ಇದೆಲ್ಲ ಯಾರು ಮಾಡಿದ ಏರ್ಪಾಟು? ಕೆಳಕೇರಿ ಗುರ್ಕಾರ, ಹೊಳೆ ಆಚೆಗಿನ ಗುರ್ಕಾರ ಈ ವ್ಯವಸ್ಥೆ ಮಾಡಿರಬಹುದೆ?

ಪಾದರಿ ಗುರ್ಕಾರನ ಮುಖ ನೋಡಿದ.

ನಾನೊಂದು ಮಾತು ಕೇಳಿಕೊಂಡು ಬರತೀನಿ....

ಇಗರ್ಜಿವಾಡೆ ಗುರ್ಕಾರ ಹಾಗೆಯೇ ತಿರುಗಿದ.

ಪಾದರಿ ಡಿಕಾಸ್ತರನ್ನು ನಮ್ಮ ಊರಲ್ಲೇ ಮಣ್ಣು ಮಾಡೋಣ..... ಇದಕ್ಕೆ ನಮ್ಮ ಅಭ್ಯಂತರವಿಲ್ಲ... ಆದರೆ ಈ ಬಗ್ಗೆ ತೀರ್ಮಾನ ಮಾಡಿದವರು ಯಾರೊ ಅನ್ನೋದು ಬೇಕಲ್ಲ....

ಎಂದ ಗುರ್ಕಾರ ಪಾದರಿ ಬಂಗಲೆ ಮುಂದಿನ ಗೇಟಿನ ಚಿಲಕ ಹಾಕುತ್ತ.

ಉಳಿದ ಗುರ್ಕಾರರನ್ನು ಕಾಣಬೇಕೆಂದರೆ ಪೇಟೆ ಬೀದಿಹಾದು ಹೋಗ ಬೇಕು. ಹೀಗೆಂದೇ ಇಗರ್ಜಿವಾಡೆ ಗುರ್ಕಾರ ತನ್ನ ಎಂದಿನ ದಿರಿಸು ಧರಿಸಿ ಹೊರಟ.

ಊರಿನಲ್ಲಿ ತನಗೆ ಗೊತ್ತಿಲ್ಲದೇನೆ, ಪಾದರಿಗೆ ಗೊತ್ತಿಲ್ಲದೇನೆ ಇದೇನು ನಡೆದಿದೆ ಎಂದು ಆತ ಯೋಚಿಸುತ್ತ ಕೋಲು ಊರಿಕೊಂಡು ಹೊರಟಾಗಲೇ ಕೇಳಕೇರಿಯ ಗುರ್ಕಾರ ಎದುರಾದ. ಅವನು ಇಗರ್ಜಿಯವಾಡೆಗೆ ಹೊರಟಿದ್ದನಂತೆ.

''ಅಲ್ಲ ಏನಿದು ಪಾದರಿ ಡಿಕಾಸ್ತರ ಕತೆ?''

ಎಂದೇ ಆತ ಮಾತು ಪ್ರಾರಂಭಿಸಿದ.

ಈ ಬಗ್ಗೆ ಅವನಿಗೂ ಏನೂ ಗೊತ್ತಿಲ್ಲ ಎಂಬುದು ಖಚಿತವಾಯಿತು. ಈ ಈರ್ವರೂ ಹೊಳೆ ಆಚೆಗಿನ ಗುರ್ಕಾರನನ್ನು ಭೇಟಿ ಯಾದಾಗ ಅವನೂ ಹೇಳಿದ್ದು ಇಷ್ಟೆ -

ನನಗೂ ಏನೂ ಗೊತ್ತಿಲ್ಲ... ಇದೆಲ್ಲ ಏನು?

ಪಾದರಿ ಈ ಬಗ್ಗೆ ಯಾರಿಗೂ ಹೇಳಿಲ್ಲ.

ಇಗರ್ಜಿವಾಡೆಯ ಗುರ್ಕಾರ ಹೇಳಿಲ್ಲ.

ಕೆಳಕೇರಿ ಗುರ್ಕಾರನಿಗೆ ಇದು ಗೊತ್ತಿಲ್ಲ.

ಹೊಳೆ ಆಚೆಗಿನ ಗುರ್ಕಾರ ಈ ಬಗ್ಗೆ ಹೀಗೆ ಮಾಡಿ ಎಂದು ಯಾರಿಗೂ ತಿಳಿಸಿಲ್ಲ.

ಹಾಗಾದರೆ ಸೈದೂರಿನಲ್ಲಿ ಸತ್ತ ಪಾದರಿ ಡಿಕಾಸ್ತರ ಶವ ಈ ಊರಿಗೆ ಬಂತು ಹೇಗೆ?

ಯಾರೋ ಲಾರಿ ಡ್ರೈವರ ಅಂತೋನಿಯನ್ನು ಕೇಳಿದರು.

''ಅಲ್ಲ ಅಂತೋನಣ್ಣ..... ಸೈದೂರಿಗೆ ಹೋಗಲಿಕ್ಕೆ ನಿನಗೆ ಹೇಳಿದ್ದು ಯಾರು?''

ಇಗರ್ಜಿ ಮುಂದೆ ಪಾದರಿ ಶವ ಇಳಿಸಿ ಇನ್ನೇನು ಹೋಗಬೇಕೆಂದು ಲಾರಿಯನ್ನು ತಿರುಗಿಸುತ್ತಿದ್ದ ಅಂತೋನಿ ಲಾರಿ ನಿಲ್ಲಿಸಿ ಇಳಿದು ಬಂದ. ಅವನಿಗೆ ಸಿಟ್ಟು ಬಂದಿತ್ತು.

ನಲವತ್ತು ಮೈಲಿ ದೂರದ ಸೈದೂರಿಗೆ ಹೋಗಿ ತಿರುಗಿ ಬಂದುದಕ್ಕೆ ಯಾವ ನನ್ನ ಮಗನೂ ಬಾಡಿಗೆ ಕೊಡಲು ಬರಲಿಲ್ಲ. ಬೇಡ ನೀನು ಹೋಗಿ ಪಾದರಿ ಶವ ತಂದೆಯಲ್ಲ -ಎಂದು ಒಳ್ಳೆಯ ಒಂದು ಮಾತು ಹೇಳಲು ಬರಲಿಲ್ಲ. ಇದು ಯಾರೋ, ನಿನಗೆ ಈ ಶವ ತರಲು ಹೇಳಿದ್ದು ಯಾರು? ಎಂದು ಕೇಳುತ್ತಿದ್ದಾನಲ್ಲ! ಅಲಾ ಇವನ ಸೊಕ್ಕೇ ಅವನು ತೋಳೇರಿಸಿ ಕೊಂಡೇ ಬಂದ.

''....ಅಲ್ಲ..... ನೀವು ಹೇಳೋದು ಏನು? ನಾನು ಮಾಡಬಾರದ ತಪ್ಪು ಮಾಡಿದೆ ಅಂತಾನ ನಿಮ್ಮ ಮಾತಿನ ಅರ್ಥ...... ಈ ಪಾದರಿ ಈ ಊರಿಗಾಗಿ ಕೆಲಸ ಮಾಡಿರೋದನ್ನ ನೀವು ಮರೆತಿರಬಹುದು.... ಆದರೆ ನಾನು ಮರೆತಿಲ್ಲ.....''

ಅಂತೋನಣ್ಣನ ಕಣ್ಣುಗಳು ಕೆಂಡದುಂಡೆಗಳಾಗಿ ಉರಿದವು.

''ಹಾಗಲ್ಲ ಅಂತೋನಣ್ಣ... ನಾನು ಕೇಳಿದ್ದು..... ''

ನನಗದೆಲ್ಲ ಬೇಕಿಲ್ಲ...ನಾನು ಪಾದರಿ ಶವಾನ ತಂದದ್ದು ತಪ್ಪು ಅನ್ನೋದಾದರೆ....ಲಾರಿಗೆ ಏರಿಸಿ... ತೊಕೊಂಡು ಹೋಗಿ ಸೈದೂರಿನಲ್ಲಿ ಇಳಿಸಿ ಬರತೀನಿ.....

ಎಂದು ಮತ್ತೂ ದನಿ ಏರಿಸಿದ ಅಂತೋನಿ.

ಅವನಿಗೆ ಒಂದು ವಿಷಯ ನೆನಪಿತ್ತು.

ಪೇಟೆ ಬೀದಿಯಲ್ಲಿ ಲಾರಿ ನಿಲ್ಲಿಸಿಕೊಂಡು ಬಾಡಿಗೆ ದಾರಿ ಕಾಯುತ್ತಿದ್ದ. ಐದಾರು ಜನ ಅಲ್ಲಿಗೆ ಬಂದರು. ಎಲ್ಲ ಕ್ರಿಸ್ತುವರೆ. ಪೆದ್ರು ಮಾಸ್ತರ್, ಟೈಲರ ಸಾಲ್ವಾದೋರ ಅವರ ಜತೆ ಇದ್ದರು. ಈ ಗುಂಪಿನ ಯಾರೋ -

''.....ಪಾದರಿ ಡಿಕಾಸ್ತ ತೀರಿಕೊಂಡರಂತೆ... ಅವರನ್ನ ಈ ಊರಿನಲ್ಲಿ ಮಣ್ಣು ಮಾಡಬೇಕು... ನಿನ್ನ ಲಾರೀನ ಹುಡುಕುತ್ತಿದ್ದಾರೆ....''

ಎಂದೇನೋ ಹೇಳಿದ ಹಾಗಾಯಿತು.

'' ...ಹೌದಾ? ಹಾಗಾದರೆ ನಾನು ಹೋಗತೀನಿ''

ಎಂದವನೇ ತಾನು ಸೈದೂರಿನತ್ತ ಹೊರಟೆ. ಅಲ್ಲಿ ಹೋದರೆ ಡಿಕಾಸ್ತರ ಶವ ಸಂಸ್ಕಾರಕ್ಕೆ ಎಲ್ಲ ವ್ಯವಸ್ಥೆಯಾಗಿದೆ. ಸಿಮಿತ್ರಿಯಲ್ಲಿ ಹೊಂಡ ತೋಡಿ ಮುಗಿಯಬೇಕಷ್ಟೆ. ತಾನು ಹೋಗಿ ಅಲ್ಲಿಯ ಪಾದರಿಯನ್ನು, ಹಿರಿಯರನ್ನು ಕಂಡು -

''ಅರೆ .....ಅದು ಹೇಗಾಗುತ್ತೆ... ಈ ಪಾದರಿಗಳು ನಮ್ಮಲ್ಲಿ ಇದ್ದವರಲ್ಲವೆ? ಇವರನ್ನು ಮಣ್ಣು ಮಾಡಬೇಕಾದವರು ನಾವೇ... ಅಲ್ಲಿ ಜನ ಇದಕ್ಕಾಗಿ ಕಾದಿದ್ದಾರೆ'' ಎಂದೆ.

'ಆಯ್ತು ಹಾಗಾದರೆ'

ಅಂದವರೇ ಅವರು ಶವವನ್ನು ತನ್ನ ಲಾರಿಗೆ ಏರಿಸಿದರು. ಅದರ ಜೊತೆಗೇನೆ ಕೆಲವರು ಬಂದರು. ಪಾದರಿ ಹಿಂದಿನಿಂದ ಬರುವೆ ಎಂದ. ಇಲ್ಲಿ ನೋಡಿದರೆ ಈ ಭಾನಗಡಿ.

ಅಂತೋನಿ ಲಾರಿಯನ್ನು ಮತ್ತೆ ತಂದು ಇಗರ್ಜಿ ಮುಂದೆ ನಿಲ್ಲಿಸಿದ.

''....ಛೆ! ಛೆ! ಛೆ! ನಾವು ಹಾಗಲ್ಲ ಹೇಳಿದ್ದು....''

ಎಂದು ಏನೋ ಸಮಾಧಾನ ಹೇಳಿ ಪ್ರಶ್ನೆ ಕೇಳಿದವರು ಅಂತೋನಿಯನ್ನು ಅಲ್ಲಿಂದ ಸಾಗು ಹಾಕಿದರು,

ಹೀಗೆಯೇ ಅಲ್ಲಿ ಯಾರೋ ಮೇಸ್ತಿ ಕೈತಾನನಿಗೆ ಇದೇ ಪ್ರಶ್ನೆ ಕೇಳಿದರು. ಆತ ಬೆಳಿಗ್ಗೆ ಎದ್ದಾಗಲೇ ಒಂದು ಬಾಟಲಿ ಏರಿಸಿಕೊಂಡವ.

''.... ಇದು ನನ್ನ ಕೆಲಸ..... ಪಾದರಿಗಳಿಗೆ ಕೇಳಿ ಕೊಂಡೇ ನಾನು ಹೊಂಡ ತೋಡಿದ್ದು.... ಯಾಕೆ ಗೀಕೆ ಅಂತ ಕೇಳ ಬೇಡ ಹುಷಾರ್.... ನನಗೆ ಸಿಟ್ಟು ಬಂದ್ರೆ ನಿನ್ನನ್ನ ಹೊಂಡಕ್ಕೆ ತಳ್ಳಿ ಮೇಲೆ ಮಣ್ಣು ಎಳೀಲಿಕ್ಕೂ ನಾನು ಹೆದರೋನಲ್ಲ.... ಗೊತ್ತ ನಿನಗೆ?''

ಎಂದು ಕೂಗಾಡಿದ.

ಅವನಿಗೆ ಪ್ರಶ್ನೆ ಕೇಳಿದವರೂ ಸುಮ್ಮನಾದರು. ಪೆದ್ರು ಮಾಸ್ತರನಾಗಲಿ ಟೈಲರ್ ಸಾಲ್ವಾದೋರನಾಗಲಿ ಈ ಪ್ರಶ್ನೆಗೆ ಉತ್ತರಿಸಲು ಹೋಗಲಿಲ್ಲ. ಆದರೂ ಅವರು ಒಂದು ಮಾತನ್ನು ಸೇರಿಸಿದರು.

'' ...ಹೀಗೆ ಮಾಡಿ ಹಾಗೆ ಮಾಡಿ ಅನ್ನಲಿಕ್ಕೆ ನಾವು ಯಾರು? ಹೀಗೆ ಹೀಗೆ ಅಂತೆ ಅನ್ನುವ ಮಾತು ಕಿವಿಗೆ ಬಿತ್ತು.... ಅದನ್ನೇ ಅವರಿವರ ಮುಂದೆ ಹೇಳಿದ್ವಿ... ನಾವಂತೂ ಹೀಗೆ ಮಾಡಬೇಕು ಅಂತ ಹೇಳಿದವರಲ್ಲ.... ನಮ್ಮ ಮನೇಲಿ ನಮ್ಮ ಹೆಂಡಿರೇ ನಮ ಮಾತು ಕೇಳೋದಿಲ್ಲ... ಇನ್ನು ಊರವರು ಕೇಳೋದುಂಟ ಎಂದರು.''

ಪಾದರಿ ಡಿಕಾಸ್ತರನ್ನು ಮಣ್ಣು ಮಾಡುವ ಕೆಲಸ ಚೆನ್ನಾಗಿಯೇ ನಡೆಯಿತು. ಊರ ಕ್ರಿಸ್ತುವರೆಲ್ಲ ನೆರೆದರು. ಸೈದೂರಿನ ಪಾದರಿಯೂ

## ಯಾವೋನಯ್ಯ ನೀನು?

ಕನ್ನಡ ಸಂಸ್ಕೃತಿ ಇಲಾಖೆಗೆ ಹೊಸದಾಗಿ ನೇಮಕವಾದ ನಿರ್ದೇಶಕರು ಅಧಿಕಾರ ಸ್ವೀಕರಿಸಿದರು. ಇದೇ ಕಛೇರಿಗೆ ಕಾರ್ಯನಿಮಿತ್ತವಾಗಿ ಬಂದಿದ್ದ ಹಿರಿಯ ಲೇಖಕರೊಬ್ಬರು ಹೊಸ ನಿರ್ದೇಶಕರು ಬಂದಿರುವುದನ್ನು ಕೇಳಿ ಒಮ್ಮೆ ನೋಡಿ ಅಭಿನಂದಿಸಿ ಹೋಗಲು ನಿರ್ದೇಶಕರ ಛೇಂಬರ್‌ನತ್ತ ಹೋದರು. ಪರಿಚಯದ ಪ್ಯೂನ್ ಬಾಗಿಲು ತೆರೆದು ಒಳಗೆ ಬಿಟ್ಟ, ಕುರ್ಚಿಯಲ್ಲಿ ಕೂತಿದ್ದ ನಿರ್ದೇಶಕರು ಇವರನ್ನು ನೋಡಿದೊಡನೆ ''ಯಾವೋನಯ್ಯ ನೀನು?'' ಎಂದರು. ಸ್ತಂಭಿತರಾಗಿ ಒಂದುಕ್ಷಣ ನಿಂತಲ್ಲೆ ಕಲ್ಲಾದ ಮೈಸೂರಿನ ಶಾಸ್ತ್ರಿಗಳು ''ಸ್ವಾಮಿ, ತಾವು ನನಗೆ ಪರಿಚಯವಿರಲಿಲ್ಲ. ನಾನು....'' ಎಂದು ಹೊರಬಂದು 'ಅಯ್ಯೊ ಕನ್ನಡ ಸಂಸ್ಕೃತಿಯೇ' ಎಂದುಕೊಳ್ಳುತ್ತ ಮುಖದ ಬೆವರು ಒರೆಸಿಕೊಂಡರು.

ಸೇರಿದಂತೆ ನಾಲ್ವರು ಪಾದರಿಗಳು ಬಲಿಪೂಜೆ ನೆರವೇರಿಸಿದರು. ಉದ್ದೋ ಉದ್ದವಾದ ಮೆರವಣಿಗೆ ಇಗರ್ಜಿಯಿಂದ ಹೊರಬಿದ್ದು ಸಿಮಿತ್ರಿಯತ್ತ ಹೋಗುವುದನ್ನು ಊರ ಜನರೆಲ್ಲ ನೋಡಿದರು. ಆ ಭಕ್ತಿ, ಗಾಂಭೀರ್ಯ, ಶಿಸ್ತು, ಸಂಘಟನೆ ಎಲ್ಲರ ಮೆಚ್ಚುಗೆ ಗಳಿಸಿತು.

ಆದರೆ...

ಒಂದು ಪ್ರಶ್ನೆಗೆ ಉತ್ತರ ಸಿಗಲಿಲ್ಲ.

ಸೈದೂರಿನಲ್ಲಿ ಸತ್ತ ಪಾದರಿ ಡಿಕಾಸ್ಟರ ಶವವನ್ನು ಈ ಊರಿಗೆ ತಂದು ಸಂಸ್ಕಾರ ಮಾಡಬೇಕು ಎಂಬ ವ್ಯವಸ್ಥೆ ಮಾಡಿದವರು ಯಾರು?

ಈ ಬಗ್ಗೆ ಊರಿನಲ್ಲಿ ಕೆಲವರು ತಲೆ ಕೆಡಿಸಿಕೊಳ್ಳಲಿಲ್ಲ. ಹಲವರು ಪ್ರಶ್ನೆ ಕೇಳಿ ಉತ್ತರ ತಿಳಿಯ ಬಯಸಿದರೂ ಅವರಿಗೆ ಉತ್ತರ ತಿಳಿದು ಬರಲಿಲ್ಲ. ಆದರೆ ಬಾವಿಕಟ್ಟೆ ಬಾಲ್ತಿದಾರನ ಮಗ ಗುಂಗುರು ಸೋಜ ಮಾತ್ರ ಯಾರಿಗೂ ಕಾಣದ ಹಾಗೆ ಗಹಗಹಿಸಿ ನಕ್ಕ.

ಸೋಜನ ತಲೆಗೂದಲು ಗುಂಗುರು ಗುಂಗುರಾಗಿ ಇದ್ದುದರಿಂದ ಅವನಿಗೆ ಈ ಅಡಕ ಹೆಸರು ಬಿದ್ದಿತ್ತು. ಅವನ ಸ್ವಭಾವ ಕೂಡ ಅವನ ಕೂದಲಿನ ಹಾಗೆಯೇ ಕೊಂಕು ಎಂದು ಕೂಡ ಕೆಲವರು ಹೇಳುತ್ತಿದ್ದರು.

ಪಾದರಿ ಡಿಕಾಸ್ಟರ ಶವ ಸಂಸ್ಕಾರ ಈ ಊರಿನಲ್ಲಿ ಆಗಲು ತಾನೇ ಕಾರಣ ಎಂಬುದು ಗುಂಗುರು ಸೋಜನಿಗೆ ಮಾತ್ರ ಗೊತ್ತಿತ್ತು.

ಅಂದು ಬೆಳಿಗ್ಗೆ ಹತ್ತು ಗಂಟೆಗೆ ಈತ ಬಸ್ ಸ್ಟ್ಯಾಂಡಿನಲ್ಲಿ ನಿಂತಿದ್ದ. ಶಿವಮೊಗ್ಗಕ್ಕೆ ಹೋಗುವ ಸೈದೂರಿನ ಬಸ್ಸಿನಿಂದ ಯಾರೋ ಒಬ್ಬರು ತಲೆ ಹೊರಗೆ ಹಾಕಿ ಕೂಗುತ್ತಿದ್ದರು. ಸೋಜ ತನಗೇನೆ ಕರೆಯುತ್ತಿರುವುದು ಎಂದು ಬಳಿ ಹೋದ. ಅದೇ ಸಮಯದಲ್ಲಿ ತನ್ನ ಅಂಗಡಿಯಲ್ಲಿ ಹೊಲಿಯುತ್ತ ಕುಳಿತಿದ್ದ ಟೈಲರ್ ಸಾಲ್ವಾದೋರ ಕೂಡ ಆ ಬಸ್ಸಿನ ಬಳಿ ಹೋದ. ಬಸ್ಸಿನಿಂದ ತಲೆ ಹೊರ ಹಾಕಿ ಕೂಗುತ್ತಿದ್ದವ ಗುಂಗುರು ಸೋಜನಿಗೂ ಗೊತ್ತಿದ್ದವ ಸಾಲ್ವಾದೋರನಿಗೂ ಗೊತ್ತಿದ್ದವ.

''ಅಲ್ಲ ವಿಷಯ ನಿಮಗೆ ಗೊತ್ತಿಲ್ವ?'' ಎಂದು ಈ ಇಬ್ಬರನ್ನೂ ಕೇಳಿದ ಆತ.

ಏನು?

''ಪಾದರಿ ಡಿಕಾಸ್ಟ ಬೆಳಿಗ್ಗೆ ತೀರಿಕೊಂಡರು.... ಅವರನ್ನ ಮಣ್ಣು ಮಾಡೋದು ಸಾಯಂಕಾಲ.. ಊರಲ್ಲಿ ಜನರಿಗೆ ಪಾದರಿಗಳಿಗೆ ತಿಳಿಸಿ ಬಿಡಿ... '' ಎಂದ ಆತ.

''ಹೌದೆ.... ಪಾದರಿ ಡಿಕಾಸ್ಟರ ಶವಾ ಇದ್ದದ್ದು ನಮ್ಮೂರಿನಲ್ಲಿ.. ಅವರನ್ನ ಮಣ್ಣು ಮಾಡಬೇಕಾದ್ದು ಇಲ್ಲೇ.. ಸೈದೂರಿನಲ್ಲಿ ಅವರು ಇದ್ದದ್ದು ಎರಡೇ ವರ್ಷ, ಇಲ್ಲಿ ಹದಿನೈದು ವರ್ಷ... ವಿಷಯ ಗುರ್ಕಾರಗೆ ಪಾದರಿಗಳಿಗೆ ಗೊತ್ತಾಗುತ್ತಿದ್ದ ಹಾಗೆ ಅವರ ಶವಾನ ಇಲ್ಲಿಗೆ ತರೋ ವ್ಯವಸ್ಥೆ ಆಗುತ್ತೆ... ಲಾರಿ ಅಂತೋನಿಗೆ ಹೇಳಿದ್ರೆ ಅವನು ಹೋಗಿ ಶವ ತರತಾನೆ... ಮೇಸ್ತ್ರಿ ಕೈತಾನ ಹೊಂಡ ತೋಡತಾನೆ.'' ಎಂದೆಲ್ಲ ಗುಂಗುರು ಸೋಜ ನುಡಿಯುತ್ತಿರಲು ಅಲ್ಲಿ ಮತ್ತೂ ಒಂದಿಬ್ಬರು ಕ್ರಿಸ್ತುವರು ಬಂದು ಸೇರಿಕೊಂಡರು. ಬಸ್ಸು ಶಿವಮೊಗ್ಗಕ್ಕೆ ಹೋಗುತ್ತಿರಲು ಇಲ್ಲಿ ಗುಂಗುರು ಸೋಜನ ಮಾತು ಬೇರೊಂದು ರೂಪ ಧರಿಸಿ ಬಿಟ್ಟಿತು.

ಅಂತೋನಿ ಡ್ರೈವರ್‌ನ ಲಾರಿ ಸೈದೂರಿಗೆ ಹೋಯಿತು. ಮೇಸ್ತ್ರಿ ಕೈತಾನ ಹೊಂಡ ತೆಗೆಯಲು ಸಿಮಿತ್ರಿಗೆ ಹೋದ. ಇಗರ್ಜಿ ಗಂಟೆ ಹೊಡೆದು ಕೊಂಡಿತು.

ಮೂರು ಗಂಟೆಗೆಲ್ಲ ಪಾದರಿ ಶವ ಊರಿಗೆ ಬಂದಿತು.

ಗುಂಗುರು ಸೋಜ ಹೀಗೊಂದು ಮಾತು ಹೇಳಲು ಕಾರಣವಿತ್ತು.

ಪಾದರಿ ಡಿಕಾಸ್ಟ ಈ ಊರಿನಲ್ಲಿ ಇದ್ದಷ್ಟು ದಿನ ಗಾರ್ಡ ಫರ್ನಾಂಡಿಸರ ಕುಟುಂಬದ ಬಗ್ಗೆ ತುಂಬಾ ಆಸಕ್ತಿ ವಹಿಸಿದ್ದರು. ವಾರದಲ್ಲಿ ಮೂರು ದಿನ ಇವರ ಮನೆಗೆ ಭೇಟಿ ಕೊಡುತ್ತಿದ್ದರು. ನಿತ್ಯ ಫರ್ನಾಂಡಿಸರ ಮನೆಯಿಂದ ಬೆಳಗಿನ ತಿಂಡಿ, ಮಧ್ಯಾಹ್ನದ ಊಟ, ರಾತ್ರಿಯ ಊಟ ಪಾದರಿಗಳಿಗೆ ಹೋಗುತ್ತಿತ್ತು. ಆಗಾಗ್ಗೆ ಫರ್ನಾಂಡಿಸರ ಎರಡನೇ ಹೆಂಡತಿ ಕತ್ರೀನ ಪಾದರಿ ಬಂಗಲೆಗೆ ಹೋಗಿ ಗಂಟೆ ಎರಡು ಗಂಟೆ ಅಲ್ಲಿ ಕುಳಿತು ಮಾತನಾಡಿ ಬರುತ್ತಿದ್ದಳು. ಈ ಫರ್ನಾಂಡಿಸರ ಮನೆಯವರಿಗೆಂದೇ ಇಗರ್ಜಿಯಲ್ಲಿ ಒಂದು ಆಸನದ ವ್ಯವಸ್ಥೆಯಾಗಿತ್ತು. ಪಾದರಿ ಊರಿನಲ್ಲಿ ಮಾಡಿದ ಅಷ್ಟೂ ಕೆಲಸಗಳಿಗೆ ಫರ್ನಾಂಡಿಸರು ನೆರವು ನೀಡಿದ್ದರು. ಇಗರ್ಜಿ ಕೆಲಸಕ್ಕೆ, ಶಾಲಾ ಕಟ್ಟಡಕ್ಕೆ ಬೇಕಾದ ಮರ ಅರಣ್ಯ ಇಲಾಖೆಯಿಂದ ಬಂದಿತ್ತು.

ಪಾದರಿ ಡಿಕಾಸ್ಟ ಹಾಗು ಫರ್ನಾಂಡಿಸರ ಈ ಸ್ನೇಹ ಆತ್ಮೀಯತೆಯನ್ನು ಜನ ಕಂಡೂ ಕಾಣದವರ ಹಾಗೆ ಇರುತ್ತಿದ್ದರು.

ದೇವರ ಪ್ರತಿನಿಧಿಗಳ ಬಗ್ಗೆ ತೀರ್ಪು ನೀಡಲು ನಾವು ಯಾರು?

ಎಂದು ಜನ ಜಾಣಗುರುಡರಾಗಿ ವರ್ತಿಸುವಾಗ ಗುಂಗುರು ಸೋಜ ಮಾತ್ರ-

'ಈ ಪಾದರಿ.. ಆ ಮನೆ ಬಗ್ಗೆ ಯಾಕಿಷ್ಟು ಕಾಳಜಿ ವಹಿಸೋದು?'

ಎಂದು ಕೇಳುತ್ತಿದ್ದ.

ಕೊನೆಗೂ ಪಾದರಿ ಹದಿನೈದು ವರ್ಷ ಇಲ್ಲಿ ಸೇವೆ ಮಾಡಿ ಸೈದೂರಿಗೆ ಹೋದ. ಗುಂಗುರು ಸೋಜನಿಗೆ ಮತ್ತೆ ಮಾತನಾಡಲು ಅವಕಾಶ ಸಿಗಲಿಲ್ಲ.

ಆದರೆ ಈ ಸುದ್ದಿ ಕೇಳಿದಾಗ ಗುಂಗುರು ಸೋಜ ....ಪಾದರಿ ಡಿಕಾಸ್ಟರ ಜೀವ ಇದ್ದದ್ದೇ ಈ ಊರಿನಲ್ಲಿ... ಎಂದ. ಅವರನ್ನು ಮಣ್ಣು ಮಾಡಬೇಕಾದ್ದು ಕೂಡ ಇಲ್ಲಿಯೇ ಎಂದು ಸಾರಿದ.

ಗುಂಗುರು ಸೋಜನ ಮಾತು ಅದು ಹೇಗೋ ಕಾರ್ಯರೂಪಕ್ಕೆ ಇಳಿದು ಬಿಟ್ಟಿತು. ಡಿಕಾಸ್ಟರ ಶವಯಾತ್ರೆಯ ಉದ್ದಕ್ಕೂ ಫರ್ನಾಂಡಿಸರ ಎರಡನೇ ಹೆಂಡತಿ ಉಮ್ಮಳಿಸಿ ಬರುವ ನೋವನ್ನು ನುಂಗಿಕೊಂಡು ಭಾಗವಹಿಸಿದಳು. ಶವದಾನಿಯ ಮೇಲೆ ಮುಚ್ಚು ಹಲಿಗೆ ಇರಿಸಿ, ಮೊಳೆ ಹೊಡೆದು ಅದನ್ನು ಹೊಂಡದೊಳಗೆ ಇಳಿಸಿದಾಗಲಂತೂ ಅವಳು ಮತ್ತೊಬ್ಬರ ಹೆಗಲ ಮೇಲೊರಗಿ ಎದೆ ಬಡಿದು ಕೊಂಡಿದ್ದಳು.

ಈ ದೃಶ್ಯ ನೋಡಿ ಗುಂಗುರು ಸೋಜ ಯಾವುದೋ ಸತ್ಯವನ್ನು ಹೊರ ಹಾಕಿದವನಂತೆ ಎದೆಯುಬ್ಬಿಸಿದ್ದ. ಅಲ್ಲದೆ ಪಾದರಿ ಡಿಕಾಸ್ಟರನ್ನ ಇಲ್ಲಿ ತಂದು ಮಣ್ಣು ಮಾಡುವ ವಿಚಾರ ಯಾರು ಮಾಡಿದ್ದು ಎಂಬ ಪ್ರಶ್ನೆ ಅಲ್ಲಿ ಇಲ್ಲಿ ಕೇಳಿ ಬಂದಾಗ ಆತ ಒಂಟಿಯಾಗಿ ಗಹಗಹಿಸಿ ನಕ್ಕಿದ್ದ.

ಆಯಿತು. ಡಿಕಾಸ್ಟರ ಸಮಾಧಿಯಾಯಿತು. ಒಳ್ಳೆಯ ಒಂದು ರೀತಿಯಲ್ಲಿ ಸಮಾಧಿಯನ್ನು ಊರ ಜನ ಸೇರಿ ಕಟ್ಟಿಯೂ ಮುಗಿಸಿದರು.

ಈಗೀಗ ಬೇರೊಂದು ಸುದ್ದಿ ಊರಿನಲ್ಲಿ ಕ್ರಿಸ್ತುವರ ನಡುವೆ ಕೇಳಿ ಬರುತ್ತಿದೆ.

ರಾತ್ರಿ ಹನ್ನೆರಡು ಗಂಟೆಗೆ ಸಿಮಿತ್ರಿ ಗೇಟು ಸದ್ದು ಮಾಡುತ್ತ ತೆರೆದು ಕೊಳ್ಳುತ್ತದೆ. ಬಿಳಿ ಉದ್ದ ನಿಲುವಂಗಿ ಧರಿಸಿದ ಪಾದರಿಯೊಬ್ಬರ ಭೂತ ಸಿಮಿತ್ರಿಯಿಂದ ಹೊರಬೀಳುತ್ತದೆ. ಗಾರ್ಡ ಫರ್ನಾಂಡಿಸರ ಮನೆ ಇರುವ ರಸ್ತೆಯತ್ತ ಈ ಭೂತ ಹೋದುದನ್ನು ಬಹಳ ಜನ ನೋಡಿದ್ದಾರೆ....

ಗುಂಗುರು ಸೋಜ ಅಲ್ಲಿ ಇಲ್ಲಿ ಅವರು ಇವರ ಬಾಯಲ್ಲಿ ಈ ಕತೆ ಕೇಳಿ ಒಳಗೊಳಗೇ ನಗುತ್ತಾನೆ. ಕತೆ ರೆಕ್ಕೆ ಪುಚ್ಚ ಹಚ್ಚಿಕೊಂಡು ಬೆಳೆಯುತ್ತದೆ. ಪಾದರಿ ಡಿಕಾಸ್ಟ ಸತ್ತರೂ ಅವರು ಊರಿನಲ್ಲಿ ಅಮರರಾಗಿದ್ದಾರೆಂದು ಗುಂಗುರು ಸೋಜ ಹಿಗ್ಗುತ್ತಾನೆ. ಈ ಘಟನೆಯನ್ನು ಜೀವಂತವಾಗಿ ಇಡಲು ಆತ ಶ್ರಮಿಸುತ್ತಾನೆ ಕೂಡ.

(ಮಿರೋಣ್:ಇಗರ್ಜಿಯಲ್ಲಿ ಪ್ರಾರ್ಥನೆ ಹೇಳಿಕೊಡುವಾತ; ಚಮಾದೋರ್ - ಸುದ್ದಿ ತಿಳಿಸುವಾತ)

■

## ''ಗೊತ್ತು ಮುಚ್ಕೊಳ್ರೀ''

ತಮ್ಮ ಬರಹಗಳಲ್ಲಿ ಹಾಗೂ ವೇದಿಕೆ ಭಾಷಣಗಳಲ್ಲಿ ಮಹಾ ಸಾಹಸಿಯ ಪೋಸ್ ತೋರಿಸುತ್ತಿದ್ದ ಲೇಖಕರ ಕಾರು ಕುಣಿಗಲ್ ದಾಟಿದ ಮೇಲೆ ಕೆಟ್ಟು ನಿಂತಿತು. ನಡುರಾತ್ರಿ, ಆಗೀಗ ಬರುವ ವಾಹನಗಳೂ ನಿಲ್ಲಿಸುತ್ತಿಲ್ಲ, ಕೊನೆಗೊಂದು ಕಾರ್ ನಿಂತಿತು. ಈ ಲೇಖಕರು ಡ್ರೈವರ್‌ನನ್ನು ಕಾರ್ ಬಳಿ ಬಿಟ್ಟು, ತಮ್ಮನ್ನು ಹತ್ತಿಸಿಕೊಂಡ ಕಾರ್‌ನಲ್ಲಿ ಕುಳಿತರು. ಕಾರು ಹೊರಟಮೇಲೆ ಸಿಗರೇಟ್ ಸೇದಲು ಕಡ್ಡಿ ಗೀರಿದರು. ''ನನ್ನ ಕಾರಲ್ಲಿ ಧೂಮಪಾನ ಮಾಡೊಂಗಿಲ್ಲ ಆರಸರ್ರೀ'' ಕಾರಿನ ಓನರ್ ಹೇಳಿದ. ''ನಾನು ಯಾರು ಅಂತ ತಮಗೆ ತಿಳಿಲಿಲ್ಲವೇನೋ?'' ಲೇಖಕರು ತೊದಲಿದರು. ''ಗೊತ್ತು ಮುಚ್ಕೊಂಡು ಕುತ್ಕೊಳ್ರೀ....'' ತಮ್ಮ ಹೆಸರಿನ ಒಂದು ಪತ್ರಿಕೆ ನಡೆಸುತ್ತಿರುವ ಈ ಸಾಹಿತಿಗಳು ಹೋರಾಟಗಾರರಾದ ಕಾರಿನ ಮಾಲಿಕರ ಗದರಿಕೆಗೆ ಗಪ್‌ಚುಪ್ ಆದರು.

## ಸ್ಮೈಲ್ ಪ್ಲೀಸ್!!

ಒಂದೊಂದು ದೇಶದಲ್ಲಿ ಒಂದೊಂದು ಭಾಷೆ. ಜನರ ನಡುವೆ, ದೇಶಗಳ ನಡುವೆ ಭಾಷೆ ಅಂಬೋದು ಚೈನಾಗೋಡೆಯಂತೆ ಬೆಳೆದುನಿಂತಿದೆ. ಆದರೆ ಜಗತ್ತಿನ ಕಾರ್ಟೂನ್ ರೇಖೆಗಳಿಗೆ ಯಾವ ಬ್ಯಾರಿಯರ್ಸೂ, ಚೈನಾ ಗೋಡೆಗಳೂ ಅಡ್ಡ ಬಂದಿಲ್ಲ. ಜಗತ್ತಿನಲ್ಲಿ ಒಬ್ಬೊಬ್ಬರ 'ಅಳು' ಒಂದೊಂದು ಥರ ಇರಬಹುದೇನೋ. ಆದರೆ 'ನಗೆ' ಮಾತ್ರ ಎಲ್ಲೆಲ್ಲೂ ಒಂದೇ! ಆದ್ದರಿಂದಲೇ 'ಕಾರ್ಟೂನ್' ಅನ್ನೋದು ಅಂತಾರಾಷ್ಟ್ರೀಯ ಭಾಷೆ!

ಒಂದೆಡೆ ರಾಜಕೀಯ ಮಾಲಿನ್ಯ, ಪರಿಸರ ಮಾಲಿನ್ಯ. ಇನ್ನೊಂದೆಡೆ ಯಾಂತ್ರಿಕ ಬದುಕಿನ ಬಿಜಿ, ಟೆನ್ಶನ್‌ಗಳ ನಡುವೆ ನಾವು 'ನಗು'ವನ್ನು ಮರೆಯುವ ಸಾಧ್ಯತೆ ಇದೆಯೇನೊ ಅಂತ ಅನಿಸುತ್ತದೆ.

ಜಗತ್ತಿನಲ್ಲಿ ನಾವು ಅಳಿದು ಹೋಗುತ್ತಿರುವ ಪರಿಸರಕ್ಕೆ ಕೊಡುತ್ತಿರುವಷ್ಟು ಕಾಳಜಿ ನಗಿಸುವ ಕಾರ್ಟೂನ್‌ಗಳಿಗೆ ಕೊಡಬೇಕಾದ ಅವಶ್ಯಕತೆ ತುಂಬಾ ಇದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಈ ಕ್ರಾಂತಿ ಶುರು ಆಗಿದೆ ಕೂಡಾ!

ಅಲ್ಲಿ ನಾವು ನಮ್ಮ ದೇಶದಲ್ಲಿ ಚಿತ್ರೋತ್ಸವಗಳನ್ನು ನಡೆಸಿದಷ್ಟು ಸಂಭ್ರಮದಿಂದ ಕಾರ್ಟೂನ್ ಫೆಸ್ಟಿವಲ್ಸ್ ನಡೆಸ್ತಾರೆ - ಎಲ್ಲೆಡೆಯಿಂದ ಅತ್ಯುತ್ತಮ ವ್ಯಂಗ್ಯಚಿತ್ರಗಳನ್ನು ಆಹ್ವಾನಿಸಿ ಸಿನ್ಸಿಯರ್ರಾಗಿ ಯಾವಪಾಲಿಟಿಕ್ಸ್ ಇಲ್ಲದೇ ಅವಾರ್ಡ್ಸ್, ಪ್ರೈಜು ಕೊಡ್ತಿದಾರೆ.

ಜಗತ್ತಿನಾದ್ಯಂತ ಕಾರ್ಟೂನ್ ಕ್ಷೇತ್ರದಲ್ಲಿ ನಡೆದ, ನಡೆಯುತ್ತಿರುವ ಇತ್ತೀಚಿನ ವಿಭಿನ್ನ ಪ್ರಯೋಗಗಳನ್ನು, ಹೊಸತನದ ಅನ್ವೇಷಣೆಯನ್ನು ಇಲ್ಲಿ ಕೊಡುತ್ತಿರುವ ಚಿತ್ರಗಳಲ್ಲಿ ಗಮನಿಸಬಹುದು.

ಇಲ್ಲಿನ ಚಿತ್ರಗಳು ನಿಮ್ಮನ್ನು ಹೊಟ್ಟೆ ಹುಣ್ಣಾಗಿಸುವಂತೆ ನಗಿಸದಿದ್ದರೂ ನಿಮ್ಮ ಮುಖದ ಮೇಲೆ ಮುಗುಳ್ನಗೆಯ ಪರಿಮಳ ಖಂಡಿತಾ ಸೂಸುವಂತೆ ಮಾಡುತ್ತವೆ. ಆ ಪರಿಮಳ ಜಗತ್ತಿನ ತುಂಬೆಲ್ಲಾ ವ್ಯಾಪಿಸಲಿ....

The world lasts because if laughs!!

### ಚೈನೀಸ್ ಕಾರ್ಟೂ'ನೂಡುಲ್ಸ್'

ಜಗತ್ತಿನ ಬೇರೆಬೇರೆ ದೇಶಗಳ ಕಾರ್ಟೂನುಗಳಿಗೆ ಹೋಲಿಸಿ ನೋಡಿದರೆ ವಿಶೇಷವಾಗಿ ನಿಲ್ಲುವ ಚೈನೀಸ್ ವ್ಯಂಗ್ಯಚಿತ್ರಗಳ ಮಜವೇ ಬೇರೆ. ಕ್ರೋಕ್ವಿಲ್‌ನಿಬ್‌ನಿಂದ ಚಿತ್ರಿತಗೊಂಡ ಈ ಕಾರ್ಟೂನ್‌ಗಳು ಬಲು ಆಕರ್ಷಕ. ಅದ್ಭುತವಾಗಿ ನಗಿಸುತ್ತವೆ ಕೂಡಾ!







### ಜಪಾನ್ ಕಾರ್ಟೂನ್ಸ್!

ಜಪಾನಿಯರನ್ನು ನಗಿಸಿದರೆ ಮಿಲಿಯನ್ 'ಯನ್ಸ್' ಬಹುಮಾನ!!







ಜಪಾನಿನ ಅತ್ಯಧಿಕ ಪ್ರಸಾರದ ಪತ್ರಿಕೆ 'ಯೋಮೂರಿ ಶಿಂಬನ್' (YOMURI SHIMBUN) 1979ರಿಂದ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕಾರ್ಟೂನ್ ಸ್ಪರ್ಧೆಯನ್ನು ಮತ್ತು ಪ್ರದರ್ಶನವನ್ನು ಏರ್ಪಡಿಸುತ್ತಿದೆ.

ಜಗತ್ತಿನ ಎಲ್ಲ ಭಾಷೆಯ ವ್ಯಂಗ್ಯಚಿತ್ರಕಾರರ ಪ್ರತಿಭೆಗೆ 'ಯೋಮೂರಿ ಶಿಂಬನ್' ವೇದಿಕೆಯಾಗಿದೆ. ಪ್ರತಿವರ್ಷ ಈ ಪತ್ರಿಕೆ ನಡೆಸುವ ಸ್ಪರ್ಧೆಯಲ್ಲಿ ಲಕ್ಷಾಂತರ ಜನ ವ್ಯಂಗ್ಯ ಚಿತ್ರಕಾರರು ಬೇರೆ ಬೇರೆ ವಿಷಯಗಳ ವ್ಯಂಗ್ಯ ಚಿತ್ರಗಳೊಂದಿಗೆ ಸ್ಪರ್ಧಿಸುತ್ತಾರೆ. "ಕಾರ್ಟೂನ್ ಕ್ಷೇತ್ರ ಬೆಳೆಯಲು, ಕಾರ್ಟೂನಿಷ್ಟರಲ್ಲಿ ಉತ್ತೇಜನ, ಸ್ಫೂರ್ತಿಗಾಗಿ ನಾವು ಈ ಸ್ಪರ್ಧೆಯನ್ನು ಪ್ರತಿವರ್ಷ ಏರ್ಪಡಿಸುತ್ತಿದ್ದೇವೆ. ಇದರಿಂದ ಅಂತಾರಾಷ್ಟ್ರೀಯ ಸ್ನೇಹ ಸಂಬಂಧಗಳು ಬಲಗೊಳ್ಳುವ ಸಾಧ್ಯತೆಗಳು ತುಂಬಾ ಇವೆ" ಅನ್ನುತ್ತಾರೆ 'ಯೋಮೂರಿ ಶಿಂಬನ್' ಪತ್ರಿಕೆಯ ಮೇನೇಜಿಂಗ್ ಎಡಿಟರ್ 'ಯೊಶಿನೋರಿ ಹೋರಿಕಾವಾ'!

ಸದಾ ಹಸಿವು, ಸಾಲ, ಬಡತನ, ಅಣ್ವಸ್ತ್ರಗಳಂತಹ ಸಮಸ್ಯೆಗಳಿಂದ

ನಾರುತ್ತಿರುವ ಪ್ರಪಂಚವನ್ನು ಮನಸ್ಫೂರ್ತಿಯಾಗಿ ನಗಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಿರುವ 'ಯೋಮೂರಿ ಶಿಂಬನ್' ಅನ್ನು ಜಗತ್ತಿನ ಓದುಗರೆಲ್ಲರೂ ಅಭಿನಂದಿಸುತ್ತಿದ್ದಾರೆ.

ಆದರೆ.... 17 ವರ್ಷಗಳಿಂದ ನಿರ್ವಹಿಸುತ್ತಿರುವ ಈ ಅಂತಾರಾಷ್ಟ್ರೀಯ ಕಾರ್ಟೂನ್ ಸ್ಪರ್ಧೆಯಲ್ಲಿ ಭಾರತದಿಂದ ಈವರೆಗೆ ಒಂದೂ ವ್ಯಂಗ್ಯಚಿತ್ರ ಆಯ್ಕೆಯಾಗದಿರುವುದು ನಿಜಕ್ಕೂ ಅತಿ ದೊಡ್ಡ 'ಕಾಮೆಡಿ'!!

## ರಷ್ಯನ್ ಕಾರ್ಟೂನ್ಸ್!

ಸೀರಿಯಸ್ಸಾಗಿ ನಗಿ!!



'ಹೊಟ್ಟೆ ಹುಣ್ಣಾಗುವಂತೆ ನಗಿಸೋದು ಕಾರ್ಟೂನ್' ಅನ್ನುವ ನಂಬಿಕೆಯನ್ನು ರಷ್ಯನ್ ಕಾರ್ಟೂನುಗಳು ಸುಳ್ಳುಮಾಡಿವೆ.

'ಹಾಸ್ಯವನ್ನೂ - ತಮಾಷೆಯನ್ನು ಪಕ್ಕಕ್ಕಿಟ್ಟು - 'ಸೀರಿಯಸ್ಸಾಗಿ ನಗಿ!' ಎಂದು ರಷ್ಯನ್ ವ್ಯಂಗ್ಯಚಿತ್ರಕಾರರು JOKING ASIDE - A time to laugh seriously ಎನ್ನುವ ಕಾರ್ಟೂನ್ ಪುಸ್ತಕವನ್ನು ಬಿಡುಗಡೆ ಮಾಡಿದ್ದಾರೆ!

ಈ ಪುಸ್ತಕದ ವ್ಯಂಗ್ಯಚಿತ್ರಗಳು ರಷ್ಯಾದ 'ಪೆರಿಸ್ಟ್ರೊಯಿಕಾ', 'ಗ್ಲಾಸ್‌ನೋಸ್ತ್' ಸಂಸ್ಕರಣೆಗಳ ಪರಿಣಾಮಗಳನ್ನು ವ್ಯಂಗ್ಯವಾಗಿ 'ಸೀರಿಯಸ್ಸಾಗಿ' ಚಿತ್ರಿಸಲ್ಪಟ್ಟಿವೆ. ಇಲ್ಲಿ ಕೊಟ್ಟಿರುವ ಕಾರ್ಟೂನ್‌ಗಳನ್ನು ನೋಡಿ ನಾವು ಗಹಗಹಿಸಿ ನಗಲಾರೆವು - ಆದರೆ ಪೆಯಿಂಟಿಂಗ್‌ನಲ್ಲಿನ 'ಮೊನಾಲೀಸಾ'ದಂತೆ ಕಿರುನಗೆ ಧಾರಾಳವಾಗಿ ನಗಬಹುದು - ಆ ನಗೆ ನೋಡಿ 'ಲಿಯೋನಾರ್ಡೋ ಡಾವಿನ್ಸಿ' ಸಹಿತ ನಾಚುತ್ತಾನೇನೋ....

## ನಗೆಯಾಟ!









ಸಿನಿಮಾ ನಡುವೆ 'ಪಾಪ್ ಕಾರ್ನ್'ದಂತೆ ಆಗಾಗ ಕ್ರೀಡೆಗಳ ಮೇಲೆ ಕೂಡಾ ಕಾರ್ಟೂನ್ಸ್ ಬರುತ್ತಿವೆ. ಒಲಿಂಪಿಕ್ಸ್‌ದಂತಹ ಅಂತಾರಾಷ್ಟ್ರೀಯ ಕ್ರೀಡೆಗಳು ನಡೆದಾಗ ಜಗತ್ತಿನ ಕಾರ್ಟೂನಿಷ್ಟರು ಅಲರ್ಟ್ ಆಗ್ತಾರೆ - ಇಲ್ಲಿ ಕೊಟ್ಟಿರುವ ಕಾರ್ಟೂನುಗಳು - ಕಾರ್ಟೂನಿಷ್ಟರು ಒಳ್ಳೇ ಮೂಡಲ್ಲಿ 'ಕ್ರೀಡೆ'ಗಳೊಂದಿಗೆ ಆಡಿದ 'ಫುಟ್‌ಬಾಲ್-ಕಬಡ್ಡಿ' ಕಾರ್ಟೂನ್‌ಗಳಿವು!!

## ಕೊನೆಸಿಪ್!






ಬೆಲ್ಜಿಯಂನ ನಾಕ್-ಹಿಸ್ಟ್‌ನಲ್ಲಿ ಪ್ರತಿವರ್ಷ ನಡೆಸುವ ಅಂತಾರಾಷ್ಟ್ರಿಯ ವ್ಯಂಗ್ಯಚಿತ್ರ ಸ್ಪರ್ಧೆ ಕಳೆದ 35 ವರ್ಷಗಳಿಂದ ನಡೆಯುತ್ತಿದೆ. ಆಯ್ಕೆಯಾದ ಅತ್ಯುತ್ತಮ ವ್ಯಂಗ್ಯ ಚಿತ್ರಗಳಿಗೆ ಗೋಲ್ಡನ್ ಹ್ಯಾಟ್, ಸಿಲ್ವರ್ ಹ್ಯಾಟ್ ಪುರಸ್ಕಾರ ನೀಡಿ ಗೌರವಿಸುತ್ತದೆ.

ಈ ಕಾರ್ಟೂನ್ ಫೆಸ್ಟಿವಲ್‌ಗೆ 12 ಜನ ಜಗತ್ತಿನ ಖ್ಯಾತ ವ್ಯಂಗ್ಯಚಿತ್ರಕಾರರೊಂದಿಗೆ ಆಯ್ಕೆ ಸಮಿತಿ ಮತ್ತು 26 ಜನ ಸದಸ್ಯರ ಅಂತಾರಾಷ್ಟ್ರಿಯ ಜ್ಯೂರಿಯಲ್ಲಿ ಭಾರತದಿಂದ ಖ್ಯಾತ ವ್ಯಂಗ್ಯಚಿತ್ರಕಾರ ಡಾ|| ಜಯದೇವ್‌ಬಾಬು ಇರುವುದು ಹೆಮ್ಮೆಯ ವಿಷಯ!

ನಾಕ್-ಹೀಸ್ಟ್ ಕಾರ್ಟೂನ್ ಫೆಸ್ಟಿವಲ್‌ನಲ್ಲಿ ಆಯ್ಕೆಯಾದ ಕೆಲವು ಸ್ಯಾಂಪಲ್‌ಗಳು ಇಲ್ಲಿವೆ.

■ ಸೃಜನ್ 99

# ವ್ಯಂಗ್ಯ ವಿಶೇಷ

ಇವರೆಲ್ಲ ಕನ್ನಡಿಗರು. ಭಾಷೆಯನ್ನೂ ಮೀರಿ ಎಲ್ಲ ಜನರನ್ನೂ ತಟ್ಟಬಲ್ಲ ಮೋಡಿಗಾರರು. ನಗೆಯ ಮೂಲಕವೇ ನೋವು ಹೇಳುವ, ಚುಚ್ಚುವ ಮೂಲಕವೇ ಎಚ್ಚರಿಸಿ ವಿವೇಕ ಮೂಡಿಸುವ ಗಾರುಡಿಗರು ಇವರು.

ಇಷ್ಟೊಂದು ಜನ, ಏನೆಲ್ಲ ಸಾಧನೆ ಮಾಡಿದ ನಮ್ಮ ಜನ ಇದ್ದಾರಲ್ಲ ಎಂಬುದೇ ನಮ್ಮ ಹೆಮ್ಮೆ.

## ಆರ್.ಕೆ. ಲಕ್ಷ್ಮಣ್



ಹುಟ್ಟಿದ್ದು ಮೈಸೂರು. ಮನೆಮಾತು ತಮಿಳು. ಮಾತಾಡಿದ್ದು ಕನ್ನಡ. ಬರೆದ ರೇಖೆಗಳಿಗೆ ಭಾಷೆಯೇ ಇಲ್ಲ. ಹೀಗಾಗಿ ಎಲ್ಲರ ಕಣ್ಣು ಸೆಳೆದು, ಕಚಗುಳಿ ಇಡಬಲ್ಲ ಸೊಗಸುಗಾರಿಕೆ ಸಿದ್ಧಿಸಿದ ಕಲೆಗಾರ.

ಕನ್ನಡದ 'ಕೊರವಂಜಿ' ಇವರ ಮೊದಲ ಆಡುಂಬೊಲ. ಅಲ್ಲಿಂದ ಇನ್ನಷ್ಟು ಕಲಿಯಲೆಂದು ಹೊರಟದ್ದು ಮುಂಬಯಿಯ ಜೆ.ಜೆ.ರೂ ಶಾಲೆಗೆ.

ಇವರೇನೋ ಹೋದರು. ಪಾಪ ಅಲ್ಲಿ ಶಾಲೆಯ ಬಾಗಿಲು ತೆರೆಯಲಿಲ್ಲ (ಶಾಲೆಯ ದುರಾದೃಷ್ಟ). ಹಾಗೆಂದು ಕೈಚೆಲ್ಲಿ ಕುಳಿತುಕೊಳ್ಳುವ ಜಾಯಮಾನವಲ್ಲ. 'ಫ್ರೀಪ್ರೆಸ್ ಜರ್ನಲ್'ನಲ್ಲಿ ಕಾರ್ಟೂನಿಸ್ಟ್. ಅಲ್ಲಿಂದ ಟೈಂಸ್‌ಗೆ ಬಂದ ಮೇಲೆ ಲಕ್ಷ್ಮಣ್ ಕಾರ್ಟೂನ್ ಇಲ್ಲದ ಟೈಂಸ್ ಊಹಿಸಿಕೊಳ್ಳಲೂ ಮುಂಬಯಿಗರಿಗೆ ಸಾಧ್ಯವಿಲ್ಲ. 'ಯು ಸೆಡ್ ಇಟ್' ಮೂಲಕ ಅವರು ರಾಜಕೀಯಸ್ಥರನ್ನು ತಿವಿಯುವ, ಜನ ಸಾಮಾನ್ಯರ ಅಳಲನ್ನು ಮುಂದಿಡುವ ಕಾಯಕವನ್ನು ಅತ್ಯುತ್ಕೃಷ್ಟ ಕಲೆ ಆಗಿಸಿದ್ದಾರೆ. ಅದಕ್ಕೆಂದೇ ಅವರನ್ನು ಪದ್ಮಭೂಷಣ, ರಾಮನ್ ಮ್ಯಾಗ್ಸೆಸೇ ಪ್ರಶಸ್ತಿಗಳು ಹುಡುಕಿ ಬಂದಿವೆ. ಇದೆಲ್ಲ ಮೀರಿ ಬೆಳಗಾಗುತ್ತಲೇ ಟೈಂಸ್ ಪತ್ರಿಕೆಯ ಮುಖಪುಟ ನೋಡುತ್ತಿದ್ದಂತೆ ಬೆಳಗುವ ಪ್ರತಿ ಓದುಗನ ಮುಖದ ಬೆಳಕೇ ಒಂದು ನಿರಂತರ, ಅಮೂಲ್ಯ ಪ್ರಶಸ್ತಿ ಅವರ ಪಾಲಿಗೆ.

"ನೀವು ಈವರೆಗೆ ಚಿತ್ರಿಸಿದ ವ್ಯಂಗ್ಯ ಚಿತ್ರಗಳಲ್ಲಿ ಅತಿ ಶ್ರೇಷ್ಠವಾದುದು ಯಾವುದು?" ಎಂದು ಕೇಳಿದರೆ "ನಾನು ಈವರೆಗೆ ಅಂಥಾ ವ್ಯಂಗ್ಯಚಿತ್ರ ಬರೆದೇ ಇಲ್ಲ" ಎನ್ನುತ್ತಾರೆ ಲಕ್ಷ್ಮಣ್.

- ಸುರೇಶ್ ಕುಲಕರ್ಣಿ






ಸ್ಲಮ್ ನಿರ್ಮೂಲನ ಖಂಡಿತ ಬೇಡ ಸ್ವಾಮಿ. ದಂಗೆ, ಗಲಭೆ ಆಗಿ ಹೋದೀತು. ಆದರ ಬದಲು ರೈಲು ಮಾರ್ಗಾನೇ ಬದಲಾಯಿಸೋದು ಒಳ್ಳೆಯದು




ಕಾಂಗ್ರೆಸ್ಸಿಗೆ ಮತ ಕೊಡಿ! ಬೇರೆ ಯಾವುದೇ ಪಕ್ಷ ಬಡತನ, ನಿರುದ್ಯೋಗ, ಅಪರಾಧ ನಿರ್ಮೂಲನೆ ಮಾಡುವುದು ಸಾಧ್ಯವಿಲ್ಲ. ಕಳೆದ 50 ವರ್ಷಗಳಿಂದ ಇದು ಕಾಂಗ್ರೆಸ್ಸಿಗೇ ಸಾಧ್ಯವಾಗಿಲ್ಲ ಬಿಡಿ!



ನಾವು ಮತ ಪೆಟ್ಟಿಗೆ ಅಪಹರಣ, ಬೋಗಸ್ ಓಟ್ ಎಲ್ಲಾ ಮಾಡಿದರೂ ಸೋತೆವಲ್ಲ! ಅಂದರೆ ನಮ್ಮ ಪಕ್ಷ ಎಷ್ಟು ಹಳ್ಳಹಿಡಿದು ಹೋಗಿದೆ ನೋಡಿ!





## ಬಿ.ವಿ. ರಾಮಮೂರ್ತಿ



'ಮೂರ್ತಿ' ಎಂದೇ ಸುಪರಿಚಿತ. ಡೆಕ್ಕನ್ ಹೆರಾಲ್ಡ್‌ನ ಮಿ॥ ಸಿಟಿಜನ್‌ನ ನಿತ್ಯ ಕರ್ತೃ. ವ್ಯಂಗ್ಯಲೋಕಕ್ಕೆ 1952ರಲ್ಲಿ 'ಕಿಡಿ' ಪತ್ರಿಕೆಯಿಂದ ಪ್ರವೇಶ. 1955ರಲ್ಲಿ ಡೆಕ್ಕನ್ ಹೆರಾಲ್ಡ್‌ಗೆ.

ಕೊರವಂಜಿಯ (ಆರ್.ಕೆ) ಲಕ್ಷಣ್ ಮುಂಬಯಿಗೆ ಹೋದಾಗ ಅಲ್ಲಿ ಜಾಗ ತುಂಬಿದ್ದು ಈ ರಾಮನ ರೇಖೆ. ವಕ್ರ, ಅಷ್ಟೇ ಭಾವಪೂರ್ಣ, ಮೊನಚು.

ಅಪ್ಪಟ ಬೆಂಗಳೂರಿಗ. ಕನ್ನಡದ ಹಾಗೆ ಇಂಗ್ಲಿಷ್‌ನ ಆಳಜ್ಞಾನ, ಸಾಮಾಜಿಕ, ರಾಜಕೀಯ ಆಗುಹೋಗುಗಳನ್ನು ಅರಿತು, ಅಭಿವ್ಯಕ್ತಿಸುವ ಜಾಣ್ಮೆ. ಮೂರ್ನಾಲ್ಕು ಗೆರೆಗಳ ಲಾಸ್ಯದಲ್ಲೇ ಏನೆಲ್ಲ ಬಯಲು. ಅದಕ್ಕೇ ಇವರನ್ನು ಟೀಎಸ್ಸಾರ್ ಮೂರು'ತಿ' ಎಂದು ಕರೆದಿದ್ದು. ಗೆರೆಗಳ ಚಲನೆ, ಅನಿರೀಕ್ಷಿತ ಹೊರಳು, ಭಾವ ಬಿಂಬಿಸುವ ಕೌಶಲ ಮೂರೂ ಮುಪ್ಪುರಿಗೊಂಡವರು ಮೂರು'ತಿ'.

ಮೂರ್ತಿ ಅವರ ಕೀರ್ತಿ ದೊಡ್ಡದು. ನಮ್ಮ ಪತ್ರಿಕಾ ಅಕಾಡೆಮಿ ಅವರನ್ನು ಮನ್ನಿಸಿ ಪ್ರಶಸ್ತಿ ನೀಡಿದೆ. ಇನ್ನೊಬ್ಬ ಕನ್ನಡಿಗ ಆರ್.ಕೆ.ಲಕ್ಷ್ಮಣ್, ಗೋವಾದವರಾದ ಮಾರಿಯೋ ಮಿರಾಂಡ ಮತ್ತು ಕೇರಳದ ಅಬು ಅಬ್ರಾಹಂ ಅವರಷ್ಟೆ ರಾಷ್ಟ್ರೀಯ ಮಾನ್ಯತೆ, ಪ್ರಸಿದ್ಧಿ ಪಡೆದವರು ಇವರು.








## ಜಿ.ವೈ. ಹುಬ್ಳೀಕರ್




ಹುಬ್ಬಳ್ಳಿಯ ಅಂದಿನ ಕಲಾ ಮಂದಿರ, ಹುಬ್ಳೀಕರ್ ಅವರ ಮೊದಲ ಪಾಠ ಶಾಲೆ. ಗುರುಗಳಾದ ಮಿಣಜಿಗಿ ಅವರನ್ನು ಕಂಡರೆ ಅಪಾರ ಗೌರವ. ಬದುಕು ಕಲ್ಪಿಸಿದ ಗುರು ಎಂದು ಈಗಲೂ ಸ್ಮರಣೆ.

1964ರಲ್ಲಿ ವೃತ್ತಿ ಜೀವನಕ್ಕೆ ಕಾಲಿಟ್ಟ ಮೇಲೆ ಯೂರೋಪು ಪ್ರವಾಸ ಕೈಗೊಂಡು ಬರ್ಲಿನ್, ಪ್ಯಾರೀಸ್ ನಗರಗಳಲ್ಲಿ ವ್ಯಂಗ್ಯ ಚಿತ್ರ ಪ್ರದರ್ಶಿಸಿದ ಅದ್ಭುತ ಕನ್ನಡಿಗ 'ದ ಮೈಲ್' ಹಾಗೂ 'ದ ಸನ್' ಪತ್ರಿಕೆಗಳಲ್ಲೂ ಇವರ ವ್ಯಂಗ್ಯ ರೇಖೆಗಳು ಕೆಲವು ಕಾಲ ರಾರಾಜಿಸಿದ್ದು ಇದೆ.

'ಪ್ರಜಾಮತ' ವಾರಪತ್ರಿಕೆಯ ಚಿಂಗಾರಿಯಿಂದ ಜನಪ್ರಿಯತೆ ಪಡೆದ ಹುಬ್ಳೀಕರ್ ಈಗ 'ಪ್ರಜಾವಾಣಿ' ಪತ್ರಿಕೆಯಲ್ಲಿ ವ್ಯಂಗ್ಯ ಚಿತ್ರಕಾರರು.

**ಪ್ರಭಾಕರ ರಾವ್ ಬೈಲ್**

ವಿಚಿತ್ರ. ವ್ಯಂಗ್ಯಚಿತ್ರಕಾರರೆಂದೇ ಹೆಸರಾದರೂ ರಾಜಕೀಯದಲ್ಲಿ ನಿರಾಸಕ್ತಿ. ಹೀಗಾಗಿಯೇ ರಾಜಕೀಯ ವಸ್ತುವಿನ ವ್ಯಂಗ್ಯ ಚಿತ್ರಗಳನ್ನು ರಚಿಸಿದ್ದು ಕಮ್ಮಿ.

ಮೂಲತಃ ಪೇಂಟಿಂಗ್‌ನಲ್ಲಿ ಆಸಕ್ತಿ. ಮತ್ತೆ ಪೇಂಟಿಂಗ್ ಬ್ರಷ್ ಹಿಡಿದಿರುವ ಅವರಿಗೆ ಹೊಸ ಸಹಸ್ರಮಾನದ ಮೊದಲಿಗೇ ಮುಂಬಯಿಯಲ್ಲಿ ಏಕ ವ್ಯಕ್ತಿ ಪ್ರದರ್ಶನ ನಡೆಸುವ ಉದ್ದೇಶ.

'ನನ್ನ ಮೇಲೆ ಫ್ರೆಂಚ್ ಕಲಾವಿದ ಟೂಲೋಸ್ ಲಾಟ್ರೆಕ್ ಹಾಗೂ ವ್ಯಂಗ್ಯಚಿತ್ರಕಾರರಾದ ಸಿನೆ ಮತ್ತು ಆಂದ್ರೆ ಫ್ರಂಕೋಯಿಯವರ ಪ್ರಭಾವ ಜಾಸ್ತಿ. ಅದನ್ನು ಸ್ಪಷ್ಟವಾಗಿ ನನ್ನ ಎಲ್ಲ ಕೃತಿಗಳಲ್ಲಿ ಕಾಣುವುದು ಸಾಧ್ಯ' ಎನ್ನುವ ರಾವ್‌ಬೈಲ್‌ಗೆ ನಮ್ಮಲ್ಲಿನ ವ್ಯಂಗ್ಯಚಿತ್ರಕಾರ ಅಬು ಅಬ್ರಾಹಂ ತುಂಬಾ ಇಷ್ಟ.














## ನೀರ್ನಳ್ಳಿ ಗಣಪತಿ


ಸ್ವ-ವ್ಯಂಗ್ಯಭಾವಚಿತ್ರ

ಮೂರು ಸಾವಿರಕ್ಕೂ ಹೆಚ್ಚು ವ್ಯಂಗ್ಯಚಿತ್ರ ಪ್ರಕಟಿಸಿರುವ ಗಣಪತಿ ಉತ್ತರ ಕನ್ನಡದ ನೀರ್ನಳ್ಳಿಯವರು. ಯಲ್ಲಾಪುರದ ಹೈಸ್ಕೂಲಿನಲ್ಲಿ ಕಲಾ ಶಿಕ್ಷಕ. ಕಳೆದ ಇಪ್ಪತ್ತು ವರ್ಷಗಳಿಂದ ವ್ಯಂಗ್ಯ ಚಿತ್ರಗಳ ಕೃಷಿ. ಅನೇಕ ಕಡೆ ವ್ಯಂಗ್ಯ ಚಿತ್ರ ಪ್ರದರ್ಶನ. ಕೆಲವು ಬಹುಮಾನ, ಪ್ರಶಸ್ತಿ 'ಮರ್ಮಜ್ಞ ವಚನ' ವ್ಯಂಗ್ಯ ಚಿತ್ರ ಪುಸ್ತಕ ಪ್ರಕಟಿತ. ಇವರು ಉತ್ತರ ಕನ್ನಡ ಜಿಲ್ಲೆಯ 'ಅತ್ಯುತ್ತಮ ಕಲಾ ಶಿಕ್ಷಕ' ಪ್ರಶಸ್ತಿ ಪಡೆದವರು.







ರಾಜಕಾರಣಿಯನ್ನು ।
ಮೋಜಿಗೆ ಬಿಟ್ಟರ ।
ಯೋಜನೆಗಾಗಿ ಬಿಡುವಂಥ
ಹಣವೆಲ್ಲ ಭೋಜನಕ್ಕವ -
ಮರ್ಮಜ್ಞ ॥




ಸೋದರ ತಾನೆಂದು ।
ಬೀದಿಯಲ್ಲಿ ಹೇಳಿದವ ।
ಸಾಧಿಸಿ ಸಮಯ ದೊರೆತಾಗ
ಆಕೆಯ ಹಾದರಕ್ಕೆಳೆದ -
ಮರ್ಮಜ್ಞ॥



## ಪಂಜು ಗಂಗೊಳ್ಳಿ



ಇಂಗ್ಲೀಷ್ ಓದುಗರಿಗೆ ಪಂಜು ಗಂಗೂಲಿ ಎಂದೇ ಪರಿಚಿತ. ಕುಂದಾಪುರ ತಾಲ್ಲೂಕು ಗಂಗೊಳ್ಳಿಯ ಕೃಷಿಕ ಮನೆತನದ ಪಂಜೂಗೆ ಚಿತ್ರ ಗೀಚುವುದು ಬಾಲ್ಯದ ಗೀಳು. ಅದೇ ಈಗ ಹವ್ಯಾಸ. ಅದೇ ಉದ್ಯೋಗ ಕೂಡ.

ಕುಂದಾಪುರದ ಭಂಡಾರ್ಕರ್ ಕಾಲೇಜಲ್ಲಿ ಓದುತ್ತಾ ಇರುವಾಗಲೇ 'ತರಂಗ' ವಾರ ಪತ್ರಿಕೆಯಲ್ಲಿ ಚಿತ್ರಗಳು ಪ್ರಕಟ. ಓದು ಮುಗಿಸಿ 'ಮುಂಗಾರು' ದಿನ ಪತ್ರಿಕೆಯ ವ್ಯಂಗ್ಯಚಿತ್ರಕಾರ ಎನಿಸಿಕೊಂಡ ಮೇಲೆ ರೇಖೆಗಳಿಗೆ ಬಂತು ಹದ, ಮೊನಚು.

ನಾಲ್ಕು ವರ್ಷ 'ಲಂಕೇಶ್ ಪತ್ರಿಕೆ'ಯ ಪುಟಗಳಲ್ಲಿ ಗೆರೆಗಳ ಲಾಸ್ಯ. ಅಲ್ಲಿ ಪ್ರಕಟವಾಗುತ್ತಿದ್ದ ಪರಿಸರದ ಕತೆಗಳಿಗೆ ಹೊಸ ಹೊಳಪು ತಂದಿತ್ತವು ಇವರ ಚಿತ್ರಗಳು. ನಂತರ ಮುಂಬಯಿಗೆ ವಲಸೆ. ಎರಡು ವರ್ಷ ಪ್ರೀತೀಶ್ ನಂದಿ ಸಂಪಾದಕತ್ವದ 'ದಿ ಸಂಡೇ ಅಬ್ಸರ್ವರ್'ನಲ್ಲಿ ಉದ್ಯೋಗ. ಕಳೆದ ಐದು ವರ್ಷಗಳಿಂದ 'ದಿ ಬಿಸಿನೆಸ್ ಇಂಡಿಯಾ'ದಲ್ಲಿ ವೃತ್ತಿ.

ಟ್ರೇಡ್ ಫೇರ್ ಅಥಾರಿಟಿಯ ಮೊದಲ ಬಹುಮಾನ, ಹಿಂದೂಸ್ಥಾನ್ ಟೈಂಸ್ ನಡೆಸುವ ಸ್ಪರ್ಧೆಯಲ್ಲಿ ಎರಡನೆ ಬಹುಮಾನ.

ಅವಕಾಶ ದೊರೆತರೆ ಮತ್ತೆ ಕನ್ನಡ ಪತ್ರಿಕೆಗಳಿಗೇ ಹಿಂತಿರುಗುವ ತುಡಿತ.








## ಎಸ್.ವಿ. ಪದ್ಮನಾಭ



ತೀರ್ಥಹಳ್ಳಿ ತಾಲ್ಲೂಕಿನ ಕೆರೆಮನೆ ಹುಟ್ಟೂರು. ಬಿ.ಕಾಂ. ಪದವೀಧರ. ಕಳೆದ ಹದಿನೈದು ವರ್ಷಗಳಿಂದ ವ್ಯಂಗ್ಯಚಿತ್ರ ರಂಗದಲ್ಲಿ ಕೃಷಿ.

ರಾಜಕೀಯ ವ್ಯಂಗ್ಯಚಿತ್ರ ರಚನೆ ಪ್ರಾರಂಭ ಆಗಿದ್ದು 'ಹೊಸ ದಿಗಂತ' ದಿನ ಪತ್ರಿಕೆಯಲ್ಲಿ. ಕಳೆದ ಐದು ವರ್ಷಗಳಿಂದ ಅದು 'ಉದಯ ವಾಣಿ' ದಿನಪತ್ರಿಕೆಯಲ್ಲಿ ಮುಂದುವರಿದಿದೆ.

ಈಗವರು ಕರ್ನಾಟಕ ವ್ಯಂಗ್ಯಚಿತ್ರಕಾರರ ಸಂಘದ ಸಹಕಾರ್ಯದರ್ಶಿ.

✓



ಅಕ್ಕ ಪಕ್ಕದ ಮನೆಗಳಿಂದ ಸ್ಪರ್ಧೆ ತೀವ್ರವಾಗಿದೆ
ಈ ಸಾರಿ ಪಟಾಕಿ ಬಡ್ಜೆಟ್ ಜಾಸ್ತಿ ಮಾಡ್ಬೇಕು....




ಬುದ್ಧಿವಂತ-ಅವರವರಿಗೆ ಪ್ರಿಯವಾದುದನ್ನೇ ಹೇಳುತ್ತಾನೆ!

## ಎಸ್.ಕೆ.ನಾಡಿಗ್



ಕಳೆದ ಹತ್ತೊಂಬತ್ತು ವರ್ಷಗಳಿಂದ 'ಉದಯವಾಣಿ' ಓದುಗರಿಗೆ 'ಏನಂತೀರಿ?' ಎನ್ನುತ್ತಾ ದಿನಾ ಬೆಳಗೆದ್ದು ಪ್ರಶ್ನಿಸುವ ನಾಡಿಗ್ ಹುಟ್ಟಿ ಬೆಳೆದದ್ದು ಶಿವಮೊಗ್ಗದಲ್ಲಿ. ಬಿ.ಕಾಂ. ಪದವೀಧರ. ಮಿನಿಮ್ಯಾಗ್, ಶಂಕರ್ಸ್ ವೀಕ್ಲಿ, ಕಾರವಾನ್, ಮಾರ್ಚ್‌ನಂಥ ಪ್ರತಿಷ್ಠಿತ ಇಂಗ್ಲಿಷ್ ಪತ್ರಿಕೆಗಳಿಗೆ 1948ರಷ್ಟು ಹೊತ್ತಿಗೇ ಕಾರ್ಟೂನ್ ಕೊಡುಗೆ. ಆನಂತರ ಅವರನ್ನು ಕೈಬೀಸಿ ಕರೆದಿದ್ದು ಕನ್ನಡದ 'ಕೊರವಂಜಿ'. ನಂತರ ಎಲ್ಲ ಪತ್ರಿಕೆಗಳಲ್ಲೂ ನಾಡಿಗ್‌ರ ವ್ಯಂಗ್ಯ ರೇಖೆಗಳಿಗೆ ತೆರೆದ ಬಾಗಿಲ ಸ್ವಾಗತ.

ಭದ್ರಾವತಿಯ ಪೇಪರ್‌ಮಿಲ್‌ನ ಲೆಕ್ಕಾಧಿಕಾರಿಯಾಗಿ ಇದ್ದುಕೊಂಡೇ, ಲೆಕ್ಕಾಚಾರವಾಗಿ ಗೆರೆ ಎಳೆದು ನಗಿಸತೊಡಗಿದ ನಾಡಿಗ್ ಕತೆಗಾರರೂ ಕೂಡ. ಇವರ 'ಕನ್ನಯ್ಯ ರಾಮ' ಎಂ.ಎಸ್.ಸತ್ಯು ನಿರ್ದೇಶನದಲ್ಲಿ ಚಿತ್ರವಾಗಿದೆ. ಸಣ್ಣ ಕತೆ 'ಜುಗ್ಗ', 'ಯಾರೇ ಬಂದವರು' ಟಿವಿ ಧಾರಾವಾಹಿಗಳಾಗಿವೆ.

'ಚಿತ್ರಗುಪ್ತ' ಪತ್ರಿಕೆಯ ಸಹಾಯಕ ಸಂಪಾದಕರಾಗಿಯೂ ದುಡಿದ ಇವರೇ 1976ರಲ್ಲಿ 'ಕರ್ನಾಟಕ ವ್ಯಂಗ್ಯಚಿತ್ರಕಾರರ ಸಂಘ'ದ ಸ್ಥಾಪಕ, ಅಧ್ಯಕ್ಷರು. ಹತ್ತು ವರ್ಷದ ಹಿಂದೆ ಇವರಿಗೆ ಪತ್ರಿಕಾ ಅಕಾಡೆಮಿ ಪ್ರಶಸ್ತಿ.






ಹೊಸ ಸಾಹೇಬರು - ಕೊರಡಿ ಖಾಲಿ ಇಲ್ಲ....




ಒಟ್ಟಿಗೆ ನಲವತ್ತು ಪರ್ಸೆಂಟು ಹೆಚ್ಚಿಸಿರುವುದರಿಂದ ಒಂದೆರಡು ಪರ್ಸೆಂಟು ಇಳಿಸಲು ಅಡ್ಡಿಯಿಲ್ಲ!

## ಪ್ರಕಾಶ್ ಶೆಟ್ಟಿ ಎಂ.



(ಅವರೇ ಅವರ ಬಗ್ಗೆ ಬರೆದುಕೊಂಡಿದ್ದು)

1960 : ಜನನ. ಸರ್ವ ಮೂರ್ಖರ ದಿನದಂದು.

1975 : ಕನ್ನಡ ಪತ್ರಿಕೆಗಳಲ್ಲಿ ವ್ಯಂಗ್ಯಚಿತ್ರಗಳು ರಾರಾಜಿಸಲು ಆರಂಭಿಸಿದ್ದು.

1980 : ಬಿ.ಎ. 'ಮುಗಿಸಿದೆ (ಯಾಕಂತ ಈಗಲೂ ಗೊತ್ತಿಲ್ಲ!)

1982 : ಕನ್ನಡ ವ್ಯಂಗ್ಯ ಚಿತ್ರಕಾರನಿಗೆ ಇಂಗ್ಲಿಷ್ ವ್ಯಂಗ್ಯ ಚಿತ್ರಕಾರನಾಗಿ ಭಡ್ತಿ (ಟೈಂಸ್ ಆಫ್ ಡೆಕ್ಕನ್ ಕೃಪೆಯಿಂದ)

1985 : 'ಮುಂಗಾರು' ಕನ್ನಡ ಪತ್ರಿಕೆಗೆ ಹಿಂಬಡ್ತಿ.

1989 : 'ದಿ ವೀಕ್'ಗೆ

1999 : ಮುಂಬಯಿನ ಪ್ರಿಯರಾಜ್ ಪ್ರತಿಷ್ಠಾನದಿಂದ ವರ್ಷದ ಅತ್ಯುತ್ತಮ ವ್ಯಂಗ್ಯಚಿತ್ರಕಾರ ರಾಷ್ಟ್ರೀಯ ಪ್ರಶಸ್ತಿ. 'ಕಾರ್ಗಿಲ್ ಮೆಮೋರೀಸ್' ವ್ಯಂಗ್ಯ ಚಿತ್ರಗಳ ಪ್ರದರ್ಶನ.

ಪುಸ್ತಕಗಳು : ವಾರೆಕ್ವಾರೆ ಮತ್ತು ಕಿಟ್ಟೂ.


















## ಎ.ಜಿ.ನರೇಂದ್ರ



ನೋಡಿದರೆ ಇವರು ನಿಜಕ್ಕೂ ವ್ಯಂಗ್ಯಚಿತ್ರಕಾರರೇ ಎಂಬ ಸಂಶಯ ಹುಟ್ಟಿಸುವಷ್ಟು ಗಂಭೀರ. ಹುಟ್ಟಿದ್ದು ಧಾರವಾಡ. ಶಾಲಾದಿನಗಳಿಂದಲೇ ವ್ಯಂಗ್ಯ ಚಿತ್ರಗಳಲ್ಲಿ ಆಸಕ್ತಿ. 1965 ರಲ್ಲಿ ಪ್ರಥಮ ವ್ಯಂಗ್ಯಚಿತ್ರ 'ಕರ್ಮವೀರ'ದಲ್ಲಿ ಪ್ರಕಟ. ನಂತರ ಕನ್ನಡದ ಎಲ್ಲ ಪತ್ರಿಕೆಗಳ ಪುಟಗಳಲ್ಲೂ ಇವರ ವ್ಯಂಗ್ಯ ವಿಲಾಸ ಕಾಣಿಸಿತು.

ಮುಂಬಯಿಯಲ್ಲಿ ಬಟ್ಟೆ ಗಿರಣಿಯೊಂದರಲ್ಲಿ ಕೆಲಕಾಲ ಸೂಪರ್‌ವೈಸರ್. ಆಗಲೇ 'ರಂಗರೇಖಾ' ಫೀಚರ್ಸ್‌ನಲ್ಲಿ ಪಾಕೆಟ್ ಕಾರ್ಟೂನ್‌ಗಳ ಕೊಡುಗೆ. ದೇಶದ ವಿವಿಧ ಹದಿನೈದು ಭಾಷೆಗಳಲ್ಲಿ ಇವರ ಚಿತ್ರಗಳಿಗೆ ಮನ್ನಣೆ, ಜನಪ್ರಿಯತೆ.

ಬೊಂಬಾಯಿಯ ಪ್ರತಿಷ್ಠಿತ 'ಫ್ರೀಪ್ರೆಸ್ ಜರ್ನಲ್'ನಲ್ಲಿ ಕಾರ್ಟೂನಿಗನಾಗಿ ಒಂದು ವರ್ಷ. ಅದಕ್ಕೆ ದೊರೆತ ಮನ್ನಣೆ ಎಂದರೆ 'ಶಂಕರ್ಸ್ ವೀಕ್ಲಿ'ಯಿಂದ ಕರೆ. ಭಾರತೀಯ ವ್ಯಂಗ್ಯಚಿತ್ರ ಕಲೆಯ ಹರಿಕಾರ ಎನಿಸಿಕೊಂಡ ಶಂಕರ್ ಜೊತೆ ಎರಡುವರ್ಷ. ಎಮರ್ಜೆನ್ಸಿಯ ಬಿಸಿಯಿಂದ ಮುಚ್ಚಿದ ವೀಕ್ಲಿಯಿಂದಾಗಿ, ಹುಬ್ಬಳ್ಳಿಯ 'ಸಂಯುಕ್ತ ಕರ್ನಾಟಕ'ಕ್ಕೆ ಜಿಗಿತ. ಹನ್ನೊಂದು ವರ್ಷದ ನಂತರ 'ಕನ್ನಡ ಪ್ರಭ'ಕ್ಕೆ.

ಭಾರತದ ಸುವರ್ಣ ಸ್ವಾತಂತ್ರ್ಯೋತ್ಸವದ ನೆನಪಿಗೆ ರಾಜ್ಯದಲ್ಲಿ ಊರೂರು ತಿರುಗುತ್ತಾ, ಐವತ್ತು ಕಲಾವಿದರ ವ್ಯಂಗ್ಯ ಚಿತ್ರಗಳನ್ನು ಜನರ ಮನೆ ಬಾಗಿಲಿಗೆ ಕೊಂಡೊಯ್ದ ಸಾಹಸಿ. ಈಗ ಕರ್ನಾಟಕ ವ್ಯಂಗ್ಯ ಚಿತ್ರಕಾರರ ಸಂಘದ ಅಧ್ಯಕ್ಷರು.






✓

ನಿಮ್ಮ ಜಾತಕದಲ್ಲಿ ಅನುಕೂಲ ತಾರೆಗಳಿಲ್ಲ... ಅಂತ ಯಾಕೆ ಚಿಂತಿಸ್ತೀರಿ, ಸೋನಿಯಾಜಿ? ತಾರೆಗಳು ಇಲ್ಲಿದ್ದಾರಲ್ಲ!

ನರೇಂದ್ರ

ಚಂದ್ರಶೇಖರ ಗುಬ್ಬಿ



ನಾನು ಚಂದ್ರಶೇಖರ ಗುಬ್ಬಿ, ಹುಟ್ಟಿದ್ದು ಮೈಸೂರು, 19.4.1955ರಲ್ಲಿ. ಬೆಳೆದದ್ದು ಬಳ್ಳಾರಿಯ ಕಂಪ್ಲಿ, ಕೋಲಾರದ ಗೌರಿಬಿದನೂರು, ಹಾಸನದ ಅರಸಿಕೆರೆ, ಬೆಂಗಳೂರಿನ ದೇವನಹಳ್ಳಿ, ತಿರುಗಿದ್ದು ಎಲ್ಲ ಊರು. ಸದ್ಯ ನೆಲೆ ನಿಂತಿರುವುದು ಬೆಂಗಳೂರು. ಹೆಸರಲ್ಲಿರುವ ಗುಬ್ಬಿ ನನ್ನ ತಾತನ ಊರು.

ಹಲವು ಊರುಗಳಲ್ಲಿ ಓದು ಮುಗಿಸಿ ಬೆಂಗಳೂರಿನ ಎಂ.ಇ.ಎಸ್‌ನಲ್ಲಿ ಕಾಲೇಜು 'ಮುಗಿಸಿ' ನಂತರ ಕೆಲಸಕ್ಕಾಗಿ ಅಲೆದಾಟ. ಕಾವ್ಯ ಬರೆಯಲು ಹೋಗಿ ಕಾರ್ಟೂನ್ ಬರೆಯತೊಡಗಿದ್ದು ವಿಚಿತ್ರ. 'ಪ್ರಜಾಪ್ರಭುತ್ವ' ಪತ್ರಿಕೆಯಲ್ಲಿ ರಾಜಕೀಯ ವ್ಯಂಗ್ಯ ಚಿತ್ರಕಾರನಾಗಿ ಪ್ರವೇಶ. ನಂತರ ಉದಯವಾಣಿ. ಹಾಗೇ ನಾಡಿನ ಹಲವು ಪ್ರಮುಖ ಪತ್ರಿಕೆಗಳಲ್ಲಿ ವ್ಯಂಗ್ಯ ಚಿತ್ರಗಳು ಪ್ರಕಟ.

ಹೆಸರಾಂತ ಪತ್ರಕರ್ತರುಗಳಾದ ವಿ.ಎನ್.ಸುಬ್ಬರಾವ್ ಮತ್ತು ಎಂ.ವಿ. ರಾಮಕೃಷ್ಣಯ್ಯನವರ ಚಲನಚಿತ್ರ ವಾರಪತ್ರಿಕೆ 'ಚಿತ್ರಜ್ಯೋತಿ'ಗೆ ವಿನ್ಯಾಸಕಾರನಾಗಿ ಪ್ರವೇಶ. ಅಲ್ಲೇ ಅಂಕಣಕಾರನಾಗಿ, ವರದಿಗಾರನಾಗಿ ರೂಪಗೊಂಡಿದ್ದು. ಅಲ್ಲಿಂದ ಲಂಕೇಶ್ ಪತ್ರಿಕೆಗೆ. ಹತ್ತು ವರ್ಷಗಳ ನಂತರ 'ಹೊರ ಬಿದ್ದವನು' ಕಟ್ಟಿದ್ದು ಸ್ವಂತ ಸಂಸ್ಥೆ 'ವರ್ಣ'.

ಈಗ ನಮ್ಮಲ್ಲಿ ಕೆಲ ಸರ್ಕಾರಿ, ಕೆಲ ಖಾಸಗಿ ಸಂಸ್ಥೆಗಳ ವಾರ, ಮಾಸ ಪತ್ರಿಕೆಗಳು ವಿನ್ಯಾಸಗೊಂಡು, ಮುದ್ರಣಗೊಂಡು, ಪ್ರಕಟವಾಗುತ್ತಿವೆ. ಅಲ್ಲದೆ ಹಲ ಬಗೆಯ ಪ್ರಚಾರ, ಮಾಹಿತಿ ಪುಸ್ತಕಗಳು ವಿನ್ಯಾಸಗೊಳ್ಳುತ್ತಿವೆ.

'ಜೀವ ಜಾಲ', 'ಜೀವ ಜಗ' ವನ್ಯಲೋಕದ ಬಗ್ಗೆ ಬರೆದ ಎರಡು ಪುಸ್ತಕಗಳು ಪ್ರಕಟಗೊಂಡಿವೆ. ■








## ಬಿ.ಜಿ. ಗುಜ್ಜಾರಪ್ಪ

ಕನ್ನಡಿಗರಿಗೆ ಗುಜ್ಜಾರ್ ಎಂದೇ ಪರಿಚಿತ. 'ಲಂಕೇಶ್ ಪತ್ರಿಕೆ' ಯಲ್ಲಿ ಹೊಸತನದ ಗೆರೆಗಳನ್ನು ಮೂಡಿಸಿದ ಇವರು ಇತಿಹಾಸ ಎಂ.ಎ. ಪದವೀಧರರು. ಕೆಲವು ದಿನ ಕನಕಪುರದ ರೂರಲ್ ಕಾಲೇಜಲ್ಲಿ ಲೆಕ್ಚರರ್ ಆಗಿಯೂ ದುಡಿದಿದ್ದಾರೆ.

'ಡೆಕ್ಕನ್ ಹೆರಾಲ್ಡ್' ನಲ್ಲಿ ಕೆಲವು ಕಾಲವಿದ್ದ ಅವರು ಹಲವಾರು ಇಂಗ್ಲಿಷ್ ಪತ್ರಿಕೆಗಳಿಗೆ ವ್ಯಂಗ್ಯದ ಗೆರೆಗಳ ಕಾಣಿಕೆ ನೀಡಿದ್ದಾರೆ. ಮ್ಯಾಗಝಿನ್‌ಗಳು, ಪುಸ್ತಕಗಳ ರಕ್ಷಾಪುಟ ವಿನ್ಯಾಸದಲ್ಲಿಯೂ ಸಿದ್ಧಹಸ್ತರು. ಹಾಗೆ ಐನೂರಾದರೂ ಪುಸ್ತಕ, ಮ್ಯಾಗಝಿನ್‌ಗಳ ರಕ್ಷಾಪುಟ ವಿನ್ಯಾಸ ಮಾಡಿದ್ದಾರೆ.

ಟಿವಿಯಲ್ಲಿ ಪ್ರಸಾರವಾದ 'ಕಂಡಕ್ಟರ್ ಕರಿಯಪ್ಪ' ಧಾರಾವಾಹಿಯ ಟೈಟಲ್ ಕಾರ್ಡ್, ವ್ಯಂಗ್ಯ ವ್ಯಕ್ತಿ ಚಿತ್ರಗಳು ಇವರ ಕುಂಚದಿಂದಲೇ ಮೂಡಿ ಬಂದಿದ್ದವು. ಅಮೆರಿಕಾದ 'ವಿಟ್ಟಿ ವರ್ಲ್ಡ್' ಪ್ರಕಟಿಸಿದ್ದ ಪ್ರಪಂಚದ 'ಅತ್ಯುತ್ತಮ ರಾಜಕೀಯ ವ್ಯಂಗ್ಯ ಚಿತ್ರಗಳು' ಪುಸ್ತಕದಲ್ಲಿ ಇವರ ಮೂರು ವ್ಯಂಗ್ಯಚಿತ್ರಗಳೂ ಸ್ಥಾನ ಪಡೆದಿರುವುದೊಂದು ವಿಶೇಷ ಹೆಮ್ಮೆಯ ವಿಚಾರ.











ಈ ಯಜಮಾನಿಕೆ ಪಕ್ಷಗಳ ಸಂಸ್ಕೃತಿಯೇ ಹಾಗೆ!






# ಅತಿಕ್ರಮಣ

■ ಗೀತಾ ನಾಗಭೂಷಣ



ಹಾಂಗ ನೋಡದರ ಯಮನ್ಯಾ ನನ್ ಹಾಸಗೀಗಿ ಬರಾದು ಬಿಟ್ಟಿರಲಿಲ್ಲ. ರಾತ್ರಿ ಕನೀಟ ಅಂದರೂನು ನಿದ್ದಿ ಹತ್ತಾಮುಂದೊಮ್ಮಿ ಮತ್ತ ಆಕಾಸದಾಗ ಬೆಳ್ಳಿ ಚಿಕ್ಕಿ ಮೂಡೋ ಹೊತ್ತನ್ಯಾಗೊಮ್ಮಿ ಅಂತ ಎಡ್ಡು ಸರ್ತಿಯರೆ ಇಂವಾ ನನಗ ತನ್ನ ತೊಡ್ಯಾಗ ಎಳ್ಕೊಂಡು ತೇಕತ್ತಿದ್ದನಲ್ಲ, ಅದುನೂ ತಪ್ಪಿರಲಿಲ್ಲ ಖರೇ. ಆದರ ಯಾಕೋ ಈಗೀಗ ಅವನ ಟೊಂಕದಾಗ ಮದಲಿದ್ದ ಜೋಶ್ ಇಲ್ಲಂತ ಅನಸತ್ತಿತ್ತು.

**ಧ**ಡಕ್ಕನೆ ಎದ್ದು ಕುಂತಳು! ಎದೆ ಝುಲ್ ಅಂದಂಗಾಗಿ ಗಾಬರಿಗೊಂಡರೂ ಹಾಸಿಗೆಬಿಟ್ಟು ಕದಲಲಿಲ್ಲ. ಕಣ್ಣೆವೆ ಮುಚ್ಚಿ ತೆರೆದು ಬೆಳಕಿಗಾಗಿ ಹುಡುಕಿದಳು. ಗಳಿಗೆ ಹೊತ್ತು ಕಳೆಯುತ್ತಿದ್ದಂತೆ ಮೆಲ್ಲನೆ ಅರಿವಾಯಿತು. ಘಾಸಲಟ ಎಣ್ಣೆಯ ಚಿಮಣದ ಬೆಳಕು ಸಾಯುವ ರೋಗಿಯಂತೆ ಬಿಕ್ಕುತ್ತಿತ್ತು. ಆ ಕಡೆ ಈ ಕಡೆ ಹೊಯ್ದಾಡುತ್ತ ಬೆಳಕನ್ನು ಕಳೆಧುಕೊಳ್ಳುತ್ತಿತ್ತು. ಇದ್ದಬಿದ್ದ ಅರೆಜೀವದ ಬೆಳಕು ಗುಡಿಸಲಿನ ತಡಿಕೆಗೋಡೆಗಳ ತನಕ ಓಡಿಹೋಗಲು ಹವಣಿಸಿ ಕೈಲಾಗದೆ ಕುಸಿದು ಮಣ್ಣಿನ ನೆಲದ ಮೇಲೆ ತೇಕುತ್ತ ಹೊಳ್ಯಾಡುತ್ತಿತ್ತು. ಶಾಣಮ್ಮ ಹರಿದ ಕೌದಿಯಲ್ಲೇ ಮುದುರಿ ಮಲಗಿದ್ದಳು. ಕೈ ಚಾಚಿ ನೆಲದ ಮೇಲೆ ಮಲಗಿತ್ತು. ಕೈ ಸವರ್‍ಯಾಡಿ ಕೂಸನ್ನು ಮಗ್ಗುಲಿಗೆಳೆದುಕೊಂಡು, ಕುಸು ಕುಸು ಮಾಡಿದ ಅದರ ಬಾಯಿಗೆ, ಕುಪ್ಪಸದ ಗಂಟು ಬಿಚ್ಚಿ ಮೊಲೆ ತುರುಕಿದಳು. ನಿದ್ದೆಗಣ್ಣಿನಲ್ಲಿದ್ದ ಮಲ್ಲು ಬಾಯಲ್ಲಿ ಮೊಲೆ ತೊಟ್ಟು ಹಿಡಿದುಕೊಂಡೇ ನಾಕು ಸಲ ಚೀಪಿ ನಿದ್ದೆಗಿಳಿಯಿತು.

ಮಗುವಿನ ಬಾಯಿಯಿಂದ ಮೆಲ್ಲಗೆ ಮೊಲೆ ಬಿಡಿಸಿಕೊಂಡು ಎದ್ದು ಕುಂತು ಕುಪ್ಪಸದ ಗಂಟು ಬಿಗಿದುಕೊಂಡಳು. ಬಿಚ್ಚಿದ ತುರುಬನ್ನು ತುಸು ಸವರಿ ಬಿಗಿ ಮಾಡಿಕೊಂಡಳು. ಕೂಸಿನ ಮೇಲೆ ಕೌದಿ ಹೊಚ್ಚಿ ಸಾವಕಾಸ ಎದ್ದು ನಡೆದು ಬಾಗಿಲು ಸರಿಸಿ ಹೊರಬಂದಳು. ತಣ್ಣಗಿನ ಗಾಳಿ ಪೈಕೊರೆಯಿತು. ಬಾಗಿಲು ಮುಚ್ಚಿಕೊಂಡು ನಾಕ್ಹೆಜ್ಜೆ ಮುಂದೆ ಬಂದು ಅಂಗಳದಲ್ಲಿ ನಿಂತಳು. ಅಂಗಳದಾಚೆಯ ಗೊಳಕಲ್ಲಿನ ಆವಾರು, ಅದಕ್ಕಂಟಿದಂಗಿದ್ದ ಲೊಳ್ಳಾಗಡ್ಡಿ ತ್ವಾದ ಮುಳ್ಳುಬೇಲಿ, ಬಾಜು ನಿಂತಿದ್ದ ಕಣಕಿ ಬಣಮಿಗಳೆಲ್ಲ ಮಬ್ಬು ಮುಸುಕಿನೊಳಗ ಬರೀ ಆಕಾರವಾಗಿ ಕಂಡುವು. ಅಂಗಳದ ಮೂಲೆಯಲ್ಲಿದ್ದ ಕೋಳಿಗೂಡಿನ ಸನ್ಯಾಕ ಬಂದು ಕಾಲುಮಡಿದಳು. ಎದ್ದು ಬಂದು ಗುಡಿಸಲು ಬಾಗಿಲಲ್ಲಿ ಕಂಡು ಬಿಸಿಯುಸಿರೆಳೆದಳು. ಅವಳ ಲೆಕ್ಕಕ್ಕೆ ಬೆಳಕು ಹರಿಯಲು ಬಂದಿತ್ತು. ಚುಕ್ಕಿಗಳ ಮಬ್ಬು ಬೆಳಕಿನಲ್ಲಿ ಗಿಡಗಂಟಿಗಳೆಲ್ಲ ಬಾಯಿಮುಚ್ಚಿಕೊಂಡು ಮೂಕದೆವ್ವಗಳಂತೆ ನಿಂತಿದ್ದುವು. ''ಛೇ... ಇದ್ಯಾಂಗಂತೀನಿ! ತೆಲಿ ಕೆಟ್ಟಂಗದಾ ನಂದು ಹಗಲಾ ರಾತರಿ ಅದೇ ಧ್ಯಾನದಾಗ ನನಗೆ ಧುಂಧ ಹಿಡಿದಂಗಾಗ್ಯಾದ ಖೋಡಿ.'' ಅಂದು ನಿಟ್ಟುಸಿರು ಬಿಟ್ಟಳು. ಮಾಗಿ ದಿನಗಳವು. ಚಳಿಯಿತ್ತು. ಶಾಣಮ್ಮ ಮೈತುಂಬ ಸೆರಗೆಳೆದುಕೊಂಡಳು. ''ಶಾಣೀ....'' ಅಂತ ಯಮನಪ್ಪ ಬಂದು ಕರೆದಂಗಾಗಿ ಶಾಣಮ್ಮಳಿಗೆ ದಿಗ್ಗನೆ ಎಚ್ಚರಾಗಿ ಗಾಬರಿಗೊಂಡಿದ್ದಳು. ಮನೆ ಸವರಿದಂಗಿದ್ದ ಹರುಕುಮುರುಕು ಬೆಳಕಿನಲ್ಲಿ ಕಣ್ಣು ಬಾಗಿಲ ಕಡೆಗೆ ತಿರುಗಿದ್ದುವು. ಗುಡ್ಡಿ ಹಿಗ್ಗಿಸಿ ನೋಡಿದರೂ ಅಲ್ಲಿ ಯಾರೂ ನಿಂತಿರಲಿಲ್ಲ! ಹೂಂ.... ಈ ಕಡೆಗೆ ಯಮನಪ್ಪ ಸುಳಿಯದೆ ಇದ್ದದ್ದು ತಿಂಗಳ ಮ್ಯಾಲ ನಾಕೆಂಟು ದಿನ.

ಎಲ್ಲೋ ನಾಯಿ ಬಗುಳಿತು. ಸುತ್ತ ಮುತ್ತಿಕೊಂಡು ಮೌನದ ಮುಸುಕು ಚಿರ್‍ರೆಂದು ಹರಿದು ಮತ್ತೆ ಕೂಡಿಕೊಂಡಿತು. ದೂರ ದೂರದ ತನಕ ಮತ್ತೆಂಥ ಸಪ್ಪಳವೂ ಇಲ್ಲ. ''ಹಿನಾ ರಾತರಿ ಭಾಳದಾನೇ ಯವ್ವಾ.... ಬೆಳ್ಳಿಚಿಕ್ಕಿ ಮೂಡೇಯಿಲ್ಲಂತ ಕಾಣಸ್ತದ. ಮಲ್ಲಮ್ಮನ ಧಂಡಿನೂ ಪತ್ತಾಯಿಲ್ಲ. ನನಗ ಈಗೇ ಅರುಮರು ಹಿಡಿತೋ ಏನೋ ಇದರ ಮ್ಯಾಲ ಮಣ್ಣಹಾಕಲೀ.... ಈ ನನ್ ಗಂಡಂಬಾ ಯಮನ್ಯಾ ಊರುಬಿಟ್ಟು ಹೋಗಿ ತಿಂಗಳ ಮ್ಯಾಲ ಎಂಟು ದಿನಾ ಆಯ್ತು. ಎಲ್ಲಿ ಅದಾನೋ ಏನೋ ಅವನ ಸುದ್ದೀನೇ ತಿಳಿವಲ್ದು. ಅತಾ ಪತ್ತಾ ಗೊತ್ತಾಗವಲ್ದು. ಮದಲೇ ಮೈಗಳ್ಳ, ಹೆಂಡ್ರು ತಂದು ಹಾಕಿದ್ದು ತಿಂದು ದುರಗವ್ವನ ಗುಡಿ ಆವಾರದಾಗ ಅವಾರಾ ಗಂಡುಗೋಳ ಜೋಡಿ ಕುಂತು ಇಸ್ಪೇಟಾ, ಹುಲಿಕಟ್ಟಿ ಆಟಾ ಆಡ್ತಿದ್ದ ಇಂವಾ. ಆವಾಗವಾಗ ಮನ್ಯಾಗ

ಜಗಳಾ ಜೂಟಿ ಆಡದಾಗ ಮನಿಬಿಟ್ಟು ಹೋಗತಿದ್ದನು ಖರೇ. ಆದರ ಎಲ್ಲೀಗಿ? ನನ್ ಜೋಡಿ ಜಗಳಾಡದ್ರ, ಆ ನನ್, ಸಂವತಿ ಹಾದರಗಿತ್ತಿ ರಂಡಿ ಕಮಲಿ ಗುಡಸಲಕ್ಕೆ ಹೋಗತ್ತಿದ್ದನು. ಆಕಿ ಜೋಡಿ ಜಗಳಾ ಆಡಿದ್ರ



ಮುಣಸ್ಗೊಂಡು ನನ್ ಗುಡಸಲ ದಾರಿ ಮೂಸಗೋತ ಇಲ್ಲಿಗಿ ಬರತ್ತಿದ್ದನು. ಆಟೂಮೀರಿ ಭಾಳೇ ಭಾಳಂದ್ರ, ಹೇಳಲಾರ್ದೆ ಕೇಳಲಾರ್ದೆ ಕಲಬುರ್ಗಿಗಿ ಗಾಡಿಬಿಡತ್ತಿದ್ದನು. ಎಲ್ಲೀಗಿ ಹ್ವಾದರನೂ ನಾಕೆಂಟುದಿಂದಾಗೇ ಹಳ್ಳೀಗಿ ವಾಪಸ್ಸು ಬರ್ತಿದ್ದ ನನ್‌ಗಂಡ ಈಗ ಒಂದು ತಿಂಗಳ ಮ್ಯಾಲಾಯ್ತಲ್ಲ. ಯಾಕ ವಾಪಸ್ಸ ಬಂದಿಲ್ಲಂತೀನಿ? ಹೆಂಡ್ರು, ಮಕ್ಕಳಿಗಿ ಬಿಟ್ಟು ಎಲ್ಲಿ ದೇಶಾಂತ್ರ ಹ್ವಾದನೋ.... ಯಾ ಸಾದು ನಂತರ ಟೋಳ್ಯಾಗ ಭರ್ತಿಯಾಗಿ ಗಾಂಜಾ ಸೇದ್ಕೋತ ಶಂಭೊ ಶಂಕರಾ.... ಅಂತ ಒದರಕೋತ ಗುಡಿಗುಂಡಾರ ಸುತ್ತಲಕತ್ತಾನೋ.... ರೊಕ್ಕಾ ರುಪೈ ಹಚ್ಚಿ ಜುವ್ವಾ, ಮಟಕಾ ಆಡಾಮುಂದ ಎಲ್ಲಿ ಪೋಲಿಸರ ಕೈಯ್ಯಾಗ ಸಿಕ್ಕು ಲಾಕಪ್ಪ ಸೇರ್ಯಾನೋ..... ಏನಾದನೊ ಶಿವನೇ.... ನನಗೊಂದೂ ತಿಳಿಂಗಿಲ್ಲಾಗ್ಯಾದಲ್ಲೋ ದೇವರೇ....

ನಾ ಯೆನರೆ ಆವನ ಮನಸಿಗಿ ಪೆಟ್ಟು ಬೀಳಂತ ಮಾತಾಡಿನೇನು? ಎಂದೂ ಯೋಚಿಸಿದಳು. ಅಂಥ ಮಾತುಗಳಾವವೂ ಕಾಣಿಸಲಿಲ್ಲ. ಮತ್ತೆ ನನ್ ಸಂವತಿ ಕಮಲಿ ಏನರೆ ಜಗಳಾ ಆಡಿ ಅಲ್ಲಸಲ್ಲದ ಬೈಗುಳ ಬೈದಳೋ ಏನೋ.... ನಿನ್ನಿ ಸಿಕ್ಕಿದ್ದಳ್ಳಲ್ಲ. ಕೇಳದ್ರ ''ಏನೂಯಿಲ್ಲೇ ಯಕ್ಕಾ.... ನಾ ಅಂವಗ ಏನೂ ಅಂದಿಲ್ಲೇ.... ಕೂಸಿಗಿ ಜಡಾ ಆಗಿ ಎಂಟು ದಿನಾ ಆಯ್ತು. ಮೈಯಂಬಾ ಮೈಯಂಬಾದು ಕಾಯ್ದ ರೊಟ್ಟಿ ಹಂಚಿನಂಗ ಸುಡ್ಲಕತ್ತಾದ. ಕಲಬುರ್ಗಿ ದವಾಖಾನಿಗರೆ ಕರ್ಕೊಂಡು ಹೋಗಾಮಿ ನಡಿ' ಅಂತ ಮಾತರ ಅಂದೀನೇ ಯಕ್ಕಾ... ದೂಸರಾ ಮಾತ ಆಡಿದ್ದ ನಂದರ ನನ್ ನಾಲಿಗಿ ಕಡ್ದು ಬೀಳ್ಲೇ ತಾಯೀ.... ನಾ ಅಂವಗೇನೂ ಕೆಟ್ಟ ಮಾತಾಡಿಲ್ಲೆವ್ವಾ, ನನಗ ನಂಬು, ನನ್ ಮ್ಯಾಲ ಭರೋಸಾಯಿಡು ಯಕ್ಕಾ....'' ಅಂತ ಕಣ್ಣಾಗ ನೀರು ತಂದಿದ್ದಳಲ್ಲ. ಇಬ್ರೂ ಹೆಂಡ್ರು ಏನೂ ಅಂದಿಲ್ಲಂತಾಯ್ತು, ಮತ್ಯಾಕ ನಮ್ ಗಂಡ ಯಮನಪ್ಪ ನಮಗ ಬಿಟ್ಟು ಹ್ವಾದನೂ.... ಅಳಗಾ ಬಳಗಾ ಅಂತ ಯಾ ಊರಿಗಿನೂ ಯಾರ ಮನೀಗಿನೂ ಹೋಗಾ ಪೈಕಿ ಅಲ್ಲಂವಾ.... ಎಲ್ಲಿ ಹ್ವಾದನು ಹಂಗಾದ್ರ....

ಯಮನಪ್ಪ ಕಲ್ಲಳ್ಳಿ ಹುಲಿಗೆಪ್ಪ ನಾಯಕೋಡಿ ಸಾಬಣ್ಣನ ಮಗಾ. ನಾಕೊರ್ಸಿನ ಹಿಂದ ಬಂದಿದ್ದ ಮರಗಮ್ಮನ ಹಾವಳ್ಯಾಗ ಕುಂಡಿಬಾಯಿಬಿಚ್ಚಿ (ಕಾಲರಾ) ಅವನ ಅವ್ವ-ಅಪ್ಪ ಇಬ್ಬರೂ ಸತ್ತು ಶಿವನಪಾದಾ ಸೇರಿದ್ದರು. ಇಂವಾ ಒಬ್ಬನೇ ಮಗಾ. ಅಕ್ಕ ತಂಗಿ ಅಣ್ಣಾ ತಮ್ಮಾ ಅಂತ ಮತ್ಯಾರೂ ಇರಲಿಲ್ಲ. ಒಂಟಿ ಗೂಟದಂಗಿದ್ದ ಯಮನ್ಯಾ ಹಚ್ಚಗಿದ್ದಲ್ಲಿ ಉಂಡು ಬೆಚ್ಚಗಿದ್ದಲ್ಲಿ ಮನಕೊಳ್ಳಾ ಆಸಾಮಿ. ಆದರ ಈ ಗಬರೂನ ಬಾಯಿಮಾತರ ಬಣ್ಣದ್ದು! ಬಣ್ಣದ ಮಾತಾಡ್ಲಕ್ಕ ಸುರು ಮಾಡದನಂದರ ಆಯ್ತು, ಮುಂದ ಕುಂತ ಮಂದೆಲ್ಲಾ ಮಳ್ಳಾಗತ್ತಿದ್ದರು. ಅಂಥದ್ದೇ ಬಣ್ಣದ ಮಾತಾಡಿ ಬಾಜೂ ಹಳ್ಳಿಯ ಫಕೀರಪ್ಪನ ಜೋಡಿ ದೋಸ್ತಿ ಮಾಡ್ಕೊಂಡು ಅವನಿಗಿ ತನ್ನ ಕಿಸೆದಾಗ ಹಾಯ್ಕೊಂಡಿದ್ದ. ಎಡ್ಡೂ ಹಳ್ಳಿ ನಡುವಿನ ಸಿಂದಿಖಾನ್ಯಾಗ ಕುಂತು ಇಬ್ಬರೂ ಕುಡೀತಿದ್ದರು. ಆದರ ರೊಕ್ಕಾ ಮಾತರ ಫಕೀರಪ್ಪನೇ ಕೊಡ್ತಿದ್ದ. ಅದೇ ಸಿಂದಿಖಾನ್ಯಾಗ ಮಿರಚಿ ಭಜಿ, ಕಾರಉಪ್ಪ ಹಾಕಿ ತಾಳಸಿದ ಖಂಡದ ಚೂರು, ಉಪ್ಪ ಹಚ್ಚಿ ಹುರದ ಸೇಂಗಾದ ಬೀಜಾ, ಕರ್ದ ಕಡ್ಲಿಬ್ಯಾಳಿ, ಕುದಸಿದ ತತ್ತಿಗಳನ್ನು ಮಾರುತ್ತ ಕಂದೀಲಿನ ಬೆಳಕಿನ್ಯಾಗ ಕಟ್ಟಿಮ್ಯಾಲ ಕುಂತಿರುತ್ತಿದ್ದ ಮುದುಕಿ ಸಾಬವ್ವಾಯಿಗಿನೂ ಯಮನ್ಯಾನ ಮಾತಿನ ರುಚಿ ಹತ್ತಿತ್ತು. ನಾಟಕದವರಂಗ ಏಟರೇ ಛಲೋ ಛಲೋ ಮಾತಾಡ್ತೆಲ್ಲೋ ನಮ್ಮಪ್ಪಾ.... ಬಾ ಯಿಕಾಡಿ. ತಗೋ ಸಿಂದಿ ಕುಡ್ಯಾಮುಂದ ಬಾಡಸಗೋ.... ತಗೋ....' ಅಂತ್ಹೇಳಿ ಕರ್ರೂದ್ದ ಕರ್ರೂದ್ದ ಖಂಡದ ತುಂಡು ಮಿರಚಿ ಭಜಿಗಳನ್ನು ಕೊಡುತ್ತಿದ್ದಳು. ಹಿಂಗಾಗಿ ತಿಂಗಳೊಪ್ಪತ್ತಿನ್ಯಾಗ ಸಾಬವ್ವಾಯಿ ಫಕೀರಪ್ಪನ ಕಡಿಲಿಂದ ತನ್ನ ಮೊಮ್ಮಗಳಿಗಿ ಯಮನ್ಯಾ ಮದಿಮಾಡ್ಕೋತಾನೇನೋ ಕೇಳಿ ನೋಡು ಅಂತ ಶಿಫಾರಸ್ಸು ಹಚ್ಚಿದಳು. ಯಮನ್ಯಾನ ಮೈಯಾಗನೂ ಹರ್ಯಾ ಹೊಕ್ಕಿತ್ತು. ಮೈಯಿಗಿ ಹೆಣ್ಣಿನ ಜೋಡಿ ಬೇಕು ಅಂತ ಅನಸೋ ದಿನಗಳು. ಒಂದಿನಾ ಸಾಬವ್ವನ ಮನೀಗಿ ಬಂದು ಆಕಿನ ಮಮ್ಮಗಳಿಗಿ ನೋಡಿದ. ನೆಟ್ಟನ ಮೂಗು ಬಟ್ಟಲಗಣ್ಣಿನ ಜೋಡೆಲುಬಿನ ದುಂಡುಮೈಯ ಶಾಣಮ್ಮ ಅವನ ಮನಸ್ಸು ತುಂಬಿದಳು. ಹಾಂಗ ಆಕಿಗಿ ನೋಡಿ ಬರಾಮುಂದೇ ಸಾಬವ್ವಗ ತನ್ನ ಫೈಸಲಾ ಹೇಳಿಬಿಟ್ಟ, ''ಆಯೀ.... ನಿನ್ ಮಮ್ಮಗಳು ನನಗೆ ಪಸಂದ ಆಗ್ಯಾಳ. ಆದರ ನಾ ತಾಯಿತಂದಿಲ್ಲದ ಪರದೇಶಿ ನೋಡು. ನನ್‌ಬಲ್ಲಿ ಏನೂ ಇಲ್ಲ. ಹೆಣ್ಣಿನ 'ತೆರು, ಅಂತ ಪನ್ನಾಸು ರುಪೈ ಕುಡ್ತೀನಿ. ಆಟೀ. ಮದಿ ನೀನೇ ಮಾಡಿ ಕುಡ್ಬೇಕು ನೋಡು. ನಾ ಬರೇ ತಾಳಿ ಕಾಲುಂಗರ ತಗೊಂಡು ಬರಾಂವ ನೋಡು. ನಿನಗ ಪಸಂದಾದರ ನೋಡು....'' ಅಂತ್ಹೇಳಿ ಬಿಟ್ಟ. ನಾಕು ದಿನ ಯೋಚಿಸಿದ ಸಾಬವ್ವ ಕಡೆಗೆ ಮಮ್ಮಗಳು ಶಾಣಮ್ಮನ ಮದವಿಯನ್ನು ಯಮನ್ಯಾನೊಂದಿಗೆ ಮಾಡಲು ನಿಶ್ಚಯಿಸಿದಳು.

ಬೇಲಿಯಾಚೆಯ ಲೊಳ್ಳಾಗಡ್ಡಿ ತ್ವಾಟದಾಗ ಆಳುಮಗ ಸೀನಿಂಗಪ್ಪ ಮಟ್ಟಿ ಹೂಡಿದ್ದ ಸದ್ದು ಕೇಳಿಬಂದಿತು. ಎತ್ತುಗಳ ಕೊರಳ ಗಂಟೆಸರದ ಆವಾಜು ಸುತ್ತಮುತ್ತಿನ ಮೌನದ ಹೆಪ್ಪು ಮುರಿಯಿತು. ಸೀನಿಂಗಪ್ಪನ ಹಾಡಿನ ದನಿ ತಂಗಾಳಿಯ ರೆಕ್ಕೆಗಳ ಮೇಲೆ ಸವಾರಿ ಮಾಡುತ್ತ ಶಾಣಮ್ಮನ ಅಂಗಳದ ಕಡೆಗೆ ನಡೆದುಬಂದಿತು. ಹಾಣಾದಿಯ ಗುಂಟ ಎದ್ದು ನಿಂತಿದ್ದ ಸಾಲು ಮರಗಳ ಸಂದಿಗೊಂದಿಗಳಿಂದ ಹಕ್ಕಿಪಕ್ಕಿಗಳು ಚೀಂವ್ ಚೀಂವ್ ಗುಟ್ಟುವುದು ಸುರುವಾಯಿತು. ಜೇರ್ ಸಂಗವ್ವಾಯಿಯ ಹುಂಜ ಕೂಗಿತು....

ನಾ ಈ ಯಮನ್ಯಾನ ಜೋಡಿ ಮದವ್ಯಾಗಿ, ಇವನ ಹೆಣ್ತಿ ಆಗಿ ಈ ಊರಿಗಿ ಬಂದಾಗ ಏನಿತ್ತಿಲ್ಲಿ? ಹರಕ ತಡಕಿ ಮುರಕ ಚಪ್ಪರ. ಮ್ಯಾಲಿನ ಛತ್ತೆಲ್ಲ ಹರ್ಕೊಂಡು ನಿಂತಿತ್ತು. ತೆಳಗಿನ ಸೆಲೆಯೆಲ್ಲಾ ಹೆಂಟಿಯೆದ್ದು ತೆಗ್ಗಾ ತೆವರಾ ಬಿದ್ದಿತ್ತು. ಬಂದ ಮರದಿನಾನೇ, ಸೀರಿ ಕಚ್ಚಿ ಹಾಯ್ಕೊಂಡು, ಟೊಂಕಕ್ಕ ಸೆರಗ ಸುತ್ಗೊಂಡು ಕೆಲಸಕ್ಕ ನಿಂತಿದ್ದ ನಾನು. ಅಡೀಗಿ ಹೋಗಿ ಸಿಂದಿ ಬಚ್ಚ, ಫರಕಿ ತಂದು ತಡಸಿ ಕಟ್ಟಿ, ಬಚ್ಚಹೊಳಿ ಮ್ಯಾಲ ಗಳು ಇಟ್ಟು ಸಿಂದಿ ಫರಕಿ, ಲಕ್ಕಿ ಜಬರಿ ಜೋಡ್ಸಿ ಚಪ್ಪರ ಹಾಕಬೇಕಾದ್ರ ಸಾಕುಬೇಕಾಗಿತ್ತು. ಯಮನ್ಯಾ ಆಟೀಟು ಕೆಲ್ಸಾ ಮಾಡಿದ್ದನು ಖರೇ. ಒಂದು ಗಂಡಾಳಿಗೆ ಕರ್ಕೊಂಡು ನಾ ನನ್ ಸಗತಿಮೀರಿ ದುಡದಿದ್ದ. ಪೂರಾ ಹೈರಾಗಿದ್ದು ನಾನೇ. ನೆರಮನಿ ಗಂಗವ್ವಾಯಿ, ಹೂಗಾರ ಚಾಂದಪಾಶಾ, ಹಟಗಾರ ಬಸ್ಸಣ್ಣ ಮುತ್ಯಾ, ಕೆಳಗೇರಿ ಕಾಳಮ್ಮತ್ತಿ - ಎಲ್ಲೋರೂ ನನ್ನ ದಗದಾ ನೋಡಿ ದಂಗಾಗಿದ್ದರು. ''ಹೆಂತಾ ಪೋರೇ ಯವ್ವಾ ನೀನು! ಹಿನಾ ನಿನ್ ಮೈಯಾಗಿನ ಸುರಗಿನೀರಿನ ಅರಿಶಿಣ ಆರಿಲ್ಲ. ಈಗೇ ಈಟೊಂದು ಕೆಲ್ಸಾ ಮಾಡಿ ಗುಡಿಸಲ ಕಟ್ಟಿಬಿಟ್ಟಿ. ಭಾಳ ಖಂಭೀರ ಹೆಣ್ಣದ್ದಿ ಬಿಡು ನೀನು. ಇನ್ನ ಮ್ಯಾಲ ಯಮನ್ಯಾನ ನಸೀಬ ಖುಲಾಸ್ತಾದ ಬಿಡು ಮಗಾ.... ಆ ಸೀಮಿ ಮರಗಮ್ಮಾಯಿ ನಿಮಗ ಸುಖದಾಗ ಇಡ್ಲಿ....'' ಅಂತ್ಹೇಳಿ ಕಾಳಮತ್ತಿ

ಹರಕಿಕೊಟ್ಟಿದ್ದಳು. ''ಇಗಾ ತಗೋರೇ ಮಗಾ.... ನಮ್ಮನ್ಯಾಗ ಕೋಳಿಪಲ್ಯಾ ಮಾಡೀವಿ. ನೀ ಮುಂಜಾನಿಲಿಂದ ದುಡ್ದು ದುಡ್ದು ಹೈರಾಣಾಗಿದ್ದಿ. ತಗೋ ಉಣು....'' ಅಂತ್ಹೇಳಿ ನಾಯಕೋಡೇರ ನಾಗವ್ವ ನಾಕುರೊಟ್ಟಿ, ಒಂದು ಸಿಲಾವರ ಬಗೋಣ್ಯಾಗ ಕೋಳಿಪಲ್ಯಾ ಕೊಟ್ಟಿದ್ದಳು. ''ಇವತ್ಯಾಕ ಕೋಳಿ ಪಲ್ಯಾ ಮಾಡೀರೇ ಆಯಿ?'' ಅಂತ ಕೇಳಿದ್ದ ''ನಮ್ಮ ಸಜ್ಜೀ ಬಣ್ಣದ ತಲಗೋಳಿ ಯಾಕೋ ನಿನ್ನಿಲಿಂದ ಸುಸ್ತಾಗಿ ನಿಂತಿತ್ತು ಮಗಾ. ಅದು ಬದಕ್ತಾದೋ ಇಲ್ಲೋಂತ ಸಂಶ್ಯಾಬಂದು ಅದು ಸತ್ತು ಮುಡದಾರ ಆಗದಕ್ಕಿಂತಾ ಮದಲೇ ನನ್ ಮಗಾ ಅದಕ್ಕೆ ಮಸೂತಿಗಿ ಒಯ್ದು ಮುಲ್ಲಾನ ಕೈಲಿಂದ ಚೂರಿ ಹಾಕಸ್ಗೊಂಡು ಬಂದಿದ್ನು. ನಿನ್ನ ಕೆಲ್ಸಾ ಮುಗೀತಾ ಯಿಲ್ಲ ಇನ್ನಾ? ಹೋಗು. ಉಣು ಹೋಗು'' ಗಂಗವ್ವಾಯಿ ಹೇಳಿದ್ದಳು. ಯಮನ್ಯಾ ಒಂದು ಮಣ್ಣಿನ ತತ್ರಾಣಿ ಥುಂಬಾ ಸಿಂದಿ ತುಂಬಸ್ಗೊಂಡು ಬಂದಿದ್ದನು. ನಾ ಒಂದೀಟು ಅಕ್ಕಿ ಬಾನಾ ಮಾಡಿದ್ದ. ಆಯಿ ಕಟ್ಟಿಕೊಟ್ಟಿದ್ದ ಒಣಮೀನಾ ಕರ್ದು ಕಾರಾಉಪ್ಪ ಕಲಸಿಟ್ಟಿದ್ದ ಇಬ್ರೂ ಕುಂತು ಪಸಂದಾಗಿ ಸಿಂದಿ ಕುಡ್ಕೋತ ಮೀನಾ ಬಾಡಸ್ಗೋತ ಹೊಟ್ಟಿ ಥುಂಬಾ ಕೋಳಿಪಲ್ಯಾ ಬಿಳಿಜ್ವಾಳದ ಬಿಸಿ ಬಿಸಿ ರೊಟ್ಟಿ ಉಂಡು ಮಕ್ಕೊಂಡಾಗ ಹೆಂತಾ ಸುಕಾ ಅನ್ಸಿತ್ತು! ಮುಂಜಾನಿಲಿಂದ ದುಡ್ದು ಆದ ಹೈರಾಣೆಲ್ಲಾ ಮಟಾಮಾಯ ಆಗಿತ್ತು. ಹೊಸಾ ಗುಡಿಸಿಲ, ಹಸಿ ಹಸಿ ಈಚಲು ಫರಕಿಯ ಚಪ್ಪರದ ಹುಳಿ ಹುಳಿ ವಾಸನಿ, ಸಾರಸಿದ ನೆಲದ ಹೆಂಡಿ ನಾತದ ಜೋಡಿ ಬೆರ್‍ತು ಏನೋ ಒಂದು ನಮೂನಿ ಗುಂಗು ನೆತ್ತಿಗೇರಿತ್ತು. ಕುಡಿದ ತಿಂದ ನಿಶಾ ಒಂದ್ಕಡಿ ಆದ್ರ ಮುಗಲಿಂದ ಹಡ್ಕೊಂಡು ಬಂದ ಸಿಂದಿ ಬುರುಗಿನಂತಾ ಭೆಳ್ಳನ ಬೆಳದಿಂಗಳ ಬೆಳಕ ಗುಡಿಸಲ ಬಾಗಲ ಸಂದಿಗೋಳಲಿಂದ ಒಳಗ ಬಂದು ಹಾಸಗಿ ಮ್ಯಾಲೆಲ್ಲ ಬೆಳ್ಳಗಿನ ದಾರದ ಚಿತ್ತಾರ ಹೆಣದಿದ್ದುವು. ಆಯಿ ಹೊಲ್ದು ಕೊಟ್ಟಿದ್ದ ಪಗಡಿ ಬಾಜಾರದ ಚಿತ್ತಾರದ ಹೊಚ್ಚ ಹೊಸಾ ಕೌದಿ ಥುಂಬಾ ನನಗ ತೆಕ್ಕ್ಯಾಗ ಬಡ್ಕೊಂಡು ಮೈಗಿ ಮೈ ತಳಕ ಹಾಯ್ಕೊಂಡು ಜೋಡಿ ನಾಗರದ್ಹಾಂಗ ಮುಸು ಮುಸು ಮಾಡ್ಕೋತ ನನ್ ಗಂಡ ಯಮನ್ಯಾ, ಮ್ಯಾಲಿನ ಆಕಾಸದಾಗಿನ ಚಿಕ್ಕಿ ಚಂದ್ರಾಮರಿಗೆಲ್ಲಾ ಹರ್ದುತಂದು ನನ್ ಹಾಸಗ್ಯಾಗ ಹರವಿದ್ದ. ಕೌದಿಮ್ಯಾಲಿನ ಪಗಡಿ ಬಾಜಾರ, ಕಲಬುರ್ಗಿ ಶಾಣಬಸಪ್ಪನ ಥೇರಾ, ಸಾವಳಗಿ ಶಿವಲಿಂಗೇಸೂರನ ಗುಡಿಗೋಳ ಚಿತ್ರದ ಹೆಣಿಗಿ ಮ್ಯಾಲೆಲ್ಲಾ ಸುಖದಲಿಂದ ನೆಳ್ಳಾದು, ತೇಕಾದು ಆವಾಜಗೋಳಿಗಿ ಚೆಲ್ಲ್ಯಾಡಿದ್ದ. ಕುಸು ಕುಸು ಅಂತ ಮೀಸಿ ಕುಡ್ಯಾಗೇ ನಕ್ಕೋತ, ನಾಟಕದವರಂಗ ಮಾತಾಡ್ಕೋತ, ಸಿನೀಮಾದವರಂಗ ನನಗ ತನ್ನೆದಿಗೊತಗೊಂಡು ಈ ಸಿಂದಿ ಗುಡಸಲದಾಗೇ ಬಂಗಾರದರಮನಿ ಸುಖಾ ಕೊಟ್ಟಿದ್ದ! ಸುರು ಸುರು ಅಂತೂ ನನಗನೂ ಅವನ ಹುಚ್ಚೇ ಹಿಡಿದಂಗಾಗಿತ್ತಲ್ಲ? ಅಂವಾ ನನಗ ಮುಟ್ಟದರ ಸಾಕು ಮೈಯುಂಬಾ ಮೈಯಾಗೆಲ್ಲಾ ನವಲು ಕುಣದಂಗಾಗಿ, ಬೆನ್ನಹುರ್‍ಯಾಗೆಲ್ಲಾ ಕಂಟಿರುಗೋಳು ಹರದಾಡುತ್ತಿದ್ದುವು. ಕಿಬ್ಬೊಟ್ಟ್ಯಾಗ ಕ್ಯಾದಗಿತೆನಿಗೋಳು ಹೊಳ್ಯಾಡದಂಗಾಗಿ ತೊಡಿಸಂದ್ಯಾಗ ಹಿಂಡುಗಟ್ಟಲೆ ಹುವ್ವಾ ಅಳ್ಳತ್ತಿದ್ದುವು. ಮದವಿ, ಗಂಡ ಅಂದರ ಏಟು ಛಂದದಾ ಅಲ್ಲಂತ ಭಾರಿ ಮಜಾ ಬರ್‍ತಿತ್ತು. ಆದರ ಅದೆಲ್ಲಾ ಮೋಜಿನ ಮಾಯಾಬಾಜಾರ ನಾಕುದಿನದ ಗರ್ದಿಗಮ್ಮತ್ತಂಬಾದು ಆವಾಗ ನನಗ ತಿಳಿಲೇಯಿಲ್ಲ. ತಿಳದಾಗ ಭಾಳ ತಡಾ ಆಗಿ ಹೋಗಿತ್ತು!

ಯಮನ್ಯಾ ಮೈಗಳ್ಳಿದ್ದ. ಒಂದು ದಮಡೀನೂ ದುಡೀತಿರಲಿಲ್ಲ. ನನ್ನ ದುಡಕಿಲಿಂದೇ ರೊಕ್ಕಾ ರುಪ್ಪೆ ಜಬರದಸ್ತಿಲಿಂದ ಕಸ್ಗೊಂಡೊಯ್ದು ಕುಡ್ದು ತಿಂದು, ಜುವ್ವಾ ಆಡಿ, ಮಟಕಾದ ನಂಬರ ಚೀಟಿ ಬರಸಿ ಬರ್‍ತಿದ್ದ ಖರೇ. ನಾ ಯೆಲ್ಲಾನೂ ತಾಳ್ಕೊಂಡಿದ್ದ. ಹೆಂಗರೆ ಇರ್‍ಲಿ. ಅಂವಾ ನನ್‌ಗಂಡ ಅದಾನ. ಗಂಡಾ ಹೆಣ್ತಿ ಇಬ್ಬರದಾಗ ಒಬ್ಬರು ದುಡೀತಿವಲ್ಲ. ಹ್ಯಾಂಗರೆ ಸಂಸಾರ ಚಾಗಲಕತ್ತಾದಂತ ನಾ ಸುಮ್ಮನೇ ಇದ್ದ. ಆದರ ಮದವ್ಯಾಗಿ ಮೂರೊರ್‍ಸ ಆದರನೂ ನನಗ ಮಕ್ಕಳಾಗಲಾರದಾಗ ಎಲ್ಲಾ ಭಣಾ ಭಣಾ ಅನ್ಸಲಕತ್ತಿತ್ತಲ್ಲ. ಬಾಳಿಸುಳಿಯಂತಾ ನನ್ ತೆಳ್ಳಗಿನ ಹೊಟ್ಟ್ಯಾಗ ಮಕ್ಕಳ್ಯಾಕ ಆಗಲಿಲ್ಲಂಬಾದೇ ನನಗ ತಿಳೀಲಿಲ್ಲ. 'ನಿನ್ ತೆಳಗಿನ ಹೊಟ್ಟಿಯಂಬಾದು ರೇಶಮಿ ರೇಶಮಿ ಯಾಗ್ಯಾದೇ ನನ್ ಬಂಗಾರೀ... ಏಟರೇ ನುಣ್ಣಗದಾ.... ಇವನವ್ವನಾ ತಂದೂ.... ಗಲ್ಲಾಯಿಟ್ಟರ ಸರ್‍ರಂತ ಜಾರ್‍ತದಗs ಪೋರೀ....' ಅಂತ ಯಮನ್ಯಾ ಈ ಹೊಟ್ಟಿ ತಾರೀಫ ಮಾಡ್ಕೋತ ಹುಚ್ಚನಂತಾಗಿ ಹೊಟ್ಟೀಗಿ ಮಾರಿ ತಿಕ್ಕಿ ಹೊಂಕಳದಾಗ ನಾಲಗಿ ಆಡಸಿ ಖುಷಿ ಪಡ್ತಿದ್ದನಲ್ಲ. ಹಂತಾ ನನ್ ಹೊಟ್ಟ್ಯಾಗ ಮಕ್ಕಳಿಗಿ ಹುಟ್ಟಸಾ ಬನಿ ಇಲ್ಲಂದ್ರ ನಾ ಹ್ಯಾಂಗ ನಂಬಲಿ? ಯಾಕ ನನಗ ಬಸರ ನಿಂದರಲ್ಲಾಗ್ಯಾದಂಬಾದೇ ನನಗ ಚಿಂತಿ ಆಗಿತ್ತು. ನನ್ ಚಿಂತ್ಯಾಗೇ ನಾ ಇದ್ದು ಯಮನ್ಯಾನ ಕಡಿ ಹೆಚ್ಚ ಖ್ಯಾಲೇ ಮಾಡಿರಲಿಲ್ಲ ನಾನು. ಅವಾಗೇ ಹೂಂ.... ಅದೇ ದಿನದಾಗೇ ನಮ್ಮಿಬ್ಬರ ನಡಬರಕ ಬಿರಕ ಬಿಡ್ಲಕ್ಕ ಸುರು ಆಗಿರ್‍ಬೇಕೋ ಏನೋ.... ಅಂವಾ ಈಟೀಟೀ ನನಲಿಂದ ದೂರ ಸರೀಲಕತ್ತಿದ್ನಂತ ಕಾಣಸ್ತದ....

ಚುಮು ಚುಮು ಬೆಳಕು ಹರಿದು ಅಂಗಳದಾಗಿನ ಬೇಲಿ ಹಂತ್ಯಾಕಿನ ಕುಳ್ಳಭಾನಾ, ತೊಗರಿ ಕಟಗಿ ಪುಂಡಿಕಟಗಿ ರಾಶಿ, ಒಗ್ಯಾಕಲ್ಲು, ಕೋಳಿ ಗೂಡುಗಳೆಲ್ಲ ನಿಚ್ಚಳವಾಗುತ್ತಿದ್ದಾಗ ಒಳಗಿನಿಂದ ಮಲ್ಲೂ ನಿದ್ದೆಯಿಂದೆಚ್ಚತ್ತು ಅವ್ವನನ್ನು ಕಾಣದೆ ಬುದುಂಗನೆ ಎದ್ದು ಕುಂತು ಯವ್ವಾ... ಯವ್ವಾಗೇ.... ಅಂತ ಸೂರಿಡಿದು ಅಳತೊಡಗಿತು. ಶಾಣಮ್ಮ ಎಚ್ಚತ್ತು ಉಸಿ ಎಂದು ಉಸಿರುಹಾಕಿ ಎದ್ದು ಬಂದು ಮಗುವನ್ನೆತ್ತಿ ತೊಡೆಗೆ ಹಾಕ್ಕೊಂಡು ಅದರ ಬಾಯಿಗೆ ಮೊಲೆಯಿಟ್ಟು ಕೌದಿಯ ಮೇಲೆ ಕೈಯಾಡಿಸಿದಳು. ದೀಪ ಆರಿ ಕತ್ತಲಾಗಿತ್ತು. ಕೈಗೆ ಹಸಿ ಹತ್ತಿದಂಗಾಗಿ - ಉಚ್ಚಿ ಹೊಯ್ಕಂಡಿದ್ದೆಲ್ಲೋ ಮಲ್ಲ್ಯಾ.... ಕೌದಿಯಂಬಾದು ತೊಯ್ದು ತೊಪ್ಪಾಗ್ಯಾದ.... ಅನಕೋತ ಕೂಸಿನ ತಲೆಗೆ ಮೆಲ್ಲಗೆ ಒಂದೇಟು ಕೊಟ್ಟಳು. ಮಲ್ಲ್ಯಾ ಅದಕ್ಕೆ ಕ್ಯಾರೇ ಅನ್ನದೆ ಮೊಲೆ ಚೀಪುವುದನ್ನು ಜೋರುಮಾಡಿತು....

ಅಲ್ಲ. ನನಗ ಮಕ್ಕಳಾಗಲಿಲ್ಲಂದ್ರ, ನಂದೇನು ತಪ್ಪಿತ್ತು? ಇಂವಾ ನನಲಿಂದ ಈಟೀಟೀ ದೂರಸರಿಲಕತ್ತಾನಂಬಾದು ನನಗ ಅನಸಲಕತ್ತಿತ್ತು. ಖರೇ. ಹಾಂಗ ನೋಡದರ ಯಮನ್ಯಾ ನನ್ ಹಾಸಗೀಗಿ ಬರಾದು ಬಿಟ್ಟಿರಲಿಲ್ಲ. ರಾತ್ರಿ ಕನೀಟ ಅಂದರೂನು ನಿದ್ದಿ ಹತ್ತಾಮುಂದೊಮ್ಮಿ ಮತ್ತ ಆಕಾಸದಾಗ ಬೆಳ್ಳಿ ಚಿಕ್ಕಿ ಮೂಡೋ ಹೊತ್ತನ್ಯಾಗೊಮ್ಮಿ ಅಂತ ಎದ್ದು ಸರ್‍ತಿಯರೆ ಇಂವಾ ನನಗ ತನ್ನ ತೊಡ್ಯಾಗ ಎಳ್ಕೊಂಡು ತೇಕತ್ತಿದ್ದನಲ್ಲ, ಅದುನೂ ತಪ್ಪಿರಲಿಲ್ಲ ಖರೇ. ಆದರ ಯಾಕೋ ಈಗೀಗ ಅವನ ಟೊಂಕದಾಗ ಮದಲಿದ್ದ ಜೋಶ್ ಇಲ್ಲಂತ ಅನಸತ್ತಿತ್ತು. ''ಸಿಂದಿ ಹುವ್ವಿನಂತಾ ನಿನ್ ತುಟಿಗೋಳಲಿಂದ ರಸ ಹೀರದಂಗೆಲ್ಲಾ ನಿಶಾ ಏರ್‍ತದೇ ನನ್ ಪೋರೀ.... ನೀ ಒಂದು ಹಸಿ ಹಸಿ ಹರ್‍ಯಾದ ಸಿಂದಿಗಿಡಾ ಇದ್ದಂಗಿದ್ದಿ. ಎಲ್ಲಿ ನಾಲಗಿ ಹಾಕದರನೂ ಇವನವ್ವನs ನಿಶ್ಯಾ ಸರ್‍ರಂತ ನೆತ್ತಿಗೇರಿ ಬಿಡ್ತಾದೇ ಶಾಣೀ....'' ಅಂತ ಏನೇನೋ ಬಡಬಡಸತಿದ್ದನಲ್ಲ ಮದಲ ಮದಲ. ಈಗೀಗ ಎಲ್ಲಾ ಕಮ್ಮಿ ಆಗಿತ್ತು. ಕಮ್ಮಿಯೇನು ನಿಂತೇ ಬಿಟ್ಟಿತ್ತು. ಯಾಕ್ ಹಿಂಗ್‌ಂತ ನಾ ಒಮ್ಮಿ ಕೇಳೇ ಬಿಟ್ಟಿದ್ನಲ್ಲ. ಅಂವಾ ಸುಮ್ಮನ ಒಂದು ಛಂದನ ನಗು ನಕ್ಕು ಸುಮ್ಮನಾಗಿದ್ದ. ಮುಂದ ನಾ ಕೆದಕಿರಲಿಲ್ಲ. ನನಗ ಮಕ್ಕಳಾಗಲಾರದ್ದಕ್ಕ ಯಮನ್ಯಾನ ಮನಕ್ಕ ಘಾಸಿ ಆಗಿರ್‍ಬೇಕಂತ ಅನಕೊಂಡು ಸುಮ್ಮನಾಗಿದ್ದ ನಾನು. ಆದರ ಮಕ್ಕಳಾಗಲಾರದ್ದಕ್ಕ ನನ್ನ ಮೈ ಅಂವಗ ಸುಕಾ ಕುಡಾದು ಕಮ್ಮಿ ಮಾಡಿತ್ತೇನು ಮತ್ತ? ಅದ್ಹ್ಯಾಂಗ ಕಮ್ಮಿ ಮಾಡ್ತದ? ಅದಕ್ಕಾ

## ಕವಯತ್ರಿ ಸಚಿವೆ

ಸಂಸ್ಕೃತಿ ಸಚಿವೆ ಹುದ್ದೆ ದಕ್ಕಿದ ಮೇಲೆ ತಮ್ಮ ಕವಿತಾರಚನೆಯ ಮಾಜಿ ಪ್ರತಿಭೆಗೆ ಹೊಸತನ ತಂದುಕೊಂಡ ಮಾಜಿ ಕವಯತ್ರಿ ತಮ್ಮ ಸಮಾರಂಭಗಳಲ್ಲಿ ವೇದಿಕೆಯ ಮೇಲೆ ಕೂತಲ್ಲೇ ಕವಿತೆ ಬರೆದು ಎಲ್ಲ ಸಮಾರಂಭಗಳಲ್ಲಿ ಓದತೊಡಗಿದರು. ಕೇಳಿದ ಜನ: ''ಆಹಾ! ಎಂಥ ಕವಿತೆ! ಮಿನಿಸ್ಟರ್ ಆಗಿದ್ದೂ ಹೀಗೆ ಕವಿತೆ ಬರೀತಾರಲ್ಲ'' ಎಂದುದ್ಗರಿಸಿದರು. ಈ ಅಥಣಿ ಸಚಿವೆಯ ಕಾರ್ಯಕ್ರಮದ ವರದಿ ಮಾಡಲು ಎರಡನೇ ಸಲ ಬಂದ ಪತ್ರಕರ್ತನೊಬ್ಬ ಈ ಕವಯತ್ರಿಗೇ ನಂತರ ಕೇಳಿದ: ''ಎಲ್ಲಾ ಕಾರ್ಯಕ್ರಮಕ್ಕೂ ಇದೊಂದೇ ಕವಿತೇನ ಅಲ್ಲೇ ಬರಕೊಂಡು ಓದೋಷ್ಟು ಕಂಠಪಾಠವಾಗಿದೆಯಲ್ಲಾ ಮೇಡಂ!''

ಇದಕ್ಕಾ ಏನು ಸಮ್ಮಂದಾ? ನನಗ ತಿಳೀಲಿಲ್ಲ....

ಮಲ್ಲೂಗ ಕೆಳಗಿಳಿಸಿ ಎದ್ದು ಕೌದಿ ಝಾಡಿಸಿ ಹೊರಗ ತಂದು ಅಂಗಳದಲ್ಲಿಯ ಕಲ್ಲು ರಾಶಿಯ ಮೇಲೆ ಒಣಗಲು ಹಾಕಿದಳು.



ಶಾಣಿ ಈ ಊರಿಗೆ ಬಂದು ಗಂಡನ ಜೋಡಿ ಸಂಸಾರ ನಡೆಸುತ್ತ ಮೂರು ವರ್ಷ ದಾಟಿತ್ತು. ಮೈಮುರಿದು ದುಡಿಯುತ್ತಿದ್ದಳು. ಕೂಲಿ ನಾಲಿ ಮಾಡಿ ತಂದು ತನ್ನ ಮತ್ತು ಗಂಡನ ಹೊಟ್ಟೆ ಬಟ್ಟೆ ನೋಡಿಕೊಳ್ಳುತ್ತಿದ್ದಳು. ಮರಗವ್ವಾಯಿಗೆ ಬಿಟ್ಟ ಕಾರ್ಯಾದ ಕ್ವಾಣದಂಗ ಯಮನ್ಯಾ ಗಾಳಿಮ್ಯಾಲ ತೇಲಾಡ್ತಿದ್ದ.

ಶಿವಲಿಂಗಪ್ಪ ಸಾವ್ಕಾರನ ಅಣಿಮ್ಯಾಲಿನ ಹೊಲಕ್ಕ ಸೇಂಗಾಕಾಯಿ ಆರಿಸಲು ಕೂಲಿಗಾಗಿ ಹೋಗಿದ್ದ ಶಾಣಮ್ಮ ಅಲ್ಲಿಂದ ಹೊಳ್ಳಿ ಊರಿಗೆ ಬರಾಮುಂದೇ ಸೂರ್ಯಾ ತಾಯಿಹೊಟ್ಟಿ ಸೇರಿ ಕತ್ತಲ ಕಾಳಾಗಿತ್ತು. ಎಡ್ಡು ರುಪೈ ಜಾಸ್ತಿ ಕೂಲಿಯ ಆಸೆಗೆ ಬಿದ್ದು ಹಳ್ಳಿಯಿಂದ ಹರದಾರಿ ದೂರವಿದ್ದ ಆ ಹೊಲಕ್ಕೆ ಹೋಗಿದ್ದಳು ಅವಳು. ಮನೆಗೆ ಬಂದು ಕೈಕಾಲು ಮಾರಿ ತೊಳ್ಕೊಂಡು ದೀಪದ ಮಾರಿಗೆ ಕಡ್ಡಿ ಗೀರಿ ಉರಿ ಹಚ್ಚುವಾಗಲೇ ಹೊರಗಿನಿಂದ ಅಗಸರ ತಿಪ್ಪಾನ ದನಿ ಕೇಳಿಸಿತು. ''ಶಾಣಮ್ಮಕ್ಕಾ.... ಯಕ್ಕಾ.... ಹೊರಗ ಬಾರವೋ ಜಲ್ದಿ....'' ಅವನ ದನಿಯಲ್ಲಿದ್ದ ಗಾಬರಿಗೆ ಅವಳೆದೆ ಢವಗುಟ್ಟಿತು. ದೀಪ ಹಚ್ಚಿದ ಕಡ್ಡಿಯನ್ನು ಉಫೆಂದು ಊದಿ ಆರಿಸಿ ನೆಲಕ್ಕೆ ಎಸೆಯುತ್ತಲೇ ಹೊರಬಂದಳು. ''ಯಾಕೋ ತಿಪ್ಪ್ಯಾ?'' ಅನ್ನುತ್ತಿರುವಾಗ ತಿಪ್ಪ್ಯಾನೇ, ಬಾಯಿಯಿಂದ ಗುಂಡುಗಲ್ಲುಗಳೆಸೆದಂತೆ ಮಾತುಗಳನ್ನು ಬಿಸಾಡಿದ. ''ಮಾತ ಮಾತರ ಘಾತಾಗ್ಯಾದೇ ಯಕ್ಕಾ.... ನಿನ್ನ ಗಂಡ ಅನ್ನೋ ಆ ಯಮನಪ್ಪ ಮತ್ತ ಆ ವಾಲೀಕಾರ ರಾಮಣ್ಣನ ಹೆಣ್ತಿ ಕಮಲಿ ಇಬ್ರೂ ಸಿಂದಿ ಬನದಾಗಿನ ಸಂಬಸ್ತಾನಿ ಗುಡಿ ಹಂತ್ಯಾಕಿನ ಲಕ್ಕಿ ಪೊಡ್ಯಾಗ ಒಬ್ಬರಿಗೊಬ್ಬರು ತಳಕ ಹಾಯ್ಕೊಂಡು ಮಕ್ಕೊಂಡಿದ್ರಂತವ್ವಾ... ಸಿಂದಿ ಬನದಾಗ ಈಳಗೇರ ಕಣ್ಣತಪ್ಪಿಸಿ, ಗಿಡದಲಿಂದ ಸಿಂದಿಗೊಬ್ಬಿ ಇಳಸ್ಗೊಂಡು ಕುಡ್ದು ಹಂಗೇ ಗೊಬ್ಬಿ ಹೊತಗೊಂಡು ಕಳ್ಳದಾರಿ ಹಿಡ್ಕೊಂಡು ಓಡೋಡಿ ಬರಾ ಕುರುಬರ ದ್ಯಾವ್ಯಾನ ಕಣ್ಣಿಗಿ ಬಿದ್ದರಂತ! ಸೂಳಿ ಮಿಂಡಗಾರ ಆಟಾ ನೋಡಿ ಅಂವಾ ಕೈಯಾಗಿನ ಗೊಬ್ಬಿ ನೆಲಕ್ಕ ಒಗ್ದು ಒಂದೇ ದಮ್ಮೀಗಿ ಓಡೋಡಿ ಬಂದು ಧಮ್ಮ ಬಿಟಗೋತ ಧಮ್ಮ ಬಿಟಗೋತ ರಾಮಣ್ಣಗ ಹೇಳ್ಯಾನ. ಹಂಗೇ ರಾಮಣ್ಣ ಮತ್ತೆ ಅವನ ಗೆಳ್ಯಾರು ಕೂಡಿ ಓಡಿಹೋಗಿ ಅವರಿಬ್ಬರಿಗಿ ಹಿಡ್ಕೊಂಡು ಬಂದು ಚಾವಡಿ ಮುಂದಿನ ಬೇವಿನ ಮರಕ್ಕೆ ಕಟ್ಟಿಹಾಕ್ಯಾರ. ರಾಮಣ್ಣ ನ್ಯಾಯಾ ಪಂಚಾಯ್ತಿ ನೆರಸ್ಯಾನ. ಪಂಚರೆಲ್ಲಾ ಬಂದಾರ. ನಿನಗ ಕರ್ದು ಬಾ ಅಂತ ನನಗ ಕಳಸ್ಯಾರೆಕ್ಕಾ... ಜಲ್ದಿ ನಡಿ.'' ಎಂದು ಬಂದದಾರಿಗೆ ತಿರುಗಿ ನಡೆದನು. ಶಾಣಮ್ಮನ ನೆತ್ತಿಮ್ಯಾಲ ಸಿಡಿಲುಬಿದ್ದಂಗಾಯ್ತು. ನಿಂತ ನೆಲಾಯೆಲ್ಲಾ ಗಡಾ ಗಡಾ ಗದ್ದರಸಿ ಭೂಕಂಪಾ ಆಗಿ ನೆಲಕ್ಕೆ ಕುಸುದು ಬಿದ್ದಳು....

ಬೇವಿನ ಮರಕ್ಕ ಬಿಗಿದುಕಟ್ಟಿ ರಾಮಣ್ಣನ ಗೆಳ್ಯಾರು ಯಮನ್ಯಾಗ ಮೈಮಾರಿ ನೋಡಲಾರ್ದೆ ದನಕ್ಕ ಬಡದಂಗ ಸಿಕ್ಕ ಕಡಿಗೆಲ್ಲಾ ಬಡಿದಿದ್ದರು. ಕಮಲಿಗಂತೂ ರಾಮಣ್ಣಾ ಒದ್ದೂ ಒದ್ದೂ ಹಣ್ಣುಗಾಯಿ ನೀರುಗಾಯಿ ಮಾಡಿದ್ದ. ಪಂಚರು ಕೇಳಿದ್ದಕ್ಕೆಲ್ಲಾ ಅವರಿಬ್ಬರೂ ತಮ್ಮ ಹಾದರವನ್ನು ಒಪ್ಪಿಕೊಂಡರು. ಕಮಲಿ ದೈವದ ಮುಂದೆ ನಿಂತು ''ನಾ ಬಿಲಕುಲ್ ಈ ರಾಮಣ್ಣನ ಜತಿ ಜಿನಗಾನಿ ಮಾಡಂಗಿಲ್ರೀ, ನಾ ಮರ್‍ರೋ ಅಂದರನೂ ಅವನ ಮನೀಗಿ ಹೋಗಂಗಿಲ್ಲ. ಅಸಲಿ ಮಾತಂದ್ರ ಈ ನನ ಗಂಡನ ಬಲ್ಲಿ ಗಂಡಸ್ತನೇ ಇಲ್ಲ! ನಾ ಯಮನಪ್ಪನ ದೋಸ್ತಿ ಮಾಡಿದ್ದು ಖರೇ.... ಇವನ ಜೋಡಿನೇ ಸಂಸಾರ ಮಾಡ್ತೀನಿ.' ಎಂದು ಖುಲ್ಲಮ ಖುಲ್ಲಾ ಹೇಳೇ ಬಿಟ್ಟಳು. ನೆರೆದ ಮಂದಿಯೆಲ್ಲಾ ಅವಳ ಧೈರ್ಯಕ್ಕೆ ದಂಗಾದರು. ಸಭೆ ಪೂರಾ ಗಂಭೀರವಾಗಿತ್ತು. ಕಡೆಗೆ ಪಂಚರ ಮುಖಂಡ ಕೇಳಿದ. ''ಹಂಗಾದ್ರ, ಸರಿಬಿಡು. ನಿನ್ ಗಂಡ ರಾಮಣ್ಣಗ ನಿನ್ ಗೆಣ್ಯಾ ಯಮನಪ್ಪನ ಕೈಲಿಂದ ಮದಿ ಖರ್ಚಾ ಕಟ್ಟಿಸಿಬಿಡು.'' ಹೂಂ ಎಂಬಂತೆ ಕಮಲಿ ತಲೆಹಾಕಿದಳು. ಅವನು ಯಮನಪ್ಪನ ಕಡೆಗೆ ತಿರುಗಿದ. ''ನಾ ಹೇಳಿದ್ದು ಕೇಳಿದ್ಯಲ್ಲಾ ಯಮನ್ಯಾ? ಕಮಲಿ ಮದವಿಲಾಗೋಡು ದೋನಸೆ ರುಪೈ ರಾಮಣ್ಣಗ ಕೊಟ್ಟು ನೀ ಕಮಲಿಗಿ ಕರ್‍ಕೊಂಡು ಹೋಗ್ಬೇಕು'' ಅಂದನು. ಕುಲದ ಕಾನೂನಿನ ಪರಕಾರ ಮದುವೆಯಾಗಿರುವ ಹೆಣ್ಣನ್ನು ಇನ್ನೊಬ್ಬ ಇಟ್ಟುಕೊಂಡ ಪಕ್ಷದಲ್ಲಿ ಅವಳ ಮದಿಗಂಡನಿಗೆ ಆ ಹೆಣ್ಣನ್ನಿಟ್ಟುಕೊಂಡವನು ದೋನಸೆ ರುಪೈ ಮದವಿಲಾಗೋಡು ಅಂತ ಪಂಚರು ಹೇಳಿದೋಸು ರುಪೈ ಕಟ್ಟಕುಡಬೇಕಾಗಿತ್ತು. ಆದರೆ ಯಮನಪ್ಪನ ಕೈಯೊಳಗ ಒಂದ್ಹತ್ತು ರುಪೈನೂ ಇರಲಿಲ್ಲ. ಹೆಣ್ತಿ ಗಳಕಿ ಮ್ಯಾಲ ಲಾಗಾ ಹೊಡೀತಿದ್ದ ಮಗಾ. ಬಣ್ಣದ ಮಾತ್ಹೇಳಿ ಕಮಲಿಗಿ ಮಳ್ಳ ಮಾಡಿದ್ದ ಖರೇ. ಆದರ ಈಗ ರೊಕ್ಕಾ ರುಪೈ ಮಾತಬಂದಾಗ ಅವನ ಬಾಯಿಲಿಂದ ಮಾತೇ ಬಂದಾದುವು! ತೆಲಿ ತೆಳಗ ಮಾಡ್ಕೊಂಡು ನಿಂತುಬಿಟ್ಟ. ನೆರದ ಮಂದ್ಯಾಗೆಲ್ಲಾ ಗುಸು ಗುಸು ಸುರುವಾಯ್ತು. ಅವಮಾನದಿಂದ ಶಾಣಮ್ಮನ ಎದೀಗಿ ಗುರಿಯಿಟ್ಟು ಕವಣಿಗಲ್ಲಿನಿಂದ ಗುದ್ದಿದಂಗಾಗುತ್ತಿತ್ತು. ಆದರನೂ ಈ ಯಮನ್ಯಾ ತನಗ ಮಾಡಿದ ಧೋಕಾದ ಕೆಲಸಕ್ಕ ಈ ಶಿಕಶ್ಯಾ ಭಲೋ ಆಯ್ತು. ಹಿಂತಾ ರಂಡಬಾಜಗೋಳಿಗಿ ಹಿಂಗೇ ಆಗ್ಬೇಕು. ನಾಕಮಂದ್ಯಾಗ ಮೆಟ್ಟಿನೇಟಾ ತಿಂದು, ಹಗ್ಗದಲಿಂದ ಮರಕ್ಕ ಬಿಗಸ್ಗೊಂಡು, ಪಂಚರ ಮುಂದ ತೆಲಿ ತೆಳ್ಯಾಕ ಮಾಡ್ಕೊಂಡು ಹ್ಯಾಂಗ ನಿಂತಾನ ಬದಮಾಸ! ಬೇಶರಮ ನನ್ ಹಾಟ್ಯಾಗ ತನ್ನ ಮಾನಾಮರ್ವಾದಿ ಕಾಸಿನ್ಸಕಿಂತಾ ಕಡಿಮ್ಯಾಗಿ ಮಾರಾಟ ಆಗಲಕತ್ತಾದಂಬಾ ಖಬರೇ ಇಲ್ಲ ಖಬರಗೇಡೀಗಿ.... ನಾ ಯೇನು ಕಮ್ಮಿ ಮಾಡಿನೆಂತ ಇಂವಾ ಆ ಕರಿಮಾರಿ ಕಮಲಿ ಮುಕಳಿ ನೆಕ್ಕಲಕ್ಕ ಹ್ವಾದನೋ ಭಾಡಕವು.... ಅಂತ ಸಿಟ್ಟು, ತಿರಸ್ಕಾರಗಳು ಎದ್ದೆದ್ದು ಬಂದು ಶಾಣಾಮ್ಮನ ಎದೆಗೆ ಅಪ್ಪಳಿಸತೊಡಗಿದ್ದುವು. ಮರುಗಳಿಗಿ ಈಸು ಮಂದ್ಯಾಗ, ಈ ಸಭಾದಾಗ ನನ ಗಂಡನ ಮಾನಾಮರ್ವಾದಿ ಹರಾಜ ಆಗಾಮುಂದ ನಾ ಸುಮ್ಮನಿರಾದು ಬ್ಯಾಡಂತನೂ ಅನ್ನಿಸಿತು. ಗಂಡನ ಇಜ್ಜತ್ತೆಂದರನೂ ಒಂದೇ ತನ್ನಿಜ್ಜತ್ ಅಂದರನೂ ಒಂದೇ ಅಂತಂಬೋ ಧ್ಯಾಸ ಬಂದದ್ದೇ ತಡಾ ತಟ್ಟಂತ ಕುಂತಲ್ಲಿಂದ ಎದ್ದುನಿಂತಳು ಶಾಣಮ್ಮ, ಪಂಚರ ಮುಂದೆ ಬಂದು ಕೈಮುಗಿದು ಮಾತಾಡಿದಳು. ''ದೈವದವ್ರ ಮಾತೆಂದ್ರ, ನಮಗ ದೇವರ ಮಾತಿದ್ದಂಗ್ರಿ ಯಪ್ಪಾ.... ನನ್ ಗಂಡನ ಪರವಾಗಿ ನಾ ಆ ಹೆಣ್ಣನ ಮದಿಖರ್ಚ್ಯಾದ ರುಪೈ ಈಗ ತಂದು ಕುಡ್ತೀನ್ರೀ. ಒಂದೀಟು ತಡೀರಿ.'' ಅಂತಂದು ಮನೆಗೆ ಹೋಗಿ ತಾನು ಕೂಲಿಕಬಟಿ ಮಾಡಿ ಉಳಿಸಿಟ್ಟದ್ದ ರೊಕ್ಕದ ಗಂಟು ಬಿಚ್ಚಿ ಸೆಂಬೋರು ರುಪೈದು ಎಡ್ಡು ನೋಟು ತಂದು ಪಂಚರ ಮುಂದಿಟ್ಟು ಕೈ ಜೋಡಿಸಿದಳು. ಅವನ್ನು ತೆಗೆದುಕೊಂಡು ವಾಲೀಕಾರ ರಾಮಣ್ಣ ತನ್ನ ಹೆಣ್ತಿ ಕಮಲಿಯ ಕೊಳ್ಳಾಗಿನ ತಾಳಿ ಹರ್‍ಕೊಂಡು ಕಾಲಾಗಿನ ಕಡಗಾ ಬಿಚ್ಚಿಕೊಂಡು ಅವಳನ್ನು 'ಬಿಡುಗಡೆ' ಮಾಡಿಬಿಟ್ಟ. ಪಂಚರು ಬರೆಸಿದ 'ಸೋಡಚೀಟಿ'ಯ ಮೇಲೆ ಹೆಬ್ಬೆಟ್ಟೊತ್ತಿಬಿಟ್ಟನು. ಯಮನಪ್ಪನನ್ನು ಮರದಿಂದ ಬಿಚ್ಚಿದರು. ಪಂಚಾಯ್ತಿ ಬರಖಾಸ್ತ ಆಯಿತು. ''ಕಮಲಿಗಿ ಕರ್‍ಕೊಂಡು ಮನೀಗಿ ನಡಿ'' ಅಂತ ಗಂಡನಿಗೆ ಹೇಳಿ ಶಾಣಮ್ಮ ಅಲ್ಲಿಂದ ನಡೆದಳು.

ಕಮಲಿ ಶಾಣಮ್ಮನ ಸಂವತಿ ಆದದ್ದು ಹೀಗೆ. ಯಮನಪ್ಪನಿಗೆ ಶಾಣಮ್ಮನ ಬಗ್ಗೆ ಒಂದೆರಡುದಿನ ಕೃತಜ್ಞತಾಭಾವ ಇದ್ದದ್ದು ಖರೇ. ಆದರೆ ಮೂರನೇ ದಿನ ಅವನು ಅದನ್ನೆಲ್ಲ ಮರತೇ ಬಿಟ್ಟನು.

## ಬಂಡಾಯ ಸಾಹಿತಿ !

ವೇದಿಕೆ ಭಾಷಣಗಳಲ್ಲಿ, ಬರಹದಲ್ಲಿ ನಾಸ್ತಿಕತೆ, ವೈಚಾರಿಕತೆಗಳಿಗೆ ಪೋಸ್ ಕೊಡುತ್ತಿದ್ದ ಬಂಡಾಯ ನೇತಾರರೊಬ್ಬರು ಒಂದು ದೇವಸ್ಥಾನಕ್ಕೆ ಹೋಗಿ ಮಂಗಳಾರತಿ ಮಾಡಿಸಿಕೊಂಡು ಹೊರಬರುತ್ತಿದ್ದರು. ಇವರನ್ನು ಅಲ್ಲಿ ಹಾಗೆ ನೋಡಿದ ಯುವ ಲೇಖಕನೊಬ್ಬ ತಬ್ಬಿಬ್ಬಾಗಿ ಕೇಳಿದ ''ಏನ್ಸಾರ್ ನೀವಿಲ್ಲಿ?!'' ನಂತರ ಈ ಯುವ ಲೇಖಕ ಈ ನೇತಾರರ ಇಂಥ ಒಳಭೇಟಿಗಳತ್ತ ಗಮನ ಹರಿಸಿದಾಗ ವಾಮಾಚಾರದ ಮಾಟಮಂತ್ರಗಳ ಸಂಪರ್ಕವೂ ಇವರಿಗಿದೆ ಎಂದು ತಿಳಿಯಿತು. ಈ ಬಂಡಾಯ ಸಾಹಿತಿಗಳ ಊರಿಗೆ ಬರ ಬಿದ್ದಿದೆಯೋ, ಸಮೃದ್ಧಿ ಸಿದ್ಧಿಸಿದೆಯೋ ಗೊತ್ತಿಲ್ಲ.

ಕಮಲಿಗೂ ಶಾಣಮ್ಮನಿಗೂ ಭಾಳದಿನ ಕೂಡಿ ಸಂಸಾರ ಮಾಡಲು ಆಗಲಿಲ್ಲ. ದಿನಬೆಳಗಾದರೆ ಜಗಳ, ಜೂಟಿ, ಬೈಗುಳ ನಡೆದು ಕೈಕೈ ಮಿಲಾಯಿಸುವ ಪರಿಸ್ಥಿತಿ ಬಂದಾಗ ಶಾಣಮ್ಮನೇ ಕಮಲಿಯನ್ನು ಬೇರೆ ಗುಡಿಸಲು ಹಾಕಿಕೊಂಡು ಇರಲು ಹೇಳಿದಳು. ಕಮಲಿಗೂ ಅದೇ ಬೇಕಾಗಿತ್ತು. ಮತ್ತೆರಡು ದಿನದಲ್ಲಿ ಕಮಲಿ ಬೇರೆ ಮನೆ ಮಾಡಿದಳು. ಅವಳೂ ಕೂಲಿನಾಲಿ ಅಂತ ಹೋಗುತ್ತಿದ್ದಳು. ಈ ಎಲ್ಲ ಜಂಜಾಟದಿಂದ ನಿರುಮ್ಮಳನಾಗಿದ್ದ ಯಮನಪ್ಪ ಮಾತ್ರ ಯಾವುದರ ಬಗ್ಗೆಯೂ ತಲೆ ಕೆಡಿಸಿಕೊಳ್ಳದೆ ಇಬ್ಬರು ಹೆಂಡಿರ ಗಂಡನಾಗಿ ಬೇಕಾದ ಬೇಕಾದಾಗ ಹೆಣ್ತಿ ಝೋಪಡಿಗೆ ಹೋಗಿ ಬರುತ್ತಿದ್ದ!



ಮುಂದೇ ಒಂದೇ ವರ್ಷದಲ್ಲಿ ಇಬ್ಬರೂ ಬಸಿರಾಗಿ ಇಬ್ಬರೂ ಗಂಡುಮಕ್ಕಳನ್ನು ಹಡೆದಿದ್ದರು. ಹಿಂಗೇ ಸಂಸಾರ ನಡೆದಿತ್ತು. ಹೆಸರಿಗೆ ಯಮನಪ್ಪನ ಸಂಸಾರ. ಆದರೆ ಖರೇ ಅರ್ಥದಾಗ ಆ ಇಬ್ಬರೂ ಹೆಂಗಸರಿಗೆ ಅವರ ರಟ್ಟೆಗಳೇ ಅವರ 'ಗಂಡ' ಆಗಿದ್ದುವು. ತಾವೇ ದುಡಿಯುತ್ತಿದ್ದರು. ಬಂದ ಹಣದಲ್ಲಿ ಬದುಕು ನೂಕುತ್ತ ಗಂಡನನ್ನು ಮತ್ತವನ ಚಟಗಳನ್ನು ಸಾಕುತ್ತಿದ್ದರು. ಜವಾಬ್ದಾರಿಯಿಲ್ಲದ ಯಮನಪ್ಪ ಸುಖವಾಗಿದ್ದ. ಮನಕ್ಕಿಲ್ಲಂದರನೂ ಜನಕ್ಕರೆ ಒಬ್ಬ 'ಗಂಡ' ಅಂತ ಗಂಡಸಿನ ಆಸರಿ ಅದಾ ಅಲ್ಲ ಅಂತ ಆ ಹೆಂಗಸರು ಸಮಾಧಾನ ಮಾಡ್ಕೊಂಡು ತಮ್ಮ ತಮ್ಮ ಮಕ್ಕಳ ಮಾರಿನೋಡಿ ದಿನಗಳೆಯುತ್ತಿದ್ದರು.

ಕುಲಸ್ತರ ಮುಂದೆ ಮರಗವ್ವನ ಗುಡಿಪೌಳಿಯಲ್ಲಿ ಹಾಕಿದ ಹಸಿರು ಹಂದರದಲ್ಲಿ ನಿಂತು ತನ್ನ ಕೊಳ್ಳಾಗ ತಾಳಿಕಟ್ಟಿ ಮದಿ ಆಗಿ ಹೆಣ್ತಿ ಅಂತ ಹಕ್ಕಿನಿಂದ ತನ್ನೂರಿಗೆ ಕರ್ಕೊಂಡು ಬಂದಿದ್ದ ಯಮನಪ್ಪ ತನಗ ನ್ಯಾಯದಲಿಂದ ಬಾಳಸಲಿಲ್ಲ, ತಾನು ಕೊಟ್ಟ ಖರೇ ಪಿರೀತಿಗೆ ಅವನು ಬರೇ ಪಿರೀತಿ ಕುಡಲಿಲ್ಲ ಅನ್ನೋ ಚಿಂತೆ ಒಳಗಿಂದೊಳಗೇ ಶಾಣಮ್ಮನನ್ನು ಬಾಧಿಸುತ್ತಿತ್ತು. ಅಷ್ಟೇ ಯಾಕೆ, ತನಗ ಅಂವಾ ಧೋಕಾ ಮಾಡಿಬಿಟ್ಟ, ತನ್ನ ಮ್ಯಾಲ ಸಂವತಿಗಿ ತಂದು ಅನ್ಯಾಯಾ ಮಾಡಿಬಿಟ್ಟರು. ಈ ತನಗಂಡ ದಗಾಕೋರ ಆದನು. ಆ ಕಮಲಿ ಜೋಡಿ ಪಿರೀತಿ ಪಿರೇಮ ಅಂತ ನಾಟಕ ಆಡಿ ಆಕಿನ 'ಒಗತನ'ನೂ ಹರ್‍ದು ಬಿಟ್ಟನು. ಆಕಿ ಸಂಸಾರಂಬಾದು ಬರ್ಬಾದ ಮಾಡಿ ಆ ಗಂಡಾಹೆಣ್ತೇಗಿ ಅಗಲಿಸಿ ಪಾಪ ಕಟ್ಕೊಂಡನು. ಈಕಾಡಿ ಕಟ್ಗೊಂಡು ಬಂದ ಹೆಣ್ತಿಗಿನೂ ಸುಕಾ ಕುಡ್ಲಿಲ್ಲ. ಅಕಾಡಿ ಇಟ್ಕೊಂಡ ಹೆಣ್ಣಿಗಿನೂ ಸುಕಾ ಕುಡ್ಲಿಲ್ಲ. ಇಬ್ಬರ ಜೋಡಿ ಮೋಜು ಮಸ್ತಿ ಮಾಡಿ ಬರೇ ನಮ್ಮಿಬ್ಬರ ಮೈ ಉಂಡನೇ ಹೊರ್‍ತು ಮನಸಗೋಳಿಗಿ ಮುರ್‍ದು ಬಿಟ್ಟಾನ. ನಮ್ಮ ಮನದಾಗೇನದಾ ಅಂಬಾದು ಒಂದಿನಾಅರೆ ನೋಡಲಿಲ್ಲ ಈ ಗಂಡ ಅನ್ನೋ ಕೊರಗು ಶಾಣಮ್ಮನ ಎದೆಯನ್ನು ಕಟ್ಟಿಗೆ ಹುಳಿವಿನಂಗ ಕೊರೀತಿತ್ತು....

ಈಗೋಂದು ತಿಂಗಳದ ಹಿಂದ ಒಂದಿನಾ ಸಂಜೀಮುಂದ ಕಮಲಿ ಬಂದಿದ್ದಳಲ್ಲ. "ಯಕ್ಕಾ ಇಂವಾ ಎಲ್ಲೀಗಿ ಹೋಗ್ಯಾನಂಬಾದು ನಿನಗ ಗೊತ್ತದಾಯೇನೇ? ತಿಂಗಳ ಮ್ಯಾಲಾಯ್ತು. ಮಣ್ಣೆತ್ತಿನಮಾಸಿ ಆದ ಮೂರುದಿನಕ್ಕೆ ಮನಿಬಿಟ್ಟು ಹ್ವಾದಾಂವ ನಾಗರಮಾಸಿ ಆಗಿ ಎಂಟು ದಿನಾ ಆಯ್ತು. ಈ ನಮ್ ಗಂಡನ ಪತ್ತಾನೇ ಇಲ್ಲಲ್ಲೇ ಯಕ್ಕಾ.... ಹಿಂಗಾದ್ರ ಹ್ಯಾಂಗಂತೀನಿ...." ಅಂತ ಕೇಳಿದ್ದಳು. ನಾ ಆದರನೂ ಏನು ಹೇಳೂಹಾಂಗಿತ್ತು? ನನಗನೂ ಅಂವಾ ಏನೂ ಹೇಳಿ ಹೋಗಿರಲಿಲ್ಲ.

ಹೊತ್ತು ಮುಣುಗಲಕತ್ತಿತ್ತು. ದನಾಕರುಗಳೆಲ್ಲಾ ಬಂದು ಕೊಟಗಿ ಸೇರೋ ಹೊತ್ತು. ಹಕ್ಕಿ ಪಕ್ಕಿಗಳೆಲ್ಲಾ ಗುಡಿಸಲ ಹಿಂದಿನ ದೊಡ್ಡಾಲದ ಮರದ ಹಣಾದಿಲಿಂದ ನಡ್ಕೊಂಡು ಹೋಗಾ ಮಂದಿ ಮಾತಿನ ದನಿಗಳು,ದನಗಳ ಕೊರಳ ಗಂಟಿಗಳು, ಪಾರುಗೋಳ ಗದ್ದಲದ ಆವಾಸುಗಳೆಲ್ಲ ಮಿಲಾವಟ ಆಗಿ ಒಂದು ನಮೂನೆಯ ಸಪ್ಪಳ ಗಾಳಿ ಬೀಸಿದಾಗೆಲ್ಲಾ ಈ ಕಡೆಗೆ ಹರಿದುಬರುತ್ತಿದ್ದವು. ಕೋಳಿಗಳನ್ನು ಒಳಗೆ ಹುಗಿಸಿ ಗೂಡಿನ ಬಾಗಿಲು ಬಂದ್ ಮಾಡಿ ಸುತಳಿಯ ಹುರಿ ಬಿಗಿದ ಶಾಣಮ್ಮ ಸಂವತಿಯ ಸಮೀಪ ಸರಿದು ಕುಂತಳು. ಕಮಲಿಯ ತೊಡೆಯಲ್ಲಿ ಕುಂತಿದ್ದ ಕೂಸು ಜಂಬಣ್ಣನನ್ನು ಕರೆಯುತ್ತ "ಬಾರೋ ನನ್ ಕಂದಾ.... ಬಾ...!" ಅಂದಳು. ಅಲ್ಲೇ ಮಣ್ಣಾಟ ಆಡುತ್ತಿದ್ದ ಮಲ್ಲೂ ತಟ್ಟನೆ ತಾಯಿಯ ಕಡೆಗೆ ತಿರುಗಿತು. ಅವ್ವ ಜಂಬಣ್ಣನನ್ನು ಕರೆಯುತ್ತಿದ್ದದ್ದು ಕಂಡು ಧಡಭಡನೆದ್ದು ಬೀಳುತ್ತೇಳುತ್ತ ಬಂದು ಅವ್ವನ ತೊಡೆಯನ್ನು ಕಬ್ಜಾ ಮಾಡಿಕೊಂಡು ಕುಂತಿತು. ಜಂಬಣ್ಣ ತನ್ನವ್ವನ ಸೆರಗಿನಲ್ಲಿ ಮಾರಿ ಮುಚ್ಚಿಕೊಂಡು ದೊಡ್ಡವ್ವನ ಹತ್ತಿರ ಬರಲು ಇನ್ಕಾರು ಮಾಡಿತು.

"ಹೂಂ.... ಅಂವಾ ನನಗನೂ ಏನೂ ಹೇಳಿ ಹೋಗಿಲ್ಲಗs ಕಮಲೀ.... ಯಾ ದೇಶಾಕ ಹ್ವಾದನೋ ಏನ್‌ಮಣ್ಣೋ..... ಅಂವಾ ಇದ್ದಾಗರೆ ನಮಗೇನು ಸುಕಾ ಕುಡ್ತಿದ್ದ ಬಿಡು. ನಾವು ರಟ್ಟಿಮುರ್‍ದು ಹೊಟ್ಟೀಗಿ ಉಂಡು, ಮಕ್ಕಳಿಗಿ ಜ್ವಾಕಿ ಜ್ವಾಪಾನಾ ಮಾಡ್ಕೊತ ಉಲ್ಪಾ ಅಂವಗನೂ ಸಾಕಲಕತ್ತೀವಿ. ಕೆಲಸಾ ಬಗಸಿಯಲ್ದೆ ಮನ್ಯಾಗ ಕುಂತಗಂಡು ತಿಂದು ಕುಂಡಿ ಘುಂಬಿತ್ತಂತ ಕಾಣಸ್ತದ ಅಂವಗ. ದೇಶಾಂತ್ರ ಓಡಿ ಹೋಗ್ಯಾನ. ಹೋಗ್ಲಿ ಬಿಡು. ಹೊಟ್ಟಿಗಿ ಕಮ್ಮಿ ಬಿದ್ದರ ತಾನೇ ಹೆಂಡ್ರುಮಕ್ಕಳ ಕಡಿಗೆ ವಾಪಸ ಬರ್‍ತಾನ...." "ಹಂಗಂತಿಯೇನು ನೀನು? ಆದರ ನನಗ್ಯಾಕೋ ಅಂವಾ ಬರಂಗಿಲ್ಲಂತೇ ಅನಸಲಕತ್ತಾದೆಕ್ಕಾ..... ಮತ್ಯಾವಕ್ಕಿ ಮೈ ಮೂಸಗೋತ ಎಲ್ಲಿಗಿ ಹೋಗ್ಯಾದೋ ಆಸಾಮಿ. ಹೂಂ...." ಕಮಲಿಯೂ ತುಸು ಸಿಟ್ಟಿನಿಂದೇ ನುಡಿದಳು. ಈಗೀಗ ಸಂವತಿಯರಿಬ್ಬರೂ ಸುಖದುಃಖ ಹಂಚಿಕೊಂಡು ಹತ್ತಿರ ಸರಿಯುತ್ತಿದ್ದರು. ಸಮಾನ ದುಃಖ ಎರಡೂ ಹೆಣ್ಣು ಜೀಂವಗಳನ್ನು ಬೆಸೆಯುವ ಹುನ್ನಾರು ನಡೆಸಿತ್ತು. ಒಂದೇ ಗಂಡಿನಮೋಸಕ್ಕೆ ಗುರಿಯಾದ ಜೋಡಿ ಜೀಂವಗಳು ಒಂದರೊಳಗೊಂದು ಬೆರೆಯಲಾರಂಭಿಸಿದವು. "ನಾ ಹೋಗ್ತಿನೆಕ್ಕಾ ಕತ್ತಲಾಯ್ತು." ಹಾಲು ಕುಡಿಯುತ್ತ ಹಂಗೇ ನಿದ್ದೆಗಿಳಿದಿದ್ದ ಕೂಸನ್ನೆತ್ತಿ ಹೆಗಲಿಗೆ ಹಾಕಿಕೊಂಡು ಗುಂಡುಗಲ್ಲಿನಂಥ ಮೊಲೆಯನ್ನು ಗಸಕ್ಕನೆ ಕುಪ್ಪಸದೊಳಗೆ ಒತ್ತಿಕೊಂಡಳು. "ಇಲ್ಲೇ ಉಂಡು ಹೋಗಾಕೆಂತೇ ಕಮಲಿ. ಬ್ಯಾಳಿಹಾಕಿ ಪುಂಡಿಪಲ್ಯಾ ಮಾಡೀನಿ. ಎಡ್ಡು ರೊಟ್ಟಿ ಬಡ್ದು ಹಾಕ್ತೀನಿ ಇರು." "ನನ್ ಬಲ್ಲಿ ರೊಟ್ಟಿ ಅವಾನೇ ಯಕ್ಕಾ.... ಒಂದೀಟು ಪುಂಡಿಪಲ್ಯಾ ಕುಡು ಸಾಕು. ಅಲ್ಲೇ ಹೋಗಿ ಉಣ್ತೇನಿ" ಅಂದಳು. ಶಾಣಮ್ಮ ಕೂಸಿಗಿ ಕೆಳಗಿಳಿಸಿ ಎದ್ದು ಒಳಗ ಹೋಗಿ ಬಂದು ರೊಟ್ಟಿಮ್ಯಾಲ ಈಟು ಪುಂಡಿಪಲ್ಲೆ, ಅಗಸಿಹಿಂಡಿ ಇಟ್ಟು ತಂದುಕೊಟ್ಟಳು.

ಮತ್ತೊಂದು ತಿಂಗಳು ಕಳೆಯಿತು. ದಿನ ಹುಟ್ಟಿ ದಿನ ಸಾಯುತ್ತಿದ್ದವು. ಆಕಾಸಂಬಾ ಬಟಾಬಯಲದಾಗ ಸೂರ್ಯಾ ಚಂದ್ರಾಮರ ಮುಟ್ಟಾಟ ನಡದೇ ಇತ್ತು. ಹೊತ್ತಿನ ಗಾಲಿ ಸುತ್ತುತ್ತಿತ್ತು. ಅವತ್ತು ದಸರಿ ಅಮಾಸಿ ಇತ್ತು.



## ಜಂಬಲಕಡಿ...!

ಸಾಧು ಕೋಕಿಲ ಎಂಬ ಚಿಂಪಾಂಜಿಗೆ ಡಿಮ್ಯಾಂಡ್ ಕಡಿಮೆಯಾಗಿದೆಯೇ? ಪ್ರಶ್ನೆ ಪ್ರಶ್ನೆಯಾಗುವ ಮುನ್ನ ತಕ್ಷಣ ಪ್ರತ್ಯಕ್ಷವಾಗುವ ಸಾಧು ಕೋಕಿಲ 'ಯಾರು ಸಾರ್ ಯಾರು ಹಾಗಂತ ಹೇಳಿದೋರು? 'ತರೀಕೆರೆ ಏರಿ ಮೇಲೆ', ಹೋದರೇನಾಯಿತು? ಮುಂದೆ ಬರುವ 'ತಿಮ್ಮರಾಯ!', 'ಬಾಂಬೆ ಹಲ್ವಾ' ಚಿತ್ರಗಳನ್ನು ನೋಡಿ ಸಾರ್ ಭರ್ಜರಿ ಜಯಗಳಿಸ್ತವೆ!'

ಇತ್ಯಾದಿ ಕೊಚ್ಚಿಕೊಳ್ಳುವ ಸಾಧು ನಟನಾಗಿ ಚಿತ್ರರಂಗಕ್ಕೆ ಪಾದಾರ್ಪಣೆ ಮಾಡಿದಾಗಿನಿಂದ ಆತನ ಸಂಗೀತವು ಮೂಲೆಗುಂಪಾಗಿದೆಯಂತೆ. 'ಮನೆಗೆ ಬಂದೋರೆಲ್ಲ ನನ್ ಚಿತ್ರದಲ್ಲಿ ಜಂಬಲಕಡಿ ಪಾತ್ರವಿದೆ ಅಂತಾರೆ ಹೊರತು ಸಂಗೀತ ನಿರ್ದೇಶಿಸಿ ಎಂದು ಕೇಳುವುದೇ ಇಲ್ಲ'.

ಸಂಗೀತ ಬಿಟ್ಟು ಚಿತ್ರರಂಗಕ್ಕೆ ಬಂದರೂ ಕಲಿತ ಚಟಕ್ಕೆ ಸುಮ್ಮನಿರದ ಸಾಧು 'ಸಂಗೀತ ನುಡಿಸ್ತೇನೆ, ಜಂಬಲಕಡಿಯಂತೆ ನಟಿಸ್ತೇನೆ'. ಹೀಗೆ ಎರಡೆರಡು ಕಂಡೀಷನ್ ಹಾಕ್ತಿದ್ದಾರೆ. ಇಷ್ಟಾದಾಗ್ಯೂ ಕೋಕಿಲನ ಕಿಲ ಕಿಲ ಕೇಳಲು ನಿರ್ಮಾಪಕರು ಆತನ ಬಳಿ ಬರ್ತಿದ್ದಾರೆಯೆ? ಆತನನ್ನೇ ಕೇಳಿ!



ಕೇರಿ ಮಂದೆಲ್ಲಾ ಮನಿ, ಅಂಗಳ ಸಾರಿಸಿ, ಸುಣ್ಣಾ ಬಣ್ಣಾ ಮಾಡಿ, ಕೌದಿಕಂಚಟಗೊಳೆಲ್ಲಾ ಒಗೆದು ಮ್ಯಾಳಿಗಿ ಮ್ಯಾಲ, ಅಂಗಳದ ಕಲ್ಲಗುಂಪಿ ಮ್ಯಾಲ, ಒಣಗಲಕ್ಕ ಹಾಕಿದ್ದರು. ನೆತ್ತೀಗಿ ನೀರೆರ್‍ಕೊಂಡು ಹೆಂಗಸರು ತುಳಜಾಪುರದ ಅಂಬಾಬಾಯಿದೇವಿಯ 'ದೀಪಾ' ಹಾಕೂದಕ್ಕ ತಯಾರಿ ನಡೆಸಿದ್ದರು. ದಸರಿ ಹಬ್ಬದಾಗ ತುಳಜಾಪುರ ದೇವಿ 'ದೀಪಾ' ಹಾಕೋದು ಈ ಜಿಲ್ಲಾದಾಗಿನ ಭಾಳ ಮಂದಿ ಮನಿಯೊಳಗ ಹಿಂದಿನ ಹಿರೇರಿಂದಲೂ ನಡ್ಕೊಂಡು ಬಂದ ರಿವಾಜು. ಶಾಣಮ್ಮನೂ ಎಲ್ಲಾ ಬಟ್ಟೇಬರಿ ಒಗ್ದು, ಮನಿಗಿನಿ ಸಾರ್‍ಸಿ ಸುದ್ದ ಮಾಡಿದಳು. ಆಕಿ ಮನ್ಯಾಗನೂ ಐದು ದಿನದ ದೀಪಾ ಇತ್ತು. ಕಮಲಿನೂ ಇಲ್ಲಿಗೇ ಬಂದಿದ್ದಳು. ಒಂಬತ್ತು ದಿನದ ದೀಪಾ ಹಾಕಾ ಮನಿಗಳೂ ಈ ಹಳ್ಳ್ಯಾಗ ಭಾಳೋಸು ಇದ್ದುವು.

ಹೊತ್ತ ಮುಣಗಾದು ಇನ್ನಾ ತಾಸದಾ ಅನ್ನಾ ಟೇಮದಾಗ ಇಬ್ಬರೂ ಸಂವತೇರು ಕೂಡಿ ಮಕ್ಕಳಿಗಿ ಬಗಲಾಗ ಹಾಯ್ಕೊಂಡು, ಹೊಸಾ ಸೀರಿ ಉಟ್ಕೊಂಡು ಊರ ನಡುವಿನ ಅಂಬಾದೇವಿ ಗುಡಿಗಿ ಬಂದರು. ಗುಡಿ ಪೌಳಿತುಂಬಾ ಜನ ಜಾತ್ರಿಯಾಗಿತ್ತು. ಹಾಂಗ ನೋಡಿದರ ಈ ದಸರಿ ಹಬ್ಬಾ ಅಂಬೋದು ಈ ಕಡೆ ಪೂರಾ ಒಂಬತ್ತು ದಿನದ ಜಾತ್ರೀನೇ. ತಾಯಿಗುಡ್ಯಾಗ ಗೊಂದಲಿಗೇರ ತುಳಸಿರಾಮ ಕಾಕಾ ಪೂಜಾದ ತಯಾರಿ ನಡಸಿದ್ದ. ಹುವ್ವಾ ಕಾಯಿ, ಹಣ್ಣುಹಂಪಲಾ, ಎಲಿ ಅಡಕಿ, ಅರಿಶಿಣ ಕುಂಕುಮ, ಟೆಂಗು ವೀಳೆದೆಲಿ ಅಂತ ಹತ್ತು ಹದಿನೆಂಟು ತರದ ಸಾಮಾನುಗಳನ್ನು ಸವರಿಸಿಡತೊಡಗಿದ್ದ. ಗರಭಗುಡಿಯ ಹೊರಗೆ ಹಿಂದಿನ ಬಾಜು ಒಂದು ಮೂಲೆಯಲ್ಲಿ ಪೂರುವ ದಿಕ್ಕಿಗಿ ಮಾರಿಮಾಡಿ ಕೂಡಿಸದ್ದ ಮತ್ತೊಂದು ಕಟ್ಟಿಗೆಯ ದೇವಿ ಮೂರುತಿಯ ಮುಂದೆ 'ದೀಪಾ' ಹಾಕಿದ್ದರು. ಹಣತಿಮ್ಯಾಲ ಹಣತಿಯಿಟ್ಟು ಹಣತಿತುಂಬಾ ಎಣ್ಣೆ ತುಂಬಿ ಜೋಡ ಬತ್ತಿಲಿಂದ ಜೋಡ ದೀಪಾ ಹಚ್ಚಿಟ್ಟಿದ್ದರು. ಈ ದೀಪಾಗೊಳು ಶಾಂತ ಆಗಲಾರಥಂಗ ಹಗಲಾರಾತರಿ ಕಾಯೋ ಕೆಲ್ಸಾ ಗುಡಿ ಪೂಜಾರೀದು. ಒಂಬತ್ತನೇ ದಿನ ಅಂದರ ದಸರಿ ಹಬ್ಬದ ದಿನ ಬನ್ನಿ ತಂದು ಪೂಜಾ ಮಾಡಿ ದೀಪಾ ಸರಸಾದು ನಡ್ಕೊಂಡು ಬಂದ ರಿವಾಜು. ಎಂಟನೇ ದಿನ ಖಂಡೇ ಪೂಜಿ. ಅವತ್ತ ಕಾಟಗ ಮಂದೆಲ್ಲಾ ಕುರಿ, ಕೋಳಿ ಕೊಯ್ದು ದೇವಿಗಿ ನೆವ್ವಾ ಹಿಡ್ದು 'ಸಸಿ' ಸರಿಸುತ್ತಿದ್ದರು. ಬಿಳಿ ಮಂದಿ ಮಾತರ ಹೋಳಿಗಿ ನೆವ್ವಾನೇ ಮಾಡತ್ತಿದ್ದರು.

ಹಿಂಗ್ ಒಂಬತ್ತು ದಿನ ದೇವಿ ಗುಡಿಮುಂದ ಹಗಲಾರಾತರಿ ಮಂದಿ ಗದ್ದಲೋ ಗದ್ದಲ. ಸಂಜಿ ಆದರ ಸಾಕು, ಡೊಳ್ಳು ಭಾರಸಾದು, ಜಾಂಗಟಿ ಭಾರಸಾದು, ಗಂಟಿ ಭಾರಸಾದು, ಹೆಣ್ಣ ಜೋಗವ್ವಗಳು ಹಾಡೋದು, ಗಂಡ ಜೋಗವ್ವಗಳು ಕುಣ್ಯಾದೂ, ಭೂತ್ಯಾಗೋಳು ಬೆಂಕಿ ಹಚ್ಚಿದ ಪತ್ತಾ ಮೈಗಿ ಬಡ್ಕೋತ ಕುಣಕೋತ 'ಪತ್ತಾ' ಆಡಾದು - ಹಿಂಗ್ ಜಾತರಿ ಝುಮ್ಮರ ನಡೀತಿತ್ತು. ಮಂದೆಲ್ಲಾ ನೋಡ್ಲಕ್ಕಂತ, ಪೂಜಾಕ್ಕಂತ ಬಂದು ನೆರಿತಿದ್ದರು. ಪೂಜಾ ಸುರು ಆದರ ಸಾಕು. ಕುಂತ ನಿಂತ ಮಂದ್ಯಾಗ ನಾಕೆಂಟು ಮಂದೀಗರೆ ಮೈ ಮ್ಯಾಲ ದೇವಿ 'ಸವಾರಿ' ಬಂದು ಕುಣಿಯೋದು ಮಾಡತ್ತಿದ್ದರು. ದೆವ್ವಗಳೂ ಎದ್ದು ಯಾರ ಮೈಯಾಗರೆ ಬಂದು ಚೀರೋದು, ಕೂಗೋದೂ, ಕುಣಿಯೋದೂ ಮಾಡತ್ತಿದ್ದುವು. ಒಟ್ಟನ್ಯಾಗ ದೇವಿ ಜಾತರ್‍ಯಾಗ ಇವೆಲ್ಲಾ ಗರ್ದಿಗಮ್ಮತ್ತಗಳು ನಡದೇ ನಡೀತಿದ್ದುವು. ಇದು ಸುರು ಆಗಾದು ದಸರಿ ಅಮಾಸಿಲಿಂದೇ.

ಶಾಣಮ್ಮ ಕಮಲಿ ಬಂದು ಹುವ್ವಾ ಕಾಯಿ ಪೂಜಾರಿ ಕೈಯಾಗ ಕೊಟ್ಟು ದೇವಿ ಗರಭಗುಡಿ ಹೊಸ್ತಿಲಕ್ಕ ಹಣಿಹಚ್ಚಿ ಸೆಣಮಾಡಿದರು. ಮಕ್ಕಳಿಗಿ ಅಡ್ಡಬೀಳಿಸಿದರು. ಹೊಸ್ತಿಲ ತುಂಬಾ ಚೆಲ್ಲಾಡಿದ್ದ ಭಂಡಾರ (ಅರಿಶಿನ) ಕುಂಕುಮ ತಗೊಂಡು ಹಣೀಗಿ ಸವರಿಕೊಂಡರು. ಹೊರಬಂದು ಆವಾರದ ಕಟ್ಟಿಯ ಮೇಲೆ ಕಿಕ್ಕಿರಿದು ಕುಂತಿದ್ದ ಮಂದಿಯ ನಡುವೆ ಬಂದು ''ಒಂದೀಟು ಅಕಾಡಿ ಸರಿಯೇ ಯಕ್ಕಾ....'' ಅನ್ನುತ್ತ ಜಾಗ ಮಾಡಿಕೊಂಡು ಕುಂತರು. ''ಐಯ್ ನೀವೇನ್ರೆ.... ಇಬ್ರೂ ಸಂವತೇರು ಈಟು ತಡಾಮಾಡಿ ಬಂದು ಈಗ ಕುಂದರ್‍ತೀನಿ ಜಾಗ ಬಿಡು ಅಂದ್ರ, ಯಕಾಡಿ ಸರೀಬೇಕ್ರೀ ಮೈಯ್ಮಾಲ್ಲೇರೇ....'' ಅಂತ ಮಣ ಮಣ ಮಾಡುತ್ತಲೇ ಬಸ್ಸವ್ವ ಕುಂತಲ್ಲೇ ಕುಂಡಿ ಸರಿಸಿದಳು. ''ಯಕಾಡಿ ದಬ್ಬತಿರೇ ಯವ್ವಾ... ಪಾಪ. ಬಸರಹೆಣ್ಣಮಗಳು ನಿಂಗಿ ಹೊಟ್ಟೀಗಿ ಹತ್ಯಾಗಲಕತ್ತಾದ ಇಕಾಡಿ. ಸರೀರಿ ಅಕಾಡಿ....'' ಅಂತ ಈರಿ ಮುಂಗೈಯಿಂದ ಕಮಲಿಯ ಮಗ್ಗಲು ತಿವಿದರೂ ಕಮಲಿ ಅಲ್ಲೇ ಕಟ್ಟೀ ತುದಿಗೆ ತುದುಗುಂಡಿಯ ಮ್ಯಾಲೆ ಕೂತು ಮುಂದಿನ ಅಂಗಳದಲ್ಲಿ 'ಪತ್ತಾ' ಆಡುತ್ತ ಕುಣಿಯುತ್ತಿದ್ದ ಭೂತ್ಯಾಗಳ ಕಡೆಗೆ ಕಣ್ಣು ನೆಟ್ಟಳು.

ದೇವಿ ಗುಡಿಯ ಮುಂದಿನ ಅಪರಂಪಾರ ಬಯಲಿನಲ್ಲಿ ಊರಂಬೋ ಊರಿನ ಮಂದೆಲ್ಲಾ ಬಂದು ನಿಂತಿದ್ದರು. ನಡುವೆ ಜೋಗವ್ವಗಳು ಕೊರಳಲ್ಲಿ ಕವಡೆಸರ, ನೆತ್ತಿಮೇಲೆ ಪರಡಿ ಹೊತ್ತುಕೊಂಡು ಹಾಡುತ್ತ ಅದಕ್ಕನುಗುಣವಾಗಿ ಹೆಜ್ಜೆ ಹಾಕುತ್ತಿದ್ದರು. ಭೂತ್ಯಾಗಳು ಅನ್ನಿಸಿಕೊಳ್ಳುವ ಗಂಡುಜೋಗವ್ವಗಳು ಎಣ್ಣೆ ಕಮುಟಾದ ನಿಲುವಂಗಿ ತೊಟ್ಟು ಮೇಲೆ ಕೊರಳಲ್ಲಿ ಕವಡೆಸರ, ಅಂಬಾದೇವಿಯ ಪದಕ ಹಾಕಿಕೊಂಡು ತಲೆಗೆ ಕವಡೆ ಟೊಪ್ಪಿಗೆ ಕಿರೀಟ ಇಟ್ಟುಕೊಂಡು ಕಾಲಲ್ಲಿ ಗೆಜ್ಜೆ, ಕೈಯಲ್ಲಿ ಉರಿಯುವ 'ಪತ್ತಾ' ಮೈಗೆ ಬಡಿದುಕೊಳ್ಳುತ್ತ ಉಧೋ.... ಉಧೋ.... ಅಂಬಾಭವಾನಿ ..... ಉಧೋ ಅಂತ ಮುಗಿಲು ಮುಟ್ಟುವಂತೆ ಕೂಗುತ್ತ ಕುಣಿಯುತ್ತಿದ್ಧರು. ಆಟಾ ಭರಪೂರ ನಡೆದಿತ್ತು. ಹಿಂಡಿಗೆ ಹಿಂಡೇ ಜೋಗವ್ವಗಳು ಕುಣಿಯುತ್ತಿದ್ದರು. ಅವರ ನಡುವೆ ನೆತ್ತರುಗೆಂಪಿನ ಸೀರೆಯುಟ್ಟು, ಹಳದಿ ಕುಪ್ಪಸ ತೊಟ್ಟು, ಕೊರಳಲ್ಲಿ ನಾಕಾರು ಕವಡೆಸರ ಹಾಕಿಕೊಂಡು, ಹಣೆ ತುಂಬ ಭಂಡಾರ ಕುಂಕುಮ ಬಳಿದುಕೊಂಡು ಎರಡೂ ಕೈ ತುಂಬ ಹಸಿರು ಗಾಜಿನ ಬಳೆ ತೊಟ್ಟುಕ್ಕೊಂಡು, ಕಾಲಲ್ಲಿಯ ಗೆಜ್ಜೆಸರ ಝುಣ ಝುಣಿಸುತ್ತ ಮೈಮೇಲಿನ ಖಬರು ಹಾರಿ ಕುಣಿಯುತ್ತಿದ್ದ 'ಖೊಜ್ಜಾ'ನನ್ನು ಕಂಡು ಮಂದೆಲ್ಲಾ ದಂಗಾಗಿದ್ದರು. ''ಆಕಿ ಮೈಯಾಗ ದೇವಿ ಸವಾರಿ ತುಂಬ್ಯಾದೇಯವ್ವಾ.... ಅದಕೇ ಆಟು ಛಂದ ಕುಣೀಲಕತ್ತಾಳ'' ಅಂತ ಒಂದು ದನಿ ಬಂದರೆ ''ತಾಯಿ ಮಾಯಕಾರತಿ ದೇವಿ ತುಳಜಾಪುರದ ತುಕ್ಕು ಬಾಯೀ ಉಧೋ ಉಧೋ'' ಅನ್ನುವ ದನಿ ಮತ್ತೊಂದು ಕಡೆಯಿಂದ ಎದ್ದು ಬರತ್ತಿದ್ದವು. ಹೆಂಗಸರು ತಮ್ಮ ಗಲ್ಲ ಗಲ್ಲ ಬಡಿದುಕೊಂಡು ಕೈ ಮುಗಿಯುತ್ತಿದ್ದರು.

''ಯಾರೇ ಯವ್ವಾ ಈ ಗಂಡುಜೋಗಣೀ.... ಸವಾರಿ ಮೈಯಾಗ ತುಂಬಿ ಒಂದೇ ಸವನ ಕುಣ್ದು ಕುಣ್ದು ಹೈರಾಣಾಗಲಕತ್ತಾಳ. ನಿಂಬಿಕಾಯಿ ಕೊಯ್ದು ಆಕಿನ ಮಾರಿಮ್ಯಾಲ ಹಾಕರೇ ಯಪ್ಪಾ.... ಆ ಪೂಜಾರಿಗಿ ಕರೀರಿ. ದೇವರ ಆದಾರ ತಂದು ಆಕಿನ ಮಾರಿಮ್ಯಾಲ ಹಾಕರೇ.... ಕುಣ್ದೂ ಕುಣ್ದೂ ಸುಸ್ತಾಗಲಕತ್ತಾಳ. ಮೈಯೆಂಬಾದು ಥರಾಥರಾ ನಡಗಲಕತ್ತಾದಲ್ಲೇ ತಾಯೀ.... ಝೋಲಿ ಹೋಗಿ ಬೀಳ್ತಾಳೋ



## ಬೆಂಗಳೂರಲ್ಲಿ ಬಿಚ್ಚಮ್ಮ

'ಫೈರ್' ಹುಡುಗಿ ನಂದಿತಾ ದಾಸ್ ಇದೀಗ 'ದೇವೀರಿ' ಚಿತ್ರದ ನಾಯಕಿ. ಪಿ.ಲಂಕೇಶ್ ಅವರ 'ಅಕ್ಕ' ಕಾದಂಬರಿಯನ್ನು ಲಂಕೇಶರ ಮಗಳು ಕವಿತಾ ಲಂಕೇಶ್ 'ದೇವೀರಿ'ಯಾಗಿ ರೂಪಾಂತರಿಸಿದ್ದಾರೆ. ತಂದೆಯ ಕಥಾವಸ್ತುವಿನ ಚಿತ್ರಕ್ಕೆ ಮಗಳು ನಿರ್ದೇಶಕಿ. ಫಾರಿನ್ ರಿಟರ್ನ್ಡ್ ಭಾರತೀ ಗೌಡ ಈ ಚಿತ್ರಕ್ಕೆ ನಿರ್ಮಾಪಕರು.

ಇವೆಲ್ಲ ಹಳೆಯ ಸಂಗತಿಗಳು. ಫೈರ್ ಚಿತ್ರದಲ್ಲಿ 'ಅರ್ಥ್ 1947'ರಲ್ಲಿಯೂ ಬಿಚ್ಚಮ್ಮಳಾಗಿ ನಟಿಸಿ 'ಫೈರ್.... ಲವ್ ಸೆಕ್ಸ್ ಫೈರ್' ಸಿಡಿಸಿದ್ದ ನಂದಿತಾ 'ದೇವೀರಿ' ಯಲ್ಲಿಯೂ ಅದೇ ತರಹ ಬೋಲ್ಡ್ ಆಗಿ ಬೆಂಗಳೂರಿನ ಬೀದಿ ಹುಡುಗರ ಹೃದಯಕ್ಕೆ ಬೆಂಕಿ ಹಚ್ತಾಳೆಯೇ?

ಹಾಗಂತ ಹಿರಿಯರು ನಿರ್ದೇಶಕರಿಗೆ ಪ್ರಶ್ನಿಸಿದರೆ 'ಹಾಗೇನಿಲ್ಲ. ನಮ್ಮ ಕಥಾವಸ್ತುವು ಹಾಗಿಲ್ಲ' ಅಂದಿದ್ದಾರೆ. ವಿಷಯ ನಂದಿತಾ ದಾಸ್‌ವರೆಗೆ ಹೋಗಿಯೇ ಇಲ್ಲ.

ಎನ್ ಮಣ್ಣೋ....'' ಕುರುಬರ ಕಾಶವ್ವಾಯಿ ಒದರ್ಯಾಡಿತು. ಪೂಜಾರಿ ಹೊರಬಂದು ನಿಂಬಿಹಣ್ಣು ಕೊಯ್ದು ಎಸೆದಾಗ ನಿಧಾನವಾಗಿ ಸವಾರಿ ಇಳಿಯತೊಡಗಿತು. ನಂತರ ಆ ಜೋಗಪ್ಪ ಧೊಪ್ಪೆಂದು ನೆಲಕ್ಕೆ ಬಿದ್ದನು. ಉಳಿದ ಜೋಗವ್ವಗಳೆಲ್ಲ ಉಧೋ ಉಧೋ ಅನ್ನುತ್ತ ಅವನನ್ನು ಸಮೀಪಿಸಿದರು.



ಹೀಗೆ ಕುಣಿದು ಕೆಳಗೆ ಬಿದ್ದಿದ್ದ ಜೋಗಪ್ಪನನ್ನು ಯಾರೂ ಮೊದಲೆಂದೂ ಈ ಹಳ್ಳಿಯಲ್ಲಿ ಕಂಡಿರಲಿಲ್ಲ. ಬ್ಯಾರೆ ಯಾವುದೋ ಊರಿನವನಿರಬೇಕೆಂದುಕೊಂಡಿದ್ದರು. ಜೋಗವ್ವಗಳು ಸುತ್ತುವರೆದು ಅವನ ಮಾರಿ ಮ್ಯಾಲೆ ನೀರು ಹಾಕಿದರು. ಮುತ್ತವ್ವ ಜೋಗುತಿ ತನ್ನ ಸೆರಗಿನಿಂದ ಅವನ ಮಾರಿ ಒರೆಸಿದಳು. ಕುಂಕುಮ ಭಂಢಾರ ಒರೆಸಿದ ಆ ಮಾರಿಯನ್ನು ದಿಟ್ಟಿಸಿ ನೋಡಿದ ಮುತ್ತವ್ವಾಯಿ ''ಐಯ್ ನನ್ ಸಿವನೇ.... ಇಂವ ನಮ್ಮೂರ ತೆಳಗೇರಿ ಯಮನಪ್ಪ ಅದಾನ್ರೇ ಯವ್ವಾ... ಥೇಟ ಅಂವಂದೇ ಮಾರಿ. ಮೀಸಿ ಬೋಳಸ್ಗೊಂಡು ಕವಡಿಸರ ಧರಸ್ಗೊಂಡು ಅಂಬಾಭವಾನಿ ಜೋಗತಿ ಆಗ್ಯಾನಲ್ರೀ.... ಇಂವಾ ಯವಾಗ ಹಿಂಗಾಗಿ ಆ ದೇವಿ ಸೇವಾಕ್ಕ ನಿಂತನೂ....'' ಅಂತ ಅಚ್ಚರಿಯಿಂದ ನುಡಿದಾಗ ಮಂದೆಲ್ಲ ಸರ್ರನೆ ಸರಿದು ಬಂದರು. ಭೂತ್ಯಾ ತುಕಾರಾಮ ಸಾವಕಾಶ ನಡೆದು ಸಮೀಪ ಬಂದು ನಿಂತನು. ಅಷ್ಟರಲ್ಲಿ ಯಮನ್ಯಾ ಕಣ್ತೆರೆದು ಎದ್ದು ಕುಂತನು. ಭೂತ್ಯಾ ತುಕಾರಾಮನು ನಿಧಾನವಾಗಿ ಹೇಳತೊಡಗಿದನು. ''ಹೊಯಿಂದೇ ಯಕ್ಕಾ.... ಇಂವಾ ನಮ್ಮೂರ ತೆಳಗೇರಿ ಯಮನಪ್ಪ ಅಂಬಾದೇ ಖರೇ. ಸೋಳಾ ಆಣೆ ಬರೋಬ್ಬರಿ ಅದಾ. ಈಗೆಡ್ಡು ತಿಂಗಳ ಹಿಂದೆ ನನ್ ಜೋಡಿ ತುಳಜಾಪುರಕ್ಕೆ ಬಂದಿದ್ದ. ದೇವಿ ಗುಡಿಮುಂದs ಯವಾಗನೂ ಕೂಡತ್ತಿದ್ದ. ಜೋಗತೇರ ಆಟಾ ನೋಡ್ತಿದ್ದ. ರಾತ್ರಿ ಅಲ್ಲೇ ಭೂತ್ಯಾಗೋಳ ಜೋಡಿ ಮಕ್ಕೋತಿದ್ದ. ಅವ್ರು ಜೋಗಾ ಬೇಡಿ ತಂದಿದ್ದು ಇಂವಗೀಟು ಕುಡ್ತಿದ್ದರು. ತಿಂದು ನೀರ ಕುಡೀತಿದ್ದನು. ನಿಮಗೆಲ್ಲಾ ಗೊತ್ತಲ್ಲ. ಅಂಬಾಬಾಯಿ ದೇವಿ ಹೆಸರಿನ ಮ್ಯಾಲ ಜೋಗಾ ಅಂತ ಬೇಡ್ಕೊಂಡು ತಿಂದೇ ಭಾಳ ಮಂದಿ ಬದಕ್ತಾರಲ್ಲ. ಒಂದಿನಾ ಮಂಗಳಾರ ಅವನ ಮನದಾಗ ಏನು ಬುದ್ದಿ ಬಂತೋ ಏನೋ ನನ್ ಬಲ್ಲಿ ಬಂದು ''ಕಾಕಾ.... ನಾನೂ ದೇವಿ ಜೋಗಪ್ಪ ಆಗ್ತೀನಿ. ನನಗನೂ ಆರಾಧ್ನಿ ಮಾಡಿ ಪಟ್ಟಕ್ಕೆ ಹಾಕ್ರಿ'' ಅಂದನು. ನಾ ''ಯಾಕಪಾ....?'' ಅಂತ ಕೇಳದ. ''ನೀ ಸೀರಿ ಉಟಗೊಂಡು ತೆಲಿಮ್ಯಾಲ ನನ್ ಪರಡಿ ಹೊತಗೋ ಬಾರೋ ಮಗಾ.... ಮೀಸಿ ಬೋಳಸ್ಗೊಂಡು ಕೈಥುಂಬಾ ಬಣ್ಣದ ಬಳಿ ಇಟ್ಕೊಂಡು ಕಾಲಿಗಿ ಗೆಜ್ಜಿ ಕಟ್ಕೊಂಡು ಕುಣಿಯೋ ಮಗಾ.... ಇನ್ನ ನಿನ್ನ ಗಂಡಸ್ತನ ನಾ ಕಿತ್ಗೊಂಡೀನಿ. ಹೆಂಗಸರದಾಗ ಹೆಂಗ್ಸಾಗಿ ಗಂಡಸರದಾಗ ಗಂಡಸಾಗಿ ಅಸಲೀ ನೀ 'ಖೊಜ್ಜಾ' ಆಗಿ ಉಧೋ ಉಧೋ ಅನಕೋತ ತೆಲಿಮ್ಯಾಲ ನನ್ ಪರಡಿ ಹೊತ್ತು, ಕೊಳ್ಳಾಗ ಕವಡಿಸರ ಹಾಯ್ಕೊಂಡು ಜೋಗಾ ಬೇಡ್ಕೋತ ಊರಾಡೋ ಯಮನ್ಯಾ....'' ಅಂತ ಈ ಭವಾನಿದೇವಿ ನನಗ ಕನಸನ್ಯಾಗ ಬಂದು ಅಪ್ಪಣಿಕೊಟ್ಟಾಳೋ ಕಾಕಾ. ನನಗ ದೇವಿ ಆರಾಧ್ನಿ ಮಾಡ್ಸಿ ತೆಲಿಮ್ಯಾಲ ಪರಡಿ ಹೊರ್ಸು....'' ಅಂತ ಒಂದೇ ಸವನ ದುಂಬಾಲುಬಿದ್ದನು. ತಾಯಿ ಅಪ್ಪಣಿ ಆದಮ್ಯಾಲ ನಮ್ದೇನು ಅಂತ ಇಂವಗ ಜೋಗತಿ ಪಟ್ಟಕ್ಕ ಹಾಕಿ ಬಿಟ್ಟೇವಿ. ಈಸ ದಿನಾಯೆಲ್ಲಾ ಮರಾಠವಾಡಾದ ಪಂಡರಾಪುರ, ಸೊಲ್ಲಾಪುರ, ಕುರುಡವಾಡಿ, ಸಾಂಗ್ಲಿ, ಮಿರಜ ಅಂತ ಪರಡಿ ಹೊತ್ತು ಜೋಗಾ ಬೇಡ್ಕೋತ ಊರೂರು ತಿರಗಿ ಬಂದೀವಿ. ದಸರಿ ಹಬ್ಬದಾಗ ನಮ್ಮೂರ ಅಂಬಾಬಾಯಿ ಗುಡಿಮುಂದ ಮುಕ್ಕಾಂ ಹಾಕಿ ಹಗಲಾ ರಾತರಿ ದೇವಿ ಜಾತರ್ಯಾಗ, ಪತ್ತಾ ಆಡ್ಕೋತ, ಜೋಗಾ ಬೇಡ್ಕೋತ, ಕುಣ್ಕೋತ ಇರಾಮೆಂತ ಇಲ್ಲೀಗಿ ಬಂದೀವಿ. ತಾಯಿ ಸದಾನಂದೀ, ತುಳಜಾಪುರ ತುಕ್ಕುಬಾಯೀ, ಚುಂಚುರು ಮಾಪುರತಾಯೀ, ಸವದತ್ತಿ ಎಲ್ಲಮ್ಮಾ ಉಧೋ ಉಧೋ.... ಉಧೋ.... ಅಂತ ಆಕಳಿಸಿ ತುಕಾರಾಮ ಕಾಕಾ ಮೈ ಒಡ್ಡು ಮುರಿದು ಪತ್ತಾ ಎತ್ತಿ ಮೈಗೆಲ್ಲಾ ಬಡ್ಕೊಂಡನು.

ಈ ತುಕಾರಾಮಕಾಕಾ ಗೊಂದಲಗೇರ ಭವಾನಿ ಚವ್ಹಾಣನ ದೂರದ ಸಂಬಂಧಿಕ. ಕಾಕಾ ಆಗಿದ್ದಂವ. ಹೆಂಡ್ರೂ ಮಕ್ಕಳು ಯಾರೂ ಇಲ್ಲದ ಒಂಟಿ ಜೀಂವ. ತುಳಜಾಪುರ ಅಂಬಾಬಾಯಿ ಭೂತ್ಯಾ ಆಗಿ ಆರಾಧ್ನಿ ಆಗಿದ್ದವನು. ತನ್ನ ಜಿಂದಗಿ ಸಾಟಿ ವರ್ಸಿನ ತನಕಾ ಆ ದೇವಿ ಸೇವಾದಾಗೇ ದೇಹ ಸವೆಸಿದ ಜೋಗಪ್ಪ. ಯವಾಗಂದರ ಅವಾಗ ತುಳಜಾಪುರಕ್ಕೆ ಹೋಗ್ತಿದ್ದ. ದೇಶಾ ದೇಶಾ ಸುತ್ತಿ ಜೋಗಪ್ಪಗೋಳ ಹಿಂಡವ್ಯಾಗಿದ್ದು ಜೋಗಾ ಬೇಡ್ಕೋತ ಊರೂರು ತಿರಗತ್ತಿದ್ದ. ದಸರಿ ಜಾತರಿಗಿ ಮಾತ್ರ ತಪ್ಪಲಾರ್ದೆ ಈ ಊರಿಗಿ ಬರ್‍ತಿದ್ದ.

ಭೂತ್ಯಾ ತುಕಾರಾಮಕಾಕಾನ ಬಾಯಿಲಿಂದ ಯಮನಪ್ಪನ ಹೊಸಾ ಹುಟ್ಟಿನ ಹಕೀಕತ್ತೆಲ್ಲಾ ಮುಗಿದಾಗ ಉಳಿದ ಜೋಗಣೇರು, ಭೂತ್ಯಾಗಳು ಕೂಡಿ ಉಧೋ ಅಂತ ಒದರಿದ ಕೂಗು ಆಕಾಶಕ್ಕಡರಿತು. ಕುಂತ ನಿಂತ ಮಂದೆಲ್ಲ ಹಣೆಗೆ ಕೈ ಹಚ್ಚಿಕೊಂಡು ದೇವಿಗೆ ಸಣಮಾಡಿ ಗಲ್ಲಾ ಗಲ್ಲಾ ಬಡಿದುಕೊಂಡರು.

ತುಸು ಹೊತ್ತು ಎಲ್ಲ ಕಡೆಗೆ ಗವ್ವೆನ್ನುವ ಮೌನ ಮುತ್ತಿತು. ಪೂಜೆಯ ಗಂಟೆ, ಜಾಂಗಟೆ, ಢೊಳ್ಳುಗಳ ಸದ್ದೆಲ್ಲ ಅಡಗಿ ನಿಂತಿತ್ತು. ತುಕಾರಾಮ ಹೇಳಿದ ಕತೆ ಕೇಳಿದ್ದ ಮಂದಿ ಮೂಕರಾಗಿದ್ದರು. ಕಟ್ಟೆಯ ತುದಿಗೆ ಕುಂತಿದ್ದ ಶಾಣಮ್ಮ ಮಗುವನ್ನೆತ್ತಿಕೊಂಡು ನಿಧಾನವಾಗಿ ನಡೆದು ಯಮನಪ್ಪನ ಸಮೀಪ ಬಂದಳು. ಕಮಲಿಯೂ ತನ್ನ ಕೂಸಿನೊಂದಿಗೆ ಬಂದು ನಿಂತಳು. ಇಬ್ಬರ ಎದೆಯಲ್ಲಿ ದುಗುಡ ಸಂಕಟಗಳು ಕದಲಿದುವು. ಶಾಣಮ್ಮನಿಗೆ ದಿಕ್ಕು ತಪ್ಪಿದ ಅನುಭವ. ಏನೂ ಕೆಲಸಕ್ಕೆ ಬರಲಾರದೆ ಬೇಕಾರಾಗಿ ತಿರುಗುತ್ತಿದ್ದ ಗಂಡ ದೇವಿಯ 'ಜೋಗಪ್ಪ' ಆಗಿದ್ದು ಒಂದು ರೀತಿ ಇಚಿತ್ತರ ಅಂತನ್ನಿಸಿದರೂ ಇದೆಲ್ಲ ಖರೇ ಇರಲಿಕ್ಕಿಲ್ಲ ಅನ್ನುವ ಸಂಶಯ ಮಿಸುಕಾಡಿತು. ಆ ತುಳಜಾಪುರದಲ್ಲಿ ದೇವಿಭವಾನಿಯ ಗುಡಿ ಇರಾದು ಖರೇ. ಆಕಿನ ಸೇವಾಕ್ಕ ಜೋಗವ್ವ ಜೋಗಪ್ಪರಾಗಿ ಪರಡಿ ಹೊತ್ತು ಕವಡೆಸರ ಹಾಕ್ಕೊಂಡು ಮನೆ ಮನೆ, ಊರೂರು, ಬಾಜಾರ, ಬಾಜಾರ, ದುಕಾನ, ದುಕಾನಗಳ ಮುಂದೆ ನಿಂತು ''ಅಂಬಾಬಾಯೀ ಜೋಗs.... ಜೋಗ ನೀಡ್ರಿ, ಬಾಬಾ....'' ಅಂತ ಬಿಕ್ಕಿ ಬೇಡಾ ಧಂಧಾಕ್ಕ ಇಳದಿರಾದೂ ಖರೇ. ಆದರ ಆ ದೇವಿ ಇವರಿಗೆಲ್ಲಾ ನನ್ ಹೆಸರ ಹೇಳ್ಕೊಂಡು ಬಿಕ್ಕಿ ಬೇಡ್ರಿ, ನನ್ ಹೆಸರಿನ ಮ್ಯಾಲ ಹಾದರಾ ಮಾಡ್ರಿ, ಮೀಸಿ ಬೋಳಸ್ಗೊಂಡು 'ಖೊಜ್ಜಾ' ಆಗಿ ತಾಳಿಕಟ್ಟಿದ ಹೆಂಡ್ರೀಗಿ ಬಿಟ್ಟು ದೇಶಾಂತ್ರ ಹೋಗ್ರಿ' ಅಂತ ಅದ್ಹ್ಯಾಂಗ ಹೇಳ್ತಾಳು? ಹೆಂಗಸ್ರಿಗಿ ಹಾದರ ಮಾಡ್ರಿ ಗಂಡಸ್ರೀಗಿ ಖೊಜ್ಜೆರಾಗ್ರಿ ಅಂತಂದು ದೇವಿಗೆ ಏನು ಸಾಧಸ್ಬೇಕಾಗ್ಯಾದ? ಇದೆಲ್ಲಾ ಈ ಯಮನ್ಯಾಂದು ಮತ್ತೊಂದು ಹೊಸಾ ಆಟಾನೋ ಏನೋ.... ಹ್ಯಾಂಗಿದ್ದರನೂ ಇನ್ನ ಇಂವಾ ಕೈಬಿಟ್ಟನು ಅಂಬಾದು ಖಚಿತವಾಗಿ ಸಿಟ್ಟು ಸಂಕಟಗಳು ಒಮ್ಮೆಲೇ ಭುಗಿಲ್ಲೆಂದುವು. ದುಡದು ತಂದು ಹೆಂಡ್ರು ಮಕ್ಕಳಗಿ ಸಾಕಲಾರದ ಹೇಡಿ ಇದೇನು ಹೊಸಾ ನಾಟಕ ಸುರು ಮಾಡ್ಯಾನಲ್ಲ ಅಂತ ಹೇಸಿಕೆ ಅನ್ನಿಸಿತು.

ಇಬ್ಬರೂ ಹೆಂಡಿರನ್ನು ನೋಡಿದ ಯಮನಪ್ಪ ಮಾರಿ ಕೆಳಗೆ ಹಾಕಿದನು ಕಮಲಿಯಂತೂ ತಿರಸ್ಕಾರದಿಂದ ಥೂ.... ಅಂತ ಉಗುಳಿದಳು. ''ಇದೇನು ಭಾದ್ದೂರ ಕೆಲಸಾ ನೀ ಮಾಡ್ಕೊಂಡು ಬಂದಿದ್ದು? ಎಡ್ಡು ತಿಂಗಳ ಮ್ಯಾಲಾಯ್ತು. ಹೇಳಲಾರ್ದೆ ಕೇಳಲಾರ್ದೆ ನನ್ ಗಂಡ ಎಲ್ಲೀಗಿ ಹ್ವಾದನು? ಅವನೀಗೇನಾಯ್ತು? ಅಂತ ನಾವಿಬ್ರೂ ಹಗಲಾರಾತರಿ ಕಣ್ಣಾಗ ಎಣ್ಣೆ



## ತೆರಿಗೆ ವಂಚಕ ಪ್ರಧಾನಿ !

ಇತ್ತೀಚೆಗೆ ಪದಚ್ಯುತರಾದ ಪಾಕ್ ಪ್ರಧಾನಿ ನವಾಜ್ ಷರೀಫರ ಕುಟುಂಬ ಸದಸ್ಯರ ಸಂಖ್ಯೆ ಹನ್ನೊಂದು. ಸಕ್ಕರೆ, ಸಿಮೆಂಟ್, ಕಾಗದ, ಕಬ್ಬಿಣ ಹೀಗೆ ಹಲವಾರು ಉದ್ಯಮ ರಂಗಗಳ ಕೋಟ್ಯಾಂತರ ರೂಪಾಯಿ ವಹಿವಾಟಿನ ಒಡೆಯರಾದ ಈ ಕುಟುಂಬದವರು ಪಾಕಿಸ್ತಾನದಲ್ಲೇ ಅತ್ಯಂತ ಶ್ರೀಮಂತರು. ಆದರೆ ನವಾಜ್ ಷರೀಫ್ ಹಾಗೂ ಅವರ ಸಹೋದರ ಷಹನಾಜ್ ಷರೀಫ್ (ಈತ ಪಂಜಾಬ್ ಪ್ರಾಂತ್ಯದ ಪದಚ್ಯುತ ಮುಖ್ಯಮಂತ್ರಿ) ಅವರು ಕಳೆದ ವರ್ಷ ಒಂದು ಪೈಸೆ ಆದಾಯ ತೆರಿಗೆಯನ್ನೂ ಕಟ್ಟಲಿಲ್ಲ. ತಮಗೆ ತೆರಿಗೆ ಕಟ್ಟುವಷ್ಟು ಆದಾಯವೇ ಇಲ್ಲವೆಂದು ಘೋಷಿಸಿದರು! ಈಗ ಮಿಲಿಟರಿ ಆಡಳಿತದ ತನಿಖೆಯಿಂದ ಇವರ 'ಬಂಡವಾಳ' ಹೊರಬೀಳಲಿದೆ.

ಹಾಯ್ಕೊಂಡು ಚಿಂತಿ ಮಾಡ್ಕೋತ ಗಾಬರ್ಯಾಗಿದ್ದೀವಿ. ಅಲ್ಲಿ ನೀ ತುಳಜಾಪುರಕ್ಕೆ ಹೋಗಿ ನಿನ್ ಗಂಡಸ್ತನಾನೇ ಕಳ್ಕೊಂಡು 'ಹಿಜಡ್ಯಾ' ಆಗಿ ಬಂದಿದ್ದೆಲ್ಲ! ಭಪ್ಪರೇ ಯಮನ್ಯಾ! ಭಾದ್ದೂರ ಗಂಡ್ಸಂದ್ರ ನೀನೇ ನೋಡು. ಆ ಜೋಗವ್ವ ಜೋಗಪ್ಪಗೋಳ ಜೋಡಿ, ಖೊಜ್ಜಾ ಭೂತ್ಯಾಗೋಳ ಮಗ್ಗಲದಾಗ ಮಕ್ಕೊಂಡು ರಾತರಿಬೆಳಗಾನಾ ಅವರ ಮೈಯಾಗಿನ ಸಂದಿಗೊಂದ್ಯಾಗ ಕೈಕಾಲ ಆಡ್ಸಿ, ಅವರ ತೊಡ್ಯಾಗ ತೊಡಿ ಸೇರ್ಸಿ ನೀ 'ಹಿಜಡ್ಯಾ' ಆಗಿದ್ದಿ! ಮ್ಯಾಲ ಆ ಅಂಬಾಬಾಯಿ ದೇವೀ ಹೆಸರಿಗೆ ಬಟ್ಟಾ ಹಚ್ಚಿ ಅಕೀಗಿ ಬದಲಾಮಿ ಮಾಡ್ತ್ಯಾ ಮೂಳಾ? ಭೆಂಕಿಯಂತಾ ದೇವರ ಅಕಿ. ಸುಳ್ಳ ಸುಳ್ಳೇ ನೀ ಅಕಿಗಿ ಬದಲಾಮಿ ಮಾಡಿದ್ರ ನಿನ್ ಬಾಯಾಗ ಹುಳಾ ಬೀಳ್ತಾವು. ಹುಷಾರ್!'' ಎಂದು ಹೊಟ್ಟೆಯೊಳಗೆ ಭೆಂಕಿ ಭುಗಿಲೆದ್ದವಳಂತೆ ಅರ್ಭಟಿಸಿದಳು.



ಯಮನಪ್ಪನ ಬಾಯಿಯಿಂದ ಮಾತೇ ಬರಲಿಲ್ಲ. ಮಿಟಿ ಮಿಟಿ ಕಮಲಿಯನ್ನೊಮ್ಮೆ ದಿಟ್ಟಿಸತೊಡಗಿದನು. ಸುತ್ತ ನಿಂತಿದ್ದ ಜೋಗವ್ವ ಜೋಗಪ್ಪಗಳು ಕಿಸ ಕಿಸನೆ ನಕ್ಕು ಮುಸು ಮುಸು ಮಾಡುತ್ತ ಒಂದರ ಮಾರಿ ಇನ್ನೊಂದು ನೋಡಿಕೊಂಡು ಕಣ್ಣುಗಳಲ್ಲೇ ಎಂಥದೋ ಹಲ್ಕಟ್ ಇಶಾರಾ ಮಾಡಿಕೊಂಡುವು. ''ಹೆಂತಾ ಕೆಲ್ಸಾ ಮಾಡ್ಕೊಂಡು ಬಂದ್ಯೋ ಯಮನ್ಯಾ? ನಾವಿಬ್ರೂ ದುಡ್ದು ತಂದು ಹಾಕ್ತಿದ್ವಿ, ಕುಂತು ತಿಂದು ತಿರಗಾಡಾದು ಬಿಟ್ಟು 'ಹಿಜಡ್ಯಾ' ಆಗಿ ಬಂದೆಲ್ಲೋ ಹುಚ್ಚಾ....'' ಅಂತ ಶಾಣಮ್ಮ ಕಣ್ಣಲ್ಲಿ ನೀರು ತಂದು ಗಳಗಳನೆ ಅಳತೊಡಗಿದಳು. ಅವಳಿಗೆ ಗಂಡನ ಮೇಲೆ ಕರುಣೆ ಉಕ್ಕಿತು. ಗಂಡನ ಈ ಹೇಸಿ ಕೆಲಸಕ್ಕೆ ವ್ಯಥೆಪಟ್ಟಳು.

ಇಡೀ ಪರಿಸ್ಥಿತಿ ಕೈಮೀರಿ ಹೋಗುತ್ತಿರುವುದು ಕಂಡು ಪೂಜಾರಿ ತುಳಸಿರಾಮ ಎದ್ದು ಬಂದನು. ಯಾರಿಂದಲೋ ಸುದ್ದಿ ತಿಳಿದ ಊರ ಗೌಡ, ಕುಲಕರ್ಣೇರೂ ಬಂದಾಗ ನಿಂತ ಮಂದೆಲ್ಲಾ ಅವರಿಗೆ ದಾರಿಬಿಟ್ಟರು.

''ಏs ಶಾಣೀ ಕಮಲೀ.... ಇದೇನು ನಾಟಕ ನಡಸೀರ್ರಲೇ.... ನಮ್ ಅಂಬಾಬಾಯಿದೇವಿ ಅಂದ್ರೇನಂತ ತಿಳ್ಕೊಂಡೀರಿ ನೀವು ಆಂ? ಭೆಂಕಿ ಹಂತಾ ದೇವತೆ ಇಕಿ. ಆದಿಶಕ್ತಿ ಅಂಬಾಬಾಯಿ. ಒಂದು ಗಳಿಗ್ಯಾಗೇ ಹಸಿಗಿಡಕ್ಕ ಭೆಂಕಿ ಹಚ್ಚಿ ದಣಾ ದಣಾ ಉರಸ್ತಾಳ. ಒಂದು ಚಣದಾಗೇ ಭೂಮಿಸೀಳಿ ನಿಮ್ಮಂತಾ ಗಯ್ಯಾಳಿ ಹೆಂಗಸರಿಗಿ ನೆಲದಾಗ ಹೂಳತಾಳ, ಕಣ್ಣ ಮುಚ್ಚಿ ಕಣ್ಣ ತೆರೆಟಗೆ ಹಾಂ ಹಾಂ ಅನ್ನದರಾಗ ನಾ ಅನ್ನಾ ಗಂಡಸಿನ ಕಚ್ಚ್ಯಾಗ ಕೈ ಹಾಕಿ ಅವನ ಗಂಡಸ್ತನ ಒಡ್ಡಮುರ್ದು ಅಂವಗ ಸೀರಿ ಉಡಸ್ತಾಳ! ಸುಂಭ ನಿಸುಂಭರಂತಾ ರಾಗಸೇಸರಿಗೇ ಸಂವಾರ ಮಾಡಿದಕ್ಕ ಈ ದೇವಿ ಕಾಳಿಕಾಭವಾನಿಯ ಮೈಮಾದ ಮ್ಯಾಲ ನೀವು ಹಿಂಗ್ ಬೈಯಾದು ಮಾಡದ್ರ ಹುಷಾರ್! ನಿಮಗ ಕುತಗ್ಯಾಗ ಕೈ ಹಾಕಿ ಈ ಊರಿಂದೇ ಹೊರಗ ಹಾಕ್ತಿವಿ. ದೇವಿ ನಿಮಗ ಮಣ್ಣ ಮುಕ್ಕಸ್ತಾಳ.... ನಡ್ರಿ, ನಡ್ರಿಲ್ಲಿಂದ'' ಅಂದನು. ಈಗ ಮಂದೀಗೆಲ್ಲಾ ಎಚ್ಚರ ಬಂದಂಗಾಗಿ ''ಹೊಯಿಂದು ಹೊಯಿಂದು. ಪೂಜಾರಪ್ಪ ಹೇಳಾ ಮಾತು ಬರೋಬ್ಬರಿ ಅದಾ.... ಆ ಛಿನಾಲೇರಿಗಿ ಇಲ್ಲಿಂದ ಒದ್ದೋಡಸ್ರೀ.... ಭೆಂಕಿಹಂತಾ ಸತ್ತ್ಯುಳ್ಳ ದೇವೀಗಿ ಎದರ ಹಾಯ್ಕೊಂಡು ನಿಂದ್ರಾ, ಕೆಟ್ಟ ಧೈರ್ಯಾ ಮಾಡ್ಯಾರಲ್ಲ. ಅವರ ಬಾಯೀಗಿ ಹುಣ್ಣ ಹುಟ್ಟತಾವ. ಮೈಗಿ ದೊಡ್ಡ ಬ್ಯಾನಿ ಬಡೀತಾದ. ಕೆಡುಗಾಲ ಬಂದಾದ ಅವ್ರೀಗಿ.... ಹೊರಗ ಹಾಕ್ರಿ, ಅವ್ರೀಗೀ....'' ಮಂದಿಯಿಂದ ನಾನಾ ತರದ ಆವೇಶದ ದನಿಗಳು ಬರತೊಡಗಿದವು.

''ಲೇ ಶಾಣೀ ಕಮಲೀ.... ಈಗೀಂದೀಗ ಈ ಜಾಗಾ ಖಾಲಿ ಮಾಡಿ ಹೋಗ್ರಿ! ದೇವರ ಮೈಮಾಕ್ಕ ಸುಳ್ಳ ಮಾಡ್ಬೇಕಂತ ಮಸಲತ್ತ ಮಾಡೀರೇನು ಇಬ್ಬರೂ?'' ಎಂದು ಕೆಂಪಡರಿದ ಕಣ್ಣಿನಿಂದ, ಕ್ಯಾಕರಿಸಿ ಉಗುಳಿದಂತೆ ಬೈದು ಊರ ಗೌಡ ಜೋಗತಿಯರ ಬಳಿ ಬಂದು ''ನಡಿರೆಪಾ... ಏಳೋ ಯಮನಪ್ಪಾ.... ಏs ಪೂಜಾರಿ.... ನೀ ಪೂಜಾ ಶುರು ಮಾಡು.... ಢೊಳ್ಳ್ಯಾ, ಜಾಂಗಟಿ, ಗಂಟಿ ಬಾರಸ್ರೀ.... ನಾಳಿಗಿ ಪಂಚಾಯ್ತಿ ಸೇರ್ಸಿ ಈ ಹೆಂಗಸರಿಗಿ ಹೆಂತಾ ಶಿಕ್ಷಾ ಕುಡ್ಬೇಕಂತ ತೀರ್ಮಾನ ಮಾಡಾಮಿ''. ಎಂದು ಅಪ್ಪಣೆ ಕೊಟ್ಟನು. ಶಾಣಮ್ಮನ ಸಿಟ್ಟು ನೆತ್ತಿಗೇರಿತು. ಕಣ್ಣಲ್ಲಿ ಬೆಂಕಿ ಉರಿಸುತ್ತ ಸೆಟೆದು ನಿಂತಳು. ''ಗೌಡ್ರೇ.... ಕುಕ್ಕಣ್ಣೇರೇ.... ಇಲ್ಲಿ ಊರ ದೈವದವರೆಲ್ಲಾ ನೆರದೀರಿ. ಪಂಚಾಯ್ತಿ ನಾಳಿಗ್ಯಾಕ ಸೆರಸ್ತೀರಿ? ಈಗೇ ನಮಗ ನ್ಯಾಯಾ ಬೇಕಪ್ಪೋ.... ನನ್ ಗಂಡ ಈಗ ದೇವರ ಹೆಸರಿನ ಮ್ಯಾಲ 'ಹಿಜಡ್ಯಾ' ಆಗ್ಯಾನಂತ. ನನಗ ಗಂಡಿದ್ದೂ ರಂಡಿ ಮಾಡ್ಯಾನ. ಈಗೇನು ನಾವು ಇವನ ಹೆಂಡ್ರೋ ಏನು ಗಂಡಸತ್ತ ರಂಡಮುಂಡೇರೊ? ಏನು ಗಂಡಬಿಟ್ಟವರೋ....? ಏನಂತಂಬಾದು ಖುಲಾಸಾಗಿ ಹೇಳಿಬಿಡ್ರಿ. ದೇವರಿಗಿ ಏನರೆ ಅಂದರ ಪೂಜಾರಿ ಬುಡಕ್ಕ ಭೆಂಕಿ ಹತ್ತತಾದ. ಈಗ ನೀವೇ, ಬಾಯಿಲ್ಲದ ನಮಗ ನ್ಯಾಯಾ ಒದಗಿಸಿ ಕುಡ್ಬೇಕು. ದೈವದವ್ರೇ.... ನಮಗ ನ್ಯಾಯಾ ಬೇಕು....'' ಅಂತಂದು ಬಗಲಾಗಿನ ಕೂಸಿಗಿ ಧೊಪ್ಪನೆ ಕೆಳಗಿಳಿಸಿ ಅಡ್ಡಬಿದ್ದಳು. ಈ ಕಾಟಗರ ಹೆಂಗಸಿನ ಧೈರ್ಯಾ ಕಂಡು ನಿಂತ ಮಂದೆಲ್ಲಾ ದಂಗಾದರು. ನೆರೆದ ದೈವಸ್ಥರು ಉಸಿರು ಬಿಗಿಹಿಡಿದುಕಂಡು ಸ್ತಬ್ದರಾದರು. ಭೂತ್ಯಾನೊಬ್ಬ ''ಉಧೋ ಉಧೋ ತಾಯಿ ಮಮ್ಮಾಯೀ ಭವಾನಿದೇವೀ....'' ಅಂತ ಕೆಟ್ಟ ದನಿಯಿಂದ ಚೀರಿದ. ಜೋಗವ್ವಗಳೆಲ್ಲರೂ 'ಹಿಜಡಾ' ಚಪ್ಪಾಳೆ ತಟ್ಟುತ್ತ ದೇವಿಯ ಜಯಘೋಷ ಮಾಡತೊಡಗಿದರು. ಯಮನಪ್ಪ ಕುಂತಲ್ಲೇ ಸವಾರಿ ಬಂದವರಂತೆ ಕಣ್ಣ ಗುಡ್ಡೆಗಳನ್ನು ಮೇಲೂಕೆಳಗೂ ಮಾಡುತ್ತ ಕೈ ತೂಗಲಾರಂಭಿಸಿದ. 'ದೇವಿ ಬಂದ್ಳು.... ದೇವಿ ಬಂದ್ಳು....' ಮಂದಿ ಗುಸು ಗುಸು ಮಾಡಿದರು. ಶಾಣಮ್ಮ ಸಿಟ್ಟಿನಿಂದ ಅವುಡುಗಚ್ಚಿದಳು.

''ಗೌಡ್ರೇ.... ಇದೆಲ್ಲಾ ನಾಟಕ ಬಂದ್ ಮಾಡಸ್ರೀ.... ದೈವದವ್ರೇ.... ಒಂದು ಮಾತು ನಿರ್ಧಾರ ಮಾಡಸ್ರೀ.... ದೇವರಿಲ್ಲ ದಿಂಡರಿಲ್ಲ. ಆ ದೇವಿ ನನ್ ಗಂಡಗ 'ಖೊಜ್ಜಾ' ಮಾಡಿಲ್ಲ. ಇಂವಾ ಬೇಕಂತೇ ಹಿಜಡ್ಯಾ ಆಗಿ ನಾಟಕ ಮಾಡ್ಲಕತ್ತಾನ. ಇವನ ಬಾಯಿಲಿಂದೇ ಈ ಮಾತ ಒಪಗೋ ಅಂತ ಹೇಳ್ರಿ. ಇಲ್ಲಂದ್ರ ಇಂವಾ ತನ್ನ 'ಗಂಡಸ್ತನ' ಕಳ್ಕೊಂಡಿದ್ದು ಖರೇನೇ ಅದಾ ಅಂಬಾದು ಕಲಬುರ್ಗಿ ದವಾಖಾನ್ಯಾಗಿನ ಡಾಕಟರಗೋಳು ತಪಾಸಮಾಡಿ ನೋಡಿ ತೀರ್ಮಾನ ಕುಡ್ಲಿ. ಈ ಮಾತ ಖರೇನೇ ಇದ್ರ ಆ ದೇವಿ ಅಂಬಾಬಾಯಿಯ ಸತ್ಯಾದ ಮೈಮಾ ಅಂತ ನಾವು ಒಪ್ಗೊಂಡು ಮಾಫಿ ಕೇಳ್ತಿವಿ. ಇಲ್ಲಂದ್ರ ಈ ನಮ್ ಗಂಡಂಬಾ ಯಮನ್ಯಾಗ ಮೆಟ್ಟಲಿಂದ ಹೊಡ್ದು ಮನೀಗಿ ಎಳ್ಕೊಂಡು ಒಯ್ತೀವಿ....'' ಅಂತಂದು ಉತ್ತರಕ್ಕಾಗಿ ಎಂಬಂತೆ ಹಟದಿಂದ ಸೆಟೆದು ನಿಂತಳು. ಮೈ ತೂಗುತ್ತಿದ್ದ ಯಮನ್ಯಾ ಗಾಬರ್ಯಾಗಿ ಅಲ್ಲೇ ನಿಂತಿದ್ದ ಪೂಜಾರಿಯ ಕಾಲು ತಬ್ಬಿಕೊಂಡು ಕಣ್ಣುಮುಚ್ಚಿದ.

ಮತ್ತೆ ಎಲ್ಲಾ ಸ್ತಬ್ಧವಾಯಿತು. ದೈವದವರ ಬಾಯಿಯಿಂದ ಉತ್ತರ ಬರಲಿಲ್ಲ. ಪೂಜಾರಿ ತುಳಸಿರಾಮ ತತ್ತರಿಸುತ್ತ ಪ್ಯಾಪ್ಯಾ ಮಾಡಿದ. ಒಂದು ಗಳಿಗೆ ಕಾಲ ತನ್ನ ಚಲನೆಯನ್ನೇ ಮರೆತು ಸ್ತಬ್ಧವಾದಂತಾಯಿತು. ಶಾಣಮ್ಮನ ಪ್ರಶ್ನೆಗೆ ಉತ್ತರಕ್ಕಾಗಿ ತಡಕಾಡಿದ ದೈವದವರ ಮತ್ತು ಗೌಡ ಕುಕಣ್ಣಿಗಳ ಮೈ ಬೆವರುಬಿಟ್ಟುವು. ಕಮಲಿ ಕಿಲ ಕಿಲನೆ ನಕ್ಕು ಬಾಗಿ ಗಂಡನ ಗದ್ದ ತಿವಿದು ''ಸಾಕು ಮಾಡೋ ಮೂಳಾ ನಿನ್ ನಾಟಕಾ.... ಇಂದಿನಿಂದ ನೀ ನಮ್ ಗಂಡ ಅಲ್ಲ. 'ಹಿಜಡ್ಯಾ' ನೀನು. ನಮಗ ಇನ್ನ ಈ ಗಂಡಸರೇ ಬ್ಯಾಡ. ನಾವಿಬ್ಬರೂ ಹೆಂಗಸರೇ ಕೂಡಿ ಬದಕ್ತೀವಿ. ಸತ್ಯಾದ ಬದುಕು ಬಾಳ್ತೀವಿ. ನಿನ್ನಂಗ ಸುಳ್ಳ ಬಾಳ್ಯಾ ಬಾಳಂಗಿಲ್ಲಂತ ತಿಳ್ಕೋ.... ಥೂ ನಿನ್ನ.... ನಿನ್ ಬಾಳಿಗೀಟು ಭೆಂಕಿ ಹಾಕಲೀ....'' ಅಂತಂದು ಅವನ ಕೊರಳಲ್ಲಿಯ ಕವಡೆಸರ ಕಿತ್ತೆಸೆದಳು. ಸರ ಹರಿದು ಕವಡೆಗಳೆಲ್ಲ ಚಲ್ಲಾಪಿಲ್ಲಿಯಾಗಿ ಬಿದ್ದುವು! ಜನರು ಹಾಂ ಹಾಂ ಅನ್ನುವುದರಲ್ಲಿ ಎರಡೂ ಮಕ್ಕಳು ಮತ್ತು ಶಾಣಮ್ಮನನ್ನು ಎಳೆದುಕೊಂಡು ಅಲ್ಲಿಂದ ಓಡತೊಡಗಿದಳು....

■

---

**ದ್ರವಾಹಾರ ಸೇವಿಸಿಯೇ ಮನುಷ್ಯ ಎಷ್ಟು ಕಾಲ ಇರಬಲ್ಲ? 382 ದಿನ ಎಂದು ದಾಖಲೆಯೊಂದು ಹೇಳುತ್ತದೆ. ಪೀರ್ಪೋರ್ಟ್‌ನ ಆಂಗಸ್ ಬಾರ್ಬರೀ ಎಂಬಾತ ಡಂಡಿಯ ಮೇಫೀಲ್ಡ್ ಆಸ್ಪತ್ರೆ ಸೇರಿದ್ದು 1965ರ ಜೂನ್‌ನಲ್ಲಿ. ಬಿಡುಗಡೆ ಆಗಿದ್ದು ಮುಂದಿನ ವರ್ಷದ ಜುಲೈ ತಿಂಗಳಲ್ಲಿ. ಆಸ್ಪತ್ರೆಯಲ್ಲಿ ಇರುವಷ್ಟು ದಿನವೂ ಆತ ಬರೀ ಟೀ, ಕಾಫಿ, ನೀರು, ಸೋಡಾ ಮತ್ತು ವಿಟಮಿನ್‌ಗಳನ್ನು ಮಾತ್ರ ಸೇವಿಸುತ್ತಿದ್ದ. ಆಸ್ಪತ್ರೆ ಸೇರಿದಾಗ 214 ಕೆ.ಜಿ. ತೂಗುತ್ತಿದ್ದ ಆತ ಬಿಡುಗಡೆ ಆದಾಗ ಬರೀ 80 ಕೆ.ಜಿ.ತೂಕವಾಗಿದ್ದ!**

# ಈಜಿನ ಮೋಜು

■ ಸಿದ್ಧಗಂಗಯ್ಯ ಕಂಬಾಳು





**ಶಾ**ಲೆಗೆ ರಜೆ ಬಂತೆಂದರೆ ನಾವು ಆರೇಳು ಜನ ಮುದ್ದನ ಬೆನ್ನು ಹಿಂದೆ ಹಿಂಡು ತಿರುಗುತ್ತಿದ್ದೆವು. ಮುದ್ದನ ಹೊಲದ ತಲೆದೆಸೆಯಲ್ಲಿದ್ದ ದೇವನ ಕಟ್ಟೆಯಲ್ಲಿ ಈಜಾಡುವುದೆಂದರೆ ನಮಗೆ ಆನಂದದ ಅಮಲೇರುತ್ತಿತ್ತು. ಹುಡುಗರೆಲ್ಲ ಬಟ್ಟೆಬರೆ ಕಳಚಿ ಕಲ್ಲುಬಂಡೆಗಳ ಸಂದಿನಲ್ಲಿ ಬಚ್ಚಿಟ್ಟು ದಿಗಂಬರರಾಗಿ ನೀರಿಗಿಳಿಯುತ್ತಿದ್ದೆವು. ನಮಗೆ ನೀರಿಗಿಳಿದ ನಂತರ ಬಾಹ್ಯ ಜಗತ್ತಿನ ಪರಿವೆಯೇ ಇರುತ್ತಿರಲಿಲ್ಲ. ನೀರೊಳಗಿನ ಮೀನಾಗಿ, ಕೆಸರೊಳಗಿನ ಆಮೆಯಾಗಿ, ಕಪ್ಪೆಯಾಗಿ, ನೀರುಹಾವಾಗಿ ರೂಪಾಂತರ ಹೊಂದಿದವರಂತಾಡುತ್ತಿದ್ದೆವು. ದೂರದಲ್ಲಿ ಹಿರಿಯ ತಲೆಗಳೇನಾದರೂ ಕಂಡರೆ ವಾಸ್ತವ ಜಗತ್ತಿನ ನೆನಪಾಗುತ್ತಿತ್ತು. ಹೆದರಿ ಓಡಿ ಹೋಗಿ ನಮ್ಮ ನಮ್ಮ ಬಟ್ಟೆಗಳನ್ನು ಬಾಚಿಕೊಂಡು ಓಡುತ್ತಿದ್ದೆವು. ಓಡುತ್ತಲೇ ಬಟ್ಟೆ ಧರಿಸುವಾಗ ಒಂದೇ ತೋಳಿಗೆ ಎರಡೂ ಕಾಲಿಟ್ಟು ನಡೆಯತೊಡಗಿ ತೊಡರಿ ಬಿದ್ದು ಎದ್ದು ಓಡುತ್ತಿದ್ದೆವು.

ನಾವು ಹುಡುಗರು ದೇವನ ಕಟ್ಟೆಯಲ್ಲಿ ಈಜಾಡುವುದನ್ನು ನಮ್ಮೂರ ಹಿರಿಯರು ತೀವ್ರವಾಗಿಯೇ ವಿರೋಧಿಸುತ್ತಿದ್ದರು. ಒಂದಾನೊಂದು ಕಾಲದಲ್ಲಿ ಮೂರ್ನಾಲ್ಕು ಹುಡುಗರು ಈಜು ಕಲಿಯಲು ಹೋಗಿ ಒಬ್ಬರನ್ನೊಬ್ಬರು ತಬ್ಬಿಕೊಂಡು ಸತ್ತಿದ್ದರಂತೆ. ಅದೇ ಕಾರಣಕ್ಕೆ ನಮ್ಮನ್ನು ನಿರ್ಬಂಧಿಸುತ್ತಿದ್ದರು. ನಮ್ಮ ಹಿತಕ್ಕಾಗಿ ಆ ಹಿರಿಯರು ನಿಯಂತ್ರಿಸುತ್ತಿದ್ದರಾದರೂ ಅವರನ್ನು ನಾವಂದು ತೀವ್ರವಾಗಿ ಬೈದುಕೊಳ್ಳುತ್ತಿದ್ದೆವು.

ನಮ್ಮನ್ನು ಉಗ್ರವಾಗಿ ನಿಯಂತ್ರಿಸುತ್ತಿದ್ದವರು ಊರು ಮುಂದಿನ 'ವೆಂಕಟಪ್ಪ'. ಆತನನ್ನು ಎಲ್ಲರೂ ಗೌರವಿಸುತ್ತಿದ್ದರು. ಕುಟುಂಬ ಕಲಹಗಳಿಗೆ ನ್ಯಾಯ ಹೇಳಿ ಒಂದುಗೂಡಿಸುತ್ತಿದ್ದ ಆತ ಮಹಾ ಬುದ್ಧಿವಂತನಾಗಿದ್ದನಂತೆ. ಎಂಥ ವ್ಯಾಜ್ಯವನ್ನಾಗಲೀ ನಿಷ್ಠೂರವಾಗಿ ವಾದಿಸಿ ನ್ಯಾಯ ದೊರಕಿಸಿಕೊಡುತ್ತಿದ್ದನಂತೆ. ಹೊಲದ ಬದುವಿನ ಮಾತಿಗಾಗಿ ಮತ್ತಾವುದೇ ವಿಷಯಕ್ಕಾಗಲೀ ಅಣ್ಣತಮ್ಮಂದಿರು, ದಾಯಾದಿಗಳು ಜಗಳಮಾಡಿಕೊಂಡು ಊರು ಮುಂದಕ್ಕೆ ಬರುತ್ತಿದ್ದರು. ದೊಡ್ಡಪಾಪಯ್ಯ, ಲಿಂಗಣ್ಣ, ಬಸಪ್ಪ, ವೆಂಕಟಪ್ಪ, ಹೊಸಮನೆ ತಿಮ್ಮಪ್ಪ, ಮದ್ದಳೆವೀರಪ್ಪನ ಮಗ ಪುಟ್ಟಯ್ಯ ಮುಂತಾದ ಪಂಚರು ನ್ಯಾಯಹೇಳುತ್ತಿದ್ದರು. ಎಂತಹ ವ್ಯಾಜ್ಯವಾದರೂ ರುದ್ರದೇವರ ಗುಡಿಯಲ್ಲಿ ತೀರ್ಮಾನವಾಗಿ ಬಗೆಹರಿಯುತ್ತಿತ್ತು. ಊರೊಟ್ಟಿನ ಕೆಲಸಗಳಲ್ಲಿ ವೆಂಕಟಪ್ಪನದು ಪ್ರಮುಖ ಪಾತ್ರ.

ಒಂದು ಭಾನುವಾರ ಎಡಹಗಲು ಎರಡು ಗಂಟೆಯಿರಬಹುದು. ನಮ್ಮ ಪಟಾಲಂ, ಊರುಮುಂದಿನ ಮಾವಿನಮರಕ್ಕೆ ಕಲ್ಲೆಸೆದು ಕಾಯಿ ಕೆಡಹುವ ಸ್ಪರ್ಧೆಯಲ್ಲಿ ತೊಡಗಿದ್ದೆವು. ನನ್ನ ಓರಗೆಯ ಶಾಂತಯ್ಯ, ಚಿಗುರುಮೀಸೆ ಪುಟ್ಟಸ್ವಾಮಿ, ಕನಸಂದ್ರದ ಸಿದ್ದಪ್ಪನ ಮಗ ಶಿವಣ್ಣ, ಜವಳಿ ಶಂಕರಯ್ಯನ ಮಗ ಬಸಣ್ಣ, ಮೂಲೆಮನೆ ಮಲ್ಲಿಕಣ್ಣ ಮುದ್ದ ಎಲ್ಲರೂ, ದೇವನಕಟ್ಟೆಯ ಈಜಿಗೆಂದು ಹೊರಟೆವು. ಗುಂಪಾಗಿ ಹೋದರೆ ಹಿರಿತಲೆಗಳು ನಿಗಾ ಮಾಡಿಯಾರೆಂದು ಒಬ್ಬೊಬ್ಬರೇ ಒಂದೊಂದು ದಿಕ್ಕಿಗೆ ಹೋದಂತೆ ಹೋಗಿ ಮರಳು ಭಾವಿ ಬಳಿ ಜೊತೆಯಾದೆವು. ಕಟ್ಟೆ ಬಳಿ ಬಂದಂತೆ ನಾವು ನೀರಿಗೆ ಪರವಶರಾದೆವು. ಮುಂಜಾಗ್ರತೆ ವಹಿಸದೆ ಬಟ್ಟೆಗಳನ್ನೆಲ್ಲ ಬಿಚ್ಚಿ ಉಂಡೆಕಟ್ಟಿ ಏರಿಯ ಹಿಂದಿನ 'ಲಕಲಿ' ಗಿಡದ ಪೊದೆಯೊಳಗಿಟ್ಟು ನೀರಿಗೆ ಚಂಗ್‌ಚಂಗನೆ ನೆಗೆದು ಕೈಕಾಲು ಬಡಿಯತೊಡಗಿದೆವು. ನಮ್ಮ ಜಲಕ್ರೀಡೆಯ ವಾಸನೆ ತಿಳಿದ ವೆಂಕಟಪ್ಪಣ್ಣ ಸದ್ದಿಲ್ಲದೆ ಮರೆಯಾಗಿ ಬಟ್ಟೆಯನ್ನು ಸಮೀಪಿಸಿ ನಾವು ಕಳಚಿರಿಸಿದ್ದ ಬಟ್ಟೆಗಳನ್ನು ತುರುಕಿಕೊಂಡು ಊರದಾರಿ ಹಿಡಿದಿದ್ದರು. ವೆಂಕಟಪ್ಪನೇ ಈ ಕಾರ್ಯ ಮಾಡಿದನೆಂದು ನಮಗೆ ಆಮೇಲೆ ತಿಳಿಯಿತು.

ನಾವು ನೀರನ್ನ ತೊರೆದು ಏರಿಯ ಮೇಲೆ ಬಂದು ನೋಡಲಾಗಿ ಲಕುಲಿ ಗಿಡಗಳೇ ನಮ್ಮ ಬಟ್ಟೆಯನ್ನು ನುಂಗಿ ನೀರು ಕುಡಿದಂತೆ ಕಂಡಿತು. ನಾವು ಏರಿಯ ಮೇಲೆ ಬಟ್ಟೆಗಳಿಗಾಗಿ ಪರದಾಡತೊಡಗಿದ್ದ ದೃಶ್ಯವನ್ನು ಹುಡುಗರು ದೊಡ್ಡವರು ಊರು ಮುಂದಿನ ಈಶ್ವರ ದೇವಾಲಯದ ಕಲ್ಲು ಕಟ್ಟೆಯ ಮೇಲೆ ನಿಂತು ನೋಡತೊಡಗಿದ್ದರೆಂದು ಕಾಣುತ್ತದೆ. ನಾವಂದು ಹದಿವಯಸ್ಸಿಗೆ ಜೈನಸನ್ಯಾಸಿಗಳಂತೆ ದಿಗಂಬರರಾಗಿ ಹಾದಿ ಹಿಡಿದಿದ್ದೆವು. ಜೈನ ಮುನಿಗಳು ಬಲಗೈಯಲ್ಲಿ ನವಿಲುಗರಿ ಕಂತೆಯನ್ನು ಹಿಡಿದು ಮಾನ ಮುಚ್ಚಿಕೊಳ್ಳುವಂತೆ, ನಾವೆಲ್ಲ ಲಕಲೀ ಸೊಪ್ಪನ್ನು ಮುರಿದು ಕಂತೆ ಮಾಡಿ ನಮ್ಮ ನಮ್ಮ ಮಾನಗಳನ್ನು ಮುಚ್ಚಿಕೊಂಡು ಊರಿನತ್ತ ಒಬ್ಬೊಬ್ಬರೇ ಹೊರಟೆವು. ನಮಗಿಂತ ದೊಡ್ಡಹುಡುಗರು, ತೊಡೆಬಲಿತವರು ಸೊಂಟಕ್ಕೆ ಲಕಲೀ ಸೊಪ್ಪನ್ನು ಕಟ್ಟಿಕೊಂಡರು. ಉಡಿದಾರಕ್ಕೆ ಸಿಕ್ಕಿಸಿಕೊಂಡರು. ನಮ್ಮ ದಿಗಂಬರ ವೇಷಕ್ಕೆ ಊರ ಜನರು ನಿಂತು ನೋಡಿ ನಗುವ ಸದ್ದು ಕಿವಿಗೆ ಬೀಳುವ ಅಂತರದವರೆವಿಗೂ ಧೈರ್ಯವಾಗಿ ನಾಚಿಕೆಯಿಲ್ಲದೆ ನಡೆದುಬಂದು ತೋಪಿನ ಮಾವಿನ ಮರದ ಬುಡದಲ್ಲಿ ಮರೆಮಾಚಿಕೊಂಡು ನಿಂತೆವು.

ವೆಂಕಟಪ್ಪಣ್ಣನ ಕೈಯಲ್ಲಿ ಸೂಲಿಕಟ್ಟೆಯ ಚಿಲುಕೆಯೊಂದು ಬಳುಕಾಡುತ್ತಿದ್ದದ್ದು ನಮಗೆ ಕಂಡಿತು. ಮೈಮೇಲೆ ಚೇಳು ಹಚ್ಚಿ ಬರೆದಂತೆ ಉರಿ ಉರಿಯ ಭ್ರಮೆ ಹರಿದಾಡತೊಡಗಿತು. ಉಡಲುಬಟ್ಟೆ ಬೇಕಾದವರು ಕುಂಡಿಗಳ ಮೇಲೆ ಲಾತದ ಬರೆಯನ್ನು ಬರೆಸಿಕೊಳ್ಳಲೇ ಬೇಕಾಯಿತು. ಎಡಗೈಯಲ್ಲಿ ಬಟ್ಟೆ ಹಿಡಿದು ಬಲಗೈಯಲ್ಲಿ ಸೂಲಿಕಟ್ಟೆಯನ್ನು ಅಲ್ಲಾಡಿಸುತ್ತಾ ಕಣ್ಣಲ್ಲೆ ಆತ ಮಾತಾಡುತ್ತಿದ್ದರು. ಮೊದಲು ಬಲಿತ ತೊಡೆಯ ಪುಟ್ಟಸ್ವಾಮಿ ಕುಂಡಿಗಳ ಮೇಲೆ ಲಾತ ತಿಂದು ಪರಪರನೆ ಉಜ್ಜಿಕೊಳ್ಳುತ್ತಾ ಕುಣಿದಾಡುತ್ತಾ

ಬಟ್ಟೆಗಳನ್ನು ತೊಡುತ್ತ ಕಂಬನಿ ಸುರಿಸುತ್ತಾ ಮುಂಗೈಯಲ್ಲಿ ಒರೆಸಿಕೊಳ್ಳುತ್ತಾ ಜನರಲ್ಲಿ ಸೇರಿಕೊಂಡ. ಪುಟ್ಟಸ್ವಾಮಿ ಏಟು ತಿಂದು ನೆಗೆದಾಡಿದ ದೃಶ್ಯಕ್ಕೆ ಯಾರೂ ಅಯ್ಯೋ ಎನ್ನದೆ ಗೊಳ್ಳನೆ ನಗತೊಡಗಿದ್ದರು. ಹಾಗೆ ನಕ್ಕವರಲ್ಲಿ ಆತ್ಮೀಯ ಗೆಳೆಯರೂ ಇದ್ದರು.

ಎರಡನೇ ಸರದಿ 'ಮುದ್ದನದು'; ದೊಡ್ಡರಂಗಯ್ಯನೆಂಬ ಬಾಲ ವೈರಿ ಮುದ್ದನ ಬಗ್ಗೆ ಕಟುವಾಗಿ ಮಾತನಾಡಿ, 'ಇವನೇ ಎಲ್ಲಾ ಹುಡುಗರನ್ನೂ ಕೆಡಿಸೋದು. ಹಲಸಿನ ಕಿತ್ತು ಕಾಯಿಗೆ ಹುಡುಗರೆಲ್ಲಾ ಹಿಂದೆ ಬೀಳ್ತವೆ, ಇವನು ದೇವನಕಟ್ಟೆ ನೀರು ತೋರುಸ್ತಾನೆ, ನಾಕು ಬಿಗಿ ವೆಂಕಟಪ್ಪಣ್ಣಾ' ಎಂದು ಪುಳ್ಳೆ ಮುರಿದಿಕ್ಕತೊಡಗಿದ. ಮುದ್ದನಿಗೆ ಬಿದ್ದ ಏಟುಗಳನ್ನು ಕಂಡ ನಾವು ಏಟು ತಿನ್ನುವ ಮುನ್ನವೇ ಕಿವಿತನಕ ಬಾಯಿಹಿಗ್ಗಲಿಸಿ ಅಳತೊಡಗಿದೆವು. ಚಿಕ್ಕ ಹುಡುಗರೆಂದೋ ಏನೋ ನಮಗೆ ಬಲವಾದ ಪೆಟ್ಟು ಬೀಳಲಿಲ್ಲ. ಮೂಲೆಮನೆ ಚನ್ನವೀರದೇವರ ಮಗ ಮಲ್ಲಿಕನ ಸರದಿ ಬಂತು. ಆತನ ತೋಳು ಹಿಡಿದೆಳೆದ ವೆಂಕಟಪ್ಪನು ಹೊಡೆಯಲು ಕೈಯೆತ್ತಲಾಗಿ ಮಲ್ಲಿಕ ತಿರುಗಿಬಿದ್ದ. ಎಲ್ಲರೂ ಅವಾಕ್ಕಾದರು. 'ನಾವು ಸತ್ತರೆ ನಿಮಗೇನು. ನಮಗ್ಯಾಕೆ ಬಡೀತೀರಿ? ಅನ್ನ ಕೊಡತೀರ? ಬಟ್ಟೆ ಕೊಡತೀರ? ನಮ್ಮಮ್ಮ ಅಪ್ಪನೇ ಹೊಡೆಯೋಲ್ಲ' ಅಂದುಬಿಟ್ಟ.

ವಿನಯ ಸಂಪನ್ನತೆಯನ್ನು ಮರೆಸುತ್ತಾ "ಆಯ್ತು ಸೋಮಿ ಅಯ್ಯನೋರೇ, ನೀವು ಸತ್ತರೆ ನಮಗೇನೂ ನಷ್ಟವಿಲ್ಲ. ಒಂದು ದಿನ ಪಾಯಸ ಸಿಗತದೆ. ನೀವು ಸಾಯೋದಾದರೆ ಒಬ್ಬರೇ ಹೋಗಿ ನೀರಲ್ಲಿ ಮುಳುಗಿ ಸಾಯಿರಿ. ಊರ ಮಕ್ಕಳನ್ನೆಲ್ಲ ಒಡಗೊಂಡು ಅವರನ್ನು ಸಾಯಿಸ್ತಿದ್ದೀರಲ್ಲಾ? ನೀವು ದೊಡ್ಡ ಪಾದದವರು" ಎಂದಂದು ಬಟ್ಟೆ ಬರೆ ಕೊಟ್ಟು ಕಳುಹಿಸಿದರು. ನಾನು ಮನೆಗೆ ಹೋಗುತ್ತಿದ್ದಂತೆಯೇ ನನ್ನ ಸೋದರತ್ತೆ ಶಾಂತಮ್ಮ ಉಗ್ರಾವತಾರ ತಾಳಿದ್ದಳು.

ಸೌಟಿನಲ್ಲಿ ನಿಗಿ ನಿಗಿ ಕೆಂಡ. ಅದರ ಮೇಲೆ ಒಣಮೆಣಸಿನಕಾಯಿ, ಸಿದ್ದಗೊಳ್ಳುತ್ತಿತ್ತು. ನಡುಮನೆ ಕಂಬಕ್ಕೆ ನನ್ನ ಚಿಕ್ಕಪ್ಪ ಹಿಂಗೈ ಮಾಡಿ ಕಟ್ಟಿದರು. ನನಗೆ ಮೆಣಸಿನಕಾಯಿ ಘಾಟು ಮೂಗಿಗೆ ಸೇರುತ್ತಲೂ ಕೆಮ್ಮು ಕಣ್ಣೀರು ಒಂದೇ ಸಮನೆ ಬರಲಾಯಿತು. ನನ್ನ ತಾಯಿ ಪುಟ್ಟಮ್ಮ ನನ್ನ ಎರಡನೇ ತಮ್ಮನ ಹೆರಿಗೆಗೆ ಭಕ್ತರಹಳ್ಳಿಯೆಂಬ ತವರೂರಿಗೆ ಹೋಗಿದ್ದಳು. ಅಂದು ನನ್ನ ಅವಸ್ಥೆಗೆ ಮರುಕಪಟ್ಟವನೆಂದರೆ ನನ್ನ ಮಾಮಯ್ಯ ಚಿಕ್ಕಣ್ಣನೇ. ಆತ ನನ್ನನ್ನು ಬಿಡಿಸಿಕೊಳ್ಳುವ ಪ್ರಯತ್ನ ಮಾಡಲಿಲ್ಲ. ಗಯ್ಯಾಳಿ ಹೆಂಡತಿ ಶಾಂತಮ್ಮನಿಗೆ ಆತ ಹೆದರುತ್ತಲೂ ಇದ್ದ. ಇರುಳೆಲ್ಲ ಅವ್ವನನ್ನು ನೆನೆಸಿಕೊಂಡೇ ನಿದ್ದೆ ಹೋಗಿದ್ದೆ.

ಮಾರನೆಯ ದಿನ ಶಾಲೆಯ ಬೆಲ್ಲು ಕಿವಿಗೆ ಬೀಳುತ್ತಲೇ ಬ್ಯಾಗು ಹೆಗಲಿಗೇರಿಸಿಕೊಂಡು ಓಡಿದ್ದೆ, 'ಕಾಯೌ ಶ್ರೀಗೌರಿ' ಹೇಳುವಾಗ ಶಾಲೆಯ ಕಟ್ಟೆ ಮೇಲೆ ಉಪಾಧ್ಯಾಯರ ಜೊತೆ ವೆಂಕಟಪ್ಪನೂ ಇದ್ದ. ಪ್ರೇಯರ್ ಮುಗಿದು ಸಾಲಾಗಿ ತರಗತಿಗಳಿಗೆ ಹೋಗುವಾಗ ನಿನ್ನೆ ಈಜಿನ ಮೋಜು ಮಾಡಿದ್ದ ಹುಡುಗರನ್ನೆಲ್ಲಾ ಒಂದೆಡೆ ಕರೆಸಿದರು ಹೆಡ್ಮಾಸ್ಟರ್ ಹುಲಿಕುಂಟೆ ಚನ್ನಪ್ಪನವರು, ಶಿವಣ್ಣನವರು ನಮ್ಮನ್ನೇ ಕುರಿತು ಬುದ್ಧಿವಾದ ಹೇಳಿದರು. ಈಜಾಡುವುದು ತಪ್ಪಲ್ಲವೆಂದೂ ಈಜುಬರದೆ ನೀರಿಗಿಳಿಯುವುದು ಅಪಾಯವೆಂದೂ, ಈಜಾಡಿದರೆ ಶರೀರಕ್ಕೆ ಒಳ್ಳೆಯ ವ್ಯಾಯಾಮ ದೊರಕುವುದೆಂದೂ ಹೇಳುವಾಗ ವೆಂಕಟಪ್ಪ ಪೆಚ್ಚಾದವರಂತೆ ಮುಖ ಮಾಡಿಕೊಂಡರು.

ಅಂದು ಮಧ್ಯಾಹ್ನ ಎರಡು ಗಂಟೆಗೆ ಶಾಲಾ ಹುಡುಗರನ್ನೆಲ್ಲ ಕೆರೆಯ ವಿಶಾಲ ಬಯಲಿಗೆ ಕರೆದೊಯ್ಯಲಾಯಿತು. ಹೆಡ್ಮಾಸ್ಟರು ಚನ್ನಪ್ಪನವರು ಕೋಟು, ಪಂಚೆ, ಅಂಗಿ ಎಲ್ಲ ಕಳಚಿ ಬಿಳಿನಿಕ್ಕರಲ್ಲಿ ಕೆರೆಯ ನೀರಿಗಿಳಿದು, ತಾವು ಹುಡುಗರಿಗೆ ಈಜಾಡುವುದನ್ನು ಹೇಳಿಕೊಡುತ್ತ ಈಜತೊಡಗಿದರು. ಅವರಿಗಿಂತ ನಾವೇ ಚೆನ್ನಾಗಿ ಈಜುಬಲ್ಲವರಾಗಿದ್ದೆವು. ಚೆನ್ನಾಗಿ ಈಜುಬಲ್ಲವರನ್ನು ಒಂದೆಡೆ ಕರೆದು ಈಜಾಡಿರೆಂದು ಹೇಳಿದರು. ನಾವೆಲ್ಲ ಕೆರೆದಂಡೆಯ ಕಪ್ಪೆಗಳು ನೀರಿಗೆ ನೆಗೆದಂತೆ ಚಂಗ್ ಚಂಗನೆ ನೀರಿಗೆ ನೆಗೆದು ನಾನಾ ರೀತಿಯ ಈಜಾಡತೊಡಗಿದೆವು. ನಮ್ಮಲ್ಲಿ ಕೆಲವರು, ನೀರಮೇಲೆ ಬೆನ್ನುಹಾಕಿ ಗರಗರಸುತ್ತುತ್ತ ಈಜಿದರೆ ಇನ್ನೂ ಕೆಲವರು ನೀರಲ್ಲಿ ನಿಂತು ತುಳಿನೀರು ತುಳಿಯುತ್ತ ನಿಂತಲ್ಲೇ ನಿಲ್ಲುತ್ತಲೆ ಈಜು ಹೊಡೆಯತೊಡಗಿದೆವು. ಚನ್ನಪ್ಪನವರಿಗೆ ಒಂದು ತರದ ಈಜು ಬಂದರೆ ನಮಗೆ ನಾಲ್ಕಾರು ತರದ ಈಜು ಬರುತ್ತಿತ್ತು.

"ನೋಡ್ರೀ ಶಿವಣ್ಣೋರೆ, ಈ ಪಟಿಂಗರು ನೀರಲ್ಲಿ ಮುಳುಗತಾರಾ? ನಾನೇ ಕಲೀಬೇಕಲ್ಲರೀ ಈ ಈಜನ್ನ" ಎಂದು ಗಟ್ಟಿಯಾಗಿ ಕೂಗಿ ಹೇಳುತ್ತಿದ್ದರು. ಹೆಡ್ಮಾಸ್ಟರು ಮಿಕ್ಕ ಹುಡುಗರನ್ನು ಕುರಿತು. "ನಿಮ್ಮಲ್ಲಿ ಈಜು ಕಲೀಬೇಕು ಅನ್ನೋ ಆಸಕ್ತಿ ಇರುವವರು ಈ ಕಡೆ ಬನ್ನಿ ಎಂದಾಗ ಹಲವು ಗಂಡು ಹುಡುಗರು ನುಗ್ಗಿದರು. ಅವರ ಹಿಂದೆ ರುದ್ರಾಣಿಯೆಂಬ ಐದನೇ ತರಗತಿಯ ಪಡ್ಡೆ ಹುಡುಗಿಯೂ ಬಂದಳು. ಹುಡುಗರೆಲ್ಲ ಗಹಗಹಿಸಿ ನಗತೊಡಗಿದರೆ ಹುಡುಗಿಯರು ನಾಚಿದವರಂತೆ ತಲೆ ಬಗ್ಗಿಸಿ ಕುಳಿತರು.

ಹುಡುಗಿಯೊಬ್ಬಳು ಈಜು ಕಲಿಯಬೇಕೆಂದು ಆಸೆ ಪಡುತ್ತಾಳೆಂದು ಮಾಸ್ತರುಗಳ ಸಮೇತ ಯಾರೂ ನಿರೀಕ್ಷಿಸಿರಲಿಲ್ಲ. ಈಜಾಡುವುದನ್ನು ಕಲಿಯಲಾಗಲೀ ಈಜಲಾಗಲೀ ಬಟ್ಟೆ ಕಳಚಬೇಕು. ಉಟ್ಟಲಂಗದಲ್ಲಿಯೇ ಈಜು ಕಲಿಯಲು ಸಾಧ್ಯವಿಲ್ಲ. ಕಾಲಿಗೆ ಬಟ್ಟೆ ಸುತ್ತಿಕೊಂಡರೆ ಅಪಾಯ. ಮಾಸ್ತರುಗಳು ಅವಾಕ್ಕಾದರು. ಚನ್ನಪ್ಪ ಮಾಸ್ತರರು ಕೊಂಚವೂ ವಿಚಲಿತರಾಗಲಿಲ್ಲ. 'ರುದ್ರಾಣಮ್ಮ ನಿನ್ನ ಧೈರ್ಯ ಮೆಚ್ಚುವಂತಹದ್ದು. ಆದರೆ ನೀನು ಈಜು ಕಲಿಯಲೆಂದು ನೀರಿಗಿಳಿಯಬೇಕಾದರೆ ಲಂಗ ಕಳಚಬೇಕು. ಹುಡುಗರಂತೆ ನಿಕ್ಕರು ಹಾಕಿಕೊಳ್ಳಬೇಕು. ಮುಂದಿನವಾರ ನಿನ್ನಣ್ಣನದ್ದೋ, ತಮ್ಮನದ್ದೊ ಒಂದು ನಿಕ್ಕರು ಒಂದು ಷರಟು ಹಾಕಿಕೊಂಡು ಬಾ. ಖಂಡಿತ ಈಜು ಕಲಿಸುತ್ತೇವೆ' ಎಂದರು. ರುದ್ರಾಣಿ ಒಪ್ಪಿದವಳಂತೆ ಹಿಂತಿರುಗಿ ಹುಡುಗಿಯರ ಜೊತೆ ಕುಳಿತುಕೊಂಡಳು.

ಮಾರನೆಯ ದಿನ ನಾಲ್ಕಾರು ಜನ ಹಿರಿತಲೆಗಳು ಸ್ಕೂಲಿಗೆ ಬಂದು ಹೆಡ್ಮಾಸ್ಟರ ಹತ್ತಿರ ಕೂಗಾಡತೊಗಿದರು.

"ಏನ್‌ಮೇಸ್ಟ್ರೇ ಹುಡುಗೇರಿಗೆಲ್ಲ ನಿಕ್ಕರು ಷರಟು ಹಾಕಿಕೊಂಡು ಬನ್ನಿ ಎಂದಿರಂತೆ. ನೀವು ಹೇಳಿದಾಗಿನಿಂದ ಹಾಳಾದೋವು ಊಟಬಿಟ್ಟು ಕುಂತವೆ, ನಿಕ್ಕರು-ಷರಟು ಹೊಲಿಸೇ ಕೊಡಬೇಕಂತವೆ. ಹೆಣ್ಣುಹುಡುಗೇರಿಗೆ ಅದೂ ಕೊಟ್ಟು-ತರೋ ಮಕ್ಕಳು ನಿಕ್ಕರು ಷರಟು ಹಾಕಿಕೊಂಡು ಗಂಡುಬೀರೇರ ತರಾ ಆದರೆ ಮುಂದೆ ಏನ್‌ಗತಿ. ನಮ್ಮ ಹೆಣ್ಣುಮಕ್ಕಳನ್ನ ನಾಳೆಯಿಂದ ಸ್ಕೂಲಿಗೇ ಕಳಿಸಬಾರದಂತ ತೀರ್ಮಾನ ಮಾಡಿದ್ದೀವಿ. ನೀವು ಒಳ್ಳೇ ಜನ ನಮ್ಮ ಸಂಕಟ ತಿಳೀತದೆ ಅಂತ ಒಂದು ಮಾತು ಕೇಳತಿದ್ದೀವಿ. ನಿಕ್ಕರು-ಷರಟು ಹಾಕೋದಾದರೆ ನಮ್ಮ ಹುಡುಗೇರಿಗೆ ಓದು ಪಾದು ಏನೂ ಬ್ಯಾಡ."

ಚನ್ನಪ್ಪನವರಿಗೆ ಈ ಪ್ರಸಂಗ ಈ ಮಟ್ಟಿನ ವಿಕೋಪಕ್ಕೆ ಹೋಗುತ್ತದೆಂದು ತಿಳಿದಿರಲಿಲ್ಲ.

"ನೋಡಿಸ್ವಾಮಿ ನಿನ್ನೆ ನಮ್ಮ ಹುಡುಗರನ್ನು ಕೆರೆಹತ್ರ ಕರಕೊಂಡು ಹೋಗಿ ಈಜು ಕಲಿಸಿ ಕೊಡೋವಾಗ ರುದ್ರಾಣಿ ಎಂಬ ಹೆಣ್‌ಮಗಳು 'ನನಗೂ ಕಲಿಸಿ' ಅಂತು 'ದೊಡ್ಡ ಲಂಗ ಇಕ್ಕೊಂಡರೆ ಈಜು ಕಲಿಯೋದಕ್ಕಾಗೋಲ್ಲ ನಿಕ್ಕರು ಷರಟು ಹಾಕಿಕೊಂಡು ಬಾ' ಎಂದು ತಮಾಷೆಗೆ ಹೇಳಿದೆ. ಇದು ದೊಡ್ಡದಾಯ್ತು. ಈ ಕಾರಣಕ್ಕೆ ಹುಡಿಗೇರನ್ನು ಶಾಲೆಗೆ ಕಳಿಸೋಲ್ಲ ಅಂತ ಹೇಳಬ್ಯಾಡ್ರಿ" ಎಂದು ಗೋಗರೆಯತೊಡಗಿದರು.

ಊರಿನ ಹಿರಿಯ ತಲೆಗಳಲ್ಲಿ ಒಬ್ಬರಾದ ಹೊಸಮನೆ ತಿಮ್ಮಪ್ಪನವರು. "ನೋಡಿ ಮೇಸ್ಟ್ರೇ, ನಮ್ಮೂರ ಹುಡುಗರಿಗೆ ಮರ ಹತ್ತೋದು, ಈಜಾಡೋದು, ಮಂಗನಂಗೆ ಕುಣಿಯೋದ ಕಲಿಸಲಿ ಅಂತ ಸ್ಕೂಲಿಗೆ ಕಳಿಸೋಲ್ಲ. ನಾಕಕ್ಷರ ಕಲೀಲಿ ಅಂತ ಕಳಿಸ್ತಿದ್ದೀವಿ. ನಮಕಾಲದಾಗೆ ಕೂಲಿಮಠದಯ್ಯನೋರು ಬೆರಳು ಕಿತ್ತು ರಕ್ತ ಬರೋ ತಂಕ ನಮ್ಮ ಕೈಲಿ ಮರಳ ಮೇಲೆ 'ಕಕಾಕೀಕಿ ತಿದ್ದುಸ್ತಾ ಇದ್ರು. ಪಾಠ-ಪದ್ಯ ಕಲೀದಿದ್ದರೆ ಏನ್ ಶಿಕ್ಷೆ ಬೇಕಾದರೂ ಕೊಡ್ರಿ. ಕೋತಿ ವಿದ್ಯೆ ಮಾತ್ರ ಕಲಿಸಬೇಡಿ.

"ಈ ಹುಡುಗರು ಸಾಮಾನ್ಯ ಅಂತ ತಿಳೀಬೇಡ್ರಿ. ನಮ್ಮ ಮಾವಿನ ಮರದಾಗೆ ಒಂದು ಕಾಯಿ ಬಿಡಲ್ಲ. ಯಾಕಪ್ಪಾ ಸ್ಕೂಲಿಗೆ ರಜ ಬರತದೆ ಅಂದ್ಕೋತೀವಿ" ಎಂದು ನಿಷ್ಠುರವಾಗಿ ಹೇಳಿದರು.

"ಸರಿಸ್ವಾಮಿ ಇನ್ನು ಮೇಲೆ ಹಾಗಾಗದಂತೆ ನೋಡಿಕೋತೀವಿ. ಈ ಸ್ಕೂಲು ನಿಮ್ಮದು. ಈ ಹುಡುಗರು ನಮ್ಮವ್ರ" ಎಂದು ಚನ್ನಪ್ಪನವರು. ಹಿರಿಯರೊಡನೆ ರಾಜಿ ಮಾತನಾಡಿ ಕಳುಹಿಸಿಕೊಟ್ಟರು. ಹುಡುಗರಿಗೆ ಈಜು ಕಲಿಸುವ ಧೈರ್ಯ ಹೆಡ್ಮಾಸ್ಟರಿಗೆ ಮತ್ತೆ ಬರಲೇ ಇಲ್ಲ. ■

# ದೀಪಾವಳಿ

## ನನ್ನ ಬಾಲ್ಯದ ನೆನಪುಗಳು



■ ರಾಘವೇಂದ್ರ ಪಾಟೀಲ

**ಕೆಲವರ ಮನೆತನಗಳಲ್ಲಿ 'ಬತ್ತಲೆ ಭರಮನ ಪೂಜೆ'ಯ ಸಂಪ್ರದಾಯವಿದೆ. ಅಂಥವರ ಮನೆಗಳಲ್ಲಿ ದೇವರ ಮನೆಯ ಬಾಗಿಲ ಹಾಕಿಕೊಂಡು ಭರಮನ ಪೂಜೆಯನ್ನು ಬತ್ತಲೆಯಾಗಿ ಮಾಡುತ್ತಾರಂತೆ. ನನಗೆ ಇದು ನಿಜವಾದ ಸಂಗತಿಯೇ ಎನ್ನುವ ಕುತೂಹಲವಿದ್ದಿತು.**

ಉತ್ತರ ಕರ್ನಾಟಕದಲ್ಲಿ ದೀಪಾವಳಿ ದೊಡ್ಡ ಹಬ್ಬ. ಗೋಕಾವಿಯ ನಾಡಿನ ಎಲ್ಲ ಊರುಗಳ ಎಲ್ಲ ಜನರು ಇದನ್ನು ಸಂಭ್ರಮದಿಂದ ಆಚರಿಸುತ್ತಾರೆ. ಮುಂಗಾರಿನ ಬೆಳೆಗಳು ಫಲಭರಿತವಾಗಿ ನಿಂತು ರೈತವರ್ಗದವರಿಗೆಲ್ಲ ನೆಮ್ಮದಿ ಹೆಚ್ಚಿದ್ದರೆ ಹಬ್ಬದ ಉಬ್ಬು ಇನ್ನಷ್ಟು ಹೆಚ್ಚಾಗಿರುತ್ತದೆ. ಹೊಡೆಹಿರಿದು ನಿಂತ ಮುಂಗಾರಿನ ಜೋಳ, ಅದರಲ್ಲಿನ ಅಕ್ಕಡಿಗಳಾದ ಹೆಸರು ಅಲಸಂದೆ ಬಳ್ಳಿಗಳಲ್ಲಿನ ಹೂವು-ಕಾಯಿಗಳು, ಹುಚ್ಚೆಳ್ಳಿನ ಹಳದಿ ಹೂವುಗಳು, ಬಾವಿಗಳ ನೀರಾವರಿಯಿರುವ ತೋಟಪಟ್ಟಿಗಳಲ್ಲಿ ಬಿಳಿ ಬಿಳಿ ಬಿರಿಯುತ್ತಿರುವ ಹತ್ತಿ, ಬೆಂಡೆ - ಚವಳಿಗಳು, ಚವರಿ ಹಿರಿಯುತ್ತಿರುವ ಕಬ್ಬಿನ ಪಡಗಳು ಗೋಕಾವಿ ನಾಡಿನಲ್ಲಿ ಹಬ್ಬದ ಸಡಗರವನ್ನು ಹೆಚ್ಚಿಸುವ ಕಾರಣಗಳು.

ಅಶ್ವೀನ ಮಾಸದ ವದ್ಯ ತ್ರಯೋದಶಿಯಂದು ನೀರು ತುಂಬುವ ಹಬ್ಬ. ಎಲ್ಲರ ಮನೆಗಳಲ್ಲಿನ ಹಂಡೆಗಳು ಬೆಳಗಿಸಿಕೊಂಡು ಥಳಥಳವೆನ್ನುತ್ತವೆ. ಒಲೆಗಳು ಸಾರಣೆಗೊಂಡು ರಂಗೋಲಿಯಿಂದ ಶೃಂಗಾರಗೊಂಡಿರುತ್ತವೆ. ಅಂದು ಸಂಜೆ ಗಂಡು ಹುಡುಗರೆಲ್ಲ ಬೇಲಿ ಬೇಲಿ ಅಲೆದಾಡಿ ಮಾನಿಂಗನ ಬಳ್ಳಿಯನ್ನು ತರುತ್ತಾರೆ. ಹಂಡೆಗಳಿಗೆ ಮಾನಿಂಗನ ಬಳ್ಳಿಯ ಹಾರ. ನಮ್ಮ ಊರಿನ ಕೆಲವರ ಮನೆಗಳಲ್ಲಿ ಇದನ್ನು 'ಭರಮನ ಹಬ್ಬ' ಎಂದು ಆಚರಿಸುತ್ತಾರೆ. ಇದು ಸಂಜೆಯ ಹಬ್ಬ, ರಾತ್ರಿ, ವಿಶೇಷವಾದ ಅಡಿಗೆ ಮಾಡಿ ದೇವರಿಗೆ ಬಾಳೆಯ ಎಲೆಯಲ್ಲಿಯೇ ಎಡೆ ನೀಡಬೇಕು. ಅಂದು ನಮ್ಮ ಮನೆಗೆ ಈ ಭರಮನ ಹಬ್ಬದ ಸಂಪ್ರದಾಯದವರು ಬಂದು ಬಾಳೆಯ ಎಲೆಯನ್ನು ಇಸಿದುಕೊಂಡು ಹೋಗುತ್ತಿದ್ದರು. ನಮ್ಮದೇನೂ ಬಾಳೆಯ ತೋಟ ಇರಲಿಲ್ಲ. ನಮ್ಮ ಹಿರಿಯರು ತಟ್ಟೆಯಲ್ಲಿ ಊಟ ಮಾಡುತ್ತಿರಲಿಲ್ಲವಾದ್ದರಿಂದ ಬಾಳೆಯ ಎಲೆ ದೊರೆತಾಗಲೆಲ್ಲ ಅವನ್ನು ಊಟಕ್ಕಾಗಿ ತಂದಿಟ್ಟುಕೊಳ್ಳುತ್ತಿದ್ದರು. ಅವು ದೊರೆಯದಿದ್ದಾಗ ಮುತ್ತಲ ಎಲೆಯ ಪತ್ರಾವಳಿ. ಭರಮನ ಹಬ್ಬದ ಮೊದಲದಿನ ನಮ್ಮ ತಂದೆ ಪಕ್ಕದ ಊರಾದ ಗೋಸಬಾಳಕ್ಕೆ ಹೋಗಿ ಅಲ್ಲಿನ ಬಾಳೆಯ ತೋಟದ ರೈತರಿಂದ ಬಾಳೆಯ ಎಲೆಯನ್ನು ತಂದು ಇಟ್ಟುಕೊಂಡಿರುತ್ತಿದ್ದರು. ಬಂದವರಿಗೆಲ್ಲ ಒಂದೊಂದು ಸಣ್ಣ ತುಂಡನ್ನು ಕೊಟ್ಟು ಕಳಿಸುತ್ತಿದ್ದರು.

ಆಗ ನಮ್ಮ ಕಿವಿಗೆ ಬೀಳುತ್ತಿದ್ದ ಒಂದು ಮಾತೆಂದರೆ, ಕೆಲವರ ಮನೆತನಗಳಲ್ಲಿ 'ಬತ್ತಲೆ ಭರಮನ ಪೂಜೆ'ಯ ಸಂಪ್ರದಾಯವಿದೆಯೆಂದೂ, ಅಂಥವರ ಮನೆಗಳಲ್ಲಿ ದೇವರ ಮನೆಯ ಬಾಗಿಲ ಹಾಕಿಕೊಂಡು ಭರಮನ ಪೂಜೆಯನ್ನು ಬತ್ತಲೆಯಾಗಿ ಮಾಡುತ್ತಾರೆ ಎಂದು. ನನಗೆ ಇದು ನಿಜವಾದ ಸಂಗತಿಯೇ ಎನ್ನುವ ಕುತೂಹಲವಿದ್ದಿತು. ಅದನ್ನು ಪರೀಕ್ಷಿಸುವ ಅವಕಾಶ ಸಿಗಲಿಲ್ಲ.

ನೀರು ತುಂಬುವ ಮರುದಿನದ ಬೆಳಗಿನಲ್ಲಿ ನಮ್ಮ ಮನೆಯಲ್ಲಿ ಗಂಡಸರಿಗೆಲ್ಲ ಆರತಿ, ಅದಾದ ಮೇಲೆ ಎಣ್ಣೆ ಹಚ್ಚಿಸಿಕೊಂಡು ಬಿಸಿ ಬಿಸಿಯಾದ ನೀರಿನ ಸ್ನಾನ. ಆಮೇಲೆ ವಿಶೇಷವಾದ ನಾಸ್ತಾ. ನಮ್ಮ ಕಾಲಕ್ಕೆ ಮಿಲ್ಲಿನ ಅವಲಕ್ಕಿ ಬಂದಿದ್ದಿತು. ನಮಗಿಂತ ಮೊದಲಿನ ಕಾಲದಲ್ಲಿ ಅಂದರೆ ಸುಮಾರು 1930ರ ಮೊದಲು- ದೀಪಾವಳಿ ಹಬ್ಬದಲ್ಲಿ ಮಾತ್ರ ಅವಲಕ್ಕಿಯ ತಿಂಡಿ ದೊರೆಯುತ್ತಿದ್ದಿತಂತೆ. ಮನೆಯಲ್ಲಿ ಕುಟ್ಟಿ ಸಿದ್ಧಪಡಿಸಿದ ಅವಲಕ್ಕಿ ನಾವು ಚಿಕ್ಕವರಿರುವಷ್ಟೊತ್ತಿಗೆ ಮಿಲ್ಲಿನ ಅವಲಕ್ಕಿ ನಮ್ಮ ಮನೆಯನ್ನು ಪ್ರವೇಶಿಸಿದ್ದಿತು.

ನರಕ ಚತುರ್ದಶಿಯ ಆರತಿಯ ಈ ದಿನವನ್ನು ರೈತವರ್ಗದವರು ಆಚರಿಸುವುದಿಲ್ಲ. ಆದರೆ ಊರಿನ ಎಲ್ಲರ ಮನೆಗಳ ಅಂಗಳದಲ್ಲಿ ಅಂದಿನಿಂದ ದನಗಳ ಸೆಗಣಿಯಿಂದ ಪಾಂಡವರನ್ನು ಮಾಡಿ ಇಟ್ಟು, ಹೊಲಗಳಲ್ಲಿ ದೊರೆಯುತ್ತಿದ್ದ ಹುಚ್ಚೆಳ್ಳಿನ ಹೂವುಗಳಿಂದ, ಹೊನ್ನೆಕುಕ್ಕಯ ತೆನೆಗಳಿಂದ ಸಿಂಗರಿಸಿ ಪೂಜಿಸುತ್ತಾರೆ. ಈ ಪಾಂಡವರ ಸಂಖ್ಯೆ ದಿನದಿಂದ ದಿನಕ್ಕೆ ಬೆಳೆಯುತ್ತ ಹೋಗುತ್ತದೆ. ಪಾಂಡವರ ಪಂಚಮಿಯವರೆಗೆ ಹೀಗೆ ಪಾಂಡವರ ಪೂಜೆ ನಡೆದು ಅಂದು ಪೂಜಿಸಿದ ಸೆಗಣಿಯ ಪಾಂಡವರನ್ನು ಎಲ್ಲರೂ ತಮ್ಮ ತಮ್ಮ ಮನೆಗಳ ಮಾಳಿಗೆಗಳ ಕುಂಬಿಯ ಮೇಲೆ ಇಡುತ್ತಾರೆ. ಅಲ್ಲಿ ಒಣಗುವ ಪಾಂಡವರುಗಳು ಮುಂದೆ ಆ ಮನೆಗಳಲ್ಲಿ ಉರುವಲುಗಳಾಗಿ ಬಳಕೆಯಾಗುತ್ತವೆ. ನಾವು ಚಿಕ್ಕವರಿದ್ದಾಗ ಕಾಮಣ್ಣನ ಕಿಚ್ಚಿಗಾಗಿ ಕುಂಬಿಗಳ ಮೇಲಿಟ್ಟ ಒಣಗಿದ ಪಾಂಡವರುಗಳನ್ನು ಕದಿಯುತ್ತಿದ್ದೆವು. ಹೋಳಿಹುಣ್ಣಿವೆ ಬರುತ್ತಿದ್ದಂತೆಯೇ ಎಲ್ಲ ಮನೆಗಳವರು ತಮ್ಮ ತಮ್ಮ ಮನೆಗಳ ಪಾಂಡವರುಗಳನ್ನು ಕೆಳಗಿಳಿಸಿಕೊಂಡು ಬಚಾವು ಮಾಡಿಕೊಳ್ಳುತ್ತಿದ್ದರು.

ಹಬ್ಬದ ಅಮಾವಾಸ್ಯೆ ಎಲ್ಲರಿಗೂ ಹಬ್ಬದ ದಿನ. ರೈತರು ತಮ್ಮ ದನಕರುಗಳನ್ನು ಮೈ ತೊಳೆದು, ಹಕ್ಕೆಯನ್ನು ಶುದ್ಧಮಾಡಿ ಪೂಜಿಸಿದರೆ ಅಂಗಡಿಗಳವರು ಸಂಜೆಯ ಮುಂದೆ ಲಕ್ಷ್ಮೀಪೂಜೆ ಮಾಡಿ, ಬಂದವರಿಗೆಲ್ಲ ಮಿಠಾಯಿ-ಮಂಡಕ್ಕಿ ಹಂಚುವರು. ಅಮಾವಾಸ್ಯೆಯ ಮರುದಿನ ದೀಪಾವಳಿ ಪಾಡ್ಯ. ಇದೂ ಎಲ್ಲರಿಗೂ ಹಬ್ಬದ ದಿನ. ಮನೆ ಮನೆಗಳಲ್ಲಿ ನಾನಾ ನಮೂನಿಯ ಕರಿದ-ಹುರಿದ ಪಕ್ವಾನ್ನಗಳ ಅಡಿಗೆ. ಹೊಸ ಬಟ್ಟೆಗಳ ಉಡುಗೆ. ಕೆಲವು ಅಂಗಡಿಗಳವರು ತಮ್ಮ ಅಂಗಡಿಯ ಪೂಜೆಯನ್ನು ಇಂದು ಮಾಡುವರು. ಪಾಡ್ಯದ ದಿನ ಸಂಜೆಯಾಯಿತೆಂದರೆ ಮನೆಮನೆಗಳ ಬಾಗಿಲ ಮುಂದೆ ದೀಪಗಳು ಗಾಳಿಗೆ ಬಳುಕುವ ಜ್ಯೋತಿಗಳ ಪಣತಿಗಳ ಸಾಲುಗಳು. ಇದಕ್ಕಿಂತ ಸುಂದರವಾದುದೆಂದರೆ ಮನೆ ಮನೆಗಳ ಮಾಳಿಗೆಗಳ ಮೇಲೆ ಎತ್ತರವಾಗಿ ನಿಲ್ಲಿಸಿದ ಕೋಲುಗಳ ತುದಿಗಳಿಗೆ ಏರಿ ತೂಗಾಡುತ್ತಿರುವ ಮಿಣುಕು ಮಿಣುಕೆನ್ನುವ ದೀಪಗಳ ಆಕಾಶದ ಬುಟ್ಟಿಗಳು. ಒಂದೊಂದು ಮನೆಯ ಹುಡುಗರೂ ಒಂದೊಂದು ಚಂದದ ಆಕಾಶಬುಟ್ಟಿ ಮಾಡಿ ಬಣ್ಣ ಬಣ್ಣದ ಕಾಗದ ಅಂಟಿಸಿ ಅಂತರಿಕ್ಷಕ್ಕೆ ರಂಗೋಲಿ ಬರೆಯುವರು. ಹುಡುಗರ ನಡುವೆ ಸ್ಪರ್ಧೆ, ಯಾರು ಹೆಚ್ಚು ಎತ್ತರಕ್ಕೆ ಆಕಾಶಬುಟ್ಟಿ ಏರಿಸುತ್ತಾರೆಂದು, ಯಾರ ಮನೆಯ ಆಕಾಶಬುಟ್ಟಿ ಹೆಚ್ಚು ದೊಡ್ಡದೆಂದು. ಯಾರ ಮನೆಯ ಆಕಾಶ ಬುಟ್ಟಿ ಹೆಚ್ಚು ಚಂದವೆಂದು. ಪಾಡ್ಯದ ಸಂಜೆಯಿಂದ ಆರಂಭಗೊಳ್ಳುವ ಆಕಾಶಬುಟ್ಟಿಗಳು ಹತ್ತು ಹದಿನೈದು ದಿನಗಳ ಕಾಲ ಆಕಾಶಕ್ಕೆ ಬೆಳಕು ನೀಡುತ್ತವೆ.

ಪಾಡ್ಯದ ನಂತರ ಹಬ್ಬದ ಪ್ರವಾಹಕ್ಕೆ ಇಳಿತ. ನಮ್ಮೂರಲ್ಲಿ ಹಬ್ಬದ ಕಾಲದಲ್ಲಿ ಪಗಡೆಯ ಆಟದ ತುರುಸು ಬಹಳ. ಊರಲ್ಲಿ ಮೂರು ನಾಲ್ಕು ಕಡೆ ಪಗಡೆಯ ಪಟ್ಟ ಹೂಡಿ ರಾತ್ರಿ, ಸರಿಹೊತ್ತಿನ ತನಕವೂ ಆಟ ನಡೆಯುವುದು. ನಮ್ಮ ಊರಿನಲ್ಲಿ ಆಗ ಹತ್ತಾರು ಜನರು ಪಗಡೆಕಾಯಿಗಳನ್ನು ನಡೆಸುವುದರಲ್ಲಿ ಪರಿಣತರಿದ್ದರು. ಅವರು ಒಂದೊಂದು ಟೀಮಿನ ನಾಯಕರಾಗಿರುತ್ತಿದ್ದರು. ನಮ್ಮ ಮನೆಯಲ್ಲಿಯೂ ಪಗಡೆಯ ಪಟ್ಟವನ್ನು ಹೂಡುತ್ತಿದ್ದೆವು. ನಾವು ಅಣ್ಣ-ತಮ್ಮಂದಿರು ಮತ್ತು ಒಂದಿಷ್ಟು ರೈತ ವರ್ಗದವರು ಆನೆ-ಕುದುರೆಗಳ (ಕೆಂಪು-ಕರಿ) ಪಗಡೆಯ ಹಕ್ಕನ್ನು ಪಡೆದ ಟೀಮಿನಲ್ಲಿದ್ದರೆ, ನಮ್ಮ ತಾಯಿ- ಅಕ್ಕಂದಿರು ಮತ್ತು ಇನ್ನಷ್ಟು ರೈತ ಮಂದಿ ಆಕಳು-ಕತ್ತೆ (ಹಳದಿ-ಹಸಿರು) ಕಾಯಿಗಳನ್ನು ನಡೆಸುವ ಟೀಮಿನಲ್ಲಿರುತ್ತಿದ್ದರು. ನಮ್ಮ ಎದುರು ಟೀಮಿನ ಕಾಯಿಗಳನ್ನು ನಡೆಸುವ ಪರಿಣತನಾಗಿದ್ದವನು ಪಾರ್ವತೇರ ಮಲ್ಲಪ್ಪ. ಮಂಜು ಬೀಳುತ್ತ-ಚಳಿ ಹೆಚ್ಚುತ್ತಾ ಬಿಳಿ ಜೋಳದ ಹೊಲದಲ್ಲಿ ಗಳೆ ಹೊಡೆಯುವ ಹೊರೆ ಬಿದ್ದು ಪಗಡೆಯ ಆಟದಲ್ಲಿ ಆಸಕ್ತಿ ಕಡಿಮೆಯಾಗುತ್ತ ಹೋದಂತೆ ನಮ್ಮ ಹಬ್ಬದ ನೆನಪೂ ಮಾಸುತ್ತ ಹೋಗುತ್ತಿತ್ತು. ●

# ಹಾವು ಹಾಲು ಕುಡಿದ ಮೇಲಿಲ್ಲಿ ಹಬ್ಬ ಶುರು

(7ನೇ ಪುಟದಿಂದ)

ಹರಿವ ಹೊಳೆಯಲ್ಲಿ ಬೆರೆಸಿ ಬಿಡುತ್ತಾರೆ. ಕೊನೆಯ ದಿನದ ಹಾಲನ್ನು ಮಾತ್ರ ತಂದು ಜುಂಜಪ್ಪನ ಎಡೆಗೆ ಕೊಡುತ್ತಾರೆ.

ದೀಪ ಏರಿಸಿದ ವಾರದ ನಂತರ, ದೀಪ ಏರಿಸಿದ್ದ ದಿನದಂದೇ ದೀಪವನ್ನೂ ಇಳಿಸುತ್ತಾರೆ. ಆಗ ನೂರೊಂದು ದೀಪ ಹಚ್ಚುತ್ತಾರೆ. ಇದನ್ನು 'ಕಿರು ದೀವಳಿಗೆ' ಎನ್ನುತ್ತಾರೆ.

★ ★ ★

ಕಳುವೋರಳ್ಳಿಯಂತೆ ಹಾಗಲವಾಡಿ-ಜುಂಜಪ್ಪನ ಇನ್ನೊಂದು ಪ್ರಮುಖವಾದ ನೆಲೆ. ಇದು ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕು ಕೇಂದ್ರದಿಂದ ಸು. 40 ಕಿ.ಮಿ ದೂರದಲ್ಲಿದೆ. ಹಾಗಲವಾಡಿ ಮುಖ್ಯ ಗ್ರಾಮದಿಂದ ಜುಂಜಪ್ಪನ ಹಟ್ಟಿ 2 ಕಿಮಿ ದೂರದಲ್ಲಿದೆ. ಇಲ್ಲಿ ಜುಂಜಪ್ಪ ಚಿತ್ರಲಿಂಗ, ಎತ್ತಪ್ಪ, ಮಾರಲಉತ್ತಪ್ಪ, ಪುರ್ಲಳ್ಳಿ ಭೂತಪ್ಪ, ಬೇವಿನಹಳ್ಳಿ ಕರಿಯಮ್ಮ ದೇವರುಗಳ ಮಧ್ಯೆ ನೆಲಸಿದ್ದಾನೆ. ಇಲ್ಲಿ ದೀಪ ಏರಿಸುವ ದಿನವನ್ನು 'ದೊಡ್ಡ ದೀವಳಿಗೆ' (ಹಿರಿ ದೀವಳಿಗೆ) ಎಂದರೆ, ಇಳಿಸುವ ದಿನವನ್ನು 'ಕಿರು ದೀವಳಿಗೆ' ಎಂದು ಕರೆಯುತ್ತಾರೆ. ಈ ದೀಪ ಇಳಿಸಿದ ನಂತರವೂ ಸಂಕ್ರಾಂತಿಯವರೆಗೆ ಉರಿಸುವ ದೀಪವನ್ನು 'ಚಿಕ್ಕದೀಪ' (ಕಿರುದೀಪ) ಎನ್ನುತ್ತಾರೆ.

ಬಲಿಪಾಡ್ಯಮಿಯ ಹಿಂದೆ-ಮುಂದೆ ಬರುವ ಸೋಮವಾರದಂದು ದೀಪ ಏರಿಸುತ್ತಾರೆ, ಒಮ್ಮೊಮ್ಮೆ ಗುರುವಾರವೂ ಏರಿಸುವುದುಂಟು (ಒಂದು ವೇಳೆ ಗುರುವಾರವೇ ದೀಪ ಏರಿಸಿದಲ್ಲಿ, ನಂತರ ಇಳಿಸುವ ದಿನವೂ ಗುರುವಾರವೇ ಆಗಿರುತ್ತದೆ). ಆದರೆ ಬಹಳಷ್ಟು ಜನ ದೀಪ ಏರಿಸುವುದಕ್ಕೆ ಇಷ್ಟಪಡುವುದು ಸೋಮವಾರವನ್ನೆ. ಅಂದು 'ಬಸವನ ದಿನ' ಎಂಬುದರ ಜೊತೆಗೆ, ರೈತಾಪಿ ಜನ ಅಂದು ಎತ್ತನ್ನು ನೊಗಕ್ಕೆ ಹೂಡದೆ ಬಿಡುವು ಕೊಟ್ಟಿರುವುದರಿಂದ, ಸೋಮವಾರ ಅತ್ಯಂತ ಪ್ರಶಸ್ತವಾದ ದಿನ ಎಂಬ ಭಾವನೆ ಇದೆ.

ಈ ಹಟ್ಟಿಯಲ್ಲಿ ಏರಿಸುವ ದೀಪ ಹಟ್ಟಿಯಲ್ಲಿರುವ ಎಲ್ಲ ದೇವರುಗಳ ಪರ ಎಂಬ ಸಾಂಕೇತಿಕ ಭಾವ ಇದ್ದರೂ ಅದರ ಗೌರವ ಮಾತ್ರ 'ಜುಂಜಪ್ಪ'ನೊಬ್ಬನಿಗೇ ದಕ್ಕುತ್ತದೆ.

ಸೋಮವಾರವೇ ದೀಪ ಏರಿಸುವುದಾದಲ್ಲಿ ಅದರ ಹಿಂದಿನ ಶುಕ್ರವಾರ 'ಹಟ್ಟಿ ಬೆಳ್ಳಗೆ' ಮಾಡುತ್ತಾರೆ. ಇದು ಗೊಲ್ಲ ಜನಾಂಗ ಊರು ಹೊಕ್ಕ ಸೂತಕವನ್ನು ಕಳೆದುಕೊಳ್ಳುವ ಕ್ರಿಯೆ. ಹಟ್ಟಿಯ ಎಲ್ಲರೂ ಊರ ಹೊರಗೋಗಿ ಹೊಳೆಯಲ್ಲೋ, ಬಾವಿಯಲ್ಲೋ ಸಾಮೂಹಿಕವಾಗಿ ಸ್ನಾನ ಮಾಡುತ್ತಾರೆ. ಮನೆಯ ಗೂಡೆ-ಮರ, ಪಾತ್ರೆ-ಪಡಗ ಸೇರಿದಂತೆ ನಾಯಿ, ಬೆಕ್ಕಿನಂಥ ಸಾಕುಪ್ರಾಣಿಗಳನ್ನೂ ತೆಗೆದುಕೊಂಡು ಹೋಗಿ ಶುದ್ಧಿ ಮಾಡಿಕೊಂಡು ಬರುತ್ತಾರೆ. ದೀಪ ಏರಿಸುವ ಸೋಮವಾರಕ್ಕೆ ಎಂಟು ದಿನ ಮುಂಚಿನಿಂದಲೇ ರಾಗಿ ಬೀಸೋ ಕಲ್ಲು ಹೂಡೋಲ್ಲ.

ಶನಿವಾರ 'ಮಿಾಸಲು ನೀರ'ನ್ನು ಗುಡ್ಡದ ಆಚೆ ಇರುವ ತೊರೆಯಿಂದ ತರುತ್ತಾರೆ. ಮಿಾಸಲು ನೀರಿನಿಂದ ದೇವರುಗಳ ಪುಣ್ಯೋಜನ ಮಾಡುತ್ತಾರೆ. ಅಂದಿನಿಂದಲೇ ಹಸು, ಕುರಿ, ಮೇಕೆಯಂಥ ಹಾಲು ಕೊಡುವ ಯಾವ ಪ್ರಾಣಿಯಿಂದಲೂ ಹಾಲು 'ಕರೆ'ಯುವುದಿಲ್ಲ. ಕರುಗಳಿಗೇ 'ಕೂಡು ಬಿಡುತ್ತಾರೆ' ದೀಪ ಏರಿದ ಸೋಮವಾರದ ನಂತರದ ಮಂಗಳವಾರದವರೆಗೂ ಕರುಗಳು ಸಮೃದ್ಧವಾಗಿ ತಾಯಿ ಹಾಲು ಕುಡಿಯುತ್ತವೆ. ಮಂಗಳವಾರದಿಂದ ಒಳ್ಳೆಯ ನೀರಿನಲ್ಲಿ ಹಾಲು ಕರೆಯುತ್ತಾರೆ. ಈ ಮಧ್ಯೆ ಕರು ಕುಡಿದು ಹೆಚ್ಚಾದ ಹಾಲನ್ನು ಕರೆದು ಕಳ್ಳಿ ಬೇಲಿಗೆ ಅಥವಾ ಹುತ್ತಕ್ಕೆ ಹಾಕಿ ಬಿಡುತ್ತಾರೆ. ಈ ಅವಧಿಯಲ್ಲಿ ಹಟ್ಟಿಯವರಿಗೆ ಹಾಲು ಬೇಕಾದಲ್ಲಿ ಬೇರೆ ಹಳ್ಳಿಯಿಂದ ತಂದು ಬಳಸುತ್ತಾರೆ. ಈ ಹಟ್ಟಿಯ 'ಹಾಲು ಮಿಾಸಲು' ಸಂಪ್ರದಾಯ ಸುತ್ತಿನ ಹಳ್ಳಿಯವರಿಗೆ ಗೊತ್ತಿರುವುದರಿಂದ ಇವರಿಗೆ ಪುಕ್ಕಟೆ ಹಾಲು ಕೊಡುತ್ತಾರೆ.

ಭಾನುವಾರ ದೇವರುಗಳು ಪಟ್ಟದ (ಗದ್ದಿಗೆ) ಮೇಲೆ ಇರುತ್ತವೆ.

ಸೋಮವಾರ ಎಲ್ಲಾ ದೇವರುಗಳಿಗೆ ಅಲಂಕಾರ ಮಾಡುತ್ತಾರೆ.

ಅಂದು ರಾತ್ರಿ ಪೂಜಾರಿಯೊಬ್ಬನೇ ಜುಂಜಪ್ಪನ ಗುಬ್ಬದೊಳಗೆ ಕುಳಿತು ಸರ್ಪಕ್ಕೆ ಸಲ್ಲಿಸಬೇಕಾದ 'ಹಾಲು ಮಿಾಸಲ'ನ್ನು 'ಗೂಡಿನ ದನ'ಗಳಿಂದ ಕರೆದುಕೊಳ್ಳುತ್ತಾರೆ. 'ಗೂಡಿನ ದನ' ಎಂದರೆ ಈ ದೇವರಿಗೆ ಬಿಟ್ಟ ದನಗಳು (ಈ ದನಗಳನ್ನು ಕಾಯುವ ಧಾರ್ಮಿಕ ಕಾಯಕ ಮಾಡಲು ನೇಮಿಸಿದ ವ್ಯಕ್ತಿಯನ್ನು 'ಕಿಲಾರಿ' ಎಂದು ಕರೆಯುತ್ತಾರೆ). ಈ ಹಸುಗಳಿಂದ ಎಂದೂ ಹಾಲು ಕರೆಯುವುದಿಲ್ಲ - ಈ 'ಮಿಾಸಲು ಹಾಲಿ'ನ ದಿನ ಬಿಟ್ಟು. ಈ ಹಾಲಿಗೆ ತುಪ್ಪ, ಜೇನುತುಪ್ಪ ಬೆರಸಿ, ಬಂಗಾರದ ಬಟ್ಟಲಲ್ಲಿ ಇಟ್ಟುಕೊಂಡು, ಕಣ್ಣಿಗೆ ಬಟ್ಟೆ ಕಟ್ಟಿಕೊಂಡು, ಉಡುದಾರವೂ ಇಲ್ಲದೆ ಹುಟ್ಟುಡುಪಿನಲ್ಲಿ ಕುಳಿತ ಪೂಜಾರಿ, ಹಾಲು ಕುಡಿಯವ ಸರ್ಪಕ್ಕಾಗಿ ಕಾಯುತ್ತಾನೆ. ಈ ಪೂಜಾರಿ 'ಹಾಲು-ಮಿಾಸಲು' ಹಿಡಿದು ಕೂರುವುದಕ್ಕೆ ಮುಂಚಿನ ಎಂಟು ದಿನದಿಂದಲೂ ಊಟ ಮಾಡಿರುವುದಿಲ್ಲ ಹಣ್ಣು ಹಂಪಲುಗಳ ಸೇವನೆ ಬಿಟ್ಟು. ಹೀಗೆ ಹಾಲು ಹಿಡಿದು ಕಾಯುತ್ತಾ ಕುಳಿತ ಪೂಜಾರಿ ಸರ್ಪ ಬಂದು ಹಾಲು ಕುಡಿಯುವವರೆಗೂ ದೀಪ ಏರಿಸುವುದಿಲ್ಲ! ಹಾಲಿನ ಬಟ್ಟಲ ಬಳಿ ಉಂಟಾಗುವ ಶಬ್ದದಿಂದ ಹಾವು ಬಂದಿದೆ ಎಂದು ಕಣ್ಣು ಕಟ್ಟಿಕೊಂಡ ಪೂಜಾರಿಗೆ ತಿಳಿಯುತ್ತದೆ. ಕೆಲವು ವರ್ಷ ಹಾಲು ಕುಡಿದು ಹರಿದು ಹೋಗುವ ಸರ್ಪವನ್ನು ಕಂಡದ್ದಾಗಿ ಜನ ಹೇಳುತ್ತಾರೆ. ಕೆಲವು ವರ್ಷ ಹಾವು ಕಾಣುವುದೇ ಇಲ್ಲ, ಆದರೂ ಹಾಲು ಖಾಲಿಯಾಗಿರುತ್ತದೆ. ಆದರೆ ಸರ್ಪ ಬಂದು ಹಾಲು ಕುಡಿಯದೆ 'ದೀಪ ಏರಿಸುವ' ಕೆಲಸ ಎಂದೂ ನಿಂತಿಲ್ಲ ಎಂದು ಹೇಳುತ್ತಾರೆ.

ಸರ್ಪ ಬಂದು ಹಾಲು ಕುಡಿದ ನಂತರ ಪೂಜಾರಿ ಗಂಟೆ ಸಪ್ಪಳ ಮಾಡುತ್ತಾನೆ. ಆದರೆ ಅವನು ಮಾತನಾಡುವಂತಿಲ್ಲ! ಗಂಟೆ ಶಬ್ದ ಕೇಳಿಸುತ್ತಲೇ, ಗುಬ್ಬದ ಹೊರಗೆ ಕಾಯುತ್ತಿರುವ ಜನ 'ಸ್ವಾಮಿ ಬಂದ' ಎಂದು ಎಲ್ಲರೂ ಏಳುತ್ತಾರೆ. ಸಿದ್ಧವಾಗಿರುವ ಹತ್ತಿ ಕಾಳುಗೆ ಎಣ್ಣೆ ಹೊಯ್ದು ದೀಪ ಹೊತ್ತಿಸಿ, ಎಲ್ಲ ದೇವರುಗಳಿಗೂ ಬೆಳಗಿ ದೀಪ ಏರಿಸುತ್ತಾರೆ. ಹಾವು ಬಂದು ಹಾಲು ಕುಡಿಯುವವರೆಗೂ ಅಂದರೆ ಹೊತ್ತು ಹುಟ್ಟಿ ಬೆಳ್ಳಗಾದರೂ ಸರಿ ದೀಪ ಏರಿಸುವಂತಿಲ್ಲವಂತೆ. ಉಗ್ರಸ್ವರೂಪನಾದ ಜುಂಜಪ್ಪನನ್ನು ಕಣ್ಣಿನಿಂದ ನೋಡಲು ಸಾಧ್ಯವಿಲ್ಲವೆಂದೇ ಜುಂಜಪ್ಪ ಸರ್ಪ ರೂಪದಲ್ಲಿ ಕಾಣಿಸಿಕೊಂಡು ಆಶೀರ್ವಾದ ನೀಡುತ್ತಾನೆಂದು ಜನ ನಂಬುತ್ತಾರೆ.

ದೀಪ ಏರಿದಾಗಿನಿಂದ ಇಳಿಯುವವರೆಗೂ ಒಂದು ತಿಂಗಳು ಹಗಲು ಜಾತ್ರೆ, ದೀಪ ಏರಿಸುವ - ಇಳಿಸುವ ದಿನ ಮಾತ್ರ ರಾತ್ರಿ ಜಾತ್ರೆ ಇರುತ್ತದೆ.

ಹಾಗಲವಾಡಿಯಲ್ಲಿ ಏರಿಸುವ ದೀಪ ತಾಮ್ರದಿಂದ ಮಾಡಿದ ಆಳೆತ್ತರದ ಪಂಚಕಲಶ ದೀಪ. ಒಂದು ವಾರದ ನಂತರ ನಾಲ್ಕು ಕಲಶ ತೆಗೆದು

---

ನೀನು ನಾನೇ:

## ಪ್ರೀತಿ

ನೂರು ಜನ ನೂರು ರೀತಿ ಅನ್ನಲಿ
ಕಾಗೆ ಕಾಗೆಯೇ; ಕೋಗಿಲೆ ಕೋಗಿಲೆಯೆ!
ಬಣ್ಣ ಬಯಲಾಗುವುದು ಅದರ
ಕಂಠದಿಂದ
ನೂರು ಜನ ನೂರು ರೀತಿ ನೋಡಲಿ
ನಾನು ನಾನೇ; ನೀನು ನೀನೆ!
ಪ್ರೀತಿ ಪಕ್ವವಾಗುವುದು ನಮ್ಮ
ತನದಿಂದ

■ ಎಂ.ಎನ್.ವ್ಯಾಸರಾವ್

ಮಧ್ಯದಲ್ಲಿರುವ ಒಂದು ಕಲಶದಲ್ಲಿ ಮಾತ್ರ ದೀಪ ಉರಿಸುತ್ತಾರೆ. ದೀಪ ರಾತ್ರಿ ಹೊತ್ತು ಮಾತ್ರ ಉರಿಯುತ್ತದೆ. ಈ ದೀವಳಿಗೆ ತಿಂಗಳಲ್ಲಿ ಪ್ರತಿ ಸೋಮವಾರ ಕಲಶ ಇಳಿಸಿ ಜುಂಜಪ್ಪನ ಮುಂದೆ ಇಟ್ಟು ಪೂಜೆ ಮಾಡಿಸಿ, ಎಲ್ಲಾ ದೇವರಿಗೆ ಬೆಳಗಿ ಮತ್ತೆ ಏರಿಸುತ್ತಾರೆ.

★ ★ ★

ಹೀಗೆ ಜುಂಜಪ್ಪನ ಹೆಸರಿನಲ್ಲಿ ಬಿಟ್ಟ ಪ್ರಾಣಿಗಳ ಸಮಾಧಿಗಳ ಬಳಿಯೂ ದೀಪ ಏರಿಸುವ ಸಂಪ್ರದಾಯ ಉಂಟು. ಶಿರಾ ತಾಲ್ಲೂಕಿನ ಗಂಗನಹಳ್ಳಿಯಲ್ಲಿ ಜುಂಜಪ್ಪನಿಗೆ ಬಿಟ್ಟಿದ್ದ ಮ್ಯಾಕೆಹೋತನ ಗುಡ್ಡೆ ಇದೆ. ಶಿರಾ ತಾಲ್ಲೂಕಿನ ಹಳೆಬಿಜ್ಜಂಬೆಳ್ಳದಲ್ಲೂ ಜುಂಜಪ್ಪನಿಗೆ ಬಿಟ್ಟ ಬಸವನ ಗುಡ್ಡೆ ಇದೆ. ಈ ನೆಲೆಗಳಲ್ಲೂ ದೀಪ ಏರಿಸುವ ಸಂಪ್ರದಾಯ ಇದೆ. ಆದರೆ ಆಚರಣೆಗಳು ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿರುವುದನ್ನು ಗಮನಿಸಬಹುದು.

**ದೀವಳಿಗೆಯ ಮಹತ್ವ :** ಕಾಡುಗೊಲ್ಲರ ದೀವಳಿಗೆ ಇಡೀ ಪ್ರಕ್ರಿಯೆ ಪಶುಪಾಲಕ ಸಂಸ್ಕೃತಿಯ ನಿರ್ವಚನದಂತೆ ಇದೆ. ಆದರೆ ಬೇಸಾಯವೇ ಬದುಕಿನ ಬೆನ್ನೆಲುಬಾದ 'ಜನಪದ ಸಂಸ್ಕೃತಿ'ಯಲ್ಲಿ ಇದು ಸಂಪೂರ್ಣ ಭಿನ್ನವಾದ ನೆಲೆಯಲ್ಲಿ ಆಚರಣೆಗೊಳ್ಳುತ್ತಿದ್ದು, ಇಲ್ಲಿ ಪಶುವರ್ಗವೇ ಪ್ರಾಶಸ್ತ್ಯ ಪಡೆದಿರುವುದನ್ನು ಕಾಣಬಹುದು. 'ಎತ್ತಿಲ್ಲದ ಬೇಸಾಯ ಎತ್ತೆತ್ತಲೋ' ಎಂಬಂತೆ ಇಡೀ ವ್ಯವಸಾಯದ ಬದುಕಿನಲ್ಲಿ ತಮ್ಮೊಂದಿಗೆ ಜೊತೆ ಜೊತೆಯಾಗಿ ದುಡಿದು, ರೈತನ ಬದುಕಿನ ಭಾಗ್ಯಕ್ಕೆ ಕಾರಣರಾದ ಎತ್ತುಗಳಿಗೆ ಕೃತಜ್ಞತೆ ಸಲ್ಲಿಸುವ ಹಬ್ಬವೇ ಇದಾಗಿದೆ. ಹೀಗಾಗಿ ಇದು ರೈತ ಮಕ್ಕಳ, ಸಡಗರ ಸಂಭ್ರಮದ ಹಬ್ಬವಾಗಿದೆ. ಆದಕ್ಕೇ ಇದನ್ನು ಜನಪದರದ್ದೇ ಆಧ ಭಾಷೆಯಲ್ಲಿ 'ಎತ್ತಿನ ಹಬ್ಬ' ಅಥವಾ 'ಹಟ್ಟಿಹಬ್ಬ' ಎಂದು ಕರೆಯುವುದು ಈ ಹಬ್ಬದಲ್ಲಿ ದನಕರುಗಳ ಪೂಜೆ ನಡೆಯದ ಮನೆಯೇ ಇಲ್ಲವೆನ್ನಬಹುದು.

ರೈತರು ಎತ್ತುಗಳನ್ನು ಸಿಂಗರಿಸಿ ಊರಲ್ಲಿ ಮೆರೆಸಿ, ನಂತರ ಕಿಚ್ಚು ಹಾಯಿಸುತ್ತಾರೆ. ದನಗಳನ್ನು ತಮ್ಮ ಕಣ್ಣುಗಳೆಂದೇ ಭಾವಿಸುವ ರೈತಜನಗಳ ಖುಷಿ, ಸಂಭ್ರಮ ಎತ್ತುಗಳ ಅಲಂಕಾರದಲ್ಲಿ ಕಾಣುತ್ತದೆ. ಎತ್ತುಗಳ ಮೈಮೇಲೆ ಬಟ್ಟೆಯ ಸಖರ ಹಾಳಿ ಕೊರಳಿಗೆ ಗೆಜ್ಜೆ-ಗಂಟೆಕಟ್ಟಿ, ಕೊಂಬುಗಳಿಗೆ ಬಣ್ಣಬಣ್ಣದ ಗುಮ್ಮಟ ಕಟ್ಟಿ (ಕೆಲವರು ಕೊಂಬಿಗೆ ಬಣ್ಣ ಹಚ್ಚಿ ವರ್ಣಮಯವಾದ ಟೇಪುಗಳನ್ನು ಕಟ್ಟಿರುತ್ತಾರೆ) ಸಂಭ್ರಮಿಸುವ ರೀತಿ ಅನನ್ಯವಾದುದು. ''ದೀಪಾವಳಿಯಲ್ಲಿ ದನ ಕೆಣಕ ಬೇಡ, ಸುಗ್ಗಿಯಲ್ಲಿ ಹೊಲೆಯನನ್ನು ಕೆಣಕ ಬೇಡ' ಎಂಬ ಗಾದೆಯೇ ಹುಟ್ಟಿಕೊಂಡಿದೆ. ಇದು ಒಕ್ಕಲುಮಕ್ಕಳು ದೀವಳಿಗೆ ಮತ್ತು ಸುಗ್ಗಿಯಲ್ಲಿ ಅದೆಷ್ಟು ಹರ್ಷಚಿತ್ತರಾಗಿರುತ್ತಾರೆಂಬುದನ್ನು ಹೇಳುತ್ತದೆ. ಒಂದು ರೀತಿಯಲ್ಲಿ ಪಶು ಯೋಗಕ್ಷೇಮ ನೋಡಿಕೊಳ್ಳುವ ದೇವತೆಗಳನ್ನು ನೆನೆದು, ಅವಕ್ಕೆ ಭಕ್ತಿ-ಪ್ರೀತಿ, ಕೃತಜ್ಞತೆಗಳನ್ನು ಸಲ್ಲಿಸುವ ಹಬ್ಬವೂ ಇದಾಗಿದೆ.

'ದೀಪಾವಳಿ' ಎಂಬುದು ಶಿಷ್ಟ ಸಂಸ್ಕೃತಿಯಲ್ಲಿ ಬಳಕೆಯಾಗುವ ಪದ, ಅಲ್ಲಿ ಇದನ್ನು ಆಚರಿಸುವ ನೆಲೆ ಪಶುಪಾಲಕ ಸಂಸ್ಕೃತಿಯಿಂದ ಸಂಪೂರ್ಣ ಭಿನ್ನವಾಗಿದೆ. ಶಿಷ್ಟ ಸಂಸ್ಕೃತಿಯಲ್ಲಿ ಎತ್ತುಗಳಿಗೆ ಯಾವ ಪಾತ್ರವೂ ಇಲ್ಲ. ಪಟಾಕಿ ಹಚ್ಚಿ, ಬೆಳಕು ಚೆಲ್ಲಿ ಖುಷಿ ಪಡುವ, ಮುಂದಿನ ತಮ್ಮ ಬದುಕಿನ ಅಂಧಕಾರ ಕಳೆದು ಬೆಳಕು ತುಂಬಿರಲಿ ಎಂಬ ಹಾರೈಕೆಗಷ್ಟೇ ಸೀಮಿತವಾಗುತ್ತದೆ.

ಹೀಗಾಗಿ ಜುಂಜಪ್ಪನದು 'ದೀಪ ಏರಿಸುವ ಬೆಳಕಿನ ಹಬ್ಬ'ವಾದರೆ ಎತ್ತಪ್ಪನದು 'ಫಲಸಮೃದ್ಧಿಯ ಹಾಲಿನ ಹಬ್ಬ'ವಾಗಿದೆ ಎತ್ತಪ್ಪನ ಹಾಲು (ಶಕ್ತಿ) ಅಮೃತ, ಜುಂಜಪ್ಪನ ಬೆಳಕು (ಜ್ಞಾನ) ಸೇರಿ - 'ಹಾಲು ಬೆಳಕು' ಶಕ್ತಿ-ಜ್ಞಾನಗಳ ಅರ್ಥಪೂರ್ಣ ಸಂಮಿಳನವನ್ನು ಸಂಕೇತಿಸುತ್ತವೆ.

---

## ರೋಗಿಯಲ್ಲ ಡಾಕ್ಟರ್

ಜಗದ್ವಿಖ್ಯಾತ ಜೀವ ವಿಕಾಸ ಸಿದ್ಧಾಂತದ ರೂವಾರಿ ಚಾರ್ಲ್ಸ್ ಡಾರ್ವಿನ್. ಈತನ ತಾತ ಎಮರಸ್ ಡಾರ್ವಿನ್ ಒಳ್ಳೆಯ ವೈದ್ಯನಾಗಿ ಹೆಸರು ಪಡೆದಿದ್ದ. ರೋಗ ಪತ್ತೆಯಲ್ಲಿ ಆತ ಎತ್ತಿದ ಕೈ. ಹೀಗಾಗಿ ಡರ್ಬಿಯಲ್ಲಿದ್ದ ಆತನನ್ನು ಕಾಣಲು ದೂರ ದೂರದ ಊರುಗಳಿಂದ ರೋಗಿಗಳು ಬರುತ್ತಿದ್ದರು. ಎಷ್ಟೋ ವೈದ್ಯರು ತಮ್ಮ ರೋಗಿಗಳನ್ನು ಕರೆದು ತರುತ್ತಿದ್ದುದು ಉಂಟು.

ಒಮ್ಮೆ ರೋಗಿಯೊಬ್ಬ ಲಂಡನ್‌ನಿಂದ ಬಂದ. ಆತನನ್ನು ಪರೀಕ್ಷಿಸಿದ ಡಾರ್ವಿನ್ 'ಹೆಚ್ಚು ದಿನ ಬದುಕುವ ಸಾಧ್ಯತೆ ಇಲ್ಲ' ಎಂದು ಹೇಳಿಬಿಟ್ಟ, ಅಷ್ಟೇ ಅಲ್ಲ, ಹದಿನೈದು ದಿನ ಬದುಕಿದರೇ ಹೆಚ್ಚು ಎಂದು ಗಡುವು ಕೂಡ ನೀಡಿದ.

ಅದಾದ ಮೇಲೆ ''ಲಂಡನ್‌ನಂಥ ದೂರದ ನಗರದಿಂದ ಇಂಥ ಸ್ಥಿತಿಯಲ್ಲಿ ಪ್ರಯಾಣಿಸಿ ಬಂದಿದ್ದೇಕೆ? ಅಲ್ಲೇ ಹೆಸರುವಾಸಿಯಾದ ಡಾ. ವಾರೆನ್ ಇದ್ದರಲ್ಲ'' ಎಂದರು ಡಾರ್ವಿನ್. ''ನಾನೇ ಡಾ. ವಾರೆನ್'' ಅನ್ನಬೇಕೇ ಆ ರೋಗಿ! ಡಾರ್ವಿನ್ ಹೇಳಿದ ಹಾಗೆ ಹದಿನೈದು ದಿನಗಳೊಳಗೆ ವಾರೆನ್ ಸತ್ತ.

## ವಿಚಿತ್ರ 'ತಿಥಿ'

ಹುಟ್ಟು, ಮದುವೆ, ಸಾವುಗಳಲ್ಲಿ ಸಂಪ್ರದಾಯಕ್ಕೆ ಮೇಲುಗೈ. ಎಲ್ಲ ಪಾಂಗಿತವಾಗಿ ನಡೆಯಲೇಬೇಕು. ಅದರಲ್ಲೂ 'ಶ್ರಾದ್ಧ' ದಂಥ ಆಚರಣೆ ಸರಿಯಾಗಿ ಆಗದೇ ಇದ್ದರೆ ಮೃತರ ಆತ್ಮಕ್ಕೆ ಶಾಂತಿ ಸಿಗದೆಂಬ ಆತಂಕ. ಅಂಥದರಲ್ಲಿ ಮಗನನ್ನು ಕಳೆದುಕೊಂಡ ತಂದೆಯೊಬ್ಬ ಸಂಪ್ರದಾಯ ಬಿಟ್ಟು, ಸಮಾಜಕ್ಕೆ ಉಪಕಾರ ಮಾಡುವ ಕಾರ್ಯಕ್ರಮ ಹಾಕಿಕೊಂಡಿದ್ದು ನಡೆದಿದೆ.

ಚೆನ್ನಪಟ್ಟಣ ತಾಲೂಕು ಅರಳಾಳುಸಂದ್ರದಲ್ಲಿ ಈ ಘಟನೆ ನಡೆದಿದೆ. ಊರಿನ ಎಸ್. ಪಿ. ಸಿದ್ದಪ್ಪನವರ ಮಗ ಸುಂದರೇಶ್ ಇನ್ನಿಲ್ಲವಾದ. ತಿಥಿ ಮಾಡಬೇಕಾದ ದಿನ ಎಂದಿನ ಸಾಂಪ್ರದಾಯಿಕ ಆಚರಣೆ ಬದಲು ವಿಚಾರ ಸಂಕಿರಣ ಒಂದನ್ನು ಸಿದ್ದಪ್ಪ ಏರ್ಪಡಿಸಿದ್ದರು. ಸಂಕಿರಣದ ವಿಷಯ 'ಯುವಕರ ಆತ್ಮಹತ್ಯೆಗೆ ಕಾರಣಗಳು ಮತ್ತು ಪರಿಹಾರ!'

ಈ ವಿಚಾರ ಸಂಕಿರಣಕ್ಕೆ ವಿಶ್ವ ಮಾನವ ಪ್ರಕ್ರಿಯಾ ವೇದಿಕೆ ಮತ್ತು ಲೋಹಿಯಾ ಸಮತಾ ವಿದ್ಯಾಲಯಗಳ ಸಹಯೋಗ ಬೇರೆ.

ಸಂಕಿರಣದಲ್ಲಿ ಪಾಲ್ಗೊಂಡು ವಿಚಾರ ಮಂಡಿಸಿದ ದಿಗ್ಗಜಗಳೆಂದರೆ ಪ್ರೊ। ಎಂ. ಡಿ. ನಂಜುಂಡಸ್ವಾಮಿ, ಡಿಐಜಿ ಅರ್ಕೇಶ್, ಕೆ. ಎಸ್. ಭಗವಾನ್, ಕಾಳೇಗೌಡ ನಾಗವಾರ ಮುಂತಾದವರು.

## ಬಿಲ್ ಮಹಿಮೆ

ಅಸ್ಸಾಂನ ಟೆಲಿಫೋನ್ ಬಳಕೆದಾರರೊಬ್ಬರಿಗೆ 2. 55 ಕೋಟಿ ರೂಪಾಯಿ ಬಿಲ್ ಬಂದಿದೆ. ಕೇವಲ ಅರವತ್ತು ದಿನದಲ್ಲಿ ಇಷ್ಟು ದೊಡ್ಡ ಮೊತ್ತದ ಬಿಲ್ ಮಾಡಿದ್ದು ಅವರ ಪವಾಡ ಎನ್ನುವುದಕ್ಕಿಂತ ಇದು ಟೆಲಿಫೋನ್ ಇಲಾಖೆಯ ಪವಾಡ ಎನ್ನುವುದೇ ಸರಿ. ಯಾಕೆಂದರೆ ಸಾಮಾನ್ಯ ಮಟ್ಟದ ನಾಲ್ವರು ಬಳಕೆದಾರರಿಗೆ ಒಂದು ಕೋಟಿ ರೂಪಾಯಿಗೂ ಹೆಚ್ಚು ಮೊತ್ತದ ಬಿಲ್ ಬಂದಿದೆಯಂತೆ. ಜೊತೆಗೆ ಬಿಲ್ ಕಟ್ಟದಿದ್ದರೆ ಸಂಪರ್ಕ ಕಡಿದು ಹಾಕುವ ಬೆದರಿಕೆ ಬೇರೆ.

ಈ ಕೋಟಿ ಬಿಲ್ ವೀರರೆಲ್ಲ ಕೋರ್ಟಿಗೆ ಓಡಿ ಹೋಗಿ ತಡೆಯಾಜ್ಞೆ ತಂದ ಮೇಲೆ, ಇಲಾಖೆ ತಮ್ಮ ಎಕ್ಸ್‌ಚೇಂಜಿನ ಸೂಪರ್‌ವೈಸರ್‌ನ್ನೇ ಅಮಾನತ್ತಿನಲ್ಲಿ ಇಟ್ಟಿದೆ. ಇದು ನಡೆದಿದ್ದು ಅಸ್ಸಾಂನ ದಿಬ್ರೂಗಡದ ಮೋರಾನ್ ಎಂಬಲ್ಲಿ.

# ಬ್ರಹ್ಮ ಹಾಕಿದ ಗಂಟು





■ ಅನಂತ ಕಲ್ಲೋಳ

ಶ್ರೀ ಹರಿವಾಯುಗಳ ಕೃಪೆಯಿಂದ ಶ್ರೀ ಕೃಷ್ಣ ಮಂದಿರದಲ್ಲಿ ಚಿ. ಸುಧಾಕರನ ಉಪನಯನ ನೆರವೇರಲಿತ್ತು. ಶ್ರೀಮತಿ ಮತ್ತು ಶ್ರೀಯುತ ಗೋಪಾಲ್‌ರಾವ್‌ರವರು ನನಗೆ 'ಸಹ ಕುಟುಂಬ ಸಹ ಪರಿವಾರ' ಉಪನಯನ ಸಮಾರಂಭಕ್ಕೆ 'ಆಗಮಿಸಿ' ವಟುವಿಗೆ ಶುಭಾಶೀರ್ವಾದ ನೀಡಬೇಕೆಂದು ಕೋರಿ ಔತಣದೋಲೆಯನ್ನು ಕಳಿಸಿದ್ದರು. ನನ್ನದು ಏಕಸದಸ್ಯ ಕುಟುಂಬ. ಅಂದ ಬಳಿಕ 'ಪರಿವಾರ' ಸಮೇತ ಹೋಗುವ ಪ್ರಮೇಯವಿರಲಿಲ್ಲ. ನಿಶ್ಚಿತ ಮುಹೂರ್ತಕ್ಕೆ ನಾನು ಶ್ರೀ ಕೃಷ್ಣ ಮಂದಿರಕ್ಕೆ ಹೋದೆ. ಪ್ರವೇಶದ್ವಾರದಲ್ಲಿದ್ದ ಸ್ವಾಗತಕಾರರು, ಇಂಥ ಸಂದರ್ಭಗಳಿಗಾಗಿಯೇ ಎಂದು ಮೀಸಲಿಟ್ಟ ಮುಗುಳುನಗೆ ಬೀರಿ, 'ಬರ್‍ರಿ, ಬರ್‍ರಿ' ಅಂತ ಸ್ವಾಗತಿಸಿದರು. ಮಂದಿರದ ವಿಸ್ತಾರವಾದ ಹಜಾರದಲ್ಲಿ ಸಮಾರಂಭಕ್ಕಾಗಿ ಜನ ನೆರೆದಿತ್ತು. ಒಂದು ಮೂಲೆಯಲ್ಲಿ ಶ್ರೀಮತಿ ಮತ್ತು ಶ್ರೀಯುತ ಗೋಪಾಲರಾವ್ ಹಾಗೂ ವಟು ಸುಧಾಕರ ಹೋಮಕುಂಡದ ಎದುರು ಮಂಡಿಸಿ ಪುರೋಹಿತರ ನಿರ್ದೇಶನದಂತೆ 'ಮಮ'ಕಾರಗಳನ್ನು ಉಚ್ಚರಿಸುತ್ತ ವಿಧಿ ಪೂರೈಸುತ್ತಿದ್ದರು.

ಅಲ್ಲಿ ಸೇರಿದ್ದ ಜನ ತಮ್ಮತಮ್ಮಲ್ಲಿ ಗುಂಪು ಕಟ್ಟಿಕೊಂಡು ಕಾರ್ಗಿಲ್ ವಿಷಯವೋ, ಕ್ರಿಕೆಟ್ ಸಂಗತಿಯೋ ಅಥವಾ ಚುನಾವಣೆಯ ಬಗ್ಗೆಯೋ ಆ ಮಾತು ಈ ಮಾತು ಆಡುತ್ತಿದ್ದರು. ನಾನು ಕುಳಿತ ಕುರ್ಚಿಯ ಪಕ್ಕದಲ್ಲಿ ಪಾಟೀಲ ಮಂಡಿಸಿದ್ದ. ನಾನು ಆತನನ್ನು ನೋಡಿದೆ. ಆದರೆ ನನ್ನ ಕಡೆಗೆ ಆತನ ದೃಷ್ಟಿ ಹಾಯಲಿಲ್ಲ. ಆತನ ಲಕ್ಷ್ಯ ಬೇರೆಡೆಗೇ ನಟ್ಟಿತ್ತು. ನಾನು ಅತ್ತ ಕಡೆಗೆ ನೋಡಿದೆ. ಹೌದು; ನೋಡುವಂಥ ನೋಟವೇ ಅದು. ಬಂಗಾರಕ್ಕೆ ಕುಂದಣವಿಟ್ಟಂತೆ ಅನ್ನುತ್ತಾರಲ್ಲ; ಹಾಗೆ ತನ್ನ ಮೂಲ ಸೌಂದರ್ಯಕ್ಕೆ ಕೃತ್ರಿಮ ಸೌಂದರ್ಯೋಪಕರಣಗಳಿಂದ ಪ್ರಚಲಿತ ನವನವೀನ ವಿನ್ಯಾಸಗಳಿಗನುಗುಣವಾಗಿ ಅಲಂಕರಿಸಿಕೊಂಡಿದ್ದ ಆ ಮಹಿಳೆ ಜನರ ಲಕ್ಷ್ಯವನ್ನು ತನ್ನೆಡೆಗೆ ಸೆಳೆದುಕೊಳ್ಳುವುದರಲ್ಲಿ ಯಶಸ್ವಿಯಾಗಿದ್ದಳು!

ವೇಷಭೂಷಣದಲ್ಲಿಯ ಅಚ್ಚುಕಟ್ಟುತನ, ಬಣ್ಣಗಳ ಹೊಂದಾಣಿಕೆ ಹಾಗೂ ಅವಳ ಒನಪು ಒಯ್ಯಾರ ನೋಟಕನ ಕಣ್‌ಕೋರೈಸುವಂತಿದ್ದುದು ನಿಜವಾಗಿತ್ತು. ಕೆಂಪು ಅಂಗಕಾಂತಿಯ ಹಿನ್ನೆಲೆಯಲ್ಲಿ, ಅವಳು ಉಟ್ಟ ನೀಲಿ ಬಣ್ಣದ ರೇಷ್ಮೆಸೀರೆ. ನಿಡಿದಾದ ಗುಲಾಬಿ ತೋಳುಗಳನ್ನು ತೋರುವ, ಅವಳು ತೊಟ್ಟ ನೀಲಿ ಬಣ್ಣದ 'ಸ್ಲೀವ್‌ಲೆಸ್' ಬ್ಲೌಸ್! ನೀಲಕಾಂತಿಯನ್ನು ಹೊರಚಿಮ್ಮುತ್ತ ಉಯ್ಯಾಲೆಯಾಡುತ್ತಿದ್ದ ಕಿವಿಯೋಲೆಗಳು ಮತ್ತು ಬ್ಲೌಸಿನ ವಿಶೇಷ ವಕ್ರತೆಯ ಮೂಲಕ ವಿಸ್ತಾರವಾಗಿ ತೋರ್ಪಡುವ ಕೊರಳನ್ನು ಒಂದೆಳೆಯಿಂದ ಸುತ್ತಿದ ಸುದೀರ್ಘವಾದ ಆದರೆ ಹೃದ್‌ಮಧ್ಯದಲ್ಲಿ ಗಂಟು ಹಾಕಿ ಮೊಟಕುಗೊಳಿಸಲ್ಪಟ್ಟ ಮುತ್ತಿನ ಸರ. ತುಟಿಗೆ ತುಸು ರಬ್ಬಾದ ತುಟಿಗೆಂಪು, ಪಕ್ಕದ ಬಲ ಕೆನ್ನೆಯ ಕೆಳಭಾಗದಲ್ಲಿಟ್ಟ ಕಪ್ಪು ಚುಕ್ಕೆ. ಇದೆಲ್ಲಕ್ಕೂ ಕಳಶವಿಟ್ಟಂತೆ. ಅತ್ಯಾಧುನಿಕ ನಮೂನೆಯ, ಕೇಶ ವಿನ್ಯಾಸ. ಹಣೆಯ ಮೇಲೆ ಎಣಿಸಿ, ತೂಗಿ, ಅಳತೆಗೊಟ್ಟು ಕತ್ತರಿಸಿದಂತಿದ್ದ ಕಪ್ಪು ಕೂದಲಿನ ಪೊದೆ. ನೆತ್ತಿಯ ಮೇಲೆ ಎತ್ತಿ ಕಟ್ಟಿದ ತುರುಬಿನಿಂದಾಗಿ ಮತ್ತು ಬ್ಲೌಸಿನ ದೀರ್ಘ ವರ್ತುಳದ 'ನೆಕ್-ಕಟ್' ಮೂಲಕ ಅವಳ ನುಣುಪಾದ ಕೊರಳು ಮತ್ತು ಬೆನ್ನಿನ ಭಾಗ ಇನ್ನೊಮ್ಮೆ, ಮತ್ತೊಮ್ಮೆ ದೃಷ್ಟಿ ಹರಿಸುವಂತೆ ಮಾಡುತ್ತಿತ್ತು. ಬ್ಲೌಸಿನ ಹಿಂಬದಿಗೆ ಹೆಣಿಕೆಯ ಗವಾಕ್ಷಿ ಬೇರೆ!

ಅವಳು ಮತ್ತಾರೂ ಅಲ್ಲ, ಬ್ಯಾಂಕ್ ಮ್ಯಾನೇಜರ್‌ರ ಅರ್ಧಾಂಗಿ. ಅವಳು ಹೇಗಿದ್ದರೂ ಪಾಟೀಲ ಹೀಗೆ ನೆಟ್ಟ ದೃಷ್ಟಿಯಿಂದ ನೋಡುತ್ತಿರುವುದು ತಪ್ಪಲ್ಲವೇ? ಅವಳು ಮತ್ತೊಬ್ಬರ ಮಡದಿ; ಮೇಲಾಗಿ ಪಾಟೀಲನೂ ವಿವಾಹಿತನೇ! ನಾನು ಪಾಟೀಲನ ಬೆನ್ನು ತಟ್ಟಿ, 'ಹಲೋ ಪಾಟೀಲ್ ಆರಾಮೇನಪಾ?' ಎಂದೆ. ಪಾಪ; ಆತ ಬೆಚ್ಚಿ ಬಿದ್ದು ಹುಚ್ಚು ನಗೆ ಸೂಸುತ್ತ, 'ಹೋ ಹೋ ಕುಲಕರ್ಣಿ, ನೀ ಯಾವಾಗ ಬಂದೆ?' ಎಂದಂದ.

'ನಾ ಬಂದಾಗ ನೀನು ಭಾವ ಸಮಾಧಿಯಲ್ಲಿದ್ದಿ. ನನ್ನಂಥವರು ಹ್ಯಾಂಗ ಕಾಣಬೇಕು ನಿನಗ? ರಸಭಂಗವಾಯ್ತೇನು ಮತ್ತ?' ನಾನೆಂದೆ.

'ಛೆ ಛೆ....' ಎಂದು ಪೆಚ್ಚುಪೆಚ್ಚಾಗಿ ನಕ್ಕ ಪಾಟೀಲ ಮತ್ತೆ ಮಿಸೆಸ್ ಪೈ ಅಂತಂದರೆ ಮ್ಯಾನೇಜರ್‌ರ ಮಡದಿಯ ಕಡೆಗೆ ಮರಳಿ ದಿಟ್ಟಿ ಹರಿಸಿದ.

'ನೀ ಏನೇ ಹೇಳು ಕುಲಕರ್ಣಿ, ಸೌಂದರ್ಯೋಪಾಸನೆಯಲ್ಲಿ ಅಭಿಜಾತ ಕೌಶಲ್ಯವನ್ನು ಪ್ರದರ್ಶಿಸುವುದು ಕೆಲವರಿಗೆ ಮಾತ್ರ ಸಾಧ್ಯ. ಇಲ್ಲಾದರ ನಮ್ಮ ಕಡೆಯವರು ಇರ್ತಾರ; ಇನ್ನೂ ಹದಿನಾರನೇ ಶತಮಾನದ ಹೊನ್ನಮ್ಮ, ಚೆನ್ನಮ್ಮರ ಜಮಾನಾದ ಅವತಾರದಾಗ. ಬದಲಾದ ಕಾಲಕ್ಕ ತಕ್ಕಾಂಗ ವೇಷಭೂಷಣ ಮಾಡಿಕೋಬೇಕು, ಅಂದ ಚೆಂದವಾಗಿರಬೇಕು ಅಂಬೂದನ್ನು ಯಾವಾಗ ಕಲೀತಾರೋ ಯಾರಿಗ್ಗೊತ್ತು? ಛ್ಲಂSS....' ಪಾಟೀಲ ಪುಟುಪುಟಿಸಿದ.

ಉಪನಯನ ಸಮಾರಂಭಕ್ಕೆಂದು ಕೃಷ್ಣಮಂದಿರಕ್ಕೆ ಬಂದಿದ್ದ ನಾನು, ಪಾಟೀಲನ ಜತೆಗೆ 'ಸೌಂದರ್ಯೋಪಾಸನೆಯ' ಬಗ್ಗೆ ಚರ್ಚೆ ಮುಂದುವರಿಸುವುದು ಯುಕ್ತವಲ್ಲವೆಂದು ಬಗೆದು ಸುಮ್ಮನುಳಿದೆ. ನಾನು ಸುಮ್ಮನುಳಿದದ್ದು ಆತನಿಗೂ ಒಳ್ಳೆಯದೇ ಎನಿಸಿರಬೇಕು; ತನ್ನ ಖಿಮ್ಮನೆಯ ಕಾಯಕವನ್ನು ಆತ ಮುಂದುವರಿಸಿದ.

ಮಧ್ಯಾಹ್ನ ಊಟಕ್ಕೆ ಅದೇ ಹಜಾರದಲ್ಲಿ ಎಲೆ ಹಾಕಿದ್ದರು. ಒಂದು ಸಾಲಿನಲ್ಲಿ ಗಂಡಸರು ಮತ್ತು ಅವರ ಎದುರಿಗೆ ಮಹಿಳೆಯರ ಊಟದ ಸಾಲು. ಊಟದ ಪಂಕ್ತಿಯಲ್ಲಿ ಬ್ಯಾಂಕ್ ಮ್ಯಾನೇಜರ್ ಪೈ ರವರು ನನ್ನ ಪಕ್ಕದಲ್ಲಿದ್ದರು. ನಾನು ಮತ್ತು ಶ್ರೀಯುತ ಪೈ ಲೋಕಾಭಿರಾಮವಾಗಿ ಯಾವುದೋ ವಿಷಯ ಮಾತನಾಡುತ್ತಿದ್ದೆವು. ನಮ್ಮ ಹರಟೆಯ ನಡುವೆ ಶ್ರೀಯುತ ಪೈ ಒಮ್ಮೆಲೆ ನನ್ನ ಕಿವಿಯ ಬಳಿ ಬಾಯಿ ತಂದು ಪಿಸುಗುಟ್ಟಿದರು.



'ಅಲ್ಲಾ ಮಾರಾಯ್ರೆ, ನಮ್ಮೆದುರಿಗೆ ಕುಳಿತಾರಲ್ಲ; ಯಾರು ಅವರು? ನಿಮಗ್ಗೊತ್ತೇನು, ನಿಮ್ಕಡೆಯ ಜನ ಕಾಣ್ತಾರೆ....'

ನಾನು ಎದುರುಗಡೆಯ ಮಹಿಳೆಯರ ಸಾಲು ನಿರುಕಿಸಿದೆ. ಎದುರಿಗೇ ಪಾಟೀಲನ ಹೆಂಡತಿ. ಹದಿನೆಂಟು ಮೊಳದ ಇಳಕಲ್ ಸೀರೆ ಉಟ್ಟು ಶಹಾಪುರೀ ಖಣದ ಉದ್ದ ತೋಳಿನ ಜಂಪರ್ ತೊಟ್ಟು ಹಣೆಯ ಮೇಲೆ ಅಗಲವಾದ ಕುಂಕುಮದ ಬೊಟ್ಟಿಟ್ಟು ತಲೆ ತುಂಬ ಸೆರಗು ಹೊದ್ದಿದ್ದಳು. ಪೈಯವರಿಗೆ ಉತ್ತರಿಸುವ ಮೊದಲು ಅಕ್ಕಪಕ್ಕದಲ್ಲಿ ಕಣ್ಣು ಹೊರಳಿಸಿ ನೋಡಿದೆ, ಪಾಟೀಲ ಎಲ್ಲಿದಾನೆಂದು. ಆತ ಗಂಡಸರ ಸಾಲಿನ ಆ ತುದಿಗೆ ಕುಳಿತಿದ್ದ. ಆತನ ಎದುರಿಗೆ ಹೆಂಗಸರ ಸಾಲಿನಲ್ಲಿ ಶ್ರೀಮತಿ ಪೈಯವರಿದ್ದರು. ಪಾಟೀಲ ಬೇಕೆಂದೇ ಆ ತುದಿಯ ಜಾಗೆ ಪಟಕಾಯಿಸಿದ್ದಾನೆಂದು ನನಗನಿಸಿತು.

ಪುನಃ ಶ್ರೀ ಪೈ ತಮ್ಮ ಮುಖವನ್ನು ನನ್ನ ಕಿವಿಯ ಬಳಿ ತಂದು ಮೆಲ್ಲಗೆ ಉಸುರಿದರು,

'ನೀವು ಏನೇ ಹೇಳಿ ಕುಲಕರಣಿಯವರೇ, ಸೌಂದರ್ಯವೆಂಬುದು ಸರಳತೆಯಲ್ಲಿಯೇ ಶೋಭಿಸುತ್ತಿದೆ. ಅಲ್ಲಾ ಮಾರಾಯ್ರೆ, ಸೌಂದರ್ಯ ಪ್ರಸಾಧನಗಳಿಂದ ಇದ್ದ ರೂಪವನ್ನು ವಿದ್ರೂಪಗೊಳಿಸಿಕೊಳ್ಳುವುದನ್ನು ನನಗಂತೂ ನೋಡಲಾಗುವುದಿಲ್ಲ. ಅಹುದಲ್ವೋ ಮಾರಾಯ್ರೆ? ನೀವೇನಂತೀರಿ? ನೀವು ಇನ್ನೂ ಬ್ರಹ್ಮಚಾರಿಗಳು; ಬ್ರಹ್ಮಚಾರಿಗಳಿಗೆ ಸೌಂದರ್ಯಪ್ರಜ್ಞೆ ಜಾಸ್ತಿ, ಸದಾಕಾಲ ಅದೇ ನಿರೀಕ್ಷಣೆಯಲ್ಲಿರುವುದರಿಂದ ಹ ಹ್ಹ ಹ್ಹ' ನಗುತ್ತ ಕೇಳಿದರು. ನಾನು ಮನಸ್ಸಿನಲ್ಲಿಯೇ ಅಂದುಕೊಂಡೆ, ಅವಿವಾಹಿತರಿಗಿಂತ ಬಹುಶಃ ವಿವಾಹಿತರೇ ಇಂಥ 'ನಿರೀಕ್ಷಣೆ'ಯಲ್ಲಿ ಹೆಚ್ಚು ನಿರತರಾಗಿರುತ್ತಾರೆಂದು.

ಪೈಯವರ ಪ್ರಶ್ನೆಗೆ ನಾನೇನು ಉತ್ತರಿಸಲಿಲ್ಲ. ಅವರಿಗೆ ಅದರ ಅವಶ್ಯಕತೆಯೂ ಇರಲಿಲ್ಲ! ಅವರು 'ಸರಳತೆ'ಯಲ್ಲಿ ಹುದುಗಿದ್ದ ಸೌಂದರ್ಯ ನಿರೀಕ್ಷಿಸುತ್ತಿದ್ದರು. ಮತ್ತು ಅತ್ತ ಪಾಟೀಲ 'ಸೌಂದರ್ಯದಲ್ಲಿ ರಸಾಭಿಜ್ಞತೆ'ಯನ್ನು ಪರೀಕ್ಷಿಸುತ್ತಿದ್ದ. ನಾನು ಹಣೆಗೆ ಕೈ ತಟ್ಟಿಕೊಂಡು ಮನಸ್ಸಿನಲ್ಲಿಯೇ ಅಂದುಕೊಂಡೆ, 'ಏನಪ್ಪ ಬ್ರಹ್ಮದೇವಾ; ತೂಕಡಿಸುತ್ತ ದಂಪತಿಗಳ ಗಂಟು ಹಾಕ್ತಿಯೇನಪ್ಪಾ ಮಾರಾಯ, ಅವರವರ ಅಭಿರುಚಿಗನುಗುಣವಾಗಿ ಗಂಟು ಹಾಕಬಾರದೆ?' ಕೃಷ್ಣಮಂದಿರದಲ್ಲಿಯ ಶ್ರೀ ಕೃಷ್ಣನ ಪ್ರತಿಮೆ ಬಾಯಿಬಿಟ್ಟು ಹೇಳಿದಂತಾಯಿತು. 'ಅಲ್ವೋ ಬೆಪ್ಪಾ, ಬ್ರಹ್ಮ ಹೇಗೆ ಗಂಟು ಹಾಕಿದರೂ ಈ ಸ್ಥಿತಿ ತಪ್ಪಿದ್ದಲ್ಲ ಎಂಬುದು ನಿನಗೆ ಗೊತ್ತಿಲ್ವೆ?'

ನಾನು ಕೃಷ್ಣನ ಮೂರ್ತಿಯ ಕಡೆಗೆ ದೃಷ್ಟಿ ಬೀರಿದೆ, ಆತನ ಮೊಗದಲ್ಲಿ ತುಂಟನಗೆ ತುಳುಕುತ್ತಿತ್ತು. ■

---

## ಹಳೆಯ ಪುರಾಣದ ಹೊಸ ಹರಿಕತೆಯ ಹಿಂದೆ....!



ಕೆಲವೇ ತಿಂಗಳುಗಳ ಹಿಂದೆ ಅಂದರೆ, 'ಚನ್ನಪ್ಪ ಚನ್ನೇಗೌಡ, ಚಿತ್ರ ಮಾಡುವ ವೇಳೆ ಬಿ.ಸಿ. ಪಾಟೀಲ್ ಮತ್ತು ನಿರ್ದೇಶಕ ಆನಂದ್ ಪಿ. ರಾಜು ಭಾಯಿ ಭಾಯಿಯಾಗಿ 'ಬಾಯಿ' ಯಾಗಿದ್ದವರು. ಅದೇ ಸ್ನೇಹ 'ಮಾತಾಡ್ ಮಾತಾಡ್ ಮಲ್ಲಿಗೆ' ಚಿತ್ರ ಮಾಡಲು ಪ್ರೇರಣೆ ನೀಡಿತು.

'ಚನ್ನಪ್ಪಚನ್ನೇಗೌಡ' ಚಿತ್ರ ರಿಲೀಜ್ ಆಗಿ ಯಶಸ್ವಿ ಚಿತ್ರವೆಂಬ ಗುಂಗಿನಲ್ಲಿ ಸಿಟಿ ಇನ್‌ಸ್ಟಿಟ್ಯೂಟ್‌ಗೆ ಪತ್ರಕರ್ತರನ್ನು ಕರೆಸಿ ದೊಡ್ಡದಾಗಿ ಗುಂಡು ಪಾರ್ಟಿ ಏರ್ಪಡಿಸಿದ ಪಾಟೀಲರು 'ಆನಂದ್ ಪಿ. ರಾಜು ಬೆಸ್ಟ್ ನಿರ್ದೇಶಕರು' ಎಂಬ ಶಭಾಷ್‌ಗಿರಿ ಕೊಟ್ಟರು. ಕುಡಿದ ಅಮಲಿನಲ್ಲಿ ತೂಗಾಡುತ್ತಿದ್ದ ಆನಂದ್ ಪಿ. ರಾಜು 'ಪಾಟೀಲರ ಲಂಕೇಶ್ ಚಿತ್ರಕ್ಕೆ ಅವರೇ ಹೀರೋ...! ನಾನೇ ನಿರ್ದೇಶಕ' ಎಂದು ಬಿಟ್ಟರು.

ಇದಕ್ಕೂ ಹಿಂದೆ 'ಲಂಕೇಶ್' ಚಿತ್ರವನ್ನು ಎಸ್.ಮಹೇಂದ್ರ ನಿರ್ದೇಶಿಸುತ್ತಾರೆಂದು ಪಾಟೀಲರೇ ಹೇಳಿದ್ದರು. 'ಚನ್ನಪ್ಪ ಚನ್ನೇಗೌಡ' ಗೋತಾ ಹೊಡೆಯಿತು. ಇಬ್ಬರಿಗೂ ನಿಶೆ ಇಳಿದಿದೆ. ಆನಂದ್ ಪಿ. ರಾಜು ನನ್ನ ನಿರ್ದೇಶಕನಲ್ಲ ಅಂತಿದ್ದಾರೆ ಬಿ.ಸಿ. ಪಾಟೀಲರು. ಲಂಕೇಶ್ ಚಿತ್ರಕ್ಕೆ ಮಹೇಂದ್ರ ನಿರ್ದೇಶಕರು ಎಂದು ಹೇಳುತ್ತ ಆನಂದ್‌ರವರಿಗೆ ಅಶಾಂತಿ ಉಂಟು ಮಾಡುತ್ತಿದ್ದಾಗ, 'ದಯವಿಟ್ಟು ಹಳೆಯದನ್ನು ಕೆದಕಬೇಡಿ' ಎಂದು ಆನಂದ್ ಪಿ.ರಾಜು ಗುನುಗುತ್ತಿದ್ದಾರೆ.

---

## ಚಪ್ಪಲಿಸೇವೆ?

ಹೊಸ ಕಾದಂಬರಿಯ ಬಿಡುಗಡೆ ಸಮಾರಂಭ ನಡೆದು ಗುಂಡು ಹಾಕಲು ಕುಳಿತಾಗ ಸ್ನೇಹಿತರೊಬ್ಬರು ಈ ಕಾದಂಬರಿಗೆ ಮುನ್ನುಡಿ ಬರೆದಿದ್ದ ವಿಮರ್ಶಕರನ್ನು ಕೇಳಿದರು : ''ಏನು ಈ ಕಾದಂಬರೀನ ಅಷ್ಟೊಂದು ಹೊಗಳಿದೀಯ. ಅಷ್ಟೊಂದು ಚೆನ್ನಾಗಿದೆಯಾ?'' ಇದಕ್ಕೆ ವಿಮರ್ಶಕ ಹೇಳಿದ; ''ಕೆಟ್ಟ ಕಾದಂಬರಿ, ಒಂದಿಷ್ಟು ಬೂಸಿ ಬಿಟ್ಟು ಬರೆದೆ!''

''ಬರೆಯದೊಂದು, ಹೇಳದೊಂದು ಬಡ್ಡಿಮಗನೆ!'' ಎಂದ ಸ್ನೇಹಿತರು ವಿಮರ್ಶಕನಿಗೆ ಚಪ್ಪಲಿ ಸೇವೆ ಮಾಡಿದರು.

# ಕಾಯ ನಿರ್ಭಯ

ಭಾರತದ ಗಡಿಯ ಕೊನೆಹಳ್ಳಿ, ಸಂಜೆಯ ಹೊತ್ತು,
ಪಾಳಯದಿ ಸಿಕಂದರನ ಶತಪಥ ನಡೆದಿತ್ತು,
ದೋಚಿ ತಂದಿಹನೆನಿತೊ ಈ ನಾಡ ಸಂಪತ್ತು,
ಎಲ್ಲ ಸಮ್ಮುಖದಲ್ಲಿ ನಿಧಿಗೊಂಡು ಬಿದ್ದಿತ್ತು;
ಆದರೇನೊಂದು ಅರೆಕೊರತೆಯದೊ ಕಾಡುತಿದೆ
ಮನ ಸೆಳೆವ ಯತಿವೇಷಿಯೊಬ್ಬನನು ತರಲಿಲ್ಲ!
ಚೀರವಲ್ಕಲ ಉಟ್ಟು ಕೂದಲನು ಜಟೆಗಟ್ಟಿ
ಮೈಗೆ ಬೂದಿಯ ಬಡಿದು ಕ್ರೂರ ಕಾನನದಲ್ಲಿ
ಹಗಲಿರುಳು ಧ್ಯಾನಿಸುವುದೇನವರು ಮನದಲ್ಲಿ?
ಯಾರನೂ ಕಾಡದಲೆ ಕಂದಮೂಲವ ತಿಂದು
ಏಕಿಂತು ಏಕಾಂತ ವಾಸದೊಳು ಹುದುಗುವರು?
ಸಕಲ ಸುಖ ಸಂಪತ್ತನಣಕಿಸುವರಿವರೆಂತೊ?
ಚಿಂತಿಸುತಲಿಂತವನು ಮಿಕ್ಕುದೆಲ್ಲವ ಮರೆತು
ಸೈನಿಕರ ಕಳುಹಿಹನು ಯತಿಗಳನು ಹಿಡಿತರಲು;
ಮರುದಿನವೆ ಯೋಧಜನ ಬಂದು ಮುಜರೆಯ ಮಾಡಿ
ಅರಿಕೆ ಮಾಡಿದರಿಂತು - ''ದಿಗ್ವಿಜಯಿ, ಸಾಮ್ರಾಟ,
ನೆರೆಯ ಕಾನನದಲ್ಲಿ ತಪನಿರತ ಋಷಿ ಇಹನು,
ಹೆಸರು ದಂಡನಿಯೆಂದು, ದಿವ್ಯ ತೇಜೋ ಮೂರ್ತಿ;
ತಮ್ಮಾಣತಿಯ ತಿಳುಹಿ ಬರ ಹೇಳಿದೆವು ನಾವು,
ರಾಜೋಪಚಾರ ಕಾದಿದೆಯೆಂದು, ಉಂಡುಟ್ಟು
ಮಾನಿನೀ ಸಂಗಸುಖ ಸವಿಯ ಬಾ ನೀನೆಂದು
ಕಾಡಿದೆವು, ಏನೆಂಥ ಆಮಿಷಕು ಮನ ಸೋಲಲಿಲ್ಲ!''
'ಬಿತ್ತರದ ಬಾನಲ್ಲಿ ವಿಹರಿಸುವ ಖಗರಾಜ
ಪಂಜರದ ಗಿಳಿಯಲ್ಲ - ನನಗಾರ ಹಂಗಿಲ್ಲ;
ಬರಲಾರೆ'ನೆಂದುದನು ಹೇಳಿದರು ವಿಸ್ತರಿಸಿ,
ಕೇಳಿ ಅಚ್ಚರಿಗೊಂಡು ಬೆವರೊಡೆದ ಗ್ರೀಕಧೊರೆ,
ಕುದಿದು ಕಿಡಿಕಿಡಿಯಾದ ''ಪ್ರತ್ಯಕ್ಷ ಅಪಮಾನ....
ಬೇವಾರ್ಸಿ ಮುದಿಗೂಬೆಗೆಂಥ ಸೊಕ್ಕಿಹುದಲ್ಲ!''
ಗರ್ಜಿಸಿದ ಇರುಳೆಲ್ಲ ಕಡಿಕಡಿದು ಹಲ್ಲ

ಚುಮು ಚುಮಿಸಿ ಬೆಳಗಾಗುತಿರುವಂತೆ ಧಾವಿಸುತ
ನೆರೆಯ ಕಾನನ ಹೊಕ್ಕ ಖಡ್ಗವನು ಝಳಪಿಸುತ;
ವಿಹಗ ಕಾಕಲಿ ನಿನದ ಸುತ್ತ ಹತ್ತೂ ಕಡೆಗೆ,
ಕುಸುಮಸ್ತವಕದ ಗಂಧ ಮಂದಾನಿಲದ ತುಂಬ,
ಹಚ್ಚ ಹಸುರಿನ ಮಡಿಲ ಮರೆಯಿಂದ ಹರಿಯುತಿದೆ
ಮೈದುಂಬಿ ಕಿರುತೊರೆಯು; ತೀರದೊಳು ದಂಡನಿಯು
ನಿಂದಿಹನು ಪೂರ್ವಾಭಿಮುಖಿಯಾಗಿ ಧ್ಯಾನದೊಳು;
ಮುಗಿದ ಕೈ, ಬತ್ತಲದ ಮೈ ಭಸ್ಮ ಭೂಷಿತವು!
ಕೂರಸಿಯ ಮೇಲೆತ್ತಿ ಹುಡುಕುತಲ್ಲಿಗೆ ಬಂದು
ಅರಸ ನಿಬ್ಬೆರಗಾದ - ಎಂಥ ದಿವ್ಯಾಕೃತಿಯು!
ಅಮರ ತೇಜಃ ಪುಂಜ! ಪಾರದರ್ಶಕ ಒಳಗು!
ಜಗವ ಮಣಿಸುವ ಭಾವ-ಶಾಂತ ಮುಖ ಮಂಡಲದಿ;
ಕುಪಿತನೃಪ ಗರುಡಗೆರೆ ಕಂಡ ನಾಗರನಾದ;
ನಸುಧೈರ್ಯ ಮಾಡುತವನೆಂದ ''ಎಲೆ ಯೋಗಿವರ,
ಎದ್ದು ಬಾರೆಲೊ ಹೊರಟು ಇಲ್ಲದಿರೆ ಸಿರವ ತರಿವೆ'';
ಹುಸಿ ನಗುತ ಋಷಿ ನುಡಿದ ''ಕೊಲ್ಲ ಬಂದಿಹೆ ನೀನು,
ನಾಬಲ್ಲೆ ಶತಮೂರ್ಖ, ದೇಹ ಭಯ ನನಗಿಲ್ಲ,
ಎಂದೊ ಬಿಟ್ಟಿಹೆನದನು - ಭವವಳಿದ ನಿರ್ದೇಹಿ;
ಅವಿನಾಶಿ ಜೀವಾತ್ಮ, ಹೊರಗೆಳೆದದನು ಕೊಂದ
ರಣಶೂರರುಂಟೇನು ಕಲಿಯೊಳಗೆ? ಬೇಡವೈ



ಹುಡುಗಾಟ ಒರೆಯೊಳಿರಿಸೆಲೊ ನಿನ್ನ ಖಡ್ಗ!''
ಬೆಚ್ಚಿದನು ಮಹರಾಜ ಋಷಿಯ ವಾಣಿಯ ಕೇಳಿ,
ಜೀವನದಿ ಮೊದಲ ಸಲ ಅನ್ಯರಾದೇಶವನು
ಪಾಲಿಸಿದ ಗ್ರೀಕಧೊರೆ ಇಳುಹುತ್ತ ಖಡ್ಗವನು!
''ಎಂಥ ತನುಕಾಂತಿ ಇದು, ದೇದೀಪ್ಯ ವ್ಯಕ್ತಿತ್ವ!
ಮುನಿಪನಿವನಿಗೆ ಜಗವೆ ಶಿರಬಾಗಿಸಲೆ ಬೇಕು.
ನಾನೇತರವನು ಈ ವೃದ್ಧ ಋಷಿ ಸಮ್ಮುಖದಿ!''
ಅಲೆಗ್ಸಾಂಡರ ನಮಿಸಿ ಹಿಂದಿರುಗಿದನು ತನ್ನ
ಪಾಳೆಯಕೆ; ಹೇಳಿದನು ಸಕಲ ಪರಿಜನ ನೆರಹಿ
''ಸಾವಭಯವಿನಿತಿರದ ವ್ಯಕ್ತಿಗೇನನು ನಾನು
ಮಾಡಬಲ್ಲೆನು! ಸೋತೆ; ನಿರ್ಭಯಕೆ ಸೋಲಿಲ್ಲ;
ಕೊಲ್ಲ ಬಲ್ಲೆನು ನಾನು ಸಮರ ಶೂರರನೆಲ್ಲ
ತರಿಯಬಲ್ಲೆನೆ ಇಂಥ ಕಾಯ ನಿರ್ಭಯನನ್ನು!
ಹುಚ್ಚುತನವಿದು ಸಾಕು ಮ್ಯಾಸಿಡೋನಿಯಾದ
ಹಾದಿ ಹಿಡಿಯೋಣ ಬನ್ನಿ ಇನ್ನು''.

■ ಮುದೇನೂರ ಸಂಗಣ್ಣ, ಚಿಗಟೇರಿ

# ಈ ಶತಮಾನದ ವಿಜ್ಞಾನ

(14ನೇ ಪುಟದಿಂದ)

ಇಂದು ಶತಮಾನದಂಚಿನಲ್ಲಿ, ವಿಮಾನದಂತೆ ವೇಗವಾಗಿ ಹಾರಬಲ್ಲ, ಹೆಲಿಕಾಪ್ಟರಿನಂತೆ ಎಲ್ಲಿಂದ ಬೇಕಾದರೂ ನೇರವಾಗಿ ಆಕಾಶಕ್ಕೆ ಜಗಿಯಬಲ್ಲ 'ಟಿಲ್ಟ್ ರೋಟರ್ ವಿಮಾನ'ಗಳೂ ಹೊರಬಿದ್ದು, ವಾಯುಯಾನದಲ್ಲಿ ಕ್ರಾಂತಿ ತಂದಿವೆ.

**ದೂರಸಂಪರ್ಕ :** ಹತ್ತೊಂಭತ್ತನೇ ಶತಮಾನ, ದೂರಸಂಪರ್ಕಕ್ಕೆ ಅಂಚೆಯೊಂದೇ ಇದ್ದ ಸಮಯದಲ್ಲಿ ವಿದ್ಯುತ್ತಿನ ಆವಿಷ್ಕಾರವಾಗಿ, ದೂರಸಂಪರ್ಕದ ಅದ್ಭುತ ಸಾಧ್ಯತೆಗಳು ಹೊರಬಿದ್ದವು. 1835ರಲ್ಲಿ ಸ್ಯಾಮ್ಯುಯಲ್ ಮೋರ್ಸ್ ಕಂಡು ಹಿಡಿದ ದೂರಲಿಪಿ, ದೂರಕ್ಕೆ ಸಂಕೇತಗಳನ್ನು ಕಳುಹಿಸುವ ಸಾಧ್ಯತೆ ತಂದಿತು. 1876ರಲ್ಲಿ ಗ್ರಾಹಂ ಬೆಲ್ ಕಂಡು ಹಿಡಿದ ದೂರವಾಣಿ ಎರಡು ಕೋಣೆಯ ಅಂತರಕ್ಕೆ ನಮ್ಮ ಸ್ವರವನ್ನು ರವಾನಿಸಬಲ್ಲದಾಗಿತ್ತು. ಈ ಶತಮಾನದ ಆದಿಯಲ್ಲಿ ದೂರವಾಣಿ ಅಗಾಧ ದೂರವನ್ನೇನೂ ಕ್ರಮಿಸಿರಲಿಲ್ಲ. ಆದರೆ ಈ ಶತಮಾನದ ಮಧ್ಯಭಾಗಕ್ಕೆ ದೂರವಾಣಿ ಖಂಡಾಂತರಗಳನ್ನು ಸೇರ್ಪಡಿಸಿತು. ಇಂದು ಜಗತ್ತಿನ ಈ ಮೂಲೆಯಿಂದ ಆ ಮೂಲೆಗೆ ಕ್ಷಣದಲ್ಲಿ ಗುಂಡಿ ಒತ್ತಿ ಸಂಭಾಷಿಸಬಹುದು. ದೂರವಾಣಿ ತಂತಿಯ ಹಂಗು ತೊರೆದು 'ಕಾರ್ಡ್‌ಲೆಸ್' ಹಿಡಿದು, ನಿಮ್ಮ ಉದ್ಯಾನದಲ್ಲಿ ಅಡ್ಡಾಡುತ್ತಾ ಮಾತನಾಡಬಹುದು. ನೀವು ಎಲ್ಲೇ ಇರಿ, ದೂರವಾಣಿ ಬೂತ್ ಹುಡುಕಿ ಹೋಗುವ ಅಗತ್ಯವಿಲ್ಲದೆ, ನಿಮ್ಮೊಡನೆ ಸದಾ ದೂರವಾಣಿಯನ್ನು ಹೊತ್ತೊಯ್ದು, ಎಲ್ಲಿಂದ ಬೇಕಾದರೂ ದೂರವಾಣಿ ಕರೆ ಮಾಡಬಹುದಾದ ಸಾಧ್ಯತೆಯನ್ನು, ಸೆಲ್ಯುಲರ್ ದೂರವಾಣಿ ತಂದಿದೆ. ಜೇಬಿನಲ್ಲಿ ಹಿಡಿಯುವ ಸೆಲ್ಯುಲರ್ ಕೂಡಾ ದೊಡ್ಡದೆಂಬಂತೆ, ಡೈಯಲ್ ಮಾಡುವುದೂ ಪ್ರಯಾಸವೆಂಬಂತೆ, ಸಂಖ್ಯೆಗಳನ್ನು ಹೇಳಿದರೆ ಸಾಕು ನಿಮ್ಮ ಸ್ವರವನ್ನು ಗುರುತಿಸಿ ಡೈಯಲ್ ಮಾಡಿಕೊಳ್ಳುವ, ಮಣಿಕಟ್ಟಿನ ಮೇಲೆ ಗಡಿಯಾರದಂತೆ ಕಟ್ಟಬಲ್ಲ ಪುಟ್ಟ ಸೆಲ್ಯುಲರ್‌ಗಳೂ ಬಂದಿವೆ.

ವಿಜ್ಞಾನದ ಅತ್ಯದ್ಭುತ ಆವಿಷ್ಕಾರ ದೂರವಾಣಿ. 'ದೂರ'ಕ್ಕೆ ಸಂಪರ್ಕಿಸುವ ಸಾಧ್ಯತೆಯನ್ನು ತಂದುಕೊಟ್ಟ ಅದ್ಭುತ ಸಲಕರಣೆ ದೂರವಾಣಿ. ಮೊದಲಿಗೆ ನಮ್ಮ ದನಿಯನ್ನಷ್ಟೇ ದೂರಕ್ಕೆ ಹೊತ್ತೊಯ್ದ ದೂರವಾಣಿ, ಈ ಶತಮಾನದಲ್ಲಿ ಕಂಪ್ಯೂಟರುಗಳಿಗೆ ಜೋಡಿಸಲ್ಪಟ್ಟು ದೂರಕ್ಕೆ ಮಾಹಿತಿ, ದೃಶ್ಯ, ಶಬ್ದಗಳನ್ನು ಹೊತ್ತೊಯ್ಯಬಲ್ಲದಾಯಿತು. ಭೂಮಿಯ ಒಂದು ಭಾಗದ ದೂರವಾಣಿಗಳನ್ನು, ಕಂಪ್ಯೂಟರುಗಳನ್ನು ಮತ್ಯಾವುದೇ ಭಾಗದ ದೂರವಾಣಿ, ಕಂಪ್ಯೂಟರುಗಳಿಗೆ ಜೋಡಿಸಿ, ಮಾಹಿತಿ, ವಿಡಿಯೋ, ಆಡಿಯೋ ಕಳುಹಿಸುವ ಸಾಧ್ಯತೆಯನ್ನು ಈ ಶತಮಾನದಲ್ಲಿ ಆಕಾಶಕ್ಕೆ ಉಡಾಯಿಸಿದ ಕೃತಕ ಉಪಗ್ರಹಗಳು ತಂದುಕೊಟ್ಟವು.

ದೂರದರ್ಶನದ ವಿಚಾರವೂ ಹತ್ತೊಂಭತ್ತನೇ ಶತಮಾನದಲ್ಲಿಯೇ ಉಗಮವಾದರೂ, ದೂರದರ್ಶನ ವಾಸ್ತವದ ಸಾಧ್ಯತೆಯಾದದ್ದು ಇಪ್ಪತ್ತನೇ ಶತಮಾನದಲ್ಲಿ. 1950ರ ದಶಕದಲ್ಲಿ ದೂರದರ್ಶನ ಜನಪ್ರಿಯವಾಗಿ, ಇಂದು ನಮ್ಮೆಲ್ಲರ ಬದುಕು, ಚಿಂತನೆಯನ್ನು ವಿಪರೀತವಾಗಿ ಪ್ರಭಾವಿಸುವ ಪ್ರಮುಖ ಮಾಧ್ಯಮವಾಗಿದೆ. ಮೊಟ್ಟ ಮೊದಲ ಪ್ರಾಯೋಗಿಕ ದೂರದರ್ಶನ ಈ ಶತಮಾನದ ಇಪ್ಪತ್ತರ ದಶಕದಲ್ಲಿ ಬ್ರಿಟನ್ನಿನ ಜಾನ್ ಬೆಯರ್ಡ್ ಪ್ರದರ್ಶಿಸಿದ 'ಟೆಲಿವೈಸರ್' ಆಗಿತ್ತು. ವರ್ಣ ದೂರದರ್ಶನವೇ ಅದ್ಭುತವೆನಿಸಿದ್ದಾಗ, ಕುಳಿತಲ್ಲಿಂದ ಗುಂಡಿ ಒತ್ತಿ ಚಾನೆಲ್ ಬದಲಿಸುವಾಗ, ಇಂದು ಶತಮಾನದಂಚಿನಲ್ಲಿ, ಡಿಜಿಟಲ್ ದೂರದರ್ಶನಗಳು ದಾಳಿ ಇಟ್ಟಿವೆ. ಡಿಜಿಟಲ್ ಟಿವಿ, ದೂರದರ್ಶನ ಮತ್ತು ಕಂಪ್ಯೂಟರನ್ನು ಒಂದಕ್ಕೊಂದು ತಗುಲಿ ಹಾಕಿ ಹೊಚ್ಚ ಹೊಸ ಸಾಧ್ಯತೆಗಳನ್ನು ತಂದಿದೆ. ಭಾರೀ ಗಾತ್ರದಲ್ಲಿ ಸ್ಟ್ಯಾಂಡ್ ಮೇಲೆ ಕುಳಿತಿರುವ ನಮ್ಮ ಮನೆಗಳ 21 ಅಂಗುಲದ ಟಿವಿಗೆ ಬದಲಾಗಿ, 41, 60 ಅಂಗುಲವಿದ್ದೂ, ಗೋಡೆಗೆ ತೂಗು ಹಾಕುವಷ್ಟು ಚಪ್ಪಟೆಯಾದ ದೂರದರ್ಶನಗಳೂ ಬಂದಿವೆ. ಹಾಗೆಯೇ ಅತಿ ಸಣ್ಣದಾದ, ಅಂಗೈಯಲ್ಲಿ ಹಿಡಿಯುವಷ್ಟು ಗಾತ್ರದ ದೂರದರ್ಶನಗಳೂ ಇಂದು ದೊರೆಯುತ್ತವೆ.

**ಬೆಂಗಳೂರಿನಲ್ಲಿ ಕುಳಿತವರಿಗೆ ಪ್ಯಾರೀಸಿನ ಮೋನಾಲೀಸಾಳನ್ನು ತೋರಿಸುವ ಕಂಪ್ಯೂಟರ್! :** ಈ ಶತಮಾನದ ಪೂರ್ವಾರ್ಧದಲ್ಲಿ ನಿರ್ಮಿತವಾದ ಮೊಟ್ಟ ಮೊದಲ ಎಲೆಕ್ಟ್ರಾನಿಕ್ ಕಂಪ್ಯೂಟರ್ 'ಎನಿಯಾಕ್' 15,000 ಚದರ ಅಡಿ ನೆಲವನ್ನು ಆವರಿಸಿ, 30 ಟನ್ ತೂಗಿತ್ತು. ಇಂದು ಇಪ್ಪತ್ತನೇ ಶತಮಾನದ ಅಂಚಿಗೆ ಬರುತ್ತಿರುವಂತೆ, ಕಂಪ್ಯೂಟರ್ ಸಾಮರ್ಥ್ಯದಲ್ಲಿ ಅಗಾಧವಾಗಿ ಹಿಗ್ಗಿ, ಆಕಾರದಲ್ಲಿ ತೊಡೆಯ ಮೇಲೆ ಕೂರುವಷ್ಟು ಚಿಕ್ಕದಾಗಿ 'ಲ್ಯಾಪ್ ಟಾಪ್' ಆಗಿದೆ. ಕೈಯಲ್ಲಿ ಹಿಡಿದು ಅಡ್ಡಾಡುವಂತೆ ನೋಟ್‌ಬುಕ್ ಅಳತೆಗೆ, ಅಂಗೈಯಲ್ಲಿ ಹಿಡಿಯಬಲ್ಲ 'ಪಾಮ್ ಟಾಪ್' ಅಳತೆಗೂ ಕುಗ್ಗಿರುವ ಕಂಪ್ಯೂಟರ್ ಇದೀಗ ಕೈಗಡಿಯಾರದಂತೆ ಮುಂಗೈಮಣಿಕಟ್ಟ ಮೇಲೆ ಕೂರುವಷ್ಟು ಪುಟ್ಟದಾಗಿದೆ!

ಕಂಪ್ಯೂಟರುಗಳು ಒಂದೊಂದೂ ಬೇರೆ ಬೇರೆಯಾಗಿ ತಮ್ಮಷ್ಟಕ್ಕೆ ತಾವು ಮೇಜಿನ ಮೇಲೆ ಕುಳಿತ ಕಾಲದಲ್ಲಿ ಕಂಪ್ಯೂಟರಿನಿಂದ ಜನಸಾಮಾನ್ಯರು ಮಾಡುವಂಥ ಅಗಾಧ ಕೆಲಸಗಳಿರಲಿಲ್ಲ. ಆದರೆ ಇಂದು ಕಂಪ್ಯೂಟರುಗಳು, ದೂರವಾಣಿ ತಂತಿಗಳೊಡನೆ ಬೆಸೆದುಕೊಂಡು, ಹೊಸ ಸಂಪರ್ಕ ಸಾಧನವಾಗಿ ಇಂಟರ್ನೆಟ್ ಮೂಲಕ ಇಡೀ ಜಗತ್ತಿನೊಡನೆ ನಮ್ಮನ್ನು ಸೇರ್ಪಡಿಸಿವೆ. ಇಂದು 'ಇಂಟರ್ನೆಟ್' ಸಹಾಯದಿಂದ ನೀವು ಸಾವಿರಾರು ಮೈಲಿಯಾಚಿನ ಯಾರೊಡನೆಯೂ ಹರಟೆ ಹೊಡೆಯಬಲ್ಲಿರಿ, ಅವರೊಡನೆ ವಿಡಿಯೋ ಆಟ ಆಡಬಲ್ಲಿರಿ, ಜಗತ್ತಿನ ಶ್ರೇಷ್ಠ ಗ್ರಂಥಾಲಯಗಳಿಂದ ಮಾಹಿತಿ ಪಡೆಯಬಲ್ಲಿರಿ, ಪುರಾತನ ಪತ್ರಾಗಾರಗಳನ್ನು ಶೋಧಿಸಬಲ್ಲಿರಿ, ಹೆಚ್ಚಿನ ವಿದ್ಯಾಭ್ಯಾಸಕ್ಕೆ ಜಗತ್ತಿನ ಪ್ರಮುಖ ವಿಶ್ವವಿದ್ಯಾಲಯಗಳಿಂದ ಮಾಹಿತಿ ಪಡೆಯಬಲ್ಲಿರಿ, ಬೆಂಗಳೂರಿನಲ್ಲಿ ಕುಳಿತಂತೆ ಪ್ಯಾರೀಸ್‌ನ ಲೋರ್ ಸಂಗ್ರಹಾಲಯದಲ್ಲಿಯ 'ಮೋನಾಲೀಸಾ'ಳನ್ನು ನೋಡಬಲ್ಲಿರಿ, ಅಮೆರಿಕೆಯ ಬೃಹತ್ ಪುಸ್ತಕದಂಗಡಿಯಲ್ಲಿ ನಿಮಗೆ ಬೇಕಾದ ಪುಸ್ತಕ ಕೊಳ್ಳಬಲ್ಲಿರಿ, ನೂರಾರು ರೇಡಿಯೋಗಳಲ್ಲಿ ಹಾಡು ಕೇಳಬಲ್ಲಿರಿ, ನೂರಾರು ದೂರದರ್ಶನಗಳ ಕಾರ್ಯಕ್ರಮಗಳನ್ನು ಆಯ್ದು ವೀಕ್ಷಿಸಬಲ್ಲಿರಿ, ಎಲೆಕ್ಟ್ರಾನಿಕ್ ಅಂಚೆಯನ್ನು ಕ್ಷಣದಲ್ಲಿ ಕಳುಹಿಸಬಲ್ಲಿರಿ.... ಇವು ಸಂಪರ್ಕ ಸಾಧನದೊಡನೆ ಜೊತೆಗೂಡಿದ ಕಂಪ್ಯೂಟರಿನ ಅಸಂಖ್ಯಾತ ಸಾಧ್ಯತೆಗಳಲ್ಲಿ ಕೆಲವು ಮಾತ್ರ.

ಕಂಪ್ಯೂಟರ್, ದೂರಸಂಪರ್ಕ ಮಾಧ್ಯಮ ತಂತ್ರಜ್ಞಾನದೊಡನೆ ಜೋಡಣೆಯಾಗಿ ನಮ್ಮ ಬದುಕಿನಲ್ಲಿ, ಜೀವನ ವಿಧಾನದಲ್ಲಿ ಅಗಾಧ ಬದಲಾವಣೆಯನ್ನು ತರುತ್ತಿದೆ. ಕಂಪ್ಯೂಟರ್ ಹಾಗೂ ದೂರ ಸಂಪರ್ಕ ಮಾಧ್ಯಮಗಳು ಅಭಿವೃದ್ಧಿಗೊಂಡಂತೆ, 'ಕೆಲಸ', 'ಉದ್ಯೋಗ'ದ

---

### ಕುರುಹು

ಹೆಮ್ಮರದ ಮುಖವನ್ನು
ಒಂದುಸಣ್ಣ ಎಲೆ
ತೋರುವುದು
ಒಂದು ದೇಹದ
ಬಿಗುಮಾನದ ಒಲವನ್ನು
ಒಂದು ಮಿಂಚಿನ
ಕಣ್‌ಸಂಜ್ಞೆ ನೀಡುವುದು

■ ಜರಗನಹಳ್ಳಿ ಶಿವಶಂಕರ್

---

ವಿಚಾರಗಳೇ ತೀವ್ರವಾಗಿ ಬದಲಾಗಲಿವೆ. ಇಂದು ಎಷ್ಟೋ ಮಂದಿ 'ಉದ್ಯೋಗಸ್ಥರು' ಕಛೇರಿಗಳಿಗೆ ಹೋಗದೆ, ಮನೆಯಿಂದಲೇ ಕೆಲಸ ಮಾಡುತ್ತಿದ್ದಾರೆ. ದೂರವಾಣಿ ಮೂಲಕ ಇವರ ಮನೆಯಲ್ಲಿನ ಕಂಪ್ಯೂಟರಿಗೆ ಸಂಪರ್ಕ ಏರ್ಪಡಿಸಲಾಗಿದೆ. ಇದನ್ನು 'ಟೆಲಿಕಮ್ಯೂಟಿಂಗ್' ಎನ್ನುತ್ತಾರೆ. ಭಾರೀ ವೇಗದಲ್ಲಿ ಭಾರೀ ಮಾಹಿತಿಯನ್ನು ರವಾನಿಸಬಲ್ಲ ಸಂಪರ್ಕ ವ್ಯವಸ್ಥೆಗಳು ಹಾಗೂ ಕಂಪ್ಯೂಟರುಗಳು ಸಾಮಾನ್ಯವಾದಂತೆ, ಕಛೇರಿಗಳಿಗೆ ಹೋಗಿ ಕೆಲಸ ಮಾಡುವ ಅಗತ್ಯವೇ ಉಳಿಯುವುದಿಲ್ಲ.

**ರೋಬಾಟಿಕ್ಸ್ :** ಯಂತ್ರಮಾನವನ ಕಲ್ಪನೆ ಹೊಸದೇನಲ್ಲ. ಆದರೆ 'ರೋಬಾಟ್' ವಾಸ್ತವದ ರೂಪ ಪಡೆದದ್ದು ಈ ಶತಮಾನದಲ್ಲಿ. ಈ ಶತಮಾನದಲ್ಲಿ ವಿಜ್ಞಾನಿಗಳು ಯಂತ್ರಮಾನವನಿಗೆ ಪಂಚೇಂದ್ರಿಯಗಳನ್ನು ನೀಡಲು ಮುಂದಾದರು. ಇಂದಿನ ರೋಬಾಟ್‌ಗಳಿಗೆ ದುಡಿಯುವ ಕೈಗಳಿವೆ, ನಡೆದಾಡಲು ಗಾಲಿಗಳಿವೆ, ನೋಡಲು ದೂರದರ್ಶನ ಕ್ಯಾಮರಾ ಕಣ್ಣುಗಳಿವೆ, ಕೇಳಲು 'ಸೋನಾರಿ'ನ ಕಿವಿಗಳಿವೆ, ಸ್ಪರ್ಶಾನುಭವಕ್ಕೆ ಸಂವೇದನಾವಾಹಕಗಳಿವೆ, ಎಲ್ಲಕ್ಕಿಂತ ಮಿಗಿಲಾಗಿ ಕಂಪ್ಯೂಟರಿನ ಮಿದುಳಿದೆ.

ಕಂಪ್ಯೂಟರಿನಿಂದ ನಿಯಂತ್ರಿಸಲ್ಪಟ್ಟ ರೋಬಾಟುಗಳು ಇಂದು ಕಾರ್ಖಾನೆಗಳಲ್ಲಿ ಸಾಮಾನ್ಯವಾಗಿವೆ. ವೈದ್ಯರಂಗದಲ್ಲಿ ಮನುಷ್ಯನ ಸೂಕ್ಷ್ಮ ಅವಯವದೊಳ ಹೊಕ್ಕು ಅತಿ ನಾಜೂಕಾದ ಶಸ್ತ್ರ ಚಿಕಿತ್ಸೆ ಮಾಡುವ ರೋಬಾಟ್‌ಗಳು ವಾಸ್ತವವಾಗುತ್ತಿವೆ. ಸಮುದ್ರದಾಳದ ಶೋಧನೆಗೆ ದೂರನಿಯಂತ್ರಣ ರೋಬಾಟ್‌ಗಳನ್ನು ಬಳಸಲಾಗುತ್ತಿದೆ. ರೋಬಾಟ್ ಪೋಲೀಸು ಪಡೆಗೂ, ಯುದ್ಧರಂಗಕ್ಕೂ ಹೆಜ್ಜೆ ಇರಿಸಿದೆ. ಬಾಂಬ್ ಇದೆಯೆಂದು ಅನುಮಾನಿಸಿದ ಕಟ್ಟಡದೊಳಕ್ಕೆ ರೋಬಾಟ್ ನುಗ್ಗಿ, ಬಾಂಬ್ ಎತ್ತಿಕೊಂಡು ಅದು ಆಸ್ಫೋಟಿಸದಂತೆ ತಡೆಯಬಲ್ಲದು. ಚಾಲಕನಿಲ್ಲದ ಗೂಢಚಾರಿ ರೋಬಾಟ್ ವಿಮಾನಗಳು ಅನೇಕ ದೇಶಗಳ ಸೇನೆಯಲ್ಲಿ ಬಳಕೆಯಲ್ಲಿವೆ. ದೂರನಿಯಂತ್ರಿತ ರೋಬಾಟ್‌ಗಳು ಅಂತರಿಕ್ಷಕ್ಕೆ ಹಾರಿವೆ. ಮಂಗಳನ ಅಂಗಳದಲ್ಲಿ ಇಳಿದ ರೋಬಾಟ್ 'ಸೋಜರ್ನರ್' ಮಂಗಳ ಗ್ರಹದ ಕಲ್ಲುಗಳನ್ನು ಹೆಕ್ಕಿ ಪರೀಕ್ಷಿಸಿ, ಅಮೂಲ್ಯವಾದ ಮಾಹಿತಿಯನ್ನು ಭೂಮಿಗೆ ಕಳುಹಿಸಿಕೊಟ್ಟಿದೆ. ಕಂಪ್ಯೂಟರ್ ಮಿದುಳಿನ ರೋಬಾಟ್‌ಗಳಿಗೆ ಇಂದು 'ಕೃತಕ ಬುದ್ಧಿವಂತಿಕೆ'ಯನ್ನು ಅಳವಡಿಸುವ ಪ್ರಯತ್ನಗಳು ನಡೆಯುತ್ತಿವೆ.

**ವೈದ್ಯರಂಗ :** ಹತ್ತೊಂಭತ್ತನೇ ಶತಮಾನದ ಕಡೆಯ ಭಾಗದಲ್ಲಿ ರಾಂಟ್ಜನ್ ಕಂಡು ಹಿಡಿದ ಕ್ಷ-ಕಿರಣ, ಶಸ್ತ್ರಚಿಕಿತ್ಸೆಯಿಲ್ಲದೆ ದೇಹದೊಳಗೆ ಇಣುಕುವ ಸಾಧ್ಯತೆಯನ್ನು ತಂದಿದ್ದರೂ, ಅದರ ಪೂರ್ಣ ಅಳವಡಿಕೆ ಸಾಧ್ಯವಾದದ್ದು ಈ ಶತಮಾನದ ಪೂರ್ವಾರ್ಧದಲ್ಲಿ. ಈ ಶತಮಾನದುದ್ದಕ್ಕೂ ವೈದ್ಯರಂಗದಲ್ಲಿ ಅದ್ಭುತ ಸಾಧನೆಗಳು ಸಾಧ್ಯವಾದವು. ಇಂದು ಕ್ಷ-ಕಿರಣ, ಸಿಟಿ ಸ್ಕ್ಯಾನ್, ಅಲ್ಟ್ರಾಸಾನಿಕ್, ಎಮ್.ಆರ್.ಐ., ಪಿ.ಇ.ಟಿ. ಮುಂತಾದ ಸಾಧನಗಳು ದೇಹವನ್ನು ಬಗೆಯದೇ, ಶಸ್ತ್ರಕ್ರಿಯೆ ಇಲ್ಲದೆ, ದೇಹದೊಳಗಿಣುಕುವ ಸಾಧ್ಯತೆಯನ್ನು ತಂದಿವೆ. ಇವುಗಳಿಂದ ದೇಹದ ಪ್ರಮುಖ ಅಂಗಗಳ ಚಿತ್ರವನ್ನು ಪಡೆಯಲು ಸಾಧ್ಯವಾಗಿದೆ. ಆ ಅಂಗಗಳ ಕಾರ್ಯವನ್ನು 'ಕಾಣಲು', ಅವುಗಳ ಕಾರ್ಯಕ್ಕಿರುವ ಅಡಚಣೆಯನ್ನು ನೋಡಿ, ಗುರುತಿಸಲು ಸಾಧ್ಯವಾಗಿದೆ. ಬರಲಿರುವ ರೋಗದ ಮುನ್ಸೂಚನೆಯನ್ನು ವಿಜ್ಞಾನದ ಈ ಸಾಧನಗಳು ನೀಡುತ್ತಿವೆ. ದೇಹವನ್ನು ಕತ್ತರಿಸದೆಯೇ ದೇಹದೊಳಗಿಣುಕಬಲ್ಲ ಸಾಧ್ಯತೆಯನ್ನು ಮೊಟ್ಟಮೊದಲಿಗೆ ಕ್ಷ-ಕಿರಣಗಳು ತಂದುಕೊಟ್ಟವು. ಕ್ಷ-ಕಿರಣಗಳನ್ನೇ ಬಳಸುವ ಸಿಟಿ ಸ್ಕ್ಯಾನರ್ ವಿವಿಧ ಕೋನದ ಸೀಳು ಚಿತ್ರಗಳನ್ನು ಕಂಪ್ಯೂಟರಿನಲ್ಲಿ ಕೂಡಿಸಿ, ಒಂದು ಸಮಗ್ರ ವಿಡಿಯೋ ಚಿತ್ರವನ್ನು ತಯಾರಿಸಿ ನೀಡುತ್ತದೆ. ಮಿದುಳಿನ ಆಳದಲ್ಲೆಲ್ಲೋ ನಾಟಿರುವ ಗಡ್ಡೆಯನ್ನು ಇಂದು ಸಿಟಿ ಸ್ಕ್ಯಾನ್ ಮೂಲಕ ಗುರುತಿಸಲು ಸಾಧ್ಯವಾಗಿದೆ. ಶ್ರವಣಾತೀತ ತರಂಗಗಳನ್ನು ಬಳಸಿಕೊಳ್ಳುವ ಅಲ್ಟ್ರಾಸೋನೋಗ್ರಫಿ ಗರ್ಭಸ್ಥ ಶಿಶುವಿನ ಬೆಳವಣಿಗೆಯನ್ನು ತಿಳಿಯಲು, ಮೂತ್ರಕೋಶಗಳಲ್ಲಿ ಏನಾದರೂ ನ್ಯೂನತೆ ಇದ್ದರೆ ಪತ್ತೆ ಹಚ್ಚಲು ಸಹಾಯಕವಾಗಿದೆ. ಎಮ್.ಆರ್.ಐ. ತಂತ್ರ ಮಿದುಳಿನ ಬಹು ಸೂಕ್ಷ್ಮ ವಿಕಾರಗಳನ್ನು ಗುರುತಿಸಿ ಹೇಳಬಲ್ಲದು. ಎಮ್.ಆರ್.ಐ. ದೇಹದೊಳಗಿನ ನೀರಿನಂಶವನ್ನು ಪ್ರತಿಫಲಿಸುತ್ತದೆ. ನಮ್ಮ ದೇಹ ಮೂಲತಃ ಜಲಜನಕದಿಂದ ಕೂಡಿರುವ ಕಾರಣ, ಈ ತಂತ್ರವನ್ನು ಬಳಸಿ, ಅಂಗಾಂಶಗಳನ್ನು, ಮೂಳೆಯ ನೆಣದ ಚಿತ್ರವನ್ನು ಪಡೆಯಬಹುದಾಗಿದೆ. ಹಲ್ಲುಗಳಲ್ಲಿ, ಮೂಳೆಗಳಲ್ಲಿ ನೀರಿನಂಶ ತೀರಾ ಕಡಿಮೆ ಇರುವುದರಿಂದ ಇವು ಎಮ್.ಆರ್.ಐ. ಚಿತ್ರಗಳಲ್ಲಿ ಕಂಡು ಬರುವುದಿಲ್ಲ. ಈ ಕಾರಣದಿಂದ ಮೂಳೆಯ ಸುತ್ತಲೂ ಇರುವ ಅಂಗಾಂಶವನ್ನು, ಮೂಳೆಯ ನೆರಳು ಅಡ್ಡಬರದೆ ಸ್ಪಷ್ಟವಾಗಿ ನೋಡಲು ಸಾಧ್ಯವಾಗುತ್ತದೆ. ಇಂದು ಪಿ.ಇ.ಟಿ. ಸ್ಕ್ಯಾನರ್ ಬಳಸಿ ಹೃದಯದ ತಪಾಸಣೆ ಮಾಡಬಹುದಾಗಿದೆ. ವ್ಯಕ್ತಿಯ ದೇಹದೊಳಕ್ಕೆ ಅಲ್ಪ ಶಕ್ತಿಯ ವಿಕಿರಣಶೀಲ ವಸ್ತುವನ್ನು ಹೊಗಿಸಿ, ಹೃದಯದ ಎಲ್ಲ ಭಾಗಗಳಿಗೂ ರಕ್ತದ ಸರಬರಾಜು ಸರಿಯಾಗಿ ಆಗುತ್ತಿದೆಯೇ ಇಲ್ಲವೆ ಎಂದು ಕಂಪ್ಯೂಟರ್ ಪಟಲದ ಮೇಲೆ ನೋಡಿ ತಿಳಿಯಬಹುದು. ಪಿ.ಇ.ಟಿ. ಕಾರೊನರಿ ರೋಗಗಳನ್ನು ಬಹಳಷ್ಟು ಮೊದಲೇ ಕಂಡು ಹಿಡಿಯಬಲ್ಲದು, ಬರಲಿರುವ ಆಪತ್ತಿನ ಮುನ್ನೆಚ್ಚರಿಕೆ ನೀಡಬಲ್ಲದು.

ಈ ಶತಮಾನದ ಆರಂಭದಲ್ಲಿ ಕಾರ್ಲ್ ಲ್ಯಾಂಡ್‌ಸ್ಟೀನರ್ ರಕ್ತದ ವಿವಿಧ ಗುಂಪುಗಳನ್ನು ಕಂಡು ಹಿಡಿದನು. ಇದರ ಮೂಲಕ ರಕ್ತದಾನದ ಸಾಧ್ಯತೆ ಒದಗಿಬಂದು ಇಂದು ರಕ್ತದಾನ ಅತಿ ಸಾಮಾನ್ಯವಾಗಿದೆ. ಅಪಘಾತ, ಹೊಡೆದಾಟ, ಯುದ್ಧ, ಗರ್ಭಸ್ರಾವ ಯಾವುದೇ ಸಮಯದಲ್ಲಿ ವಿಪರೀತ ರಕ್ತ ಹರಿದು ಜೀವಕ್ಕೆ ಅಪಾಯವುಂಟಾಗುತ್ತಿತ್ತು. ಇದೀಗ ರಕ್ತದಾನದ ಸಾಧ್ಯತೆಯಿಂದ ಪ್ರಾಣ ಉಳಿಸುವುದು ಸಾಧ್ಯವಾಯಿತು.

ಈ ಶತಮಾನ ಅನೇಕ ರೋಗಗಳಿಗೆ ಚಿಕಿತ್ಸೆಯನ್ನು ಕಂಡಿತು. ಸಿಹಿಮೂತ್ರ ರೋಗಕ್ಕೆ 1921ರಲ್ಲಿಯೇ ಇನ್ಸುಲಿನ್ ಚಿಕಿತ್ಸೆ ಕಂಡು ಹಿಡಿಯಲಾಯಿತು. 1928ರಲ್ಲಿ ಅಲೆಕ್ಸಾಂಡರ್ ಫ್ಲೆಮಿಂಗ್ ಪೆನ್ಸಿಲಿನ್ ಔಷಧವನ್ನು ಕಂಡು ಹಿಡಿದ. ಪೆನ್ಸಿಲಿನ್ ಕಂಡು ಹಿಡಿಯುವ ಮೊದಲು ಒಂದು ಗುಲಾಬಿಯ ಮುಳ್ಳು ಗೀಚಿದ್ದೂ ಕೂಡಾ, ಜೀವಕ್ಕೆ ಅಪಾಯಕಾರಿಯಾಗಬಹುದಿತ್ತು. ಈ ಔಷಧಗಳ ಅಣು ರಚನೆಯನ್ನು ಕಂಡು ಹಿಡಿದರೆ, ಅವನ್ನು ಸುಲಭವಾಗಿ ದೊಡ್ಡ ಪ್ರಮಾಣದಲ್ಲಿ ತಯಾರಿಸಬಹುದಿತ್ತು. ಎರಡನೇ ಮಹಾಯುದ್ಧದ ಸಮಯದಲ್ಲಿ ಲಕ್ಷಾಂತರ ಜನ ಗಾಯಗೊಳ್ಳುವ ಸಾಧ್ಯತೆ ಇದ್ದ ಕಾರಣ, ಬ್ಯಾಕ್ಟೀರಿಯಾದ ಸೋಂಕು ತಡೆಗಟ್ಟಬಲ್ಲ ಪೆನ್ಸಿಲಿನ್‌ನ ತೀವ್ರ ಅಗತ್ಯವಿತ್ತು. ವಿಜ್ಞಾನಿ ಡರೋತಿ ಕ್ರೊಫುಟ್ ಹಾಜ್ಕಿನ್ ಪೆನ್ಸಿಲಿನ್‌ನ ಅಣು ರಚನೆಯನ್ನು ಕಂಡು ಹಿಡಿದಳು. ನಂತರದ ದಿನಗಳಲ್ಲಿ ಹಾನಿಕರ ರಕ್ತಹೀನತೆಯ ರೋಗ 'ಅನೀಮಿಯಾ'ವನ್ನು ವಾಸಿಮಾಡುವ ವಿಟಮಿನ್ ಬಿ12ರ



## ಬಿಜಿ... ಬಿಜಿ... ಗಜಿಬಿಜಿ....!

'ಶಶಿ ಸ್ಮಾಷ್' ಎಂದೇ ಅಪಖ್ಯಾತಿಯಲ್ಲಿ ಮುಳುಗಿದ್ದ ಶಶಿಕುಮಾರ್ ಇದೀಗ ಎಂ.ಪಿ.ಯಾಗಿದ್ದಾರೆ. 'ಕೂಲಿರಾಜ'ದಿಂದ ರೀಎಂಟ್ರೀ ಪಡೆದ ಶಶಿ ಕುಡಿಯುವುದನ್ನು ಬಿಟ್ಟಿಲ್ಲ. ಆತನ ಪ್ರಕಾರ ಕುಡಿಯುವುದು ಶಶಿಯ ಜನ್ಮಸಿದ್ಧ ಹಕ್ಕು.

ನೆನಪಿರಲಿ, ಇದನ್ನೆಲ್ಲ ಹೇಳಿಕೊಳ್ಳುತ್ತ ಪತ್ರಕರ್ತರ ಜೊತೆ ಹರಟುತ್ತಿದ್ದ ಶಶಿ ಈಗ ಮಾತನಾಡಲೂ ಸಿಗುತ್ತಿಲ್ಲ. 'ಮಾತು ಮಾತಿಗೆ ಗುಂಡಿನ ಪಾರ್ಟಿ ಇಟ್ಟು ಪತ್ರಕರ್ತರನ್ನು ರಂಗೇರಿಸುತ್ತಿದ್ದ ಶಶಿ ಈಗೆಲ್ಲಿ?' ಅಂತ ಪತ್ರಕರ್ತರೇ ಪ್ರಶ್ನಿಸುವಂತೆ ಅಗೋಚರವಾಗಿರುವರು.

ಇದಕ್ಕೆ ಪುಷ್ಟಿ ಕೊಡಲೆಂಬಂತೆ ಮೊನ್ನೆ ಆತನ 'ಸುಂದರ ಪುರುಷ' ಚಿತ್ರದ ಧ್ವನಿ ಸುರುಳಿ ಬಿಡುಗಡೆಯ ವೇಳೆಯೂ ಶಶಿ ಅದೃಶ್ಯರಾಗಿದ್ದರು. 'ಹೋದ್ರೆ ಹೋಗಲಿ ಬಿಡಿ, ಶಶಿ ಭಾರಿ ಬಿಜಿಯಾಗ್ಬಿಟ್ಟಿದ್ದಾರೆ. ಡೆಲ್ಲಿಯಲ್ಲೋ, ಪಾರ್ಲಿಮೆಂಟಿನ ದರ್ಬಾರಿನಲ್ಲೋ, ಪಟೇಲರ ಆರೈಕೆಯಲ್ಲೋ ಮುಳುಗಿರಬೇಕು' ನಿಶೆ ತುಂಬಿದಾಗ ಆತನ ಪತ್ರಕರ್ತರೇ ಚಡಪಡಿಸುತ್ತಿದ್ದರು.

ಸಂಕೀರ್ಣ ರಚನೆಯನ್ನು ಕಂಡು ಹಿಡಿದು, ಸಿಹಿಮೂತ್ರ ರೋಗಿಗಳಿಗೆ ಜೀವದಾನ ಮಾಡಿದ ಇನ್ಸುಲಿನ್‌ನ ರಚನೆಯನ್ನೂ ತೆರೆದಿಟ್ಟಳು.

ರೋಗ ಪತ್ತೆಯ ಅದ್ಭುತ ತಂತ್ರಗಳನ್ನು ಈ ಶತಮಾನ ಕಂಡಿತು. ವಿಜ್ಞಾನಿ ರೋಸಲಿನ್ ಯಾಲೋ ಮತ್ತು ಬರ್ಸನ್ ಅವರು ನಲವತ್ತು ವರ್ಷಗಳ ಹಿಂದೆ ಆರ್.ಐ.ಎ. ತಂತ್ರವನ್ನು ಕಂಡು ಹಿಡಿದರು. ಕಲ್ಪಿಸಲಾರದಷ್ಟು ಈ ತಂತ್ರ ಸೂಕ್ಷ್ಮವಿದೆ. ರಕ್ತದಲ್ಲಿ ಅಥವಾ ದೇಹದ ಊತಕದಲ್ಲಿಯ ಯಾವುದೇ ವಸ್ತುವಿನ 0.000000000001 ಗ್ರಾಮಿನಷ್ಟು ಸೂಕ್ಷ್ಮ ಪ್ರಮಾಣವನ್ನು ಕೂಡಾ ಗುರುತಿಸಿ ನಿಖರವಾಗಿ ಅಳೆಯುತ್ತದೆ. ಆರ್.ಐ.ಎ. ತಂತ್ರವನ್ನು ಕಂಡು ಹಿಡಿಯುವವರೆಗೆ, ಸಿಹಿಮೂತ್ರ ರೋಗಿಗಳು ಪ್ರತಿ ಬಾರಿಯ ರಕ್ತದ ಪರೀಕ್ಷೆಗೆ 100 ಸಿ.ಸಿ.ಯಷ್ಟು ರಕ್ತ ಕೊಡಬೇಕಾಗುತ್ತಿತ್ತು. ಇದೀಗ ಆರ್.ಐ.ಎ. ತಂತ್ರದಿಂದ ಕೇವಲ 0.1 ಸಿ.ಸಿ. ಸಾಕಿದೆ. ಜೊತೆಗೆ ಆರ್.ಐ.ಎ ಎಲ್ಲ ಹಾರ್ಮೋನುಗಳ ಮೇಲೂ ಕೆಲಸ ಮಾಡಿತು. ಜೀವಶಾಸ್ತ್ರೀಯವಾಗಿ ಮುಖ್ಯವಾದ ಇತರ ವಸ್ತುಗಳಿಗೂ ಆರ್.ಐ.ಎ. ತಂತ್ರ ಅನ್ವಯವಾಯಿತು. ಆರ್.ಐ.ಎ. ತಂತ್ರ ನಿರ್ನಾಳ ಗ್ರಂಥಿಗಳ ಮತ್ತು ಹಾರ್ಮೋನುಗಳ ಅಧ್ಯಯನ ರಂಗವಾದ 'ಅಂತಃಸ್ರಾವಶಾಸ್ತ್ರ'ದಲ್ಲಿ (endocrinology) ಕ್ರಾಂತಿ ತಂದಿತು. ಮೊಟ್ಟ ಮೊದಲ ಬಾರಿಗೆ ಕುಬ್ಜ ಮಕ್ಕಳಿಗೆ 'ಬೆಳವಣಿಗೆಯ ಹಾರ್ಮೋನು'ಗಳಿಂದ (growth hormones) ಚಿಕಿತ್ಸೆ ನೀಡುವುದು ಸಾಧ್ಯವಾಯಿತು. ಆಗಷ್ಟೇ ಹುಟ್ಟಿದ ಮಕ್ಕಳಲ್ಲಿ ಅಸಮರ್ಪಕವಾಗಿ ಕೆಲಸ ಮಾಡುವ ಥೈರಾಯಿಡ್‌ನಿಂದ ಉಂಟಾಗುವ ಬುದ್ಧಿಮಾಂದ್ಯವನ್ನು ಪರೀಕ್ಷಿಸಿ, ತಡೆಗಟ್ಟುವುದು ಸಾಧ್ಯವಾಯಿತು. ರಕ್ತದ ಬ್ಯಾಂಕ್‌ಗಳಲ್ಲಿ ರೋಗದ ಸೋಂಕು ತಗುಲಿದ ರಕ್ತವನ್ನು ಗುರುತಿಸಲು ಸಾಧ್ಯವಾಯಿತು. ಭ್ರೂಣಗಳಲ್ಲಿ ಏನಾದರೂ ಗಂಭೀರತರದ ಊನವಿದೆಯೆ ಎಂದು ಪರೀಕ್ಷಿಸುವುದು ಸಾಧ್ಯವಾಯಿತು. ಕ್ರೀಡಾಪಟುಗಳು 'ಡ್ರಗ್ಸ್' ಏನಾದರೂ ತೆಗೆದುಕೊಂಡಿದ್ದಾರೆಯೇ ಎಂದು ತಿಳಿಯಬಹುದಾಯಿತು. ದೇಹದಲ್ಲಿ ವಿಷ ಸೇರಿದೆಯೆ ಎಂದು ಪರೀಕ್ಷಿಸುವುದು ಸುಲಭವಾಯಿತು. ಇಂಥಾ ನೂರು ಬಗೆಯ ಅಳವಡಿಕೆಗಳು, ಅನುಕೂಲಗಳು ಆರ್.ಐ.ಎ. ತಂತ್ರದಿಂದ ಹೊರಬಿದ್ದವು.

ಇದೇ ಶತಮಾನದಲ್ಲಿ ಅವಯವಗಳ ನಾಟಿ ಚಿಕಿತ್ಸೆ ಸಾಧ್ಯವಾಯಿತು. ಕಣ್ಣಿನ ಕಾರ್ನಿಯಾದ ನಾಟಿ ಎಲ್ಲೆಡೆ ನಡೆದರೆ, ಲಿವರ್, ಶ್ವಾಸಕೋಶ, ಮೂತ್ರಪಿಂಡಗಳಷ್ಟೇ ಅಲ್ಲ ಹೃದಯದ ನಾಟಿಯೂ ಈ ಶತಮಾನದಲ್ಲಿ ಸಾಧ್ಯವಾಗಿದೆ.

ಈ ಶತಮಾನ ಪ್ರಣಾಳ ಶಿಶುವಿನ ಸಾಧ್ಯತೆಯನ್ನು ನೀಡಿತು. ಗಂಭೀರತರದ ಅನುವಂಶಿಕ ಕಾಯಿಲೆಗಳನ್ನು ಪ್ರಣಾಳದ ಸ್ಥಿತಿಯಲ್ಲೆ ಸರಿಪಡಿಸುವ ಸಾಧ್ಯತೆಗಳನ್ನು ತಂದಿದೆ, ಆರೋಗ್ಯಕರ ಸಂತತಿಗೆ ಕಾರಣವಾಗಿದೆ. ಭ್ರೂಣಾವಸ್ಥೆಯಲ್ಲಿಯೇ ವಂಶವಾಹಿನಿಯಲ್ಲಿಯ ಕೊರತೆಯನ್ನು, ಅನುವಂಶಿಕ ರೋಗಗಳನ್ನು 'ಆಮ್ನಿಯೋಸಿಂಟಿಸಿಸ್' ತಂತ್ರದಿಂದ ಕಂಡು ಹಿಡಿಯಬಹುದಾಗಿದೆ. ಬಹಳಷ್ಟು ಭಯಂಕರ ವಂಶಪಾರಂಪರ್ಯದ ರೋಗಗಳು ಸಾವು, ಇಲ್ಲ ಅಂಗವಿಕಲತೆಯಲ್ಲಿ ಮುಗಿಯುವಂಥವು. 'ಜೀನ್ ಥೆರಪಿ' ಇಂಥ ಅನುವಂಶಿಕ ಕಾಯಿಲೆಗಳಿಗೆ ಪರಿಹಾರ ಹುಡುಕುತ್ತಿದೆ. ಭ್ರೂಣಾವಸ್ಥೆಯಲ್ಲಿಯೇ ರೋಗಕಾರಕ ವಂಶವಾಹಿನಿಯನ್ನು ಬೇರ್ಪಡಿಸಿ, ಸಾಧಾರಣ ಆರೋಗ್ಯವಂತ ವಂಶವಾಹಿನಿಯನ್ನು ಸೇರಿಸಿ ಕಾಯಿಲೆಗಳನ್ನು ವಾಸಿ ಮಾಡುವ ಹೊಸ ವಿಧಾನದತ್ತ ಸಂಶೋಧನೆ ಸಾಧ್ಯವಾಗಿದೆ.

ಈ ಶತಮಾನದ ಐವತ್ತರ ದಶಕದಲ್ಲಿ ಡಿ.ಎನ್.ಎ.ಯ ರಚನೆಯನ್ನು ಕಂಡು ಹಿಡಿಯಲಾಯಿತು. ವಂಶವಾಹಿನಿಯ (gene) ಸಂಶೋಧನೆ ಮುಂದುವರೆದು 'ಡಾಲಿ'ಯನ್ನು ಸೃಷ್ಟಿಸಿ, ಶತಮಾನದಂಚಿಗಾಗಲೆ ಒಂದು ಬಗೆಯಲ್ಲಿ ಮಾನವ ಸಹ-ಸೃಷ್ಟಿಕರ್ತನಾಗಿ ನಿಂತಿದ್ದಾನೆ!

**ಅಂಗವಿಕಲರ ನೆರವಿಗೆ ವಿಜ್ಞಾನ :** ಈ ಶತಮಾನದ ಆದಿಭಾಗದಲ್ಲಿ ಮುಂದುವರೆದ ದೇಶಗಳಲ್ಲೂ ಕುರುಡರಿಗೆ, ಕಿವುಡರಿಗೆ, ಅಂಗವಿಕಲರಿಗೆ ಯಾವೊಂದೂ ಅವಕಾಶಗಳಾಗಲಿ, ಸವಲತ್ತುಗಳಾಗಲೀ ದೊರೆಯುತ್ತಿರಲಿಲ್ಲ. ಅವರ ಬದುಕೆಲ್ಲ ಪರಾವಲಂಬನೆಯ ಕತ್ತಲೆಯಲ್ಲಿ, ಇತರರ ಅಣಕ, ಅಪಹಾಸ್ಯದಲ್ಲಿ, ಇಲ್ಲ ಒಂದಿಷ್ಟು ಅನುಕಂಪದಲ್ಲಿ ಕಳೆದು ಹೋಗುತ್ತಿತ್ತು. ಹೆಲನ್ ಕೆಲ್ಲಿರ್‌ನಂಥಾ ಮಹಾನ್ ವ್ಯಕ್ತಿಗಳು ಸಾಮಾಜಿಕ ಅಂಗವಿಕಲರ ಬದುಕನ್ನು ಬದಲಾಯಿಸಲು ಒಂದೆಡೆ ಹೋರಾಡಿದರು. ಇನ್ನೊಂದೆಡೆ ಈ ಶತಮಾನದ ವಿಜ್ಞಾನ ಅಂಗವಿಕಲರಿಗೆ ಪರಾವಲಂಬನೆಯಿಂದ ಬಹಳಷ್ಟು ಮುಕ್ತಿ ನೀಡಿತು.

ಇಂದು ವಿಜ್ಞಾನ, ಕುರುಡರಿಗೆ ಕಣ್ಣಾಗಿದೆ, ಕಿವುಡರಿಗೆ ಕಿವಿಯಾಗಿ, ಮೂಗರಿಗೆ ಮಾತಾಗಿ, ಪಾರ್ಶ್ವವಾಯು ಬಡಿದವರಿಗೆ ಕೈ ಕಾಲು ಕೂಡಾ ಆಗಿ ಒದಗಿ ಬಂದಿದೆ. ಪ್ರಕೃತಿಯಲ್ಲಿ ಬಾವಲಿ, ಡಾಲ್ಫಿನ್‌ನಂಥಾ ಪ್ರಾಣಿಗಳು ತಮ್ಮ ಕಣ್ಣುಗಳಿಗಿಂತ ಕಿವಿಗಳ ಮೇಲೆ ಹೆಚ್ಚು ಅವಲಂಬಿಸಿವೆ. ಇವು ತಮ್ಮ ಕಿವಿಗಳಿಂದಲೇ ಅಡೆತಡೆಗಳನ್ನು ಪತ್ತೆ ಹಚ್ಚುತ್ತವೆ, ತಮ್ಮ ಆಹಾರವನ್ನು ಬೇಟೆಯಾಡುತ್ತವೆ. ಈ ಪ್ರಾಣಿಗಳು ಬಳಸುವ 'ಸೋನಾರ್' ತಂತ್ರವನ್ನು ಬಳಸಿ, ಅತಿಶಾಬ್ದಿಕ ಸಂವೇದಕಗಳನ್ನು ಅಳವಡಿಸಿದ 'ಮಾರ್ಗದರ್ಶಿ ಕೋಲು'ಗಳು ಅತಿಶಾಬ್ದಿಕ ತರಂಗಗಳನ್ನು ಚಿಮ್ಮಿ, ರಸ್ತೆಯಲ್ಲಿ ಮುಂದಿರುವ ಅಡೆತಡೆಗಳನ್ನು ಗುರುತಿಸಿ ಕುರುಡರಿಗೆ ಸಹಾಯಕವಾಗಿವೆ. ಇಂದು ಕಿವುಡರಿಗೆ ಕಿವಿಯಲ್ಲಿ ಅಡಗಿ ಕುಳಿತುಕೊಳ್ಳಬಲ್ಲಷ್ಟು ಚಿಕ್ಕ 'ಎಲೆಕ್ಟ್ರಾನಿಕ್ ಡಿಜಿಟಲ್ ಕಿವಿ'ಗಳು ಒದಗಿ ಬಂದಿವೆ. ಮೂಗರಿಗೆ 'ಕೃತಕ ಸ್ವರ'ವನ್ನು ಒದಗಿಸಿಕೊಡುವ ಕಂಪ್ಯೂಟರುಗಳಿವೆ. ಇಂದು ಪಾರ್ಶ್ವವಾಯು ಬಡಿದ ರೋಗಿಯೊಬ್ಬನ ಕೈ ಕುಸಿದಿದ್ದರೆ, ಕಾಫಿ ಕುಡಿಯಲು 'ಕಾಫಿ ಕಪ್ಪು ಎತ್ತು' ಎಂದು ತನ್ನ ನಿಸ್ತೇಜ ಕೈಗಳಿಗೆ ಆಜ್ಞೆ ಮಾಡಬಹುದಾಗಿದೆ. ವಿಧೇಯವಾಗಿ ರೋಗಿಯ ಆರ್ಥೋಸಿಸ್ ತೊಟ್ಟ ಸಣಕಲು ಕೈ ಒಡೆಯನ ಆಜ್ಞೆಯನ್ನು ಪಾಲಿಸುತ್ತದೆ. ಆರ್ಥೋಸಿಸ್ ಶಾಬ್ದಿಕ ಆಜ್ಞೆಗಳಿಂದ ನಿಯಂತ್ರಿಸಲ್ಪಡುವ ಯಂತ್ರದ ಕೈ, ಶಾಬ್ದಿಕ ಆಜ್ಞೆಗಳಿಂದ ನಿಯಂತ್ರಿಸಲ್ಪಡುವ ರೋಬಾಟ್‌ಗಳು ರೋಗಿಗಳ ನೆರವಿಗೆ ನಿಲ್ಲಬಲ್ಲವು.

**ಮಹಿಳೆ ಮತ್ತು ವಿಜ್ಞಾನ:** ನಿರ್ಲಿಪ್ತ ಎನ್ನುವ ವಿಜ್ಞಾನ ಕೂಡ ಸಾಮಾಜಿಕ



## ಭೈ (ಭಾ) ರವಿಯ ಮಾತರಂ!

ಪತ್ರಕರ್ತರನ್ನು ಕಂಡ ಕೂಡಲೇ ಕೂತವನು ನಿಂತುಕೊಂಡೋ ನಿಂತವನು ಕೂತುಕೊಂಡೋ ಕೊಕ್ಕಕ್ಕನೆ ಹದಿನಾರು ಹಲ್ಲು ಪ್ರದರ್ಶಿಸುವ ಜಯಶ್ರೀದೇವಿಯ (ಮಹಾನ್) ಮಾನಸಪುತ್ರ ಭಾ (ಭೈ)ರವಿಯ ಲೀಲೆಗಳದೇ ಒಂದು ಸಂಪುಟ ಆಗುವ ಸಾಧ್ಯತೆಯಿದೆ. ಅದೀಗ ಅನಗತ್ಯ.

'ಪ್ರೇಮರಾಗ ಹಾಡು ಗೆಳತಿ'ಯ ಅವನತಿಯ ಬಳಿಕ 'ಗಡಿಬಿಡಿ ಕೃಷ್ಣ' 'ಸುವ್ವಿ ಸುವ್ವಲಾಲಿ', ಚಿತ್ರಗಳು ಬಿರುಗಾಳಿಗೆ ಸಿಕ್ಕು ಪುಡಿ ಪುಡಿಯಾದ ಬಳಿಕ ದೇವಿ - ಮಗ ಕೂತು ಗಳಗಳನೆ ಅತ್ತು 'ಹಬ್ಬ' ಮಾಡಿದರು. ಇವರ ಅದೃಷ್ಟವೋ, ಪ್ರೇಕ್ಷಕನ ದುರಾದೃಷ್ಟವೋ.... ಗೊತ್ತಿಲ್ಲ. ಕೊನೆಗೂ ಚಿತ್ರ ಓಡಿತು. ಮಲ್ಟೀಸ್ಟಾರ್‌ಗಳನ್ನು ಹಾಕಿಕೊಂಡು ಅಂಥದೇ 'ಸ್ನೇಹಲೋಕ' ಚಿತ್ರವನ್ನೂ ಮಾಡಲು ಶುರುವಿಟ್ಟರು.

ಇದೀಗ ಇನ್ನೊಂದು ಮಲ್ಟೀ ಸ್ಟಾರ್ ಇರುವ 'ವಂದೇ ಮಾತರಂ' ಎಂಬ ಹನ್ನೆರಡು ಜನ ನಾಯಕರ ಚಿತ್ರವೂ ಸೆಟ್ಟೇರಿತು. ಇದು ಉಗ್ರಗಾಮಿಗಳ ಕುರಿತದ್ದು. ಸ್ವತಃ ವಾರಂಗಲ್‌ನ ನಿವಾಸಿಯಾದ ಭಾರವಿ ಉಗ್ರಗಾಮಿಗಳನ್ನು ಸಂಪರ್ಕಿಸಿ ಬಂದು 'ವಂದೇ ಮಾತರಂ'ಗೆ ಕತೆ ಒದಗಿಸಿದ್ದಾನೆ. ಅಂದ ಹಾಗೆ ಕೆಲವೇ ದಿನಗಳ ಹಿಂದೆ 'ಮಹಾಭಕ್ತ ಮಂಜುನಾಥ' ಎಂಬ ಕ್ರಾಂತಿಕಾರಿ ಭಕ್ತಿಯ ಕತೆ ಚಿತ್ರ ಮಾಡುವುದಾಗಿ ಸ್ವತಃ ಭಾ (ಭೈ) ರವಿ ಹೇಳಿದ್ದರು. ಇಬ್ಬರ ಬಳಿ ಆ ವಿಷಯ ಎತ್ತಿದರೆ 'ಕೊಕ್ಕೊಕ್ಕ....!' ಅಂತ ಹಲ್ ಕಿರಿಯುವರು.

ಅಗತ್ಯಗಳ, ನಂಬಿಕೆಗಳ ದಿಕ್ಕಿನಲ್ಲಿ ಬೆಳೆಯುತ್ತದೆ. ಸಾಮಾಜಿಕ ಅಂಶಗಳು ವಿಜ್ಞಾನ-ತಂತ್ರಜ್ಞಾನದ ಹಾದಿಯನ್ನು ರೂಪಿಸುತ್ತವೆ. ಪಿತೃಪ್ರಧಾನ ಸಮಾಜದಲ್ಲಿ ವಿಜ್ಞಾನದ ಅಳವಡಿಕೆಗಳು ಮಹಿಳಾ ಶೋಷಣೆಯ ಅಸ್ತ್ರವಾಗಬಲ್ಲವು. ಭ್ರೂಣಾವಸ್ಥೆಯಲ್ಲಿ ವಂಶವಾಹಿನಿಯಲ್ಲಿಯ ಕೊರತೆಗಳನ್ನು, ಅನುವಂಶಿಕ ರೋಗಗಳನ್ನು ಕಂಡುಹಿಡಿಯಲು ಬಂದ 'ಆಮ್ನಿಯಾಸಿಂಟೆಸಿಸ್ ಕೇವಲ ಭ್ರೂಣದ ಲಿಂಗಪತ್ತೆಗೆ, ತದನಂತರ ಹೆಣ್ಣುಭ್ರೂಣದ ಹತ್ಯೆಗೆ ನೇರ ಕಾರಣವಾಗಿದೆ. ಸಂತಾನಹೀನತೆಗೆ ಉತ್ತರವಾಗಿ, ಗಂಭೀರತರದ ಅನುವಂಶಿಕ ಕಾಯಿಲೆಗಳನ್ನು ಪ್ರಣಾಳ ಸ್ಥಿತಿಯಲ್ಲಿ ಸರಿಪಡಿಸಿ, ಆರೋಗ್ಯ ಸಂತತಿಗೆ ಕಾರಣವಾಗಬಲ್ಲ 'ಪ್ರಣಾಳ ಶಿಶು' ಒಂದು ವರದಾನ. ಆದರೆ ಇಂದು 'ಇನ್ ವಿಟ್ರೋ ಗರ್ಭಧಾನ'ವನ್ನು ಬೇಕಾದ ಲಿಂಗದ ಮಗುವನ್ನು ಆಯ್ದುಕೊಳ್ಳುವ ತಂತ್ರವಾಗಿ ದುರುಪಯೋಗಪಡಿಸಿಕೊಳ್ಳುವುದೂ ನಡೆದಿದೆ.

ಪ್ರಪಂಚದ ಬಹಳಷ್ಟು ಸಮಾಜಗಳಲ್ಲಿ ಗಂಡುಮಗುವಿಗಿರುವ ಮಾನ್ಯತೆ, ಅಂಥಾ ವೈಜ್ಞಾನಿಕ ಶೋಧನೆಗಳಿಗೆ ಅಪರೋಕ್ಷವಾಗಿ ಪ್ರೋತ್ಸಾಹ ನೀಡಿದೆ. ಜಪಾನಿನಲ್ಲಿ ಡಾ॥ ರಿಹಾಚಿ ಇಜಕಾ, ಸೆಂಟ್ರಿಪ್ಯೂಜಿನಲ್ಲಿ ವೀರ್ಯದಲ್ಲಿಯ X ಮತ್ತು Y ವರ್ಣತಂತುಗಳನ್ನು ಬೇರ್ಪಡಿಸಿ, ಶೇಕಡಾ 85ರಷ್ಟು ಯಶಸ್ವಿಯಾದ ಗಂಡು ಹೆರುವ ತಂತ್ರವನ್ನು ಪ್ರಚಾರ ಪಡಿಸಿದ. ಇಂಥಾ ತಂತ್ರಗಳು ಹುಟ್ಟುವ ಮೊದಲೇ ಹೆಣ್ಣು ಭ್ರೂಣದ ಸಾಧ್ಯತೆಯನ್ನು ತಡೆಯುತ್ತವೆ.

ಮಹಿಳೆಯ ದೇಹದೊಳಗೆ ಸಂತಾನೋತ್ಪತ್ತಿ ಕ್ರಿಯೆ ಜರುಗುವ ಕಾರಣ, ಮಹಿಳೆ ವೈದ್ಯರಂಗದ ಪ್ರಯೋಗಪಶುವಾಗಿದ್ದಾಳೆ. ಸ್ಯಾನ್ ಫ್ರಾನ್ಸಿಸ್ಕೋದಲ್ಲಿ, 23 ವಾರಗಳ ಭ್ರೂಣವನ್ನು, ತಾಯಿಯ ಗರ್ಭ ಕೊಯ್ದು ಹೊರತೆಗೆದು, ಮುಚ್ಚಿಕೊಂಡಿದ್ದ ಮೂತ್ರನಾಳವನ್ನು ಸರ್ಜರಿ ಮೂಲಕ ಸರಿಪಡಿಸಿ ಮತ್ತೆ ತಾಯಿಯ ಗರ್ಭಕ್ಕೆ ಇಳಿಸಿದರು. ವಿಶ್ವದ ಮೊಟ್ಟ ಮೊದಲ ಭ್ರೂಣದ ಶಸ್ತ್ರಚಿಕಿತ್ಸೆ ಇದಾಗಿತ್ತು. ಆದರೆ ಪ್ರಯೋಗದ ಹಂತದಲ್ಲಿರುವ ಇಂತಹುಗಳಿಗೆ ಹೊಟ್ಟೆ ಕೊಯ್ಸಿಕೊಳ್ಳಲು ತಾಯಿ ನಿರಾಕರಿಸಿದರೆ, 'ಭ್ರೂಣದ ಹಕ್ಕು'ಗಳ ಬಗ್ಗೆ ವಾದಿಸಿ, ಆಕೆಯ ಮೇಲೆ ವೈದ್ಯರು ಮೊಕದ್ದಮೆಯ ಬೆದರಿಕೆ ಹೇರಬಹುದಿದೆ. ಕೊಲರೆಡೋ ಹಾಗೂ ಮಿಶಿಗನ್ನಿನಲ್ಲಿ ಸಿಸೇರಿಯನ್ ಹೆರಿಗೆ ನಿರಾಕರಿಸಿದ್ದಕ್ಕೆ ವೈದ್ಯರು ಕೋರ್ಟಿನ ಅನುಮತಿ ಪಡೆದು ಒತ್ತಾಯ ತರಲು ಓಡಿದ್ದರು. ಅನುಮತಿ ದೊರಕುವ ಮೊದಲೇ ತಾಯಿ ಸಹಜ ರೀತಿಯಲ್ಲಿ ಮಗುವನ್ನು ಹೆತ್ತಾಗಿತ್ತು!

ಹೆಣ್ಣು, ವೈದ್ಯರಂಗದ ಪ್ರಯೋಗ ಪಶುವಾಗಿರುವ ಸಂದರ್ಭಗಳು ಅನೇಕ. ಜನನ ನಿಯಂತ್ರಣ ಔಷಧಿಗಳು ಭಾರತದಂತಹ ಬಡದೇಶದ ಹಳ್ಳಿಗಾಡಿನ ಮಹಿಳೆಯರ ಮೇಲೆ, ಅವುಗಳ ದುಷ್ಪರಿಣಾಮದ ಅರಿವಿಲ್ಲದೆಯೇ ಪ್ರಯೋಗವಾಗುತ್ತವೆ. ಸ್ವಯಂ ಇಚ್ಛೆಯಲ್ಲಿ ವರವಾಗಬಲ್ಲ, ಸಂತಾನ ನಿಯಂತ್ರಣ ವಿಜ್ಞಾನ, ರಾಜಕೀಯ ತಂತ್ರವಾದಾಗ ಶೋಷಣೆಯ ಅಸ್ತ್ರವಾಗುತ್ತದೆ. 'ಡೆಪೋ ಪ್ರಾಮೆರಾ' ಎಂಬ ಸಂತಾನ ನಿಯಂತ್ರಕ ಸೂಜಿಮದ್ದಿನ ಬಳಕೆ ಗರ್ಭಕೋಶ ಹಾಗೂ ಸ್ತನಗಳ ಕ್ಯಾನ್ಸರಿಗೆ ದಾರಿ ಮಾಡುತ್ತದೆಂದು, ಸ್ವತಃ ಅಮೆರಿಕಾ ಮತ್ತಿತರ ಅಭಿವೃದ್ಧಿಶೀಲ ಬಂಡವಾಳಶಾಹಿ ರಾಷ್ಟ್ರಗಳು ಅದನ್ನು ನಿಷೇಧಿಸಿತ್ತು. ಆದರೆ ಇದನ್ನೇ ಬಿಳಿಯರ ಸರ್ಕಾರ ದಕ್ಷಿಣ ಆಫ್ರಿಕಾದಲ್ಲಿ ಕರಿಯ ಹೆಂಗಸರ ಮೇಲೆ ಬಲವಂತವಾಗಿ, ಹೇರಳವಾಗಿ ಬಳಸಿತು. ಕೃತಕವಾಗಿ ತಯಾರಿಸಿದ ಲಿವೋನೊಜೆಸ್ಟಿರಲ್ ಹಾರ್ಮೋನ್ ರಬ್ಬರ್ ನಳಿಕೆಯ 'ನಾರ್‌ಪ್ಲಾಂಟ್', ಮಹಿಳೆಯ ತೋಳಿನ ಚರ್ಮದೊಳಗೆ ಇಡಲಾಗುವ ಸಂತಾನ ನಿರೋಧಕ. ವೈದ್ಯಕೀಯ ಪರೀಕ್ಷೆ ಪೂರ್ಣವಾಗದ, ವ್ಯವಸ್ಥಿತ ರೀತಿಯಲ್ಲಿ ದೀರ್ಘಾವಧಿ, ಸಂಕಷ್ಟಗಳ ಬಗೆಗೆ ಯಾವುದೇ ಅಧ್ಯಯನದ ವರದಿ ಇಲ್ಲದ, ತಾತ್ಕಾಲಿಕ ಅಥವಾ ಕಾಯಂ ದುಷ್ಪರಿಣಾಮಗಳು ಸ್ಪಷ್ಟವಾದ ನಾರ್‌ಪ್ಲಾಂಟ್ ಭಾರತದಲ್ಲಿ ಅಳವಡಿಕೆಯಾಯಿತು. ವಿದೇಶಗಳಲ್ಲಿ ನಿಷೇಧಿತವಾದ ಔಷಧಿಗಳು, ಅನಾಲ್ಜಿನ್‌ನಿಂದ ಹಿಡಿದು, ಮಹಿಳೆಯರ ಮೇಲೆ ಗರ್ಭ ನಿಂತಿದೆಯೇ ಪರೀಕ್ಷಿಸಲು ಉಪಯೋಗಿಸಿ ಅಂಗವಿಕಲ ಮಕ್ಕಳಿಗೆ ಕಾರಣವಾದ ಇ.ಪಿ.ಫೋರ್ಟ್ ಔಷಧಿಗಳೂ, ಭಾರತದಲ್ಲಿ ದೊರೆಯುತ್ತವೆ.

ಆದರೆ ವಿಜ್ಞಾನ ಮಹಿಳೆಯರ ಬದುಕನ್ನು ಬದಲಿಸಿರುವ ವರದಾನವಾಗಿರುವುದೂ ಉಂಟು. ಒಂದು ಕಾಲಕ್ಕೆ ಕುಟ್ಟಿ ತಿರುವಿ ಬೀಸುವಲ್ಲಿ ಕಟ್ಟಿಟ್ಟ ಹೆಣ್ಣಿನ ನಿತ್ಯ ಬದುಕನ್ನು ವಿಜ್ಞಾನ ಮತ್ತು ತಂತ್ರಜ್ಞಾನದ ಫಲವಾದ ಯಂತ್ರಗಳು ಸಂಪೂರ್ಣ ಹಗುರಗೊಳಿಸಿದವು. ಬಿಡುವಿಲ್ಲದ ಬಸಿರು ಬಾಣಂತನದಲ್ಲಿ ಬಂಧಿತ ಸ್ತ್ರೀ ಬದುಕು ಬದಲಾಯಿತು. ಸಂತಾನ ನಿರೋಧಕಗಳನ್ನು ಕಂಡು ಹಿಡಿದ ತಕ್ಷಣ ಹೆಣ್ಣಿಗೆ ತನ್ನ ದೇಹದ ಮೇಲೆ ನಿಯಂತ್ರಣ ಹಾಗೂ ಆಯ್ಕೆಯ ಅವಕಾಶ ದೊರೆಯಿತು. ಯಾವ ರಾಜಕೀಯ ಕ್ರಾಂತಿ, ಸಾಮಾಜಿಕ ಕ್ರಾಂತಿಯೂ ತಾರದ ಬದಲಾವಣೆಯನ್ನು ತಂದಿತು.

ವಿಜ್ಞಾನ, ತಂತ್ರಜ್ಞಾನ ಇಂದು ಸುಧಾರಿತ ಸ್ಯಾನಿಟರಿ ನ್ಯಾಪ್ಕಿನ್‌ಗಳಂಥಾ ಸಣ್ಣ ವಿಷಯಗಳಿಂದ ಹಿಡಿದು ಜೆನಿಟಿಕ್ ರಂಗದ ಮುಂಚೂಣಿಯ ಸಂಶೋಧನೆಗಳವರೆಗೂ ಹಬ್ಬಿದೆ. ಇಂದು ಜೆನೆಟಿಕ್ ರಂಗದ ಅನೇಕ ಸಂಶೋಧನೆಗಳು ಮಹಿಳೆಯರ ಅನುಕೂಲಕ್ಕೆ ಒದಗಿಬಂದಿವೆ. ಒಂದು ಕಾಲಕ್ಕೆ ಕೇವಲ ಪ್ರತ್ಯಕ್ಷ ಸಾಕ್ಷಿ, ಸಾಂದರ್ಭಿಕ ಪುರಾವೆಗಳ ಮೇಲೆ ಆಧರಿಸಿದ್ದ ಅತ್ಯಾಚಾರದ ಕೇಸುಗಳಲ್ಲಿ ಅಪರಾಧಿ ಸುಲಭವಾಗಿ ನುಣುಚಿ ಕೊಳ್ಳಬಲ್ಲವನಾಗಿದ್ದ. ಇಲ್ಲಿಯವರೆಗೂ ಉಪಯೋಗಿಸುತ್ತಿದ್ದ ಜೀವ ರಸಾಯನಿಕ ಫರೆನ್ಸಿಕ್ ತಂತ್ರಗಳು ನಿಖರವಿರಲಿಲ್ಲ. ಇಂದು 'ಡಿ.ಎನ್.ಎ. ಬೆರಳಚ್ಚು ತಂತ್ರ' ಫರೆನ್ಸಿಕ್ ಸಲಕರಣೆಯಾಗಿ ಅತ್ಯಾಚಾರಿಯ ಪತ್ತೆಗೆ ಅತ್ಯಂತ ಸಹಾಯಕವಾಗಿದೆ. ಡಿ.ಎನ್.ಎ. ತಂತ್ರ ಇಂದು 'ತಂದೆತನ'ವನ್ನು ಸಾಬೀತು ಪಡಿಸಬಲ್ಲದು. ಹೆಣ್ತನದೊಡನೆ ಶೀಲ ಪಾತಿವ್ರತ್ಯವನ್ನು ತಾಳೆ ಹಾಕಿರುವ ಪುರುಷ ಪ್ರಧಾನ ಸಮಾಜದಲ್ಲಿ, ಹುಟ್ಟುವ ಮಗುವಿನ ತಂದೆತನ ಬಹಳ ಮುಖ್ಯವಾಗಿದೆ. ಆದರೆ ಇಂದಿನವರೆಗೂ ಅದರ ನಿಖರ ಸಾಬೀತು ಅಸಾಧ್ಯವಿತ್ತು. 1942ರಲ್ಲಿ, ಹದಿನೆಂಟು ವರ್ಷದ ಕನ್ಯೆ ಜೆನಿವಿವ್ ಲೋರಿಯನ್ನು, ಆಕೆಗೆ ಕೆಲಸ ಕೊಟ್ಟಿದ್ದ ಜಾನ್ ಬ್ರೂಕ್ಸ್ ಬಲಾತ್ಕರಿಸಿದ ಫಲವಾಗಿ ಡಯಾನ ಹುಟ್ಟಿದಳು. ತನ್ನ ತಂದೆತನದ ಜವಾಬ್ದಾರಿ ಹೊರದೆ, ಲೋರಿಯ ಶೀಲದ ಮೇಲೆ ಆಪಾದನೆ ಹೇರಿ ತಪ್ಪಿಸಿಕೊಂಡಿದ್ದ ಬ್ರೂಕ್ಸ್, ತನ್ನ ಗೋರಿಯಿಂದ ಎದ್ದು ಬಂದು ಒಪ್ಪಿಕೊಳ್ಳಬೇಕಾಯಿತು. 1992ರಲ್ಲಿ ಮಗಳು ಡಯಾನಾ ಅದಾಗಲೇ ಸತ್ತ ಬ್ರೂಕ್ಸ್‌ನ ಶವವನ್ನು ಹೊರತೆಗೆಸಿ ಡಿ.ಎನ್.ಎ. ಪರೀಕ್ಷೆಯಿಂದ ಆತ ತನ್ನ ತಂದೆಯೆಂದು ಸಾಬೀತು ಪಡಿಸಿ, ಆತನ ಆಸ್ತಿಯ ಹಕ್ಕನ್ನು ಪಡೆದುದಲ್ಲದೆ ತನ್ನ ತಾಯಿಯ 'ಬಲತ್ಕಾರ'ದ ಕತೆ ಸುಳ್ಳಲ್ಲವೆಂದು ಸಾಬೀತು ಪಡಿಸಿದಳು.

**ಯುದ್ಧ ತಂತ್ರಜ್ಞಾನ** : ಶತಮಾನದ ವಿಜ್ಞಾನ ತನ್ನ ಬದುಕನ್ನು ಇನ್ನಿಲ್ಲದಂತೆ ಬದಲಿಸಿತು. ಗೃಹೋಪಕರಣಗಳ ರೂಪದಲ್ಲಿ ದಿನದಿನದ ಬದುಕನ್ನು ಹಗುರಾಗಿಸಿತು. ವಾಯುಯಾನ ಪ್ರಪಂಚದ ಈ ಮೂಲೆಯಿಂದ

## ಪ್ರೇಮಿಗಳು

ಹಗಲು ತನ್ನ ಒಡಲಿಂದ
ಇರುಳನ್ನು ಬಿಟ್ಟು ಕೊಡುವುದೆ?
ಇರುಳು ತನ್ನ ಎದೆಯಲ್ಲಿ
ಹಗಲನ್ನು ಕಾಯುತ್ತಲಿದೆ!
ಯುಗ ಯುಗ ಕಳೆದರೂ
ಇವು ಒಂದನ್ನೊಂದು
ಬಿಟ್ಟಿರಲಾರವು
ಏಕೆ ಗೊತ್ತೇ ನಲ್ಲೆ?
ನಿನ್ನೊಳಗೆ ನಾನು ಅಡಗಿರುವಂತೆ
ನನ್ನೊಳಗೆ ನೀನು ಅರಳಿರುವಂತೆ
ಇವೂ ಗುಪ್ತ ಪ್ರೇಮಿಗಳು!

■ ಎಂ.ಎನ್.ವ್ಯಾಸರಾವ್

ಆ ಮೂಲೆಗೆ ಗಂಟೆಗಳಲ್ಲಿ ತಲುಪಲು ಸಾಧ್ಯವಾಗಿಸಿತು. ದೂರಸಂಪರ್ಕ ವಿಧಾನಗಳು ಇಡೀ ಭೂಮಿಯನ್ನು ಒಂದು ಕುಟುಂಬದಷ್ಟು ಹತ್ತಿರಕ್ಕೆ ಎಳೆತಂದವು. ಕಂಪ್ಯೂಟರುಗಳು ಬಹಳಷ್ಟು ಸ್ವಯಂಚಾಲಿತಗೊಳಿಸಿವೆ. ವೈದ್ಯರಂಗ ಪ್ರಾಣಾಂತಕಾರಿ ರೋಗಗಳಿಗೆ ಔಷಧವನ್ನು ಕಂಡು ಹಿಡಿಯಿತು. ಮನುಷ್ಯ ಆಕಾಶದಲ್ಲಿ ಹಾರಿದ, ಚಂದ್ರನಲ್ಲಿ ಕಾಲೂರಿ ಬಂದ, ಅಂತರಿಕ್ಷದ ಆಳಕ್ಕೆ ನೌಕೆಗಳನ್ನು ಕಳುಹಿಸಿದ, ಕೃತಕ ಉಪಗ್ರಹಗಳನ್ನು ಉಡಾಯಿಸಿದ. ಇಷ್ಟೆಲ್ಲ ಅದ್ಭುತಗಳನ್ನು ಸಾಧಿಸಿ, ಮಾನವನ ಬದುಕನ್ನು ಇನ್ನಿಲ್ಲದಂತೆ ಸುಧಾರಿಸಿದ ಈ ಶತಮಾನದಲ್ಲಿಯೇ ಲಕ್ಷ ಲಕ್ಷ ಜನರನ್ನು ಕ್ಷಣದಲ್ಲಿ ಭಸ್ಮ ಮಾಡುವ ಭಯಂಕರ ಯುದ್ಧಶಸ್ತ್ರಾಸ್ತ್ರಗಳನ್ನೂ ವಿಜ್ಞಾನದ ವಿಕೃತ ಆಳವಡಿಕೆಗಳು ತಂದುಕೊಟ್ಟವು.

ಯುದ್ಧ ಮನುಷ್ಯನಷ್ಟೇ ಹಳೆಯದಾಗಿದ್ದರೂ, ಕತ್ತಿ, ಬಿಲ್ಲು-ಬಾಣ ಹಿಡಿದು ಒಬ್ಬನು ಇನ್ನೊಬ್ಬನನ್ನು ಮಾತ್ರ ಕೊಲ್ಲುತ್ತಿದ್ದ ಕಾಲ ಮುಗಿದು ಇಪ್ಪತ್ತನೇ ಶತಮಾನ 'ಬೈಜಿಕ, ಜೈವಿಕ, ರಾಸಾಯನಿಕ ಯುದ್ಧ'ಗಳಿಗೆ ಹಾಗೂ 'ಎಲೆಕ್ಟ್ರಾನಿಕ್‌ಯುದ್ಧ'ಗಳಿಗೆ ಜನ್ಮ ಕೊಟ್ಟಿತು. ಆಗಸ್ಟ್ 6, 1945. ಹಿರೋಷಿಮಾದ ಆಗಸದಲ್ಲಿ ಸಹಸ್ರ ಸೂರ್ಯರ ಕಣ್ಣು ಕುಕ್ಕುವ ಬೆಳಕು. ಜಗತ್ತಿನ ಮೊಟ್ಟ ಮೊದಲ ಪರಮಾಣು ಬಾಂಬ್ ಸ್ಫೋಟಿಸಿತ್ತು. ಒಂದು ಲಕ್ಷಕ್ಕೂ ಹೆಚ್ಚು ಜನರ ಜೀವ ಕಿತ್ತುಕೊಂಡು, ಹಿರೋಷಿಮಾ ನಗರವನ್ನು ಕ್ಷಣದಲ್ಲಿ ಸಂಪೂರ್ಣ ನಾಶ ಮಾಡಿತ್ತು.

ಇಂದಿನ ಸಮರಗಳು ವಿಜ್ಞಾನದ ವಿವಿಧ ರಂಗಗಳ ಸಂಶೋಧನೆಯ ಲಾಭ ಪಡೆದು ಅತ್ಯಂತ ಆತಂಕಕಾರಿ ಅಸ್ತ್ರಗಳ ಸಾಧ್ಯತೆಗೆ ಹುಟ್ಟು ಕೊಟ್ಟಿವೆ. ಜೆನಿಟಿಕ್ ರಂಗದ ಮುನ್ನಡೆ, ಪ್ರಯೋಗಶಾಲೆಯಲ್ಲಿ ಹಾನಿಕಾರಕ ಹೊಸ ರೋಗಾಣುಗಳನ್ನು ಸೃಷ್ಟಿಸಿದರೆ, ಪರಮಾಣು ಶಕ್ತಿಯ ಅರಿವು ವಿಧ್ವಂಸಕ ಯುದ್ಧಗಳ ಸಾಧ್ಯತೆಯನ್ನು ತಂದಿತು. ರಾಸಾಯನಿಕಗಳು ಮನುಷ್ಯನನ್ನು ಕೊಲ್ಲಬಲ್ಲ ಬಗೆ ಬಗೆಯ ವಿಷರೂಪವನ್ನು ತಳೆದವು. ಇಂದು 'ಬೈಜಿಕ, ಜೈವಿಕ, ರಾಸಾಯನಿಕ ಯುದ್ಧ' (nuclear, biological, chemical warfare) ಮಿಲಿಟರಿ ತಂತ್ರಜ್ಞಾನದ ಮತ್ತೊಂದು ಪ್ರಭೇದವಾಗಿ ಬೆಳೆದಿದೆ.

ಅತ್ಯಂತ ಸಣ್ಣ ಪರಮಾಣು ಕಣಗಳಲ್ಲಿ ಅಡಗಿರುವ ಅಗಾಧ ಶಕ್ತಿಯ ಅರಿವು ಅಣುಬಾಂಬಿನ ಅನ್ವೇಷಣೆಗೆ ಕಾರಣವಾಯಿತು. ಅಪಾಯಕಾರಿ ರಾಸಾಯನಿಕ ಅಸ್ತ್ರಗಳು ಜನಸಮೂಹವನ್ನೇ ನಾಶಮಾಡಬಲ್ಲ ಶಕ್ತಿಯನ್ನು ಪಡೆದಿವೆ. ಉಸಿರು ಕಟ್ಟಿಸುವ, ಕಣ್ಣು, ಚರ್ಮ, ಶ್ವಾಸಕೋಶಗಳ ಮೇಲೆ ಪ್ರಭಾವ ಬೀರುವ ರಾಸಾಯನಿಕಗಳು ಮಾತ್ರವಲ್ಲ, ನರಗಳ ಮೇಲೆ ಪರಿಣಾಮ ಬೀರುವ ರಾಸಾಯನಿಕಗಳು, ಭ್ರಮೆ ಹುಟ್ಟಿಸುವ ಮನೋರಾಸಾಯನಿಕಗಳು ಕೂಡಾ ಇಂದು ತಯಾರಾಗುತ್ತಿವೆ.

ಇಪ್ಪತ್ತನೇ ಶತಮಾನದಲ್ಲಿ 'ವಂಶವಾಹಿ'ಯನ್ನು (gene) ಕುರಿತು ನಡೆದ ಮಹತ್ತರದ ಅನ್ವೇಷಣೆಗಳು, ಜೈವಿಕ ಯುದ್ಧಕಾರಕಗಳ ಭಯಂಕರ ಸಾಧ್ಯತೆಯನ್ನು ಹೆಚ್ಚಿಸಿದವು. ತೀವ್ರ ಅಪಾಯಕಾರಿ ಏಕಾಣುಗಳನ್ನು, ಯಾವ ವೈದ್ಯ ಚಿಕಿತ್ಸೆಗೂ ಬಗ್ಗದ, ಪ್ರಯೋಗಶಾಲೆಯಲ್ಲಿ ಅನುವಂಶಿಕವಾಗಿ ಬದಲಾಯಿಸಿ ಸೃಷ್ಟಿಸಿದ ಏಕಾಣುಗಳನ್ನು ದೊಡ್ಡ ಜನ ಸಮುದಾಯದ ಮೇಲೆ ಹಾಯಬಿಡುವ ಭೀತಿ ಇದೆ.

ಜೆನಿಟಿಕ್ ರಂಗದ ಸಂಶೋಧನೆಗಳು ಜೈವಿಕ ಯುದ್ಧದ ಸಾಧ್ಯತೆಗಳ ಬಗ್ಗೆ ದಿಗಿಲು ಹುಟ್ಟಿಸಬಲ್ಲವು. ಕಾರಣ ಜೆನಿಟಿಕ್ ರಂಗದ ಸಂಶೋಧನೆ ಮತ್ತು ತಂತ್ರಜ್ಞಾನ, ಪ್ರಕೃತಿಯಲ್ಲಿ ದೊರೆಯುವುದಕ್ಕಿಂತಲೂ ಹೆಚ್ಚು ಅಪಾಯಕಾರಿ ಜೀವಾಣುಗಳನ್ನು ಸೃಷ್ಟಿಸಬಲ್ಲದಾಗಿದೆ. ಇಂದು ಸಿಡುಬಿನಂಥ ಅನೇಕ ರೋಗಗಳನ್ನು ವೈದ್ಯ ರಂಗ ಸಂಪೂರ್ಣ ನಿವಾರಿಸಿ ಜಯಗಳಿಸಿರುವಾಗ, ಅದರ ಪಕ್ಕದಲ್ಲಿಯೇ ಹೊಸ ಹೊಸ ರೋಗಾಣುಗಳನ್ನು ಪ್ರಯೋಗಶಾಲೆಯಲ್ಲಿ ಸೃಷ್ಟಿಸುತ್ತಿರುವ ವಿಪರ್ಯಾಸವಿದೆ.

ಎಲೆಕ್ಟ್ರಾನಿಕ್ಸ್ ಮಿಲಿಟರಿ ತಂತ್ರಜ್ಞಾನದಲ್ಲೂ ಅಗಾಧ ಬದಲಾವಣೆಯನ್ನು ತಂದಿದೆ. ಕತ್ತಿ, ಬಿಲ್ಲು-ಬಾಣ ಹಿಡಿದ ಯುದ್ಧಗಳು ಎಂದೋ ಬದಲಾಗಿ, ಸಿಡಿಮದ್ದುಗಳೊಡನೆ ಗುದ್ದಾಡುತ್ತಿದ್ದ ಯುದ್ಧ ತಂತ್ರಜ್ಞಾನವನ್ನು ಎಲೆಕ್ಟ್ರಾನಿಕ್ಸ್ ಸಂಪೂರ್ಣ ಬದಲಿಸಿ, ಇಂದಿನ ಯುದ್ಧಗಳು 'ಎಲೆಕ್ಟ್ರಾನಿಕ್ ಯುದ್ಧ'ಗಳಾಗಿವೆ. ಕತ್ತಲಲ್ಲೂ ಶತ್ರುವನ್ನು ಪತ್ತೆ ಹಚ್ಚಿ ಗುರುತಿಸುವ, ಆಕಾಶ, ನೆಲ, ನೀರು ನೀರಿನಾಳದಲ್ಲಿ ಅವಿತ ಶತ್ರುವನ್ನೂ ಹೊಡೆದುರುಳಿಸುವ, ಕಂಪ್ಯೂಟರ್ ಪಟಲದಲ್ಲಿ ನೋಡಿ, ವೀಡಿಯೋ ಆಟದಂತೆ ಗುಂಡಿ ಒತ್ತಿ ಕ್ಷಿಪಣಿಗಳನ್ನು ಗುರಿ ಇಟ್ಟು ಬಿಡುಗಡೆ ಮಾಡುವ ಸಾಧ್ಯತೆಯನ್ನು ತಂದಿದೆ. ಇಂದು ಸಾವಿರಾರು ಕಿಲೋಮೀಟರ್ ಆಚೆಗಿನ ಶತ್ರು ರಾಷ್ಟ್ರವನ್ನು ಕುಳಿತಲ್ಲಿಂದಲೇ ಗುಂಡಿ ಒತ್ತಿ ಉತ್‌ಕ್ಷೇಪಕ ಕ್ಷಿಪಣಿಗಳ (ballistic missiles) ಮೂಲಕ ಧ್ವಂಸ ಮಾಡಬಹುದಾಗಿದೆ. ಇದರಾಚೆಗೆ ಯುದ್ಧದಲ್ಲಿ ವೃಥಾ ನಮ್ಮ ಯೋಧರೇಕೆ ಸಾಯುವುದು ಎಂದು, ಚಾಲಕನೇ ಇಲ್ಲದ ಸ್ವಯಂ ಚಾಲಿತ ರೋಬಾಟ್ ಯುದ್ಧ ವಾಹನ, ವಿಮಾನಗಳು ವಿನ್ಯಾಸಗೊಳ್ಳುತ್ತಿವೆ.

★ ★ ★

ಇದು ಶತಮಾನದ ಅಂಚಿನ ಒಂದು ಹಿನ್ನೋಟ. ಕಳೆದ ನೂರು ವರ್ಷಗಳ ವಿಜ್ಞಾನ ಮತ್ತು ತಂತ್ರಜ್ಞಾನದ ಅಖಂಡ ಅಭಿವೃದ್ಧಿಯ ಕಿರು ನೋಟ ಮಾತ್ರ. ಈ ಶತಮಾನದ ವಿಜ್ಞಾನ ಕೇವಲ ಸೈದ್ಧಾಂತಿಕ ಕುತೂಹಲವಾಗಿ ಪ್ರಯೋಗಶಾಲೆಯಲ್ಲಿ ನಿಲ್ಲಲಿಲ್ಲ, ಪ್ರತಿ ರಂಗದ ಸಂಶೋಧನೆಗಳು ಜನಸಾಮಾನ್ಯರ ಬದುಕಿನ ಮೇಲೆ ನೇರ ಪರಿಣಾಮ ಬೀರುವ ತಾಂತ್ರಿಕ ಸಾಧ್ಯತೆಯಾಗಿ ಹೊರಬಿದ್ದವು. ಮನುಷ್ಯನ ದಿನ ದಿನದ ಬದುಕನ್ನು, ಇನ್ನಿಲ್ಲದಂತೆ ಬದಲಾಯಿಸಿದವು. ■

## ಬಿಚ್ಚುವುದು....



ಬಿಚ್ಚುವುದು ಮೊಗ್ಗು
ದಳವನ್ನು
ಮುಂಜಾನೆಯಲ್ಲಿ
ಬಿಚ್ಚುವುದು ಬಾನು
ನಕ್ಷತ್ರಗಳನ್ನು
ರಾತ್ರಿ ಹೊತ್ತಿನಲ್ಲಿ
ಬಿಚ್ಚುತ್ತೇವೆ ನಾವು
ಮನಸನ್ನು
ಆತ್ಮೀಯರಲ್ಲಿ
ಮುಚ್ಚುತ್ತೇವೆ ಹೃದಯ
ಕದವನ್ನು
ಪ್ರೀತಿ ಸಿಕ್ಕದಲ್ಲಿ!

■ ಎಂ.ಎನ್.ವ್ಯಾಸರಾವ್

---

## ನಂಗ್ಯಾಕೆ ಸೀಟಿಲ್ಲ?

**ಯೂನಿವರ್ಸಿಟಿಯ ಪ್ರೊಫೆಸರ್ ಒಬ್ಬರು ಬೆಂಗಳೂರಿಗೆ ಹೋಗಲು ಹೊಸಪೇಟೆ ಬಸ್‌ಸ್ಟ್ಯಾಂಡ್‌ಗೆ ರಾತ್ರಿ ಹತ್ತಕ್ಕೆ ಬಂದರು. ಬಸ್‌ನಲ್ಲಿ ಸೀಟಿರಲಿಲ್ಲ. ಕಂಡಕ್ಟರ್ 'ಸೀಟಿಲ್ಲ' ಎಂದ. ಗಡಂಗಿನಿಂದ ಬಂದಿದ್ದ ಪ್ರೊಫೆಸರ್ ಸೀದಾ ಬಸ್‌ನ ಮುಂದಕ್ಕೆ ಹೋಗಿ ಮುಷ್ಕರ ನಿಂತು ಕೂಗತೊಡಗಿದರು ''ನಂಗ್ಯಾಕೆ ಸೀಟಿಲ್ಲ? ನಾನು ಯಾರು ಅಂತ ಗೊತ್ತೋ? ಎಂ.ಎಲ್.ಎ ಸೀಟು ಇಲ್ಲವೋ....'' ಸದ್ಯ, ಈ 'ರಂ'ಪ್ರಿಯ 'ಕೀ' ಪ್ರೊಫೆಸರರು ಹಂಪಿ ವಿಶ್ವವಿದ್ಯಾಲಯ ತ್ಯಜಿಸಿ ಬೆಂಗಳೂರು ಸೇರಿದ್ದಾರೆ.**

ಟಿ.ಆರ್.ಮಹಾಲಿಂಗಂ ಅನ್ನುವುದಕ್ಕಿಂತ ಮಾಲಿ ಎಂದರೇ ಥಟ್ಟನೆ ಜನಕ್ಕೆ ಅರ್ಥವಾಗುವುದು. ವೇಣುವಾದನ ನಿಪುಣರಾದ ಅವರು ಅಷ್ಟೇ ಮೂಡಿ. ಎಂಥ ದೊಡ್ಡ ಕಚೇರಿ ಇರಲಿ, ತಮಗೆ ಇಷ್ಟ ಇಲ್ಲದಿದ್ದರೆ ಮುಲಾಜಿಲ್ಲದೆ ಕೈಕೊಡುತ್ತಿದ್ದ ಅವರ ವರ್ತನೆ ಪರಿಚಿತ. ಹೀಗಾಗಿ ಮಾಲಿಯ ಸಂಗೀತ ಕಚೇರಿ ಇದೆ ಎಂದರೆ ಸಂಘಟಕರಿಗೆ ಪೀಕಲಾಟ. ಅಕಸ್ಮಾತ್ ಅವರು ಬಂದು ಕಚೇರಿ ನಡೆಸಿಕೊಟ್ಟರೆ ರಸಿಕರಿಗೆ ರಸದೌತಣ. ಅವರ ಬದುಕಿನ, ಮನಸ್ಸಿನ ನಾನಾ ಮುಖಗಳನ್ನು ಇಲ್ಲಿ ಪರಿಚಯಿಸುವ ಯತ್ನ ಇದೆ.



# 'ಮಾಲಿ' ವಿಕ್ಷಿಪ್ತ ಮನಸ್ಸಿನ ಜೀನಿಯಸ್

■ ರಾಜು

ಸರ್ವೇಪಲ್ಲಿ ರಾಧಾಕೃಷ್ಣನ್ ರಾಷ್ಟ್ರಾಧ್ಯಕ್ಷರಾಗಿದ್ದಾಗ, ರಾಷ್ಟ್ರಪತಿಭವನದಲ್ಲಿ ಅವರ ಇಚ್ಛೆಯಮೇರೆಗೆ ಮಹಾಲಿಂಗಮ್ ಅವರ ಕೊಳಲು ಕಛೇರಿ ಏರ್ಪಡಿಸಿದ್ದರು. ನಾಡಿನ ಎಂಥ ಕಲಾವಿದರೇ ಆಗಲಿ ಈ ಪ್ರೆಸ್ಟಿಜಿಯಸ್ ಅವಕಾಶಕ್ಕೆ ಕೊಲೆ, ಹಾದರ ಮಾಡಲೂ ತಯಾರಿದ್ದರು. ಆದರೆ ವಿಕ್ಷಿಪ್ತ ಮನಸ್ಸಿನ, ಯಾರನ್ನೂ ಪೂರ್ತಿ ನಂಬದ ಕೊಳಲು ಮೇಧಾವಿ ಮಹಾಲಿಂಗಮ್ ಅವರ ವಿಷಯವೇ ಬೇರೆ. ಕಛೇರಿಗೇನೋ ಒಪ್ಪಿ ವೇದಿಕೆಯಮೇಲೆ ಮತ್ತೊಬ್ಬ ಪಿಟೀಲು ಮೇಧಾವಿ ಎಂ.ಎಸ್.ಗೋಪಾಲಕೃಷ್ಣರ ಜತೆ ಇದ್ದರು. ಕೈಯಲ್ಲಿ ಕೊಳಲೂ ಇತ್ತು ಕಛೇರಿ ಆರಂಭವಾಗುವ ಮುನ್ನ ಒಂದು ಸಣ್ಣ ಭಾಷಣವಾಯಿತು. ಮಹಾಲಿಂಗಮ್ ಅವರ ಪ್ರತಿಭೆ ಕೊಂಡಾಡುವುದರ ಜತೆಯಲ್ಲೇ (ಕಛೇರಿಯ ಜವಾಬ್ದಾರಿ ಹೊತ್ತಿದ್ದ) ಶರ್ಮ ಎಂಬುವವರನ್ನು ಹೊಗಳಿ, ''ಶರ್ಮ ಇಲ್ಲದಿದ್ದರೆ, ಈ ಕಛೇರಿ ಸಾಧ್ಯವಾಗುತ್ತಿರಲಿಲ್ಲ'' ಎಂದುಬಿಟ್ಟರು.

ಅಷ್ಟೇ ಸಾಕಾಯಿತು. ಮಹಾಲಿಂಗಮ್, ''ಇಲ್ಲಿ ಬಂದೆ'' ಎಂದು ಗ್ರೀನ್‌ರೂಮ್ ಕಡೆ ಧಾವಿಸಿದರು. ಅವರು ಊದುವ ಕೊಳಲು ವೇದಿಕೆಯ ಮೇಲೆಯೇ ಇದ್ದುದರಿಂದ ಈಗಲೋ ಆಗಲೋ ಹಿಂದಿರುಗಬಹುದೆಂದು ಎಲ್ಲರೂ ತಿಳಿದಿದ್ದರು. ಆದರೆ ಮಹಾಲಿಂಗಮ್ ಅವರು ಗ್ರೀನ್‌ರೂಮಿನ ಇನ್ನೊಂದು ಬಾಗಿಲಿನಿಂದ ಮಾಯವಾಗಿ, ರಾಷ್ಟ್ರಪತಿಭವನದಿಂದ ಹೊರಬಂದು ಮೃದಂಗ ವಿದ್ವಾನ್ ಮತ್ತು ತಮ್ಮ ನೆಚ್ಚಿನ ಸ್ನೇಹಿತರಾದ ನಟರಾಜ ಅಯ್ಯರ್ ಎಂಬುವವರ ಮನೆ ಸೇರಿ, ಬಳಿಗೆ ಸಿಕ್ಕ ಮೊಟ್ಟಮೊದಲ ರೈಲಿನಲ್ಲಿ ಬೊಂಬಾಯಿಗೆ ಪಲಾಯನಗೈದರು. ನಟರಾಜಯ್ಯರ್‌ಗೆ ಮಹಾಲಿಂಗಮ್ ಹೇಳಿದ್ದು ತಮ್ಮ ಕಛೇರಿ ಕೊಡುವಂತಹ ಮನಸ್ಸಿರಲಿಲ್ಲ ಎಂದು. ಅತ್ತ ರಾಷ್ಟ್ರಪತಿ ಭವನದಲ್ಲಿ ಮುಖ್ಯ ಕಲಾವಿದ ಪಲಾಯನವಾಗಿದ್ದಾರೆ ಎಂದು ನಂಬಲೇ ಸ್ವಲ್ಪ ಸಮಯ ಹಿಡಿಯಿತು. ಕಡೆಗೆ ಎಂ.ಎಸ್. ಗೋಪಾಲಕೃಷ್ಣರ ಸೋಲೋ ವೈಯೊಲಿನ್ ಕಛೇರಿಗೆ ತೃಪ್ತಿ ಪಟ್ಟುಕೊಳ್ಳ ಬೇಕಾಯಿತು.

ತಮ್ಮ ಹದಿನಾರನೇ ವಯಸ್ಸಿಗೆ ಆರಂಭವಾದ ಈ ಪರಿವರ್ತನೆ ಮಹಾಲಿಂಗಮ್ ಅವರ ಅರವತ್ತು ವರ್ಷ ಆಯಸ್ಸಿನಲ್ಲಿ ನೂರಾರು ಬಾರಿ ಪುನರಾವರ್ತನೆ ಆಗಿದೆ. ಭಾರತದ ಅತ್ಯುತ್ತಮ, ವಿಶ್ವದ

ಅತ್ಯುತ್ತಮ ಕೊಳಲು ವಾದಕರಲ್ಲಿ ಒಬ್ಬರಾದ ಮಹಾಲಿಂಗಮ್ ಅವರ ಕಛೇರಿ ಇದೆ ಎಂದ ತಕ್ಷಣ, ಅವರ ಅಭಿಮಾನಿಗಳಲ್ಲಿ ಆಗುವ ಆತಂಕ ಕಛೇರಿ ಆರಂಭವಾಗುತ್ತೊ ಇಲ್ಲವೋ ನಂತರ, ಅನೇಕ ಬಾರಿ ಕಛೇರಿ ಪೂರ್ತಿ ಆಗುತ್ತೋ ಇಲ್ಲವೋ ಎಂಬುದೇ. ಕಛೇರಿ ನಡೆದಲ್ಲಿ ಅದೂ ಪೂರ್ತಿ ನಡೆದಲ್ಲಿ, ಜೊಲ್ಲು ಸುರಿಸುತ್ತ ಲೊಚಗುಟ್ಟುತ್ತ ಸಂಗೀತವನ್ನು ಚಪ್ಪರಿಸಿಕೊಂಡು ಹಿಂದಿರುಗುವವರೇ ಹೆಚ್ಚು.

ಕೆಲವರು ಈ ಕುಡುಕ ಜೀನಿಯಸ್ ಸಹವಾಸವೇ ಬೇಡ ಎಂದು ಬೇಸರಪಟ್ಟಿದ್ದಾರೆ. ಮಾಲಿ ಹೇಳುವುದು ತಮ್ಮ ಹದಿಮೂರು ಹಸಿದ ಕುಟುಂಬ ಸದಸ್ಯರಿಗೋಸ್ಕರ ತಾವು ಕಛೇರಿ ಕೊಡುವುದು. ನನ್ನ ಮನಸ್ಸಿಗೆ ತೃಪ್ತಿಯಾಗುವಂತಹ ಸಂಗೀತ ನೀಡಲು ಸರಿಯಾದ ಚೈತನ್ಯ, ಸ್ಫೂರ್ತಿ ಇಲ್ಲದಾಗ, ಕಛೇರಿ ಕೊಡದಿರುವುದೇ ಮೇಲು ಎನ್ನುತ್ತಾರೆ. ರಾಷ್ಟ್ರಪತಿ ಭವನದಲ್ಲಿ ಕಛೇರಿ ರದ್ದಾದ ದಿನ ಮಹಾಲಿಂಗಮ್ ಕುಡಿದಿರಲಿಲ್ಲ. ಮತ್ತೆ ಕಛೇರಿ ರದ್ದಾದದ್ದು ಏಕೆ ಎಂದು ನೀವು ತಿಳಿಯಬೇಕಾದರೆ ಅವರ ಜೀವನವನ್ನೊಮ್ಮೆ ಮೆಲುಕು ಹಾಕಬೇಕು.



ಬಾಲಕ ಮಾಲಿ

1926ರ ನವೆಂಬರ್ ಆರರಂದು ತಂಜಾವೂರಿನ ತಲ್ಲೆನಯಾರ್ ಹಳ್ಳಿಯಲ್ಲಿ ರಾಮಸ್ವಾಮಿ ಅಯ್ಯರ್ ಬ್ರಹದಾಂಬಾಳ್ ದಂಪತಿಗಳಿಗೆ ಮಹಾಲಿಂಗಮ್ ಜನಿಸಿದರು. ಜತೆಗೆ ಆರು ಮಂದಿ ಅಣ್ಣ ತಮ್ಮಂದಿರು, ಅಕ್ಕತಂಗಿಯರು, ತಂದೆಗೆ ಸ್ವಲ್ಪ ಜಮೀನಿತ್ತು. ಜತೆಗೆ ಆ ಕಾಲದಲ್ಲಿ ಆ ಗ್ರಾಮದಲ್ಲಿ ಕ್ರಾಂತಿಕಾರಿ ಎನ್ನಬಹುದಾದ ಲಾಂಡ್ರಿ ಮಾಡಿ, ಮಾರುವ ಅವಶ್ಯಕತೆ ಇತ್ತು. ಮಾಲಿಗೆ ಮೂರು ವರ್ಷವಾದಾಗ ಕೈಮೇಲೆ ಬೊಕ್ಕೆ ಬಂದು ಅದರ ನಿರ್ಮೂಲನೆಗೆ ತಿರುಚಿಯಲ್ಲಿದ್ದ ತಾತನ ಮನೆಗೆ ಕಳಿಸಿದರು. ಮಾಲಿ ತದನಂತರ ತನ್ನ ಹುಟ್ಟೂರಿಗೆ ಬರಲೇ ಇಲ್ಲ. ಬಡತನ ತಾಳದೆ ಇಡೀ ಕುಟುಂಬ ತಿರುಚಿಯಲ್ಲಿಯೇ ವಾಸಿಸತೊಡಗಿದರು.

ತಾತ ರಾಮಸ್ವಾಮಿ ಅಯ್ಯರ್‌ಗೆ ಮತ್ತೊಬ್ಬ ಬಡವ ಚಿಕ್ಕಪ್ಪ ಇದ್ದರು. ವಯೊಲಿನ್, ಕೊಳಲು, ಹಾರ್ಮೋನಿಯಮ್ ನುಡಿಸುವ ಗೋಪಾಲ್ ಅಯ್ಯರ್ ಅವರನ್ನು ತಿರುಚಿಗೇ ಬರುವಂತೆ ಮಾಡಿ, ಅವರಿಗೆ ಜೀವನಕ್ಕೆ ಸಹಾಯವಾಗಲು ಸಂಗೀತ ಪಾಠಕ್ಕೆ ಕೆಲವರು ಹುಡುಗರನ್ನು, ಹುಡುಗಿಯರನ್ನು ಗೊತ್ತು ಮಾಡಿದರು. ಮಹಾಲಿಂಗಮ್ ಅವರನ್ನು, ಅವರ ಅಣ್ಣ ಗೌತಮ್, ಅಕ್ಕ ದೇವಕಿಯನ್ನೂ ಪಾಠಕ್ಕೆ ಕಳಿಸುತ್ತಿದ್ದರು. ಗೌತಮ್ ಕೊಳಲು ಕಲಿತ. ತೀರ ಕೃಶನಾಗಿದ್ದ ಮಾಲಿ ಕೊಳಲು ಕಲಿತರೆ ಆರೋಗ್ಯ ಇನ್ನೂ ಹದಗೆಡಬಹುದೆಂದು ವೋಕಲ್ ಕಲಿಯಲು ಬಿಟ್ಟರು. ಗೌತಮ್ ನುಡಿಸುವುದನ್ನು ಕೇಳಿ, ಜತೆಗೆ ಸ್ಕೂಲಿನಲ್ಲಿ ಮಿಕ್ಕಹುಡುಗರು ಕೊಳಲು ನುಡಿಸುವುದನ್ನು ಕೇಳುತ್ತಿದ್ದ, ಯಾರೂ ಇರದಿದ್ದಾಗ, ಮಾಲಿ ಕೊಳಲು ಊದಲಾರಂಭಿಸಿದ. ಅದರಿಂದ ಬಂದ ನಾದಕ್ಕೆ ಮನಸೋತು, ಮತ್ತಷ್ಟು ನುಡಿಸಿದ. ಕಳ್ಳನಂತೆ ನುಡಿಸುತ್ತಿದ್ದ ಈ ಬಾಲಕನ ನಾದಮಾಧುರ್ಯ ಕೇಳಿ ಗೋಪಾಲ್ ಅಯ್ಯರ್ ಮಾಲಿಗೆ ಕೊಳಲು ನುಡಿಸಲು ಅವಕಾಶವನ್ನೇ ಬೇಡಿದರು. ಮಾಲಿ ತಂದೆ ಒಪ್ಪಲಿಲ್ಲ. ಮಾಲಿಯ ಕಳ್ಳತನದ ಕೊಳಲು ನುಡಿಸುವಿಕೆ ಮುಂದುವರಿಯತ್ತಲೇ ಇತ್ತು.

ಒಮ್ಮೆ, ಇನ್ನೂ ಆರು ವರ್ಷವಾಗಿದ್ದಾಗ, ಮಾಲಿಯ ಭೈರವಿಯ ಅಟತಾಳದ ''ವೆರಿಬೋಣಿ'' ವರ್ಣವನ್ನು ನುಡಿಸಿದಾಗ ಗುರು ಗೋಪಾಲ ಅಯ್ಯರ್‌ಗೆ ಆಶ್ಚರ್ಯಕ್ಕಿಂತ ಆನಂದ ಉಂಟಾಯಿತು. ಮಾಲಿಯ ತಂದೆ ರಾಮಸ್ವಾಮಿ ಅಯ್ಯರ್‌ಗೆ ದುಂಬಾಲು ಬಿದ್ದು ಎರಡು ವರ್ಷ ಕೊಳಲು ಪಾಠ ಮಾಡಿದರು.

ಮಾಲಿಗೆ ಬುದ್ಧಿಶಕ್ತಿ, ಗ್ರಹಣಶಕ್ತಿ ಅಪಾರವಾದದ್ದು. ಒಂದು ಬಾರಿ ಯಾರಾದರೂ ಹಾಡಿದರೆ, ನುಡಿಸಿದರೆ ಅದನ್ನು ಯಥಾವತ್ತಾಗಿ ರಿಪೀಟ್ ಮಾಡುವ ಶಕ್ತಿ ಇತ್ತು. ಒಂದು ರಾಗದ ಆರೋಹಣ, ಅವರೋಹಣದ ಸ್ವರ ಹೇಳಿದರೆ ಅದಕ್ಕೆ ರಕ್ತ, ಮಾಂಸ, ಜೀವ ತುಂಬಿ ಸಂಪೂರ್ಣ ರಾಗವನ್ನಾಗಿ ಮಾಡುವ ಶಕ್ತಿ ಇತ್ತು. ವಯಸ್ಸಿನ್ನೂ ಎಂಟೂ ಆಗದಿದ್ದರಿಂದ ಅದು ಸ್ವಲ್ಪ ಅಸಹಜವಾಗಿಯೂ ಕಾಣುತ್ತಿತ್ತು, ಆಶ್ಚರ್ಯವೂ ಆಗುತ್ತಿತ್ತು. ಈ ಕಾರಣಕ್ಕೇ ಮಾಲಿಯನ್ನು ಚೈಲ್ಡ್ ಪ್ರಾಡಿಜ ಎಂದು ಕರೆದರು. ಮುಂದೆ ಯಾರಾದರೂ ಮಾಲಿಯನ್ನು ಜೀನಿಯಸ್ ಎಂದು ಕರೆದಾಗಲೆಲ್ಲ, ಮಾಲಿಗೆ ಅವರ ಆಪ್ತಗೆಳೆಯ ವಿದ್ವಾಂಸ ಪಿ.ರಾಮಕೃಷ್ಣನ್, ''ಜೀನಿಯಸ್ ಎಂದರೆ ಇಂಟೆಲೆಕ್ಟ್, ಇಂಟೆಲಿಜನ್ಸ್, ಪ್ರತಿಭೆ, ಕಲ್ಪನಾಶಕ್ತಿ ಜತೆಯಲ್ಲೇ ಒಂದು ರೀತಿಯ ಬೆಂಕಿಯಂತಹ Passion ಕೂಡ ಮೇಳೈಸಿರಬೇಕು'' ಎಂಬ ಮಾತು ನೆನಪಿಗೆ ಬಂದು ಕಾಡುತ್ತಿತ್ತು. ಈ ವಿಷಯ ಚರ್ಚೆಗೆ ಬಂದಾಗಲೆಲ್ಲ ಮಾಲಿ, ತಮ್ಮ ಗೆಳೆಯನನ್ನು, ''ಅರಿಯ ಕುಡಿ ಜೀನಿಯಸ್ಸೋ?'' ಎಂದು ಕ್ಯಾತೆ ತೆಗೆಯುವವರು, ರಾಮಕೃಷ್ಣ ಇಲ್ಲ ಎನ್ನುವದು ''ದ್ವಾರಂ (ವೆಂಕಟಸ್ವಾಮಿ ನಾಯ್ಡು)'' ಅವರಲ್ಲಿ ಎಲ್ಲ ಇದೆ passion ಇಲ್ಲ ''ಪಾಪ (ವೆಂಕಟರಾಮಯ್ಯ ಪ್ರಖ್ಯಾತ ಪಿಟೀಲು ವಾದಕರು)?'' ''ಹೂಂ, ಆಗಾಗೆ ಜೀನಿಯಸ್ ಗುಣ ಹೊರಬರುತ್ತೆ'' ಎಂದರು ರಾಮಕೃಷ್ಣ. ಮಾಲಿ ಬಹಳ ಹೊತ್ತು ಮೌನವಾಗಿದ್ದು ''ನಿನ್ನ ವಿವರಣೆ ತೀರ ಕೆಟ್ಟದಾಗಿದೆ'' ಎನ್ನುವರು. ಅವರ ಗೆಳೆಯ, ''ನಿನ್ನ ವಿವರಣೆ ಏನು ಹೇಳು?'' ಎಂದು ಪ್ರಶ್ನಿಸಿದಾಗಲೆಲ್ಲ ಮಾಲಿ, ''ಬೇರೆ ಯಾವಾಗಲಾದರೂ, ಹೇಳುತ್ತೇನೆ'' ಎಂದು ಮಾತು ಮುಗಿಸುವವರು. ಅವರ ಗೆಳೆಯ, ಮಾಲಿ ಇಬ್ಬರಿಗೂ ಮಾಲಿ ಜೀನಿಯಸ್ ಎಂದು ಮನಸ್ಸಿನಲ್ಲಿ ಖಚಿತವಾಗಿದ್ದರೂ, ಗೆಳೆಯನ ಬಾಯಿಂದ ಬರಲಿ ಎಂದು ಮಾಲಿ, ಮಾಲಿಯೇ ಬಾಯಿಬಿಟ್ಟು ತಾನು ಜೀನಿಯಸ್ ಹೇಳಲಿ ಎಂದು ನೋಡೋಣ ಎಂದು ರಾಮಕೃಷ್ಣನ್ ಅವರ favourite ಆಟವಾಗಿತ್ತು ಇದು.

ಜೀನಿಯಸ್ಸೋ, ಪ್ರಾಡಿಜಿಯೋ, ಮಾಲಿ ಎಂಟರ ವಯಸ್ಸಿನಲ್ಲಿಯೇ ಕಛೇರಿ ಕೊಡಲಾರಂಭಿಸಿದರು. ತೀರ ಉದ್ರೇಕಗೊಂಡಿದ್ದ ತಾತ, ತಾತನ ಚಿಕ್ಕಪ್ಪ ಹಾಗೂ ಗುರು ಕಂಡಕಂಡಲ್ಲಿ, ಶನಿವಾರ, ಮಂಗಳವಾರದ ಸಂತೆಯಲ್ಲಿ ಕೂಡ ಮಾಲಿ ತಮ್ಮ ಪ್ರತಿಭೆ ಪ್ರದರ್ಶನ ಮಾಡುತ್ತಿದ್ದರು. ತಂದೆಯಂತೂ ಮಾಲಿಯನ್ನು ತಮ್ಮ ಕುಟುಂಬ, ತಾತನ ಕುಟುಂಬ ಎಲ್ಲರ ಊಟದ ಕೂಪನ್‌ನಂತೆ ಬಳಸಿಕೊಳ್ಳಲು ಆರಂಭಿಸಿದರು. ಲಾಂಡ್ರಿ ವ್ಯಾಪಾರ ಅಷ್ಟೇನು ಚೆನ್ನಾಗಿರಲಿಲ್ಲ ಹಾಗೂ ಮಾಲಿಗೆ ಹನ್ನೊಂದರ ವಯಸ್ಸಿನಿಂದ, ಚೆಂಬೈ, ಅರಿಯಕುಡಿ, ಮದುರೈಮಣಿ ಅಯ್ಯರ್ ಅಂಥವರಿಗೆ ಕೊಡುವ ಸಂಭಾವನೆಯೇ ಸಿಗುತ್ತಿತ್ತು. ವಾರಕ್ಕೆ ಮೂರು ನಾಲ್ಕು ಕಛೇರಿ ಕೊಡಲಾರಂಭಿಸಿದರು.

ಇದರ ಮಧ್ಯೆ ಕೆಲವು ಕುತೂಹಲಕಾರಿ ಘಟನೆಗಳು ನಡೆದವು. ಎರಡು ವರ್ಷ ಪಾಠ ಹೇಳಿದ ಗೋಪಾಲ ಅಯ್ಯರ್ ತಮ್ಮ ಶಿಷ್ಯನಿಗೆ ತಾವು ಏನೇನು ಸಾಲದು, ಸಾಧ್ಯವಾದರೆ ಇನ್ನಷ್ಟು ಪ್ರತಿಭಾವಂತರ ಬಳಿ

ಪಾಠ ಹೇಳಿಸಿ ಎಂದು ಮಾಲಿ ತಂದೆಗೆ ಸೂಚಿಸಿದರು. ಆ ಕಾಲಕ್ಕೆ ಕೊಳಲು ಎಂದರೆ ಪಲ್ಲಡಂ ಸಂಜೀವರಾವ್ ಅವರ ಏಕೈಕ ಹೆಸರು ಕೇಳುತ್ತಿತ್ತು. ಅವರ ಬಳಿ ತಂದೆ, ಪುಟ್ಟ ಸಣಕಲು ದೇಹದ ಮಾಲಿ ಸಂಜೀವರಾವ್ ಮನೆಗೆ ತೆರಳಿದರು. ಮಾಲಿ ತೋಡಿರಾಗದಲ್ಲಿ ತ್ಯಾಗರಾಜರ, ''ಎಂದುಕು ದಯರಾಮ'' ನುಡಿಸಿದರು. ಮೌನವಾಗಿ ಕೇಳಿದ ಸಂಜೀವರಾವ್ ಮಾತಾಡದೆ ಮಹಡಿ ಹತ್ತಿ ತಮ್ಮ ಕೋಣೆಗೆ ಹೊರಟುಹೋದರು. ಹಳ್ಳಿಯಿಂದ ಬಂದಿದ್ದ ತಂದೆ, ಮಗನಿಗೆ ಪಟ್ಟಣದ ಶ್ರೀಮಂತರ ಛಾಳಿಯೇ ಅರ್ಥವಾಗಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಅಪ್ಪ, ಮಗ ಮಹಡಿ ಹತ್ತಿ ಅವರ ಕೋಣೆಗೆ ಬಂದು, ಅವರ ಅಭಿಪ್ರಾಯ ತಿಳಿಯಬಯಸಿದರು ಪಲ್ಲಡಂ ಹೇಳಿದ್ದು ಒಂದೇ ವಾಕ್ಯ: ''ಇದು ವೇಣುಗಾನವೇ?'' ತಾಳ್ಮೆ ಕಳೆದುಕೊಂಡ ಅಪ್ಪ ಗಲಭೆ ಎಬ್ಬಿಸಿಬಿಟ್ಟರು.

ಈ ಘಟನೆಗೆ ಎರಡು ವ್ಯಾಖ್ಯಾನವಿದೆ. ಪಲ್ಲಡಂ, ಶರಭಶಾಸ್ತ್ರಿಗಳ ಶಿಷ್ಯ. ಶಿಷ್ಯ ಗುರುವನ್ನು ಮೀರಿಸಿದರೂ, ಆ ಕಾಲದಲ್ಲಿ ವೇಣುವಾದನದಲ್ಲಿ ಗಮಕವಿರುತ್ತಿರಲಿಲ್ಲ. ಸ್ವರದ ಪ್ರಸ್ತಾವನೆ ಸ್ಪಷ್ಟವಾಗಿದ್ದರೂ, ಮಾಧುರ್ಯ ತರುವಂತಹ ಗಮಕವಿರುತ್ತಿರಲಿಲ್ಲ. ಒಂದು ಹಾರ್ಮೋನಿಯಂ, ಈಗಿನ ಕೀಬೋರ್ಡ್‌ನ ಸಂಗೀತದಂತಿತ್ತು. ಸಂಗೀತದಲ್ಲಿ ಗಮಕ ತಂದು, 'ಸ' ಸ್ವರಕ್ಕೆ 'ರಿ' ಸೇರಿಸಿ, ಕೆಲವು ಬಾರಿ 'ಸ'ವನ್ನು 'ಪ' ಇಂದ ತೆಗೆದುಕೊಂಡು ಕೊಳಲುವಾದವನ್ನು ವೋಕಲ್ ಸಂಗೀತದ ಹತ್ತಿರ ತಂದು, ಕೆಲವು ಬಾರಿ ವೋಕಲ್ ಸಂಗೀತವನ್ನೂ ಮೀರಿಸಿದ ಗಾರುಡಿಗ ಮಾಲಿ.



ವೇಣುವಾದನ ನಿರತ ಮಾಲಿ

ಮತ್ತೊಮ್ಮೆ ವಿಶ್ವವಿದ್ಯಾಲಯಕ್ಕೆ ಹೋದಾಗಲೂ, ಸಂಗೀತದ ಡಿಪಾರ್ಟ್‌ಮೆಂಟ್‌ನವರು ಮಾಲಿಯ ಸಂಗೀತ ಕೇಳಿ, ''ಬೇಕಾದರೆ ನಾದಸ್ವರಕ್ಕೆ ಸೇರಿಸಿಕೊಳ್ಳುತ್ತೇವೆ'' ಎಂದರಂತೆ. ಆ ಕಾಲದಲ್ಲಿ ಇದೊಂದು ಬ್ರಾಹ್ಮಣರಿಗೆ ಆಗಬಹುದಾಗಿದ್ದ ಅತಿ ಹೀನ ಅವಹೇಳನವಾಗಿತ್ತು. ನಾದಸ್ವರ ಊದುವವರೆಲ್ಲ ಆ ಕಾಲದಲ್ಲಿ ದಲಿತರೇ, ದೇವಸ್ಥಾನದ ಹೊರಗಡೆ ಅವರ ಸಂಗೀತ, ಭಟ್ಟರೆಲ್ಲರೂ ಹೊರಬಂದು ಅವರಿಗೆ ಪ್ರಸಾದ ಕೊಡುತ್ತಿದ್ದರು. ಬಡವರಾದರೂ, ಅಯ್ಯರ್ ಆದರಿಂದ ಮಾಲಿ ತಂದೆ ಕೂಗಾಡಿಬಿಟ್ಟರಂತೆ. ಆದರೆ ನಿಜವಾದ ಕಾರಣ ಬೇರೆ ಇತ್ತು. ಆ ವಿಶ್ವವಿದ್ಯಾಲಯದಲ್ಲಿ ವೋಕಲ್, ಮೃದಂಗ, ವೀಣೆ, ಪಿಟೀಲಿಗೆ ಅವಕಾಶವಿದ್ದು ಕೊಳಲು ಪಾಠಕ್ಕೆ ಅವಕಾಶವೇ ಇರಲಿಲ್ಲವಂತೆ.

ಈ ಎರಡು ಘಟನೆಗಳಿಗೆ ಸೇಡು ತೀರಿಸಿಕೊಳ್ಳಲು ಮಾಲಿಗೆ ಅವಕಾಶ ಸಿಕ್ಕಿತು. ಮುಂದೆ ಪ್ರಖ್ಯಾತರಾದಾಗ, ಮಾಲಿ ಕಛೇರಿಗೆ ದಿಗ್ಗಜರೆಲ್ಲ ಮುಂದಿನ ಸಾಲಿನಲ್ಲಿ ಕುಳಿತು, ತಾಳಹಾಕುತ್ತ ಮಾಲಿಯ ವೇಣುವಾದನವನ್ನು ಆಸ್ವಾದಿಸುತ್ತಿದ್ದರು. ಒಂದು ಕಛೇರಿಯಲ್ಲಿ ಎರಡನೇ ಸಾಲಿನಲ್ಲಿ ಪೇಟ, ಕೋಟು, ಕಚ್ಚೆಯಲ್ಲಿದ್ದ ಸಂಜೀವರಾವೂ ಇದ್ದರು. ಇನ್ನೂ ಬಾಲಕ ಮಾಲಿ, ಊದುವುದನ್ನು ನಿಲ್ಲಿಸಿ, ಕಿರುಬೆರಳಿನಲ್ಲಿ ಸಂಜೀವರಾವ್ ಅವರನ್ನು ಕರೆದ. ದಡ ಭಡನೆ ಎದ್ದು ಸಂಜೀವರಾವ್, ವೇದಿಕೆ ಬಳಿ ಬಂದು, ಆತ್ಮೀಯವಾಗಿ ಬಗ್ಗಿ, ''ಏನು ಮಾಲಿ?'' ಎಂದರು. ಮಾಲಿ, ಕೊಳಲಿಂದ ''ಪೀ, ಪೀ'' ಎಂದು ಗಮಕವಿಲ್ಲದ ಸ್ವರ ಊದಿ, ''ನಿಮ್ಮ ಗುರುಗಳು ಹೀಗಲ್ಲವೆ ನುಡಿಸುತ್ತಿದ್ದದ್ದು. ನೀವು ಹೀಗೆ ತಾನೆ?'' ಎಂದು ಕೇಳಿದ. ಅವಮಾನದಿಂದ ಮುಖವೆಲ್ಲ ರಕ್ತಮಯವಾಗಿ, ಮಾತಿಲ್ಲದೆ ತಮ್ಮ ಕುರ್ಚಿಯಲ್ಲಿ ಕೂತರು ಪಲ್ಲಡಂ. ವಿಷಯ ತಿಳಿದಾಗ ಗುಸು, ಗುಸು, ಆರಂಭವಾಯಿತು. ಹಿಂದಿನ ಘಟನೆಯೂ ಚರ್ಚೆ ಆಗಿ ಮುಕ್ತಾಯವಾಯಿತು. ಮಾಲಿ ಕಿಸಿ, ಕಿಸಿ ನಗುತ್ತ ಕಛೇರಿ ಮುಂದುವರಿಸಿದರು.

ವಿಶ್ವವಿದ್ಯಾಲಯದಲ್ಲೂ ಹೀಗೆಯೆ. ಮಾಲಿಯ ಮಹಿಮೆ ಕೇಳಿ ರೈಟ್ ಆನ್‌ರಬಲ್ ಶ್ರೀನಿವಾಸ ಶಾಸ್ತ್ರೀ ಅದೇ ವಿಶ್ವವಿದ್ಯಾಲಯದಲ್ಲಿ ಕಛೇರಿ ಏರ್ಪಡಿಸಿದರು. ನಾದಸ್ವರ ಅವಮಾನ ಮರೆಯದ ಮಾಲಿ, ಮಾಲಿತಂದೆ ಅಲ್ಲಿರುವವರೆಲ್ಲರಿಗೂ ಹಿಂದಿನ ಘಟನೆ ನೆನಪಿಸುತ್ತಲೇ ಅದ್ಭುತ ಕಛೇರಿ ನೀಡಿದನಂತೆ.

ಗಾನದಲ್ಲಿ ಒಮ್ಮೆಯೂ ತಾಳ ತಪ್ಪದ ಮಾಲಿ ಜೀವನದಲ್ಲಿ ತಾಳತಪ್ಪಲಾರಂಭಿಸಿದರು. ಹದಿನಾರನೇ ವಯಸ್ಸಿನಲ್ಲಿಯೇ ಜನರ ಅಭಿಮಾನ, ಕೀರ್ತಿಯಿಂದ ಮುದಗೊಂಡಿದ್ದ ಮಾಲಿ ಅಪಾರ ಪ್ರತಿಭೆಯನ್ನು, ತಂದೆಯ ಬಲವಂತಕ್ಕೆ ಅರ್ಧ ಹುಡುಗಾಟದಿಂದ, ಅರ್ಧ ಕುತೂಹಲಕ್ಕೆ ಕಛೇರಿ ಕೊಡುತ್ತಿದ್ದ. 13 ಮಂದಿಯ ಕುಟುಂಬಕ್ಕೆ ಊಟ ಗ್ಯಾರಂಟಿ ಮಾಡುತ್ತಿದ್ದ.

ಆದರೆ ತನಗೆ ಪ್ರೀತಿಯಿಂದ ಪ್ರೋತ್ಸಾಹ ನೀಡಿದ ಅಣ್ಣ ಗೌತಮ್, ಅಕ್ಕರೆಯಿಂದ ಕೀರ್ತನೆ ಹೇಳಿಕೊಡುತ್ತಿದ್ದ ಅಕ್ಕ ದೇವಕಿ ಸಣ್ಣ ವಯಸ್ಸಿನಲ್ಲೇ ತೀರಿಕೊಂಡ ನಂತರ ಆದ ನಿರ್ವಿಣ್ಣತೆ, ಹತಾಶೆ, ಆಳವಾದ ನೋವು ಜೀವನ ಪೂರ್ತಿ ಕಾಡುತ್ತಿತ್ತು.

ಇದರ ಜತೆಯಲ್ಲೇ ಹದಿನಾರನೇ ವಯಸ್ಸಿನಲ್ಲಿ ಪ್ರಾರಂಭವಾದ ಕೆಲವು ಅತೀಂದ್ರಿಯ ಅನುಭವಗಳು ಜೀವನ ಪೂರ್ತಿ ಕಾಡಿದವು. ಈ ನೋವು ಎಲ್ಲರೂ ಯೂ.ಜಿ. ಕೃಷ್ಣಮೂರ್ತಿ ಹೊರತಾಗಿ, ತಿಳಿದಂತೆ ಹಿತವಾದ ಅನುಭವವಲ್ಲ. ಆ ಅನುಭವಕ್ಕಾಗಿ, ಅನುಭವವಿಲ್ಲದ ನಾವೆಲ್ಲರೂ, ಜಪ, ತಪ, ಯೋಗ, ಪ್ರಾಣಾಯಾಮ, ಭಜನೆ ಮೂಲಕ ಆಶಿಸುತ್ತಲೇ ಇರುತ್ತೇವೆ. ಆದರೆ ಈ ಅನುಭವ ದೈಹಿಕವಾದದ್ದು, ಅದು ಆದಾಗ ನಮ್ಮ ದೇಹಕ್ಕೆ ತಡೆದುಕೊಳ್ಳುವ ಶಕ್ತಿ ಇದೆಯೇ ಇಲ್ಲವೆ ಎಂಬ ವಿವೇಚನೆ ಇಲ್ಲದೆ ಪ್ರಕೃತಿ ಕೆಲಸ ಮಾಡುತ್ತದೆ. ಈ ಅನುಭವ ಸ್ವಲ್ಪವಾದರೂ ಇದರ ಸಹವಾಸ ಬೇಡ ಎಂದು ಓಡಿ ಹೋಗುತ್ತೀರಿ ಎಂದು ಸ್ಪಷ್ಟವಾಗಿ ಹೇಳಿದವರು, ಇನ್ನೂ ನಮ್ಮೊಡನೆ ಇರುವ ಯೂಜಿ ಒಬ್ಬರೇ. ಮಿಕ್ಕವರೆಲ್ಲರೂ ಆಗಿಲ್ಲದ ಅನುಭವವನ್ನು ಓದಿ, ಮತ್ತೊಬ್ಬರಿಂದ ತಿಳಿದು ಊಹಿಸಿಕೊಂಡು ಯಾರಿಗೂ ಅರ್ಥವಾಗದಂತೆ ಭಾಷಣ, ವ್ಯಾಖ್ಯಾನ ನೀಡುವವರೆ.

ತನ್ನ ತಲೆ ಒಳಗೆ ಸಹಸ್ರ ಕೋಲ್ಮಿಂಚು ಉಂಟಾದಾಗಲೆಲ್ಲ ಮಾಲಿ, ಮೌನವಾಗಿ, ತಮ್ಮ ತಲೆಯನ್ನು ಬೆರಳಿನಿಂದ ನೇವರಿಸುತ್ತ ಸುಮ್ಮನಿದ್ದು ಬಿಡುವವರು. ಯಾರಾದರೂ ಮಾತಾಡಿದರೂ ಸುಮ್ಮನಿರುವರು. ಕೆಲವು ಬಾರಿ ನಾಳೆ ಬನ್ನಿ ಎನ್ನುವವರು. ಚಿಕ್ಕವಯಸ್ಸಿನಲ್ಲಿ ಶಕ್ತಿ ಇದ್ದಾಗ, ಬೆರಳಿನಿಂದ ಆ ಬೆಳಕು ಮಾಯವಾದ ನಂತರ ಉಂಟಾಗುವ ನೋವನ್ನು

ನರಳದೆ ತಮ್ಮ ತಲೆಯನ್ನು ನೇವರಿಸುತ್ತಿದ್ದರು. ನಂತರ ಎರ್ರಾಬಿರ್ರಿ ಮಾತ್ರೆ ನುಂಗಲು ಆರಂಭಿಸಿದರು. ವಯಸ್ಸಾಗುತ್ತಿದ್ದಂತೆ ವೈದ್ಯರ ಯಾವ ಔಷಧಿ, ಉಪಚಾರಕ್ಕೆ ಬಗ್ಗದ ನೋವಾದರಿಂದ, ತಾವೇ ಸ್ವಯಂ ಔಷಧ ಪ್ರಿಸ್ಕ್ರಿಪ್ಶನ್ ಆರಂಭಿಸಿದರು. ಕುಡಿದರೆ ಸ್ವಲ್ಪ ಶಮನವಾಗಬಹುದು, ಅಥವಾ ಮರೆಯಬಹುದು ಎಂದು ತಿಳಿದು ಕುಡಿಯಲು ಆರಂಭಿಸಿದವರು, ಕುಡಿದು, ಕುಡಿದು, ಸತ್ತರು. ಆದರೆ ನೆನಪಿನಲ್ಲಿಡಬೇಕಾದದ್ದು ಅವರು 59 ವರ್ಷ, 8 ತಿಂಗಳು ಬದುಕಿದ್ದರು ಎಂಬುವುದು.

ಚೇಷ್ಟೆ, ಈರ್ಶೆ ಮೊದಲಿಂದ ಇದ್ದದ್ದೇ. ಕಛೇರಿಗೆ ಒಪ್ಪಿದವರು, ಮಾಲಿಯನ್ನು ಕ್ರೀಡಾಂಗಣದಲ್ಲಿ ಇತರ ಬಾಲಕರ ಜತೆ ಕ್ರಿಕೆಟ್ ಆಡುತ್ತಿದ್ದು, ಅಲ್ಲಿ ಬಂದು ಗೋಗರೆಯಬೇಕಾಗಿತ್ತು. "ಇನ್ನು ಎರಡೇ ಬಾಲು, ನೀವು ಹೋಗಿ ನಾನು ಬರುತ್ತೇನೆ' ಎಂದ ಮಾಲಿ ಆ ಹಿರಿಯ ವಿದ್ವಾಂಸರು ಕಛೇರಿಯ ಆವರಣಕ್ಕೆ ಬರುವಷ್ಟರಲ್ಲಿ, ತನ್ನ ಅಂಗಿಯಲ್ಲಿ ಸುತ್ತಿಟ್ಟಿದ್ದ ಕೊಳಲು ತೆಗೆದು ಸುಶ್ರಾವ್ಯವಾಗಿ ವರ್ಣ ನುಡಿಸುತ್ತಿದ್ದು, ವಾದ್ಯವನ್ನು ನಿಲ್ಲಿಸಿ "ಈಗ ಬಂದಿರಾ, ಕೋಚ್? ನಾನು ಆಗಲೇ ಬಂದೆ" ಎಂದು ಚುಡಾಯಿಸುತ್ತಿದ್ದರು.

ಯಾರೊಂದಿಗೂ ಹೆಚ್ಚು ಸಲಿಗೆ ಬೆಳೆಸದೆ, ಬಹುವಚನದಲ್ಲೇ ಮಾತಾಡಿಸಿ, ದೂರವಿರಿಸುತ್ತಿದ್ದ ಮಾಲಿ, ಆತ್ಮೀಯರಲ್ಲಿ ಎಲ್ಲವನ್ನು ಚರ್ಚಿಸಿ, ಹಂಚಿಕೊಳ್ಳುತ್ತಿದ್ದರು. ಹೊಸಪ್ರತಿಭೆ ಬಂದಾಗ, ಮನಸ್ಸಿನಲ್ಲೇ ಶ್ಲಾಘಿಸುತ್ತ, ಅವಕಾಶ ಸಿಕ್ಕಿದ್ದಾಗ ತಬ್ಬಿಬ್ಬು ಮಾಡುತ್ತ ತಮ್ಮ ಪ್ರತಿಭೆ, ತಮ್ಮ ಸ್ಥಾನವೇನು ಎಂಬುದನ್ನು ತೋರಿಸಲು ಹಿಂದೆಗೆಯುತ್ತಿರಲಿಲ್ಲ. ಎಂ.ಎಸ್. ಗೋಪಾಲಕೃಷ್ಣನ್ ಹೆಸರು ಕೇಳಿಬರುತ್ತಿದ್ದಂತೆ, ಅವರನ್ನು ಪಕ್ಕ ವಾದ್ಯಕ್ಕೆ ಒಪ್ಪಿಸಿ, ತನಿ ಆವರ್ತನೆಯಲ್ಲಿ ಗೋಜಲು ಗೋಜಲಾದ ಸ್ವರ ಪ್ರಸ್ತಾವನೆ ಮಾಡಿ ಏನು ನುಡಿಸುವುದಕ್ಕೂ ತೋಚದ ಸ್ಥಿತಿ ತಲಪುವಂತೆ ಮಾಡುತ್ತಿದ್ದರು. ಆದರೆ ನಂತರ ಗೋಪಾಲಕೃಷ್ಣರ ಪ್ರತಿಭೆಯನ್ನು ಎಲ್ಲರ ಮುಂದೆ ಕೊಂಡಾಡುತ್ತಿದ್ದರು.

ಚೌಡಯ್ಯನವರ ವಿಷಯದಲ್ಲೂ ಹೀಗೆ. ತಮಿಳುನಾಡಿನಲ್ಲಿ ತಮ್ಮ ಏಳುತಂತಿ ಪಿಟೀಲಿನಿಂದ ಪ್ರಖ್ಯಾತರಾಗಿದ್ದ ಅವರ ಬಲೂನನ್ನು ಚುಚ್ಚಲು ಕಾಯುತ್ತಿದ್ದಂತೆ, ಒಮ್ಮೆ ಸ್ವರ ಪ್ರಸ್ತಾವನೆ ಮಾಡಿದರು. ಚೌಡಯ್ಯ ಸಹಜವಾಗಿ ಮಿಕ್ಕವರು ನುಡಿಸುವ ಸಂಗತಿಗಳನ್ನೇ ಹಾಗೂ ತಮಗೆ ಆ ರಾಗದ ಪರಿಚಯವಿದ್ದ ರೀತಿಯಲ್ಲಿ ಮಾಲಿ ನುಡಿಸಿದ ಸ್ವ ಪ್ರಸ್ತಾವನೆ ಶೈಲಿಯಲ್ಲಿ ನುಡಿಸಿದಾಗ, ಮಾಲಿ, "ನಾನು ನುಡಿಸಿದ ರೀತಿ ನುಡಿಸಿ" ಎನ್ನುವರು. ಚೌಡಯ್ಯ ಸದ್ದಿಲ್ಲದೆ ತಮ್ಮದೇ ರೀತಿಯಲ್ಲಿ ನುಡಿಸಿದಾಗ, ಮಾಲಿ ಮತ್ತೆ ಗುಡುಗಿ, ಇನ್ನೊಂದು ರೀತಿ ಪ್ರಸ್ತಾವನೆ, ಮಾಡಿದರು. ಚೌಡಯ್ಯ ತಮ್ಮ ಶಕ್ತಿಗೆ ತಕ್ಕಂತೆ ತಮ್ಮ ರೀತಿಯಲ್ಲಿ ನುಡಿಸಿ, ಸಂಜ್ಞೆಯಲ್ಲೇ, "ನೀವು ನಿಮ್ಮ ರೀತಿ ನುಡಿಸಿ, ನಾನು ನನ್ನ ರೀತಿಯಲ್ಲಿ ನುಡಿಸುತ್ತೇನೆ' ಎಂದರು. ಮಾಲಿ ಮೈಕನ್ನು ಚೌಡಯ್ಯನವರ ಬಳಿ ತಳ್ಳಿ, "ಹಾಗೇಂತ ಹೇಳಿ, ಸಭಿಕರಿಗೆ" ಎಂದು ಆದೇಶಿಸಿದರು. ಆಗ ಚೌಡಯ್ಯನವರ ಪಿಟೀಲಿನ ಕಮಾನು, ವೈರಿಗೆ ತಗಲಿ, ಭಯಂಕರ ಶಬ್ದವಾಯಿತಂತೆ. ಅಷ್ಟಕ್ಕೆ ಗುಸು ಗುಸು ಆರಂಭವಾಗಿ ಮಾಲಿ, ಚೌಡಯ್ಯನವರಿಗೆ ಹೊಡೆದೇ ಬಿಟ್ಟರು ಎಂದು ಆಡಿಕೊಂಡರು. ಆಪ್ತರು ಮಾಲಿಯನ್ನು ಎಬ್ಬಿಸಿ ಮನೆಗೆ ಕರೆದು ಕೊಂಡು ಹೋದರು, ಚೌಡಯ್ಯನವರು ಸೋಲೋ ಕಛೇರಿ ಮುಂದುವರಿಸಿದರು.

ಮರುದಿನ ಬೆಳಿಗ್ಗೆ ಚೌಡಯ್ಯ ಮಾಲಿಯ ಕೋಣೆಯಲ್ಲಿ ಹಾಜರ್, ಹಿಂದಿನ ರಾಗವನ್ನು ಕೇಳುವ ಇಚ್ಛೆ ಪ್ರಕಟಿಸಿದರು. ಮಾಲಿ ಸಂತೋಷ ವಾಗಿ, ಚೌಡಯ್ಯನವರಿಗೆ "ಆರಂಭಿಸಿ" ಎಂದು ಆದೇಶಿಸಿ, ತಾವು ನುಡಿಸಲು ಆರಂಭಿಸಿದರು, ಅದೂ ಪಿಟೀಲಿನಲ್ಲೇ! ಮಾಲಿಗೆ ಪಿಟೀಲಿನ ಮೇಲೆ ಇರುವ ಹತೋಟಿ ಅದ್ಭುತವಾದದ್ದು!

ಅವರೇ ಬರೆದ ಒಂದು ಪುಟದ ಆತ್ಮಚರಿತ್ರೆಯಲ್ಲಿ ಹೀಗೆ ಬರೆದಿದ್ದಾರೆ. "ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದ ನನಗೆ ಸಂಗೀತ ದೈವದತ್ತವಾಗಿ ಬಂದಿದೆ. ಹನ್ನೊಂದನೇ ವಯಸ್ಸಿನಿಂದ ಹಿರಿಯ ವಿದ್ವಾಂಸರಿಗೆ ಸಲ್ಲುವ ಸಂಪಾದನೆ ಸಂದಿದೆ. ಸಂಪ್ರದಾಯಸ್ಥ ಕುಟುಂಬವಾದ್ದರಿಂದ ವಿದೇಶದಲ್ಲಿ ಕಛೇರಿ ಕೊಡಲು ಅವಕಾಶವಿರಲಿಲ್ಲ (ಈ ಮಾತು ವಿದೇಶಕ್ಕೆ ಹೋಗುವ ಮುನ್ನ ಬರೆದದ್ದು) ನಾಡಿನ ಎಲ್ಲ ಕಡೆ ನುಡಿಸಿದರೂ ಅಪಾರವಾದ ಸಂಗೀತ ಸಮುದ್ರದ ಮರಳರಾಶಿಯಲ್ಲಿ ನಾನಿನ್ನೂ ಒಂದು ಮರಳಿನ ಕಣ ಎಂದೇ ಭಾವನೆ ಮೂಡುತ್ತಿದೆ" ಎಂದು ಬರೆದು ಕಡೆಯ ವಾಕ್ಯದಿಂದ ಎಲ್ಲರನ್ನೂ ದಿಗ್ಮೂಢರನ್ನಾಗಿಸಿದ್ದಾರೆ. "ನನ್ನ ಪ್ರಕಾರ, ನಾನು ವೇಣುವಾದನಕ್ಕಿಂತ ಒಬ್ಬ ಉತ್ತಮ ಪಿಟೀಲು ವಾದಕ ಎಂದೇ ನನ್ನ ಅನ್ನಿಸಿಕೆ!!"

ಮನೆ ಕಡೆ ಆರ್ಥಿಕ ಪರಿಸ್ಥಿತಿ ಸುಧಾರಿಸಿದ ಮೇಲೆ, ಅತೀಂದ್ರಿಯ ಅನುಭವದ ನೋವಿನಲ್ಲಿ ಕಛೇರಿ ಕೊಡಲು ನಿಲ್ಲಿಸಿದರು. ಮದರಾಸಿನ ಮ್ಯೂಸಿಕ್ ಅಕಾಡೆಮಿಯಲ್ಲಿ ಕಛೇರಿಗೆ ಒಪ್ಪಿಸಿ, ಎಲ್ಲರನ್ನೂ ದಂಗುಬಡಿಸಿ, ಕಡೆಗಳಿಗೆಯಲ್ಲಿ ಕೈಕೊಟ್ಟು ಹಳೆಯ ಸೇಡು - ಇವನು ಕುಡುಕ, ಎಂದು ಎರಡು ವರ್ಷ ಆಹ್ವಾನ ನೀಡದ ಸೇಡು - ತೀರಿಸಿಕೊಂಡರು. ಕಛೇರಿಗೆ ಬಂದು ಯಾರಾದರೂ ವ್ಯವಸ್ಥಾಪಕರಿಗೆ ಭೇಷ್, ಹೇಗೋ ಅವನನ್ನು ಕರೆತಂದೆಯೆಲ್ಲ, ಎಂದು ಶ್ಲಾಘಿಸಿದಾಗ, ವ್ಯವಸ್ಥಾಪಕ, ಹಣ, ಬಾಟಲ್‌ನಿಂದ ಏನನ್ನಾದರೂ ಮಾಡಬಲ್ಲೆ ಎಂದು ಹೇಳಿದ ಎಂದು ತಿಳಿದರೆ, ನಿಜವಾಗಿರದಿದ್ದರೂ, ಕೊಳಲು ಬಿಸಾಕಿ ಎದ್ದುಬಿಡುತ್ತಿದ್ದ. ಅದೇ ಸಣ್ಣ ಸಂಗೀತ ಸಭೆಗಳಲ್ಲಿ ಒಂದು ಪೈಸೆ ಕೂಡ ತೆಗೆದುಕೊಳ್ಳದೆ, ಕುಡಿಯದೇ ನುಡಿಸಿದ್ದೂ ಉಂಟು. ಮಾಲಿ ಅವರು ಮದುವೆ ರಿಸೆಪ್ಶನ್‌ಗೂ ನುಡಿಸಿದ್ದುಂಟು. ಕೆಲವು ವೇಳೆ ಹಣಕ್ಕೋಸ್ಕರ, ಕೆಲವು ವೇಳೆ ತಮಗೆ ಆಪ್ತರಾಗಿದ್ದವರ ಮನೆ ಮದುವೆಗಳಲ್ಲಿ ಪುಕ್ಕಟೆ ನುಡಿಸಿದ್ದುಂಟು, ಕೆಲವು ಬಾರಿ ರಾತ್ರಿ ಎರಡರವರೆಗೆ.

ಒಮ್ಮೆ ಒಂದು ರಿಸೆಪ್ಶನ್‌ನಲ್ಲಿ ಯಾರೋ ಅಭಿಮಾನಿಗಳು, "ಆಹಿರಿ" ರಾಗ ನುಡಿಸಲು ಕೋರಿದರಂತೆ. ಮಾಲಿ, "ಸೌರಮತಿ," "ಆಹಿರಿ" ರಾಗಗಳನ್ನು ಶುಭಸಂದರ್ಭದಲ್ಲಿ ನುಡಿಸಬಾರದು ಎಂದು ಸೂಚಿಸಿದರು. 'ಆಹಿರಿ' ರಾಗ ಮಧ್ಯಾಹ್ನ ನುಡಿಸಿದ ಎಷ್ಟೋ ಬಾರಿ ಮಧ್ಯಾಹ್ನದ ಊಟವು ಸಿಕ್ಕಿಲ್ಲದ ಅನುಭವವನ್ನು ಹೇಳಿದರು. ಆದರೆ ಆ ಅಭಿಮಾನಿಯೊಂದಿಗೆ ಇನ್ನೂ ಕೆಲವರು ಪೀಡಿಸಿದರಿಂದ, "ನಿಮ್ಮಿಷ್ಟ" ಎಂದು "ಆಹಿರಿ"ಯನ್ನು, ನಿರಾಳವಾಗಿ ನುಡಿಸಲು ಆರಂಭಿಸಿದರು ಆಗಲೇ ರಾತ್ರಿ ಒಂಬತ್ತಾಗಿತ್ತು. ತಮ್ಮದೇ ಆದ ಶೈಲಿಯಲ್ಲಿ 'ಆಹಿರಿ', ರಾಗ, ತಾನ, ಪಲ್ಲವಿ, ಸಂಗತಿ, ಸ್ವರ ವಿನ್ಯಾಸ ಎಲ್ಲ ಮುಗಿಯುವಷ್ಟರಲ್ಲಿ.

ಮಧುರೈನಲ್ಲಿ ಹೋಟೆಲ್ ಬಳಿ ಕೊಳಲು ಮಾರುವ ಒಬ್ಬ ಕುರುಡರಿದ್ದರು. ಇವರು ಆಗಾಗ್ಗೆ ಬೆಂಗಳೂರಿನಲ್ಲಿ 'ಪೂಂಪುಹಾರ್' ಅಂಗಡಿ ಬಳಿ, ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್‌ನಲ್ಲೂ ಕಾಣಿಸಿಕೊಳ್ಳುತ್ತಿದ್ದರು. ಮಧುರೈಯಲ್ಲಿ ಕೊಳಲು ಮಾರುತ್ತಿದ್ದಾಗ ಯಾರೋ ಕೊಳಲು ತೆಗೆದುಕೊಳ್ಳುವ ಶಬ್ದ ಕೇಳಿಸಿತು. ಚೇಷ್ಟೆಗೆ ಯಾರೋ ಮಕ್ಕಳು ಮಾಡಿರಬೇಕೆಂದು ತಿಳಿದು, ಈ ಕುರುಡ ವ್ಯಾಪಾರಿ, 'ಯಾರೋ ಅದು ಕೊಳಲು ಮುಟ್ಟೋದು? ಮುಟ್ಟಿದರೆ ಏಟು ಬೀಳುತ್ತೆ, ಕೊಳಲು ಮುಟ್ಟಬೇಡ' ಎಂದು ಗದರಿದರಂತೆ.

ಆದರೆ ಕೊಳಲು ಎತ್ತಿಕೊಂಡವರು ಮಾಲಿಯೇ! 'ಅಯ್ಯಾ ಇಡೀ ಪ್ರಪಂಚದಲ್ಲಿ ನನಗೆ ಕೊಳಲು ಮುಟ್ಟಬೇಡ ಎಂದವನು ನೀನೆ ಕಣಯ್ಯ' ಎಂದು ಹೇಳಿ ತಮ್ಮ ಪರಿಚಯ ಮಾಡಿಕೊಂಡರಂತೆ. ಈತ ಕೇವಲ ಕೊಳಲು ಮಾರುವುದಲ್ಲ, ಚೆನ್ನಾಗಿ ನುಡಿಸಲೂ ಶಕ್ತಿ ಇದ್ದವನು, ಮಾಲಿಯ ಕಛೇರಿಯನ್ನೂ ಕೇಳಿದವನು, ಕಣ್ಣಿಂದ ನೋಡದೆ ಹೃದಯದಲ್ಲೇ ಆರಾಧಿಸಿದವನು. ಕೃತಜ್ಞತೆಯಿಂದ ಒಂದು ಕೊಳಲನ್ನು ಸ್ವೀಕರಿಸುವ ಪುಣ್ಯ ಬೇಡಿದನಂತೆ. ಮಾಲಿ ನಗುತ್ತ, ಎಲ್ಲ ಕೊಳಲು ತೀರ ಮೋಸವಾಗಿದೆ ಎಂದು ಛೇಡಿಸಿ, ಒಂದು ಕೊಳಲು ಕೊಂಡು, ಅದಕ್ಕೆ ಮೂರರಷ್ಟು ಬೆಲೆ ಬಲವಂತವಾಗಿ ತೆತ್ತು, (ಮಾಲಿ ಎಷ್ಟೋ ಬಾರಿ, ಸಾಲ ತೀರಿಸಲು ಕೊಳಲು ಮಾರಿದ್ದುಂಟು, ಮಾರುವ ಕಷ್ಟ ಚೆನ್ನಾಗಿ ತಿಳಿದಿತ್ತು) ಇನ್ನಷ್ಟು ರೇಗಿಸಲು ಸಮೀಪದ ಹೋಟೆಲಿಗೆ ಅಂಥ ವ್ಯಾಪಾರಿಯನ್ನು ಕರೆದುಕೊಂಡು ಹೋಗಿ, ಕಾಫಿ ಕುಡಿಸಿ, ಸುಮಾರು ಸಮಯ ಹರಟೆ ಹೊಡೆದರಂತೆ.

ರಾತ್ರಿ ಎರಡು ಗಂಟೆ ಆಯಿತಂತೆ. ವಿವಾಹದ ದಂಪತಿಗಳು ಹೂಹಾರದ ಸಮೇತ ತೂಕಡಿಸಿದ್ದರು. ಮಿಕ್ಕವರು ರಾಗದಲ್ಲಿ ಲೀನರಾಗಿದ್ದರು. ಇನ್ನು ಕೆಲವರು ಈ ಅನುಭವ ಮತ್ತೆ ದಕ್ಕುತ್ತೋ ಇಲ್ಲವೋ ಎಂದು ಕೂತರು. ಅಡಿಗೆ ಮನೆಯ ಕಂಟ್ರಾಕ್ಟರ್ ಊಟದ ಮನೆ ಬಾಗಿಲು ಮುಚ್ಚಿ ಮಲಗಲು ಎಲ್ಲೋ ಹೋದನಂತೆ. ಒಟ್ಟಿನಲ್ಲಿ ಯಾರಿಗೂ ಆ ರಾತ್ರಿ ಊಟ ಸಿಗಲಿಲ್ಲ.

ಮಾಲಿ ಬಾಲಕನಾಗಿದ್ದಾಗ, ಅವರ ತಂದೆ, ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ, ಮುಗ್ಧ ಮಾಲಿಯ ಚಿತ್ರಸಮೇತ ಜಾಹೀರಾತು ಹಾಕಿಸುತ್ತಿದ್ದರು. ''ನಿಮ್ಮ ಮನೆಯಲ್ಲಿ, ಶುಭಕಾರ್ಯವೇ, ಸಂತೋಷ ಕೂಟವೇ? ಕಲಿಯುಗದ ಕನ್ನಾಭಿರನ್ ಟಿ.ಆರ್.ಮಹಾಲಿಂಗಮ್ ಅವರ ಸುಶ್ರಾವ್ಯವಾದ ಕೊಳಲು ಕಛೇರಿ ಏರ್ಪಡಿಸಿ, ವಿವರಗಳಿಗೆ ಈ ವಿಳಾಸ ಸಂಪರ್ಕಿಸಿ'' ಎಂದು. ನಲವತ್ತರ ನಂತರ, ಅತೀಂದ್ರಿಯ ಅನುಭವ, ತಲೆನೋವು, ಗುಂಡಿನ ಹಾವಳಿಯಿಂದ ಮಾಲಿಗೆ ಹಣಕ್ಕೋಸ್ಕರ ಕಂಡ ಕಂಡವರ ಮುಂದೆ ಕೊಳಲೂದುವುದು ರೋಸಿ ಹೋಗಿತ್ತು. ''ಇಂಡಿಯನ್ ಎಕ್ಸ್‌ಪ್ರೆಸ್''ನ ಎಲ್ಲ ಅವತರಣಿಕೆಯಲ್ಲಿ ಒಂದು ಜಾಹೀರಾತು ಹಾಕಿಸಿ, ಅದರಲ್ಲಿ, ''ನಾನು ಕೊಳಲೂದುವುದನ್ನು ನಿಲ್ಲಿಸಿದ್ದೇನೆ. ಇನ್ನು ಮೇಲೆ ನನ್ನನ್ನು ಕಛೇರಿಗೋಸ್ಕರ ಯಾರೂ ಸಂಪರ್ಕಿಸಬಾರದು'' ಎಂದು ತಿಳಿಸಿದ್ದರು. ಸುಮಾರು ಹತ್ತು ವರ್ಷಗಳ ನಂತರ ಹಣದ ಅವಶ್ಯಕತೆ ಇದ್ದದ್ದರಿಂದ ಹಾಗೂ ಜನರು ತನ್ನನ್ನು ಮರೆತೇಬಿಡಬಹುದೆಂಬ ಹೆದರಿಕೆಯಿಂದ ಅದೇ ಪತ್ರಿಕೆಯಲ್ಲಿ ''ಕಛೇರಿಗೆ ಸಂಪರ್ಕಿಸಿ'' ಎಂದು ಬೆಂಗಳೂರಿನ ದೇವನಹಳ್ಳಿಯ ಫಾರಂನ ವಿಳಾಸ ನೀಡಿದ್ದರು.

ಮಾಲಿಯ ಸಂಗೀತದ ಬಗ್ಗೆ ಈ ಲೇಖನವೊಂದರಲ್ಲಿ ಮನದಟ್ಟಾಗುವ ರೀತಿಯಲ್ಲಿ ಹೇಳುವ ಕಲೆ ನನಗಿಲ್ಲ. ಗಮಕವಿಲ್ಲದಿದ್ದಾಗ ಕೊಳಲಿಗೂ ಗಮಕ ತಂದವರು ಮಾಲಿ. ದೈವದತ್ತವಾದ ಶಕ್ತಿಯಿಂದ ರಾಗದ ವಿನ್ಯಾಸ, ಕಲ್ಪನೆಗೂ ಮೀರಿ ''ಸಂಗತಿ''ಗಳನ್ನು ಸೇರಿಸಬಲ್ಲ, ಕೆಲವು ಸ್ವರಗಳಿಗೆ ಸರಿಯಾದ ಸಂದರ್ಭದಲ್ಲಿ ಸರಿಯಾದ ಒತ್ತು ಕೊಟ್ಟು, ರಾಗದ ಕಲ್ಪನೆಯನ್ನು ವಿಸ್ತರಿಸಬಲ್ಲ ಮೇಧಾವಿ. ಮಾಲಿಯ ಕಾಲ ಮೈಕಿಲ್ಲದ ಕಾಲ, ಆರು, ಆರುವರೆ ಶ್ರುತಿಯ ಕೊಳಲು, ಅದನ್ನು ಊದಲು ಇನ್ನೂ ಹೆಚ್ಚು ಶಕ್ತಿ ಬೇಕು. ಅವರ ಕೆಲವು ಕೊಳಲನ್ನು ಆ ಕಾಲದ ಪ್ರಖ್ಯಾತ ಹಡಗಾದ 'ಯಮಡನ್' ಎಂದು ಕರೆಯುತ್ತಿದ್ದರು. ಅದರ 'ರೀಡ್' ದಪ್ಪ, ಅದರ ''ಬೋರ್'' ಸಣ್ಣದು, ಆ ಕಾಲದಲ್ಲಿ ಕೊಳಲಿನಲ್ಲಿ ಐದೇ ರಂಧ್ರಗಳಿದ್ದವು. ಮಾಲಿ ಅದನ್ನು ಎಂಟಕ್ಕೆ ಏರಿಸಿದ್ದರು. ಕೆಲವು ಬಾರಿ ಕೊಳಲನ್ನು ಹಿಡಿಯುವ ರೀತಿಯೂ ಬೇರೆ, ಸಂದರ್ಭಕ್ಕೆ ತಕ್ಕಂತೆ ಕೊಳಲಿನ ಪೂರ್ತಿ ಶಕ್ತಿ, ಮಾಧುರ್ಯ ಹಿಂಡಿ ತೆಗೆಯಲು ತಕ್ಕಂತೆ, ಪಕ್ಷಿಗಳ ಕಾಲು ಬೆರಳಿನಂತೆ ಕೊಳಲು ಹಿಡಿಯುವುದೂ ಉಂಟು. ಕೊಳಲಿನ ಶ್ರುತಿಗೆ ತಕ್ಕಂತೆ, ಮೊದಲ ಎರಡು ರಂಧ್ರಗಳನ್ನು ಎಡಗೈಯನ (ಲೊಡ್ಡೆಯಾಗದಿದ್ದರೆ) ತೋರು ಬೆರಳು, ಮಧ್ಯದ ಬೆರಳಿಂದ ಮೊದಲೆರಡು ರಂಧ್ರಗಳನ್ನು ಮುಚ್ಚುವುದು ಸಾಮಾನ್ಯ. ಮಾಲಿ ಮೊದಲ ಮೂರು ರಂಧ್ರಗಳನ್ನು ಮೂರು ಬೆರಳುಗಳಿಂದ ಮುಚ್ಚಿ, ಸಂದರ್ಭಕ್ಕೆ, ರಾಗಕ್ಕೆ ತಕ್ಕಂತೆ, ಕೊಳಲಿನ ಶ್ರುತಿಯನ್ನೇ ಬದಲಾಯಿಸುತ್ತಿದ್ದರು. ಈಗ ಶಶಾಂಕ್, ರಮಣಿ ಅಂಥವರು, ಕೆಲವು ಆಲಾಪನೆಗೆ, ಭಜನೆಗೆ ಬೇರೆ, ಹಿಂದೂಸ್ಥಾನಿಯ ಶೈಲಿಯೇ, ನುಡಿಸಲು ಪ್ರತ್ಯೇಕವಾಗಿ ಬಾನ್ಸುರಿಯನ್ನೇ ಇಟ್ಟುಕೊಂಡಿರುತ್ತಾರೆ. ಮಾಲಿಗೆ ಇದು ಅಪಥ್ಯ. ''ನಿಮ್ಮ ಧ್ವನಿಯ ಶ್ರುತಿ ಬದಲಾಯಿಸಬೇಕಾದರೆ, ಬೇರೆ ಕಂಠವನ್ನೇ ತರುತ್ತೀರಾ? ಇರುವ ಕಂಠದಲ್ಲೇ ಎಲ್ಲ ಸಾಧ್ಯತೆಗಳನ್ನು ತೋರಿಸಬೇಕು. ಹಾಗೆಯೇ ಕೊಳಲಿನಲ್ಲೂ'' ಎನ್ನುತ್ತಿದ್ದರು.

ರಮಣಿ ಇವರೊಂದಿಗೆ ವಾಸ ಮಾಡಿ, ಇವರ ಶೈಲಿಯನ್ನೇ ಕಲಿತು, ಮುಂದೆ ಅದನ್ನು ಭರಿಸಲು ಸಾಧ್ಯವಾಗದೆ, ತಮ್ಮದೇ ಶೈಲಿಯಲ್ಲಿ ಮುಂದುವರಿಯುತ್ತಿದ್ದರು. ''ರಮಣಿ ಅವರೇನೋ ಬೆಳಕಿಗೆ ಬರುತ್ತಿದ್ದಾರೆ. ಆದರೆ ಅವರು ಕೊಳಲು ನುಡಿಸುವುದು ಯಾವಾಗ ಎಂದೇ ನನಗೆ ತಿಳಿಯದು''. ಅಂದರೆ ರಮಣಿಯ ಶೈಲಿ ಕೊಳಲೇ ಅಲ್ಲ ಎಂಬರ್ಥ.

**ಮಾ**ಲಿಯ ಶಿಷ್ಯರು ಯಾರೂ ಅವರ ಮಟ್ಟಕ್ಕೆ ಏರಲಿಲ್ಲ. ಒಂದು ಕಾರಣ ಅದಕ್ಕೆ ನಿಜವಾದ ಚೈತನ್ಯ, ಪ್ರತಿಭೆ ಬೇಕು. ಪಿಟೀಲಿನಲ್ಲಿ ವೇಗವಾಗಿ, ಕೊಳಲಿನಲ್ಲಿ ನಿಧಾನವಾಗಿ ನುಡಿಸಲು ಕಷ್ಟ; ದೀರ್ಘವಾದ ಉಸಿರಾಟ ಅಭ್ಯಾಸವಿಲ್ಲದಿದ್ದರೆ, ಸಹಜವಾಗಿ ಬರದಿದ್ದರೆ, ಮಾಲಿಯಂತೆ ಊದಿದಲ್ಲಿ ಅರ್ಧಗಂಟೆಯಲ್ಲಿ ಬಳಲುತ್ತಾರೆ. ಇದೇ ಕಾರಣಕ್ಕೆ ಮಾಲಿಯ ಶೈಲಿ ಬಿಟ್ಟು, ಸುಲಭದ ದಾರಿ ಹಿಡಿಯುತ್ತಾರೆ. ಆದ್ದರಿಂದ ಈಗ ಕೇಳಿಬರುವ ರಮಣಿ, ಸಿಕ್ಕಿಲ್ ಸಹೋದರಿಯರಾಗಲೀ, ಹಿಂದಿನ ಕಾಲದ ಕೇಶಿಯಾಗಲಿ - ಈ ನಾಲ್ವರೂ ಮಾಲಿಯ ಕಸಿನ್, ನೀಸ್‌ಗಳೇ - ಮಾಲಿಯ ಶೈಲಿಗೆ ಗಂಟುಬೀಳಲಿಲ್ಲ. ಮನಸ್ಸು ಮಾಡಿದರೆ ಈಗಿನ ಬಾಲಪ್ರತಿಭೆ ಶಶಾಂಕ ಮಾಲಿಯ ಮಟ್ಟಕ್ಕೆ ಬರಬಲ್ಲ. ಮಾಲಿಯ ಗಾನ ಹೇಗಿತ್ತು ಎಂದು ತಿಳಿಯಬೇಕಾದರೆ ಈಗ ಮಾರುಕಟ್ಟೆಯಲ್ಲಿ ಎಂಟು ಹತ್ತು ಕ್ಯಾಸೆಟ್ಟುಗಳು ಈಗಲೂ ಸಿಗುತ್ತೆ; ಕೆಲವರ ಬಳಿ ಖಾಸಗಿ ಸಂಗ್ರಹಗಳಿವೆ. ಇನ್ನೂ ಒಂದು ವಿಧವಿತ್ತು, ಈಗಿಲ್ಲ. ಬೆಂಗಳೂರಿನಲ್ಲಿದ್ದ ಎಸ್.ಪಿ.ನಟರಾಜನ್, ಬೆಂಗಳೂರಿನವರೇ ಆಗಿದ್ದ ಸಿ.ಎಮ್.ಮಧುರಾನಾಥ್, ಇವರಿಬ್ಬರೂ ನುಡಿಸುತ್ತಿದ್ದಾಗ ಬಹಳ ಮಂದಿ ಮಾಲಿಯ ಸಂಗೀತ ಕೇಳಿದಂತೆ ಭಾಸವಾಗುತ್ತಿತ್ತು. ಮಾಲಿಯಂತೆಯೇ ನುಡಿಸಲು ಶಕ್ತಿ, ಧೈರ್ಯ, ಮೂಡು ಸಾಲದಾಗ ಇಬ್ಬರೂ ಕುಡಿತಕ್ಕೆ ಮೊರೆ ಹೋದುದುಂಟು. ಈಗ ಇಬ್ಬರೂ ಬದುಕಿಲ್ಲ. ಮಧುರಾನಾಥ್ ಮಾಲಿಯ ಶಿಕ್ಷಣ ಪಡೆಯಲು ಎಲ್ಲ ರೀತಿಯ ಆರೈಕೆ ಮಾಡಬೇಕಾಯಿತು. ಸಮಯಕ್ಕೆ ಸರಿಯಾಗಿ ಟವಲು, ಬಟ್ಟೆ, ಗುಂಡು ನೀಡಿ ಉಪಚರಿಸಬೇಕಾಗುತಿತ್ತು. ಒಮ್ಮೆ ಕಾಸ್ಮೊಪಾಲಿಟನ್ ಕ್ಲಬ್‌ನಲ್ಲಿ ರಾತ್ರಿ ಹನ್ನೊಂದರವರೆಗೆ ಮಾಲಿ, ಗುಂಡು ಇಸ್ಪೀಟಿನಿಂದ ಎದ್ದು ಬರಲು ಕಾದ ಮಧುರಾನಾಥ್‌ಗೆ, ರಾತ್ರಿ ತಾವು ಕ್ಲಬ್‌ನಲ್ಲೇ ಮಲಗುವುದಾಗಿಯೂ, ತಾವು ಮನೆಗೆ ಹಿಂದಿರುಗಿ ಬೆಳಿಗ್ಗೆ ಟವಲು, ಒಳ ಉಡುಪು ತಂದರೆ ಸಾಕೆಂದೂ ಮಾಲಿ ತಿಳಿಸಿದರು. ''ಒಟ್ಟು ಮೂರು ದಿನ ಮಾಲಿ ಇಸ್ಪೀಟು, ಗುಂಡಿನಿಂದ ಏಳಲೇ ಇಲ್ಲ. ನಾಷ್ಟಾ, ಊಟ, ಕಾಫಿ ತಿಂಡಿ ಟೇಬಲ್ಲಿಗೆ ತರಿಸಿಕೊಂಡು, ಟೇಬಲ್ಲಿನಿಂದ - ಸ್ನಾನಕ್ಕೆ ಮತ್ತು ಕೆಲವು ನೈಸರ್ಗಿಕ ಕ್ರಿಯೆಗೆ ಕ್ಲಬ್ಬಿನ ಟಾಯಲಟ್ಟು ಬಿಟ್ಟರೆ - ಏಳಲೇ ಇಲ್ಲ'' ಎಂದಿದ್ದರು, ಮಾಲಿ ವಾರಕ್ಕೊಮ್ಮೆಯೋ. ತಿಂಗಳಿಗೊಮ್ಮೆಯೋ, ಮೂಡು ಬಂದಾಗ, ''ಹಿಡಿ, ಕೊಳಲು' ಎಂದು ಹೇಳಿ, ಕೆಲವು ರಾಗಗಳ ಪಾಠ ಅದ್ಭುತವಾಗಿ ಹೇಳಿಕೊಡುತ್ತಿದ್ದರಿಂದ, ಮಧುರಾನಾಥ್‌ನಂತಹ ಹಲವಾರು ಶಿಷ್ಯರು, ಈ ಪಾಠಕ್ರಮಕ್ಕೋಸ್ಕರ ಏನು ಬೇಕಾದರೂ ಮಾಡುತ್ತಿದ್ದರು.

ಆದರೆ ಈಗಿನಂತೆ ಕಲಿಯುವುದು ಸುಲಭವಲ್ಲ. ನಟರಾಜನ್ ಹೇಳುತ್ತಿದ್ದಂತೆ, ರಾತ್ರಿ ತಮ್ಮ ಕೋಣೆಯಲ್ಲಿ ಮಾಲಿ, ದೀಪವಿದ್ದರೂ ಅದನ್ನಾರಿಸಿ, ಗೋಡೆಯಕಡೆ ತಿರುಗಿ, ಒಂದೊಂದು 'ಸಂಗತಿ'ಗಳನ್ನು ನುಡಿಸುತ್ತಿದ್ದಂತೆ ನಟರಾಜನ್, ಕೇಳುತ್ತಿದ್ದಂತೆಯೇ ಸ್ವರಗಳನ್ನು ಗುರುತಿಸಿ, ಗಮಕದ ಮಾಧುರ್ಯ ಬರಬೇಕಾದರೆ ಮಾಲಿಯ ಬೆರಳುಗಳು ಹೇಗೆ ಚಲಿಸುತ್ತೆ ಎಂದು ಊಹಿಸಿ ನುಡಿಸಬೇಕಾಗುತ್ತಿತ್ತು, ಹಾಗೂ ಬೇಗ ಕಲಿಯಬೇಕಾಗುತ್ತಿತ್ತು. ಸ್ವಲ್ಪ ನಿಧಾನ, ಅಥವಾ ತಪ್ಪಾದಲ್ಲಿ, ಎಲ್ಲಿ ಮಾಲಿ ಮತ್ತೆ ವಾರಾನುಗಟ್ಟಲೆ ಪಾಠ ನಿಲ್ಲಿಸಿಬಿಡುವರೋ ಎಂಬ ಭಯ ಬೇರೆ.

ಮಾಲಿಯವರು ಎಲ್ಲಿ ತಮ್ಮ ಬೆರಳುಗಳ ಚಲನೆಯ ಕ್ರಮವನ್ನೇ ಮಿಕ್ಕವರು ಹತ್ತಿರದಿಂದ ಗಮನಿಸಿ ತಮ್ಮಂತೆಯೇ ನುಡಿಸಲು ಆರಂಭಿಸಿಬಿಡುತ್ತಾರೋ ಎಂಬ ಭಯಕ್ಕೆ, ಕತ್ತಲಿನಲ್ಲೇ ಪಾಠ ಹೇಳುವುದು ಎಂದು ಕೆಲವರು ಆಡಿಕೊಂಡಿದ್ದುಂಟು. ಮಿಕ್ಕವಿಷಯದಲ್ಲಿ ಹಲವಾರು ಬಾರಿ ಮಾಲಿ ಸಣ್ಣ ಬುದ್ಧಿ ತೋರಿಸಿದ ಹಲವಾರು ಸಂದರ್ಭಗಳಿದ್ದರಿಂದ ಈ ರೀತಿಯ ಮಾತುಗಳನ್ನು ಆಡುತ್ತಿದ್ದರು.

ಆದರೆ ಮಾಲಿಯ ವಾದ ಬೇರೆ. ತಾವು ಶ್ರಮಪಟ್ಟು ಯಾರ ಸಹಾಯವಿಲ್ಲದೆ, ಬೇರೆಯವರ ವೋಕಲ್ ಸಂಗೀತ ಕೇಳಿ ಕಲಿತಿದ್ದರಿಂದ, ಮಿಕ್ಕವರು ಹಾಗೆಯೇ ಮಾಡದಿದ್ದರೆ ಒಳ್ಳೆಯ ಕಲಾವಿದ ಆಗುವುದಿಲ್ಲ ಎಂಬುದು ಅವರ ವಾದ.

ಆದರೆ ಬೆಂಗಳೂರಿನ ಕಲಾವಿದರ ಶಿಷ್ಯರೊಬ್ಬ, ಮಾಲಿಯ ಕ್ಯಾಸೆಟ್ ಕೇಳುತ್ತಾ, ''ಹೇಗೆ ಸಾರ್, ಹೀಗೆ ನುಡಿಸುವುದು?'' ಎಂದಾಗ, ಆ ಕಲಾವಿದರು, ''ಸುಮ್ಮನಿರು, ಸದ್ಯ ಬೆರಳ್‌ಗಿರಳ್ ಮಡಿಚಿಕೊಂಡು, ಸಿಕ್ಕಿ ಹಾಕಿಕೊಂಡು ಬಿಟ್ಟೀತು' ಎಂದರಂತೆ.

ಆದರೂ ರಮಣಿ ಆಪ್ತನಾದ ಶಿಷ್ಯ, ಮಾಲಿ ಅವರ ಪರಂಪರೆ ಮುಂದುವರಿಸುವ ಶಿಷ್ಯನಲ್ಲದಿದ್ದರೂ. ಒಮ್ಮೆ ಹುಡುಗಾಟಿಕೆಗೆ ರಮಣಿ ಮೈಸೂರಿಗೆ ಹೋಗಬೇಕಿತ್ತು. ಮಹಾಲಿಂಗಮ್ ಮೊಂಡು ಹಿಡಿದು ಬೇಡವೆನ್ನುತ್ತಿದ್ದರು, ಕಾರಣವಿಲ್ಲದೆ. ರಮಣಿ ಪಟ್ಟು ಹಿಡಿದು ಹೊರಟೇ ಬಿಟ್ಟರು. ಮಾಲಿ ತಮ್ಮ ಕೈ ಗಡಿಯಾರ ಜೇಬಿನಲ್ಲಿಟ್ಟುಕೊಂಡು ಪೊಲೀಸ್‌ಗೆ ತಮ್ಮ ಗಡಿಯಾರವನ್ನು ರಮಣಿ ಕದ್ದನೆಂದು ದೂರು ಸಲ್ಲಿಸಿದರು. ರಮಣಿ ರೈಲು ಹತ್ತುವ ಮುನ್ನವೆ ಬಂಧಿಸಲ್ಪಟ್ಟರು. ಆದರೆ ಕ್ರಮ ತೆಗೆದುಕೊಳ್ಳಲು ಒತ್ತಾಯವಿಲ್ಲದಾದರಿಂದ ರಮಣಿ ಜೈಲಿನಲ್ಲಿ ಕಂಬಿ ಎಣಿಸಬೇಕಾಗಲಿಲ್ಲ. ಮೈಸೂರಿಗಂತೂ ಹೋಗಲಾಗಲಿಲ್ಲ.

ಮಾಲಿ ಮದರಾಸು ಬಿಟ್ಟು ಬೆಂಗಳೂರಿನಲ್ಲಿ ತಂಗಿ 25 ವರ್ಷವಿದ್ದರು. ತಮಿಳುನಾಡಿನಲ್ಲಿ ಪಾನವಿರೋಧ ಕಾಯಿದೆ ಬಂದದ್ದರಿಂದಲೇ ಅವರು ಬೆಂಗಳೂರಿಗೆ ಬಂದರೆಂದು ಜನರು ಆಡಿಕೊಂಡರು. ಮಾಲಿಗೆ ಮದರಾಸಿನ ಪಾಂಡಿತ್ಯದ ಸೋಗಲಾಡಿತನ ಉಸಿರು ಕಟ್ಟುವಂತಿತ್ತು.

ದೇವನಹಳ್ಳಿಯ ಫಾರಂನಲ್ಲಿ ಹೆಂಚಿನ ಮನೆಯಲ್ಲಿ ನಿರಾತಂಕವಾಗಿದ್ದರೂ ಕುದುರೆ ಜೂಜಿನ ಚಟ ಅಂಟಿ ಬಿಟ್ಟಿತು. ಅಲ್ಲೂ ಲೆಕ್ಕಾಚಾರ, ಗಣಿತ, ಯಾರ ಮಾತನ್ನೂ ನಂಬುತ್ತಿರಲಿಲ್ಲ. ಒಮ್ಮೆ ಕುದುರೆ ಓನರ್ ತನ್ನ ಕುದುರೆ ಫೇವರಿಟ್ ಆದರೂ, ಗೆಲ್ಲುವುದಿಲ್ಲ, ಅದಕ್ಕೆ ನಾನಾ ಕಾರಣವಿದೆ, ತಾನೆ ಬೇರೆ ಕುದುರೆ ಮೇಲೆ ಬಾಜಿ ಕಟ್ಟುತ್ತಿದ್ದೇನೆ ಎಂದರೂ ಆ ಕುದುರೆ ಮೇಲೆ ಆ ಕಾಲಕ್ಕೆ ದೊಡ್ಡದಾದ ಮೊತ್ತ ಸಾವಿರ ರೂಪಾಯಿ ಆಡಿ ಸೋತರು. ಕುದುರೆ ಓನರ್ ಹೇಳಿದ ಕುದುರೆಯೇ ಗೆದ್ದಿತ್ತು. 'ನಾನು ಕುದುರೆಯ ಮೆರಿಟ್ ಮೇಲೆ ಆಡುವುದು. ಕಂಡವರ ಮಾತಲ್ಲ. ಕಾಲ ಪ್ರಮಾಣ ಸರಿ ಇಲ್ಲ. ಗೆಲ್ಲ ಬೇಕಾದ ಕುದುರೆ ಮೇಲೆ ಬಾಜಿ ಕಟ್ಟಿದ ಸಂತೋಷವಾದರೂ ಇದೆಯಲ್ಲ. ಅದೇ ಸಾಕು' ಎನ್ನುತ್ತಿದ್ದರು.

ಮೊದ ಮೊದಲು ಮಾಲಿ ಗೆದ್ದಿದ್ದು ಲಕ್ಷಾಂತರ ರೂ.ಗಳು. ಎಲ್ಲವನ್ನೂ ಪೋಲು ಮಾಡಿದರು. ಅದನ್ನು ಮತ್ತೆ ಗಳಿಸಲು ಮತ್ತೆ ಮತ್ತೆ, ಆಡಿ ಸೋತರು. ಕಡೆಗೆ ಸೋತಿದ್ದು ರೂ. 2.96 ಲಕ್ಷ. ಅವರು ಇದ್ದ ಲೆಜಿಸ್ಲೇಟರ್ ಹೋಂನ ಕೋಣೆಯೊಂದರಲ್ಲಿ, ಸುಮಾರು 2000 ಬಿದಿರು ಕೊಳವೆಗಳೊಡನೆ ಇದ್ದಾಗ ನಾನು ಭೇಟಿ ಮಾಡಿದ್ದೆ. ಮೊಂಡಾದ ಚಾಕುವಿನಿಂದ ಅದರಲ್ಲಿ ರಂಧ್ರ ಮಾಡುವ ಸಾಹಸದಲ್ಲಿದ್ದರು. ಸ್ವರ ಸರಿಯಾಗಿ ಹೊಮ್ಮುತ್ತಿರಲಿಲ್ಲ. ಪೀ ಪೀ ಎಂದು ಊದಿ, "ಥೂ" ಎಂದು ಬಿಸಾಡಿ, ಮತ್ತೊಂದು ಕೊಳವೆ ಕೈಗೆ ತೆಗೆದುಕೊಳ್ಳುತ್ತಿದ್ದರು.

ಇವೆಲ್ಲ ಏನು ಎಂದು ಕೇಳಿದಾಗ, ರೇಸಿನಲ್ಲಿ 60,000 ರೂ. ನಷ್ಟವಾಗಿದೆ ಎಂದೂ ಇದರ ಮಾರಾಟದಿಂದ ಆ ನಷ್ಟ ತುಂಬುವ ಹುನ್ನಾರದಲ್ಲಿದ್ದೇನೆಂದೂ ತಿಳಿಸಿದರು. ಆದರೆ ಈ ನಷ್ಟ ತುಂಬಿದ್ದು ಕೊಳಲು ತಯಾರಿಸಿ ಮಾರಿದ್ದರಿಂದಲ್ಲ. ಅಮೆರಿಕದ ಮಾಜಿ ಅಧ್ಯಕ್ಷ ರೂಸ್‌ವೆಲ್ಟ್‌ನ ಮರಿಮೊಮ್ಮಗಳು ಇವರನ್ನು ಮದುವೆ ಆಗಿ, ಅಮೆರಿಕದಲ್ಲಿ, ಫ್ರಾನ್ಸ್‌ನಲ್ಲಿ, ಆ ಕಾಲಕ್ಕೆ 200 ಡಾಲರ್ ಮೊತ್ತಕ್ಕೆ ಕಛೇರಿ ಕೊಟ್ಟು, ಸಾಲ ತೀರಿಸಿದರು. ಮಾಲಿಗೆ ಮೊದಲಿಂದಲೂ ಹೆಂಗಸರ ಸಹವಾಸ, ಚಟ ಇಲ್ಲ. ಇವರ ಮೇಧಾವಿ ಗುಣಕ್ಕೆ ಸೋತು, ಚೆಟ್ಟಿಯಾರ್ ವ್ಯಾಪಾರಿಯೊಬ್ಬ, ತನ್ನ ಮಗಳನ್ನು, ಇವರ ತೂಕದ ಚಿನ್ನವನ್ನು ವರದಕ್ಷಿಣೆಯಾಗಿ ಕೊಡುತ್ತೇನೆ ಎಂದಾಗ, "ಬೇಡವಪ್ಪಾ, ಬೇಡ, ದೇವರು ನನಗೆ ಆ ದಿಕ್ಕಿನಲ್ಲಿ ಯೋಚಿಸಲೂ ಶಕ್ತಿ ಕೊಡಲಿಲ್ಲ. ಶಾಪ ಎಂದಾದರೂ ತಿಳಿ, ಆದರೆ ಆ ಶಕ್ತಿ ಇಲ್ಲ" ಎಂದು ನಯವಾಗಿ ತಿರಸ್ಕರಿಸಿದ್ದರು.

ಆದರೆ ಮಾಲಿಗೆ ತಮ್ಮ ಧಾತುವಿನ ಬಗ್ಗೆ ಅಪಾರ ಗೌರವ. ನಮ್ಮ ಜೀವನವೆಲ್ಲ ಧಾತುವಿನಲ್ಲೇ ಇದೆ. ಅದು ಹೋದರೆ ಮನುಷ್ಯ, ಮನುಷ್ಯನೇ ಅಲ್ಲ ಎಂಬ ನಂಬಿಕೆ. ಕೆವಿ ಅಯ್ಯರ್ ಬಳಿ ಇದ್ದಾಗ, ಅವರಿದ್ದ ಕೋಣೆಯಲ್ಲಿ ಟೆಸ್ಟ್‌ಟ್ಯೂಬ್‌ಗಳಲ್ಲಿ, ದಿನಾಂಕ ಗುರುತು ಹಾಕಿಟ್ಟು ಅದರಲ್ಲಿ ಶೇಖರಣೆ ಆಗಿದ್ದ ತಮ್ಮ ಧಾತುವಿನ ಬಗ್ಗೆ ಗಂಭೀರವಾಗಿ, ಹಿರಿಮೆಯಿಂದ ಮಾತಾಡಿದ್ದನ್ನು ಕೇಳಿದ ಹಲವಾರು ಪತ್ರಕರ್ತರು, ಸಂಗೀತ ಅಭಿಮಾನಿಗಳು ನಮ್ಮೊಡನಿದ್ದಾರೆ.

ಇಂತಹ ಮಾಲಿ ರೂಸ್‌ವೆಲ್ಟ್‌ನ ಮರಿಮೊಮ್ಮಗಳನ್ನು ಮದುವೆಯಾದದ್ದು ಹೇಗೆ? ಮಾಲಿಯ ಪ್ರಕಾರ, ಸಂಭೋಗವಿಲ್ಲದ ಮದುವೆ ಪರವಾಗಿಲ್ಲವೆಂದೂ, ವಿವಾಹವಾಗಲೂ ಒಂದೇ ಕರಾರೆಂದರೆ, 'ನೀ ನನ್ನ ಮುಟ್ಟಬಾರದು, ನಾನಿನ್ನ ಮುಟ್ಟುವುದಿಲ್ಲ, ಇದಕ್ಕೆ ಒಪ್ಪಿದರೆ ಸರಿ' ಎಂದರಂತೆ. ಆ ಹೆಂಗಸೂ ಇವರಂತೆಯೇ ತಿಕ್ಕಲು, ವಿಕ್ಷಿಪ್ತ ಜೀವಿ, ಮಾಲಿಯ ಅಭಿಮಾನಿ. ಚಪ್ಪಾಳೆ ತಟ್ಟಿ, ತನಗೆ ಈ ಕರಾರು ಪೂರ್ತಿಯಾಗಿ ಒಪ್ಪಿಗೆ ಎಂದಳಂತೆ. ಸುಮಾರು 5 ವರ್ಷ ದಂಪತಿಯಾಗಿ ನಂತರ ಬೇರೆ ಬೇರೆಯಾದರು. ಒಂದು ಕಾರಣ, ಮಾಲಿಯ ಗೀಳು, ಮೂಡು, ಗುಂಡು, ಈ ಇವೆಲ್ಲವನ್ನೂ ಹೊರತು ಪಡಿಸಿ, ಅವರನ್ನು ಸಾಮಾನ್ಯ ಮನುಷ್ಯನನ್ನಾಗಿ ಮಾಡಲು ಮಾಡಿದ ಪ್ರಯತ್ನ, ಮದುವೆ ಮುರಿದುಬೀಳಲು ಎಂದು.

ಮಾಲಿಯ ಪ್ರಕಾರ ಒಂದು ಕಛೇರಿ ಹೇಗಿರಬೇಕು, ಯಾವ ರೀತಿಯ ತಯಾರಿ ಆಗಬೇಕು ಎಂದು ಕೇಳಿದಾಗ, "ಅತ್ಯುತ್ತಮ ರೀತಿ ಎಂದರೆ, ಕಛೇರಿ ಕೊಡದಿರುವುದು ಅತ್ಯಂತ ಶ್ರೇಷ್ಠವಾದದ್ದು" ಎಂದರು. ಕಲಾವಿದ ಒಂದು ಮಟ್ಟ, ಕೇಳುಗ ಒಂದು ಲೆವಲ್, ಶ್ರೇಷ್ಠ ಸಂಗೀತ ಕೊಟ್ಟಾಗ ಅದನ್ನು ಸ್ವೀಕರಿಸುವ ಮಟ್ಟದಲ್ಲಿಲ್ಲದ ಒಂದು ಬಗೆಯ ಸಾರ್ವಜನಿಕ ಅಜ್ಞಾನ, ಅಥವಾ lack of concentration & appreciation' ಕಲಾವಿದ ನಾನಾ ಕಾರಣಕ್ಕೆ ಕಛೇರಿ ಒಪ್ಪಿಕೊಂಡು, ಆ ಗಳಿಗೆಯಲ್ಲಿ ತಾನು ತನ್ನ ಕಲ್ಪನೆಯ ಮಟ್ಟದ ಸಂಗೀತ ಕೊಡುವ ಶಕ್ತಿ, ಮಾನಸಿಕ ಸ್ಥಿತಿ, ಇಲ್ಲದಾಗ, ಏನು ನುಡಿಸಿದರೂ ಅದೇ ಪ್ರಸಾದ ಎಂದು ಸ್ವೀಕರಿಸುವ ಒಂದು ಜಾಯಮಾನ, ಇದರಿಂದ ಆಗುವ ಒಂದು ರೀತಿಯ ಅವಹೇಳನ, ಹೀಗೆ. ಮೂಡಿನಲ್ಲಿಲ್ಲದಾಗ ಒಂದು ಜೋಕು ಹೇಳು ಎಂದು ಪೀಡಿಸುವುದು, ನನ್ನನ್ನು ಖುಷಿ ಪಡಿಸು ಎಂದು ಪೀಡಿಸುವಂತೆ. ಸ್ವಂತಕ್ಕೆ ತ್ಯಾಗರಾಜರಂತೆ, ಭಕ್ತಿಯಿಂದ ನುಡಿಸಿಕೊಳ್ಳುವುದು ಅಥವಾ ಕೇಳುವುದು ಎಲ್ಲ ರೀತಿಯಲ್ಲೂ ಒಳ್ಳೆಯದು ಎಂದಿದ್ದರು.

'ಸುಖಿ ಎವರರೊ' ಕೀರ್ತನೆಯ ರೆಕಾರ್ಡು ಬಂದಾಗ, ಅದರಲ್ಲಿ ತನ್ನ ಮಂಧ್ರಸ್ಥಾನ ಸರಿ ಇಲ್ಲ ಎಂದು ಆ ಕಾಲಕ್ಕೆ 250 ರೆಕಾರ್ಡುಗಳನ್ನು ಒಡೆದು ಹಾಕಲಾಯಿತು. ತಾನು ನುಡಿಸಿದ ಒಂದು ಕೀರ್ತನೆ ಮದುರೈ ಮಣಿ ಅಯ್ಯರ್ ಹಾಡಿದನ್ನೇ ಕೇಳಿದಾಗ ಅದೇ ಸರಿ ಎಂದು ತಮ್ಮ ಕ್ಯಾಸೆಟ್ಟನ್ನು ಒಂದು ರೂಪಾಯಿಗೆ ವಾಪಸ್ಸು ಕೊಟ್ಟಲ್ಲಿ ಎಲ್ಲವನ್ನೂ ಕೊಂಡು ನಾಶ ಮಾಡಲು ದುಂಬಾಲು ಬಿದ್ದಿದ್ದರು.

ಸಾಯಲು ಒಂದು ವಾರದ ಮುನ್ನ ದೆಹಲಿಯಲ್ಲಿ ಒಂದು ಸಭೆಗೆ ಹೋಗಿದ್ದರು, ಮಾಲಿ. ಕಛೇರಿಗೆ ಒಪ್ಪಿ ಕೈ ಕೊಡುತ್ತಿದ್ದ ಮಾಲಿ, ಆ ಸಭೆಯಲ್ಲಿ ನುಡಿಸಲು ಆಸೆ ಪಟ್ಟಿದ್ದರು. ಆದರೆ ಅಲ್ಲಿ ಹಾರ, ತುರಾಯಿ, ಶಾಲು ಹಾಕಿ ಸನ್ಮಾನ ಮಾಡಿದರೇ ವಿನಹಃ ಇವರನ್ನು ನುಡಿಸಲು ಯಾರೂ ಕೇಳಲೇ ಇಲ್ಲ. ಅದಕ್ಕೆಂದೇ ಶ್ರಮದಿಂದ ತಯಾರಾದ ಎರಡು ಕೊಳಲು ತೆಗೆದುಕೊಂಡಿದ್ದರು. ಅದೇ ಗುಂಗಿನಲ್ಲಿ ಬೆಂಗಳೂರಿನಲ್ಲಿ ಇನ್‌ಸ್ಟಿಟ್ಯೂಷನ್ ಆಫ್ ಇಂಜಿನಿಯರ್ಸ್ ಕಟ್ಟಡದಲ್ಲಿ ಒಂದು ಅದೇ ರೀತಿಯ ಸಮಾರಂಭದಲ್ಲಿ ಪಾಲ್ಗೊಂಡಿದ್ದರು. ಅವರ ಬಗ್ಗೆ, ಭಾಷಣ, ಶ್ಲಾಘನೆ ಆಯಿತೇ ವಿನಹ ಅವರನ್ನು ಕೊಳಲು ನುಡಿಸಲು ಯಾರೂ ಕೇಳಲಿಲ್ಲ. ಆಗ ನಾನು ಒಂದು ಸಂದರ್ಶನ ಬೇಡಿದೆ. ತೂರಾಡುತ್ತಲೇ ಸಂತೋಷದಿಂದ ನಾಳೆ ಕುಮಾರ ಕೃಪದಲ್ಲಿ ಬಂದು ಭೇಟಿ ಆಗುವಂತೆ ಹೇಳಲು ಕಷ್ಟಪಟ್ಟರು. ಅದೊಂದು ದೊಡ್ಡ ಘಟನೆಯಂತೆ, ತನ್ನ ಪರಿಚಾರಕರಲ್ಲಿ ತೊದಲುತ್ತ ಹೇಳುತ್ತಲೇ ಇದ್ದು, ಅವರೆಲ್ಲರೂ ನನ್ನನ್ನು ಕ್ರೂರವಾಗಿ ದಿಟ್ಟಿಸುವಂತೆ ಮಾಡಿದರು. ಮಾರನೇ ದಿನ ಕುಮಾರ ಕೃಪ ಗೆಸ್ಟ್‌ಹೌಸಿನಲ್ಲಿ ನಾನು ಅಪಾಯಿಂಟ್‌ಮೆಂಟ್ ಇದೆ ಎಂದು ಧಾಳಿ ಮಾಡಲು ಯತ್ನಿಸಿದೆ. ಅವರ ಪರಿಚಾರಕರು ತಡೆಯಲು ಪ್ರಯತ್ನಿಸಿದರು. ಕಡೆಗೆ ಹತಾಶರಾಗಿ, "ಬನ್ನಿ ಬನ್ನಿ, ನೋಡಿ, ಅವರು ಇಂಟರ್‌ವ್ಯೂ ಕೊಡುವ ಸ್ಟೇಜಿನಲ್ಲಿ ಇದ್ದಾರಾ ನೀವೇ, ನೋಡಿ ನೋಡಿ" ಎಂದು ನನ್ನನ್ನು ಕೋಣೆಗೆ ಒಳಗೆ ದಬ್ಬಿದರು. ಎಡವುತ್ತ ಒಳ ಹೋದವನು ಚಟ್ಟೆಂದು ನಿಂತು ಬಿಟ್ಟೆ. ಮಾಲಿ, ಟಿ.ಆರ್. ಮಹಾಲಿಂಗಮ್ ಈ ಶತಮಾನದ ವೇಣುಗಾನ ಪುರುಷೋತ್ತಮ, ಒಣಗಿದ ಸೊಪ್ಪಿನಂತೆ ಚುರುಟಿಕೊಂಡು, ಚಿಕ್ಕ ಮಗುವಿನಂತೆ ಚಿಕ್ಕದಾಗಿ ಮಲಗಿದ್ದರು. ಸಂದರ್ಶನವಿರಲಿ, ಹಲೋ ಎನ್ನುವ ಧೈರ್ಯವೂ ಉಡುಗಿ ಹೋಯಿತು. ಮೂರು ದಿನದ ನಂತರ ಮದರಾಸಿಗೆ ಪ್ರಯಾಸದಿಂದ ತೆರಳಿ, ಮೇ 31, 1986ರಂದು ಸತ್ತರು. ಸ್ಮಶಾನದಲ್ಲಿ ರಮಣಿ, ತ್ಯಾಗರಾಜರ, 'ಪರಮಾತ್ಮುಡು' ಕೀರ್ತನೆಯನ್ನು ಮಾಲಿ ದೆಹಲಿಗೆ ತೆಗೆದುಕೊಂಡು ಹೋಗಿದ್ದ ಕೊಳಲಿನಲ್ಲಿ ನುಡಿಸಿ, ಕೊಳಲನ್ನು ಮಾಲಿಯ ಎಲ್ಲ ನೆನಪಿಗೋಸ್ಕರ ತಮ್ಮ ಬಳಿ ಭದ್ರ ಮಾಡಿಕೊಂಡರು. ■

# ಪ್ರವಾಸಿಗರಿಗೆ ಒಂದಿಷ್ಟು ಕರ್ನಾಟಕದ ಮಾಹಿತಿ

ಕರ್ನಾಟಕವು ಯಾತ್ರಾಸ್ಥಳಗಳ ನೆಲೆವೀಡು. ದೇಶ - ವಿದೇಶಗಳಿಂದ ಬರುವ ಪ್ರವಾಸಿಗರ ಮನಸ್ಸಿಗೆ ಮುದ ನೀಡುವ ಹತ್ತಾರು ಸ್ಥಳಗಳು ನಾಡಿನೆಲ್ಲೆಡೆ ಹರಡಿಕೊಂಡಿವೆ. ಸಂದರ್ಶಕರ ಬೇಕು ಬೇಡಗಳನ್ನು ಗಮನದಲ್ಲಿಟ್ಟುಕೊಂಡು ಕರ್ನಾಟಕ ಪ್ರವಾಸೋದ್ಯಮ ಇಲಾಖೆ ಕೈಗೊಂಡ ಕ್ರಮಗಳು ಪ್ರವಾಸಿಗರು ಎದುರಿಸುವ ಸಮಸ್ಯೆಗಳಿಗೆ ಪರಿಹಾರ ಸೂಚಿಸುವತ್ತ ಸಾಗಿವೆ. ಈ ನಿಟ್ಟಿನಲ್ಲಿ ಇಲಾಖೆ ನಿರ್ದೇಶಕ ವೀರಭದ್ರಾಚಾರಿಯವರು ಸಂದರ್ಭಕ್ಕನುಗುಣವಾಗಿ ಸೂಕ್ತ ಕ್ರಮಗಳನ್ನು ಕೈಗೊಳ್ಳುತ್ತಿರುವುದಲ್ಲದೆ, ಅದಕ್ಕೆ ಒತ್ತು ನೀಡಿ ಕಾರ್ಯನಿರ್ವಹಿಸುತ್ತಿರುವ ಪ್ರವಾಸೋದ್ಯಮ ಇಲಾಖಾ ಸಿಬ್ಬಂದಿಯ ಸಹಕಾರ ಶ್ಲಾಘನೀಯವಾದುದು.

ಕರ್ನಾಟಕದ ಕೆಲವು ಸ್ಥಳಗಳಿಗೆ ಪ್ರವಾಸ ಕೈಗೊಂಡಾಗ ಊಟ - ವಸತಿ ಹಾಗೂ ಇನ್ನಿತರೆ ಸೌಕರ್ಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಇಲ್ಲಿದೆ.

**ಬೆಂಗಳೂರು** : ಬೆಂಗಳೂರು ದೇಶದ ಪ್ರಮುಖ ನಗರ ಹಾಗೂ ಪಟ್ಟಣಗಳಿಂದ ರಸ್ತೆ - ರೈಲು ಹಾಗೂ ವಿಮಾನ ಸಂಚಾರ ವ್ಯವಸ್ಥೆಯನ್ನು ಪಡೆದಿದೆ. ಊಟ ವಸತಿಯ ಸೌಕರ್ಯ ಕಲ್ಪಿಸಿಕೊಳ್ಳಲು ನೂರಾರು ಮಧ್ಯಮ ವರ್ಗದ ಹಾಗೂ ಫೈವ್‌ಸ್ಟಾರ್ ಹೋಟೆಲ್‌ಗಳನ್ನು ಹೊಂದಿದೆ. ಮಹಾತ್ಮಗಾಂಧಿ ರೋಡ್, ಬ್ರಿಗೇಡ್‌ರೋಡ್, ಕಮರ್ಷಿಯಲ್ ಸ್ಟ್ರೀಟ್, ಕೆಂಪೇಗೌಡ ರೋಡ್, ಚಿಕ್ಕಪೇಟೆಗಳು ಪ್ರಮುಖ ಶಾಪಿಂಗ್ ಕೇಂದ್ರಗಳಾಗಿವೆ.

**ಮೈಸೂರು** : ಇದು ಬೆಂಗಳೂರು ಹಾಗೂ ಚೆನ್ನೈಗೆ ಉತ್ತಮ ರಸ್ತೆ ಹಾಗೂ ರೈಲು ಮಾರ್ಗಗಳನ್ನು ಪಡೆದಿದೆ. ಬಿ.ಆರ್. ಹಿಲ್ಸ್, ಬಂಡೀಪುರ, ಚಾಮುಂಡಿ ಹಿಲ್ಸ್, ಗೋಪಾಲಸ್ವಾಮಿ ಬೆಟ್ಟ, ನಂಜನಗೂಡು, ತಲಕಾಡು, ಸೋಮನಾಥಪುರ, ಎಂ.ಎಂ. ಹಿಲ್ಸ್ ಇಲ್ಲಿನ ಸುತ್ತಮುತ್ತಲಿನ ಪ್ರವಾಸೀ ಸ್ಥಳಗಳು. ಊಟ ವಸತಿಗೆ ಅನೇಕ ಮಧ್ಯಮ ವರ್ಗದ ಹೋಟೆಲ್‌ಗಳಲ್ಲದೆ, ಹೋಟೆಲ್ ಮಯೂರ, ಹೊಯ್ಸಳಗಳಂತಹ ಸ್ಟಾರ್ ಹೋಟೆಲ್‌ಗಳೂ ಇವೆ. ಇನ್ನಿತರೆ ಮಾಹಿತಿಗಳಿಗೆ ಪ್ರವಾಸೋದ್ಯಮ ಇಲಾಖೆಯ 442096 ಸಂಖ್ಯೆಯ ದೂರವಾಣಿಯನ್ನು ಸಂಪರ್ಕಿಸಬಹುದು.

**ಹಾಸನ** : ಇದು ಬೆಂಗಳೂರು, ಮಂಗಳೂರು ಹಾಗೂ ಮೈಸೂರಿಗೆ ಉತ್ತಮ ರಸ್ತೆ - ರೈಲು ಮಾರ್ಗಗಳನ್ನು ಪಡೆದಿದೆ. ಊಟ ವಸತಿ ಹಾಗೂ ಇಲ್ಲಿನ ಸುತ್ತಮುತ್ತಲ ಪ್ರವಾಸ ಸ್ಥಳಗಳ ಬಗ್ಗೆ ತಿಳಿಯಲು, ಟೂರಿಸ್ಟ್ ಬ್ಯೂರೋ, ಪ್ರವಾಸೋದ್ಯಮ ಇಲಾಖೆ, ವಾರ್ತಾಭವನ, ಬಿ.ಎಂ. ರೋಡ್, ಹಾಸನ. ಫೋನ್ : 68862. ಇವರನ್ನು ಸಂಪರ್ಕಿಸಬಹುದು.

**ಕೋಲಾರ**: ಇಲ್ಲಿನ ಸುತ್ತಮುತ್ತಲ ಪ್ರವಾಸ ಸ್ಥಳಗಳು : ಮುಳಬಾಗಲು, ಚಿಂತಾಮಣಿ, ನಂದಿಹಿಲ್ಸ್, ಚಿಕ್ಕ ತಿರುಪತಿ, ಉತ್ತಮ ಕಂಚಿ (ಉತ್ತನೂರು), ಕೆ.ಜಿ.ಎಫ್, ಬೇತಮಂಗಲ, ಆವನಿ ಇತ್ಯಾದಿ. ಇನ್ನಿತರೆ ಮಾಹಿತಿಗಳಿಗೆ ಹೋಟೆಲ್ ಮಯೂರ ಆಪೂರ್ವ, ಮುಳಬಾಗಲ್. ಫೋನ್ : 2173 ಸಂಪರ್ಕಿಸಬಹುದು.

**ಬಳ್ಳಾರಿ** : ಇಲ್ಲಿನ ಅಂಬಾಲಿ, ಹಂಪಿ, ಮೈಲಾರ, ರಮಣದುರ್ಗ (ರಾಮ್‌ಗಡ) ಹಾಗೂ ಟಿ.ಬಿ. ಡ್ಯಾಂ, ಪ್ರವಾಸೀ ಸ್ಥಳಗಳಾಗಿವೆ. ಇನ್ನಿತರೆ ಮಾಹಿತಿಗಳಿಗೆ ಹೋಟೆಲ್ ಮಯೂರ ವಿಜಯನಗರ, ಟಿ.ಬಿ. ಡ್ಯಾಂ, ಹೊಸಪೇಟೆ ಅಥವಾ ಪ್ರವಾಸೋದ್ಯಮ ಇಲಾಖೆ ಇವರನ್ನು ಸಂಪರ್ಕಿಸಿ. ಫೋನ್ : 58537.

**ಬಿಜಾಪುರ** : ಇಲ್ಲಿನ ಬಾದಾಮಿ, ಐಹೊಳೆ, ಪಟ್ಟದಕಲ್ಲು, ಇಳಕಲ್, ಕೂಡಲಸಂಗಮ, ಆಲಮಟ್ಟಿ ಡ್ಯಾಂ, ಮಹಾಕೂಟ ಪ್ರಮುಖ ಪ್ರವಾಸೀ ಸ್ಥಳಗಳಾಗಿವೆ. ಊಟ ವಸತಿಗೆ ಪ್ರತಿಯೊಂದು ಸ್ಥಳದಲ್ಲಿಯೂ ಬೋರ್ಡಿಂಗ್ - ಲಾಡ್ಜಿಂಗ್ ವ್ಯವಸ್ಥೆ ಇದೆ. ಇತರೆ ಮಾಹಿತಿಗಳಿಗೆ ಹೋಟೆಲ್ ಮಯೂರ ಆದಿಲ್ ಷಾ, ಫೋನ್ : 20934 ಇವರನ್ನು ಸಂಪರ್ಕಿಸಿ.

**ಬೀದರ್** : ಇಲ್ಲಿನ ಔರಾದ್, ಬಸವಕಲ್ಯಾಣ, ಭಾಲ್ಕಿ ಹುಮನಾಬಾದ್, ಜಲಸಂಗಿ, ಕಾರಂಜ, ನಾರಾಯಣಪುರ ಪ್ರಮುಖ ಪ್ರವಾಸಿ ಸ್ಥಳಗಳಾಗಿವೆ. ಇಲ್ಲಿ ಎಲ್ಲಾ ವರ್ಗದವರಿಗೂ ಉತ್ತಮ ಬೋರ್ಡಿಂಗ್ - ಲಾಡ್ಜಿಂಗ್ ವ್ಯವಸ್ಥೆ ಇದೆ. ಇತರೆ ಮಾಹಿತಿಗಳಿಗೆ ಸಂಪರ್ಕಿಸಿ : ಫೋನ್ : 571

**ಗುಲ್ಬರ್ಗಾ** : ಇಲ್ಲಿನ ಆಳಂದ, ಗಾಣಗಾಪುರ, ಜೇವರ್ಗಿ, ಮಳ್ಕೇಡ್, ನಾರಾಯಣಪುರ ಡ್ಯಾಂ, ಪ್ರಮುಖ ಯಾತ್ರಾ ಸ್ಥಳಗಳಾಗಿವೆ. ಇನ್ನಿತರೆ ವಿಷಯಗಳಿಗೆ ಹೋಟೆಲ್ ಮಯೂರ ಬಹಮಣಿ, ಪಬ್ಲಿಕ್ ಗಾರ್ಡನ್ ಗುಲ್ಬರ್ಗಾ. ಫೋನ್ : 20644 ಇವರನ್ನು ಸಂಪರ್ಕಿಸಿ.

**ಧಾರವಾಡ** : ಇಲ್ಲಿನ ಅಣ್ಣಿಗೇರಿ, ಬಂಕಾಪುರ, ಗದಗ, ನರಗುಂದ, ಲಕ್ಕುಂಡಿ ಮೊದಲಾದವು ಪ್ರವಾಸೀ ಸ್ಥಳಗಳು. ಇಲ್ಲಿ ಉತ್ತಮ ಬೋರ್ಡಿಂಗ್ ಲಾಡ್ಜಿಂಗ್ ವ್ಯವಸ್ಥೆ ಇದೆ.

**ಕೊಡಗು** : ಇಲ್ಲಿ ಮಡಿಕೇರಿ, ಭಾಗಮಂಡಲ, ಅಬ್ಬೆಫಾಲ್ಸ್, ಆತ್ಮಲಿಂಗೇಶ್ವರ ದೇವಸ್ಥಾನ, ನಾಗರಹೊಳೆ, ನಿಸರ್ಗಧಾಮ, ಹಾರಂಗಿ ಪ್ರಮುಖ ಪ್ರವಾಸಿ ಸ್ಥಳಗಳು. ಇನ್ನಿತರೆ ಮಾಹಿತಿಗಳಿಗೆ ಹೋಟೆಲ್ ಮಯೂರ ವ್ಯಾಲಿ ವ್ಯೂ, ರಾಜಾಸೀಟ್ ಮಡಿಕೇರಿ. ಫೋನ್ : 6387 ಇವರನ್ನು ಸಂಪರ್ಕಿಸಿ.

**ಬೆಳಗಾವಿ**: ಇಲ್ಲಿ ನಂದಗಾಂವ, ನವಿಲುತೀರ್ಥ, ಗೊಡಚಿ, ಗೋಕಾಕ್ ಫಾಲ್ಸ್, ಕಿತ್ತೂರು, ಸೌಂದತ್ತಿ, ಯೋಗಿಕೊಳ್ಳ ಪ್ರಮುಖ ಪ್ರವಾಸಿ ತಾಣಗಳು. ಹೆಚ್ಚಿನ ವಿವರಗಳಿಗೆ ಪ್ರವಾಸೋದ್ಯಮ ಇಲಾಖೆ ಶಾಖೆ, ಹೋಟೆಲ್ ಸನ್ಮಾನ್ ಕಾಂಪ್ಲೆಕ್ಸ್, ಬೆಳಗಾವಿ. ದೂರವಾಣಿ : 29879 ಇವರನ್ನು ಸಂಪರ್ಕಿಸಿ.

**ದಕ್ಷಿಣ ಕನ್ನಡ** : ಇಲ್ಲಿ ಧರ್ಮಸ್ಥಳ, ಮಂಗಳೂರು, ಕಾರ್ಕಳ, ಕೊಲ್ಲೂರು, ಮಲ್ಪೆ ಮೊದಲಾದವು ಪ್ರಮುಖ ಯಾತ್ರಾಸ್ಥಳಗಳು. ಹೆಚ್ಚಿನ ಮಾಹಿತಿಗಳಿಗೆ ಪ್ರವಾಸೋದ್ಯಮ ಇಲಾಖೆ ಶಾಖೆ, ಹೋಟೆಲ್ ಇಂದ್ರಪ್ರಸ್ಥ, ಎಲ್.ಎಚ್.ಎಚ್. ರಸ್ತೆ, ಮಂಗಳೂರು. ಫೋನ್ : 21692 ಇವರನ್ನು ಸಂಪರ್ಕಿಸಿ.

**ಮಂಡ್ಯ** : ಇಲ್ಲಿನ ರಂಗನತಿಟ್ಟು, ಮೇಲುಕೋಟೆ, ಶ್ರೀರಂಗಪಟ್ಟಣ, ಕೊಕ್ಕರೆಬೆಳ್ಳೂರು, ಶಿವನಸಮುದ್ರ, ಭೀಮೇಶ್ವರಿ ಪ್ರಮುಖ ಪ್ರವಾಸಿ ಸ್ಥಳಗಳು. ಹೆಚ್ಚಿನ ಮಾಹಿತಿಗಳಿಗೆ ಹೋಟೆಲ್ ಮಯೂರ ರಿವರ್ ವ್ಯೂ, ಶ್ರೀರಂಗಪಟ್ಟಣ, ಇವರನ್ನು ಸಂಪರ್ಕಿಸಿ.

**ಚಿಕ್ಕಮಗಳೂರು** : ಇಲ್ಲಿ ಕುದುರೆಮುಖ, ಕೆಮ್ಮಣ್ಣುಗುಂಡಿ, ಹುಲಿಗೆರೆ, ಕಳಸ, ಹೊರನಾಡು, ಅಮೃತಪುರ, ಮೊದಲಾದವು ಪ್ರಮುಖ ಯಾತ್ರಾ ಸ್ಥಳಗಳು. ಇಲ್ಲಿ ಉತ್ತಮ ಬೋರ್ಡಿಂಗ್ ಲಾಡ್ಜಿಂಗ್ ವ್ಯವಸ್ಥೆ ಇದೆ.

**ರಾಯಚೂರು** : ಇಲ್ಲಿ ಆನೆಗುಂದಿ, ಜಲದುರ್ಗ, ಕನಕಗಿರಿ, ಕೊಪ್ಪಳ, ಮುಕುಂದ, ಹಟ್ಟಿ, ಮಸ್ಕಿ ಮೊದಲಾದವು ಪ್ರಮುಖ ಪ್ರವಾಸಿ ಸ್ಥಳಗಳು. ಇತರೆ ಮಾಹಿತಿಗಳಿಗೆ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಯೂಥ್ ಹಾಸ್ಟೆಲ್ ಬಿಲ್ಡಿಂಗ್, ರಾಯಚೂರು ಇವರನ್ನು ಸಂಪರ್ಕಿಸಿ.

ಹೀಗೆ ಒಂದೆರಡಲ್ಲ, ನೂರಾರು ಸಾವಿರಾರು ಪ್ರವಾಸಿ ಸ್ಥಳಗಳನ್ನು ಪಡೆದಿರುವ ಕನ್ನಡಾಂಬೆ ಅದೆಷ್ಟು ಧನ್ಯಳು. ಇವಳ ಮಡಿಲಲ್ಲಿದ್ದೂ ಎಲೆ ಮರೆಯ ಕಾಯಿಯಂತೆ ನೆನೆಗುದಿಗೆ ಬಿದ್ದಿರುವ ಚಾರಿತ್ರಿಕ ಪುರಾಣ ಪ್ರಸಿದ್ಧ ಸ್ಥಳಗಳನ್ನು ಪತ್ತೆ ಹಚ್ಚಿ, ಪ್ರತಿ ತಾಲ್ಲೂಕು ಮಟ್ಟದಲ್ಲಿ ಕರ್ನಾಟಕ ಪ್ರವಾಸೋದ್ಯಮ ಮಾಹಿತಿ ಕೇಂದ್ರಗಳನ್ನು ಸ್ಥಾಪಿಸುವತ್ತ ಈ ಇಲಾಖೆಯ ನಿರ್ದೇಶಕರು ಗಮನ ಹರಿಸಿ ಆದಷ್ಟು ಬೇಗ ತಕ್ಕ ಕ್ರಮ ಕೈಗೊಳ್ಳುವರೆಂದು ಆಶಿಸೋಣವೆ?

■ ಉತ್ತನೂರು ವ್ಯಾಸ್

---

## ಕಾಲ್‌ಶೀಟ್‌ಗೆ ಕ್ಯೂ

ಅರವತ್ತರ ದಶಕದಲ್ಲಿ ಕನ್ನಡದ ಹಾಸ್ಯನಟರಾದ ಬಾಲಕೃಷ್ಣ ನರಸಿಂಹರಾಜು ಅವರಿಗೆ ಭಾರೀ ಬೇಡಿಕೆ. ಅವರ ಕಾಲ್‌ಶೀಟ್ ದೊರೆತ ನಂತರ ಉಳಿದ ನಟರ, ನಿರ್ದೇಶಕರ ಆಯ್ಕೆಗೆ ನಿರ್ಮಾಪಕರು ಮುಂದಾಗುತ್ತಾ ಇದ್ದುದುಂಟು.

# ಅರಮನೆ ನಗರದ ಸಂಗೀತ ಕುಸುಮಗಳು

**ನಮ್ಮ ಕರ್ನಾಟಕ ಸಂಗೀತದ ಮುಂದಿನ ಸಾಂಸ್ಕೃತಿಕ ರಾಯಭಾರಿಗಳಾರು? ನಮ್ಮ ಯುವಜನತೆ ಶಾಸ್ತ್ರೀಯ ಸಂಗೀತದತ್ತ ಒಲವು ತೋರಿಸುತ್ತಿದೆಯೇ? ಎಂಬ ಪ್ರಶ್ನೆಗೆ ಉತ್ತರ ಹುಡುಕಲು ಹೊರಟಾಗ ನೂರಾರು - ಯುವ ಪ್ರತಿಭೆಗಳ ಮಿಂಚು ಹೊಳೆದವು. ಆದರೆ ಇಲ್ಲಿ ಎಲ್ಲರನ್ನೂ ಪರಿಚಯಿಸುವುದು ಸಾಧ್ಯವಿಲ್ಲದ ಕಾರಣ ಪ್ರಾತಿನಿಧಿಕವಾಗಿ ಮೈಸೂರಿನ ಕೆಲವೇ ಕೆಲವು ಯುವ ಪ್ರತಿಭೆಗಳನ್ನಿಲ್ಲಿ ಪರಿಚಯಿಸುತ್ತಿದ್ದೇನೆ.**

■ ಕೆ. ಗೌರಿ

ಭಾರತೀಯ ಸಂಗೀತದ ಮೂಲ ಜೀವಾಳ ಮನೋಧರ್ಮ, ಈ ಮನೋಧರ್ಮದ ಕಾರಣವೇ ಭಾರತೀಯ ಸಂಗೀತ ಒಂದು ವಿಶಿಷ್ಟ ಸಂಗೀತ ಪದ್ಧತಿಯಾಗಿ ಬೆಳೆದು ಬಂದಿರುವುದು; ಭಾರತೀಯ ಸಂಗೀತದಲ್ಲಿ ರಾಗದ ಕಲ್ಪನೆಯೇ ವಿಶಿಷ್ಟವಾದದ್ದು, 'ರಾಗ' ಎನ್ನುವ ಪದಕ್ಕೆ ಲಾಕ್ಷಣಿಕರು -

**ರಂಜಕೋ ಜನ ಚಿತ್ತಾನಾಂ ಸ ಚರಾಗ ಉದಾಹೃತಃ** ಎಂದಿದ್ದಾರೆ; ಒಬ್ಬ ಕಲಾವಿದ ಒಮ್ಮೆ ಹಾಡಿದ - ರಾಗದ ಪ್ರಸ್ತುತಿಯನ್ನೇ ಮತ್ತೊಮ್ಮೆ ಮಾಡಿದರೂ - ಅದೇ ರೀತಿ ಹಾಡಲಾರ. ಅದೊಂದು ಸೃಜನಾತ್ಮಕ ಕ್ರಿಯೆ. ಆಯಾರಾಗದ ಆರೋಹ-ಅವರೋಹದ ಮೇಲೆ ಕಲಾವಿದ ತನ್ನ ಕಲ್ಪನಾ ಸಾಮರ್ಥ್ಯದಿಂದ ಕಟ್ಟುವ ಸೌಧ ಇದು. ಇದು ಹೀಗೇ ಇರಬೇಕೆಂಬ ನಿಯಮವಿಲ್ಲ. ಆ ರಾಗದ ಆರೋಹ-ಅವರೋಹದ ಮೂಲದ್ರವ್ಯವನ್ನು ಬಳಸಿಕೊಂಡು ಆತನ ಕಲ್ಪನಾ ಲಹರಿಗೆ ತಕ್ಕಂತೆ ಸೃಷ್ಟಿಕ್ರಿಯೆ ನಡೆಯುತ್ತದೆ. ಈ ಕ್ರಿಯೆಯಲ್ಲಿ ರಾಗ-ಶುದ್ಧಿಗೆ-ಚ್ಯುತಿ ತರದಂತಹ ಯಾವುದೇ ಸಂಚಾರವೂ ನಿಷಿದ್ಧವಲ್ಲ. ಈ ಮನೋಧರ್ಮದ ಕಾರಣವೇ ಇಂದಿಗೂ ಭಾರತೀಯ ಸಂಗೀತ ಜೀವಂತವಾಗಿರುವುದು.

ಈ ಮನೋಧರ್ಮದ ಕಾರಣವೇ ರಚನಾ ಪ್ರಕಾರಗಳಲ್ಲಿ, ರಾಗಗಳ ಪ್ರಸ್ತುತಿಯಲ್ಲಿ, ವಿವಿಧತೆ, ವಿಶಿಷ್ಟತೆ ಕಲಾವಿದರಿಂದ ಕಲಾವಿದರಿಗೆ ಕಂಡುಬರುವುದು. ಒಂದು ತಲೆಮಾರಿನ ಗಾಯಕ, ವಾದಕರಿಂದ ಮತ್ತೊಂದು ತಲೆಮಾರಿನ ಸಂಗೀತದಲ್ಲಿ ಬೆಳವಣಿಗೆ ಕಂಡು ಬಂದಿರುವುದು.

ಅರಿಯಾಕುಡಿ ರಾಮಾನುಜ ಅಯ್ಯಂಗಾರ್, ಮುಸುರಿ ಸುಬ್ರಮಣ್ಯ ಅಯ್ಯರ್, ಚೆಂಬೈ ವೈದ್ಯನಾಥ ಭಾಗವತರ್, ತಿಟ್ಟಿ ಕೃಷ್ಣ ಅಯ್ಯಂಗಾರ್, ಮಹಾರಾಜಪುರಂ ವಿಶ್ವನಾಥ ಅಯ್ಯರ್, ಮುದಿಗೊಂಡನ್ ವೆಂಕಟರಾಮ ಅಯ್ಯರ್, ಸಾತ್ತೂರು ಸುಬ್ರಮಣ್ಯಂ..... ಈ ತಲೆಮಾರಿನವರ ಸಂಗೀತಕ್ಕೂ ಮುಂದಿನ ತಲೆಮಾರಿನವರಾದ ಡಾ. ಎಂ.ಎಸ್. ಸುಬ್ಬುಲಕ್ಷ್ಮಿ, ಡಾ. ಬಾಲಮುರಳಿಕೃಷ್ಣ, ಕೆ.ವಿ. ನಾರಾಯಣಸ್ವಾಮಿ, ಎಸ್.ಕಲ್ಯಾಣರಾಮನ್, ನೇದನೂರಿ ಕೃಷ್ಣಮೂರ್ತಿ, ಆರ್.ಕೆ. ಶ್ರೀಕಂಠನ್, ಇವರ ತಲೆಮಾರಿಗೂ, ಮುಂದೆ ಎಂ.ಎಸ್ ಶೀಲ, ನಾಗಮಣಿ ಶ್ರೀನಾಥ್, ಸುಕನ್ಯಾ ಪ್ರಭಾಕರ್ ರುದ್ರಪಟ್ಣಂ ಸಹೋದರರು, ಎಸ್. ಶಂಕರ್, ನಾಗವಲ್ಲಿ ನಾಗರಾಜ್, ಈ ತಲೆಮಾರಿನವರ ಗಾಯನದ ಪ್ರಸ್ತುತಿಯಲ್ಲಿ ಅಂತರವಿದೆ. ಹೀಗೆಯೇ ವಾದಕರ ವಾದನ ಶೈಲಿಗಳಲ್ಲಿ ಅಂತರವನ್ನು ಗುರುತಿಸಬಹುದು. ಇತ್ತೀಚೆಗಂತೂ ಹಿಂದೂಸ್ತಾನಿ, ಕರ್ನಾಟಕ ಸಂಗೀತಗಳ ಕೊಡು -ಕೊಳ್ಳುವಿಕೆ ಪ್ರಮಾಣ ಸ್ವಲ್ಪ ಜಾಸ್ತಿಯಾಗಿ ಕೊನೆಗೆ ಸಮಾನ ರಾಗಗಳನ್ನು ಒಂದೇ ವೇದಿಕೆಯಲ್ಲಿ 'ಜುಗಲಬಂದಿ' ಕಾರ್ಯಕ್ರಮಗಳಲ್ಲಿ ಪ್ರಸ್ತುತ ಪಡಿಸುವುದನ್ನೂ ನೋಡಬಹುದು.

ಆದರೆ ಈ ಎಲ್ಲ ಬೆಳವಣಿಗೆಗಳ ಮಧ್ಯೆಯೂ ಆಗಾಗ್ಗೆ ನಮ್ಮ ಶಾಸ್ತ್ರೀಯ ಸಂಗೀತ ಹಾಳಾಗುತ್ತಿದೆ. ಈಗಿನ ವಿದ್ಯಾರ್ಥಿಗಳಿಗೆ ಆ ಆಳ, ಶ್ರದ್ಧೆ ಇಲ್ಲ ಎಂಬ ಅಪಶ್ರುತಿಯೂ ಅಲ್ಲಲ್ಲಿ ಕೇಳಿ ಬರುತ್ತಿದೆ. ಇದು ನಿಜವೇ? ಹಾಗಾದರೆ ನಮ್ಮ ಕರ್ನಾಟಕ ಸಂಗೀತದ ಮುಂದಿನ ಸಾಂಸ್ಕೃತಿಕ ರಾಯಭಾರಿಗಳಾರು ?

ನಮ್ಮ ಕರ್ನಾಟಕ ಸಂಗೀತದ ಮುಂದಿನ ಸಾಂಸ್ಕೃತಿಕ ರಾಯಭಾರಿಗಳಾರು? ನಮ್ಮ ಯುವಜನತೆ ಶಾಸ್ತ್ರೀಯ ಸಂಗೀತದತ್ತ ಒಲವು ತೋರಿಸುತ್ತಿದೆಯೇ? ಎಂಬ ಪ್ರಶ್ನೆಗೆ ಉತ್ತರ ಹುಡುಕಲು ಹೊರಟಾಗ ನೂರಾರು - ಯುವ ಪ್ರತಿಭೆಗಳ ಮಿಂಚು ಹೊಳೆದವು. ಆದರೆ ಇಲ್ಲಿ ಎಲ್ಲರನ್ನೂ ಪರಿಚಯಿಸುವುದು ಸಾಧ್ಯವಿಲ್ಲದ ಕಾರಣ ಪ್ರಾತಿನಿಧಿಕವಾಗಿ ಮೈಸೂರಿನ ಕೆಲವೇ ಕೆಲವು ಯುವ ಪ್ರತಿಭೆಗಳನ್ನಿಲ್ಲಿ ಪರಿಚಯಿಸುತ್ತಿದ್ದೇನೆ.

**ಮೈಸೂರು ಎ. ಚಂದನಕುಮಾರ್**



ಶಾಸ್ತ್ರೀಯ ಸಂಗೀತದ ಮನೆತನದಲ್ಲೇ ಜನನ, ಮುತ್ತಾತ ಸಂಗೀತ ಕಲಾನಿಧಿ ಮೈಸೂರಿನ ಪಿಟೀಲು ಮಾಂತ್ರಿಕ ಟಿ. ಚೌಡಯ್ಯನವರು; 10ನೇ ವಯಸ್ಸಿನಿಂದಲೇ ಸಂಗೀತಾಭ್ಯಾಸ ಆರಂಭ, ಗುರು - ವಿದ್ವಾನ್ ಎಮ್. ಗೋಪಾಲಕೃಷ್ಣ 1996ರಲ್ಲಿ ಚೆನ್ನೈನ ಎಐಎಮ್ಎ. ನಲ್ಲಿ ವಿದ್ಯಾರ್ಥಿಯಾಗಿದ್ದ ಸಂದರ್ಭದಲ್ಲಿ ವಿದ್ವಾನ್ ಟಿ.ವಿ. ಗೋಪಾಲಕೃಷ್ಣನ್ ಅವರ ಮಾರ್ಗದರ್ಶನದ ಸುಯೋಗ ದೊರಕಿತು.

ಚಿಕ್ಕ ವಯಸ್ಸಿನಲ್ಲೇ ಆಕಾಶವಾಣಿಯ 'A' ಶ್ರೇಣಿಯ ಕಲಾವಿದರಾಗಿ ಪುರಸ್ಕೃತರು. ಭಾರತೀಯ ಗಾಯನ ಸಮಾಜವು ಚಂದನಕುಮಾರ್ ಅವರನ್ನು 1997ನೇ ಸಾಲಿನಲ್ಲಿ ಅತ್ಯುತ್ತಮ ಮುಖ್ಯ ಕಲಾವಿದ ಹಾಗೂ ಅತ್ಯುತ್ತಮ ಮುಖ್ಯ ವಾದ್ಯಗಾರ ಎರಡೂ ಶ್ರೇಣಿಯಲ್ಲಿ ಆಯ್ಕೆ ಮಾಡಿತು. ನಾಗಪುರದ ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರದವರು ಏರ್ಪಡಿಸಿದ್ದ ಸ್ಪರ್ಧೆಯಲ್ಲೂ ಪ್ರಥಮ ಬಹುಮಾನ ವಿಜೇತ.

ಚಂದನ್‌ಕುಮಾರ್ ಅವರ ಕೊಳಲಿನ ಮೋಡಿಗೆ ಒಳಗಾಗದ ಶ್ರೋತೃವಿಲ್ಲ, ಮೈಸೂರಿನ ತ್ಯಾಗರಾಜ ಸಂಗೀತ ಸಭೆಯಿಂದ ಹಿಡಿದು, ಗಾನಭಾರತಿ, ಮೈಸೂರಿನ ದರ್ಬಾರ್‌ಹಾಲ್ ತ್ರಿಚೂರಿನ ರಸಿಕ ರಂಜಿನಿ ಸಭಾ, ಉಡುಪಿಯ ವೇಣು ಉತ್ಸವ, ಚಾಮರಾಜಪೇಟೆಯ ಶ್ರೀರಾಮ

ಮಂಡಲಿ, ಕರ್ನಾಟಕ ಗಾನಕಲಾ ಪರಿಷತ್, ಯುಗಾದಿ ಮಹೋತ್ಸವ, ಕಾರ್ಕಳದ ಶಾಸ್ತ್ರೀಯ ಸಂಗೀತ ಸಭಾ, ಪಲ್ಲವೋತ್ಸವ, ಹೀಗೆ ದೇಶದೆಲ್ಲೆಡೆ ಕಛೇರಿಗಳನ್ನು ನೀಡಿರುವ ಚಂದನ್ ಅವರ ನುಡಿಸುವಿಕೆಯಲ್ಲಿ ತಾದಾತ್ಮ್ಯ ಇದೆ, ಜನರನ್ನು ಮರಳು ಮಾಡುವ ಕೃಷ್ಣನ ಕೊಳಲಿನ ಮೋಡಿ ಇದೆ. ಸರಳ ಸಜ್ಜನಿಕೆಯ ಸ್ವಭಾವದ, ನಗುಮೊಗದ, ಭಕ್ತಿ ಭಾವದ ಹಿಂದೆ ಆಳವಾದ ಪರಿಶ್ರಮವಿದೆ, ರಾಗಾಲಾಪನೆ ಸ್ವರ ಕಲ್ಪನೆಗಳಲ್ಲಿನ ಅಸಾಧಾರಣ ಮನೋಧರ್ಮ, ತನ್ಮಯವಾಗಿ ನುಡಿಸುವ ಗುಣದ ಇವರ ಶುದ್ಧ, ಶಾಸ್ತ್ರೀಯ ಸಂಗೀತ, ಸಂಗೀತ ಗಂಗೆಯಲ್ಲಿ ಶ್ರೋತೃಗಳನ್ನು ಮೀಯಿಸುತ್ತದೆ. ಮುಂದೆ ಕರ್ನಾಟಕ ಸಂಗೀತದ ಸಾಂಸ್ಕೃತಿಕ ರಾಯಭಾರಿಯಾಗುವ ಎಲ್ಲ ಲಕ್ಷಣಗಳೂ ಈ ಪುಟ್ಟ ಕಲಾವಿದನಲ್ಲಿದೆ.

### ಕುಮಾರಿ ಎಮ್.ಎಸ್. ಸ್ಮಿತಾ



19 ವರ್ಷದ ದ್ವಿತೀಯ ಬಿ.ಬಿ.ಎಂ. ವಿದ್ಯಾರ್ಥಿನಿ ಸ್ಮಿತಾ ಹೆಸರಿಗೆ ತಕ್ಕಂತೆ ನಗುಮೊಗದ, ಸರಳ ಸೌಂದರ್ಯದ ಖಣಿ. 13 ವರ್ಷಗಳಿಂದ ವಿದ್ವಾನ್, ಎ.ವಿ. ಪ್ರಕಾಶ್‌ರವರಲ್ಲಿ ಕರ್ನಾಟಕ ಶಾಸ್ತ್ರೀಯ ಕೊಳಲು ವಾದನದ ಅಭ್ಯಾಸ ಮಾಡುತ್ತಿರುವ ಈಕೆಯದು ಬಹುಮುಖ ಪ್ರತಿಭೆ. ಸುಗಮ ಸಂಗೀತ, ಹಾಡುಗಾರಿಕೆ, ಹಾಗೂ ಭರತ ನಾಟ್ಯದಲ್ಲೂ ಪರಿಣತಿ. ವಿದ್ಯಾರ್ಥಿ ಜೀವನದುದ್ದಕ್ಕೂ ಪ್ರಥಮ ಶ್ರೇಣಿಯನ್ನೇ ಪಡೆದಿರುವ ಇವರು ಆಕಾಶವಾಣಿಯ ವಾರ್ಷಿಕ ಸಂಗೀತ ಸ್ಪರ್ಧೆಗಳ ಶಾಸ್ತ್ರೀಯ ವಾದ್ಯ ವಿಭಾಗದಲ್ಲೂ 1998ರಲ್ಲಿ ಪ್ರಥಮ ಸ್ಥಾನ ಪಡೆದಿದ್ದಾರೆ;

ಉಸ್ಮಾನಿಯಾ ವಿಶ್ವವಿದ್ಯಾನಿಲಯ, ಹೈದರಾಬಾದ್‌ನಲ್ಲಿ ನಡೆದ ದಕ್ಷಿಣ ವಲಯ ಅಂತರ ವಿಶ್ವವಿದ್ಯಾನಿಲಯ ಸ್ಪರ್ಧೆಗಳಲ್ಲಿ ಪ್ರಥಮ ಸ್ಥಾನ (1998).

ಕ್ಯಾಲಿಕಟ್ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ನಡೆದ ರಾಷ್ಟ್ರೀಯ ಅಂತರ ವಿಶ್ವವಿದ್ಯಾನಿಲಯ ಯುವ ಮಹೋತ್ಸವದಲ್ಲಿ ದ್ವಿತೀಯ ಸ್ಥಾನ (1999).

ಆಂಧ್ರಪ್ರದೇಶದ ಕರ್ನೂಲಿನಲ್ಲಿ ಮಧ್ಯ ದಕ್ಷಿಣ ಕ್ಷೇತ್ರ ಸಾಂಸ್ಕೃತಿಕ ಕೇಂದ್ರದ ಆಶ್ರಯದಲ್ಲಿ ನಡೆದ ಯುವ ಸಂಗೀತ ನೃತ್ಯ ಮಹೋತ್ಸವದಲ್ಲಿ ಪ್ರಥಮ ಸ್ಥಾನ (1997). ನವದೆಹಲಿಯಲ್ಲಿ ಸಿರಿಫೋರ್ಟ್ ಸಭಾಂಗಣದಲ್ಲಿ ನಡೆದ ಅಂತರಾಷ್ಟ್ರೀಯ ಮಕ್ಕಳ ಚಿತ್ರೋತ್ಸವದ ಸಮಿತಿಯಲ್ಲಿ ಕರ್ನಾಟಕದ ಪ್ರತಿನಿಧಿ (1989).

ಇನ್ನೂ ಅನೇಕ ಸ್ಪರ್ಧೆಗಳಲ್ಲಿ ಪ್ರಥಮ ಬಹುಮಾನ, ಆಕಾಶವಾಣಿ ದೂರದರ್ಶನಗಳ ಕಾರ್ಯಕ್ರಮಗಳು, ರಾಜ್ಯದೆಲ್ಲೆಡೆ ಪ್ರತಿಷ್ಠಿತ ಸಭೆಗಳಲ್ಲಿ ನೀಡಿರುವ ಸಂಗೀತ ಕಛೇರಿಗಳು, ಕೀನ್ಯಾದ ನೈರೋಬಿಯಾದಲ್ಲೂ ಕೊಳಲು ವಾದನ ಕಛೇರಿ, ಇವು ಇವರ ಸಾಧನೆಗಳು.

ಶುದ್ಧ, ಶಾಸ್ತ್ರೀಯ ವಾದನ, ತನ್ಮಯವಾದ ನುಡಿಸುವಿಕೆ, ಇವರೊಬ್ಬ ಅತ್ಯುತ್ತಮ ಕಲಾಕಾರರಾಗಬಹುದು ಎಂಬ ನಿರೀಕ್ಷೆಯನ್ನು ಉಂಟುಮಾಡುತ್ತದೆ.

### ಹೆಚ್.ಎನ್. ಭಾಸ್ಕರ್



ಸದಾ ಪ್ರಯೋಗಶೀಲ ಮನಸ್ಸು; ಶಾಸ್ತ್ರೀಯ ಸಂಗೀತದಷ್ಟೇ ಲಘು ಶಾಸ್ತ್ರೀಯ ಸಂಗೀತದಲ್ಲೂ ಪ್ರಭುತ್ವ, ಇತ್ತೀಚಿನ ಮ್ಯಾಂಡಲಿನ್, ಕೀಬೋರ್ಡ್ ವಾದ್ಯಗಳನ್ನೂ ಸಂದೇಶದ ವಾಹಕವಾಗಿ ಬಳಸಿಕೊಳ್ಳುವ ಜಾಣ್ಮೆ, ಹೊಸ ಬಗೆಯ ಸಂಯೋಜನಾ ಕೌಶಲ್ಯ - ಹೆಚ್.ಎನ್.ಭಾಸ್ಕರ್ ಅವರ ವಿಶೇಷ ಗುಣಗಳು. ಶಾಸ್ತ್ರೀಯ ಸಂಗೀತದ ಅಧ್ವರ್ಯು ಹೆಚ್.ಕೆ.ನರಸಿಂಹಮೂರ್ತಿಯವರ ಏಕಮಾತ್ರ ಪುತ್ರ, ತಂದೆಯೇ ಮೊದಲ ಗುರು. ಮನೆತನದಿಂದಲೇ ಸಂಗೀತದ ಅಭಿರುಚಿ, ಪದ್ಮಶ್ರೀ ಎಂ.ಎಸ್. ಗೋಪಾಲಕೃಷ್ಣನ್ ಅವರಲ್ಲಿ ಹೆಚ್ಚಿನ ತರಬೇತಿ; ವಿದ್ಯಾರ್ಥಿ ಜೀವನದುದ್ದಕ್ಕೂ ಪ್ರಥಮ ಸ್ಥಾನದಲ್ಲೇ ತೇರ್ಗಡೆಯಾದ ಭಾಸ್ಕರ್ ಅವರ ಜೀವನದ ಸೂರ್ಯ ಕೂಡ ಪ್ರಜ್ವಲಿಸುತ್ತಲೇ ಹೋದ. ಶ್ರೇಯಸ್ಸಿನ ಮೆಟ್ಟಿಲನ್ನು ಏರುತ್ತಾ ಏರುತ್ತಾ ಆಕಾಶವಾಣಿಯ 'A' ಶ್ರೇಣಿಯ ಕಲಾವಿದರಾಗಿದ್ದಾರೆ. ದೇಶದ ಎಲ್ಲ ಅಗ್ರಮಾನ್ಯ ಕಲಾವಿದರಿಗೂ ಸಾಥ್ ನೀಡಿರುವ ಭಾಸ್ಕರ್ ಅವರು, ದೇಶದೆಲ್ಲೆಡೆ ಸಂಗೀತ ಕಛೇರಿಗಳನ್ನು ನೀಡಿ, ಈಗ ಸದ್ಯ ವಿದೇಶ ಪ್ರವಾಸದಲ್ಲಿದ್ದಾರೆ. ಪರೂರು ಎಮ್.ಎಸ್. ಗೋಪಾಲಕೃಷ್ಣನ್ ಅವರ ಪರಂಪರೆಯ ಶೈಲಿ, ವಾದ್ಯದ ಮೇಲಿನ ಪ್ರಭುತ್ವ, ನಾದವನ್ನು ಹೊರಹೊಮ್ಮಿಸುವ ವಿಶಿಷ್ಟತೆ, ಪ್ರಯೋಗ ಶೀಲ ಮನೋಧರ್ಮ - ಇವುಗಳ ಕಾರಣ ಹೆಚ್.ಎನ್.ಭಾಸ್ಕರ್ ಭರವಸೆ ಹುಟ್ಟಿಸುವ ತರುಣ ಕಲಾವಿದರಾಗಿದ್ದಾರೆ.

### ಮಾನಸನಯನ



ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಗಂಡುಧ್ವನಿಗಳ ಕೊರತೆ ಇದೆ ಎಂಬ ಕೂಗು ಅಲ್ಲಲ್ಲಿ ಕೇಳುತ್ತಿರುವಾಗಲೇ ಭರವಸೆ ಹುಟ್ಟಿಸುತ್ತಿರುವ ಯುವ ಕಲಾವಿದ ಮಾನಸನಯನ. 20 ವರ್ಷ ವಯಸ್ಸಿನ ಈ ತರುಣನ ಹಾಡುಗಾರಿಕೆಯನ್ನು ತೆರೆಮರೆಯಲ್ಲಿ ಕುಳಿತು ಕೇಳಿದರೆ, ಪ್ರಬುದ್ಧ, ಹಿರಿಯ ಕಲಾವಿದರ ಗಾಯನ ಕೇಳಿದಂತಾಗುತ್ತದೆ. ಶಾಸ್ತ್ರೀಯ ಸಂಗೀತದ ಬಂಧ, ಬಿಗಿ, ಅಚ್ಚುಕಟ್ಟು, ಉತ್ತಮ ಮನೋಧರ್ಮ,

ರಾಗ-ವಿಸ್ತಾರ, ಭಾವಪೂರ್ಣಗಾಯನ ಯಾವುದರಲ್ಲೂ ಎಲ್ಲೂ ಕೊರೆ ಕಾಣದ ಈ ಯುವಗಾಯಕನ ಗಾಯನದಲ್ಲಿ ತನ್ಮಯತೆ ಎದ್ದು ಕಾಣುತ್ತದೆ; ಜೊತೆಗೆ ತನ್ನ ಸಂಗೀತದ ವಿದ್ಯಾಭ್ಯಾಸಕ್ಕೋಸ್ಕರವೇ ಜೀವನವನ್ನು ಮುಡುಪಾಗಿಡುವಷ್ಟು ಶ್ರದ್ಧೆ, ಭಕ್ತಿ.

ವಿದುಷಿ ಎಸ್.ಕೆ. ವಸುಮತಿ ಅವರಲ್ಲಿ 10 ವರ್ಷಗಳ ಶಾಸ್ತ್ರೀಯ ಅಭ್ಯಾಸ, ಅಲ್ಲದೇ ಅನೇಕ ಹಿರಿಯರು ನಡೆಸಿದ, ನಡೆಸುತ್ತಿರುವ ಕಾರ್ಯಾಗಾರಗಳ ಸದುಪಯೋಗ ಪಡೆದು, ರಾಜ್ಯದ ಎಲ್ಲ ಪ್ರತಿಷ್ಠಿತ ಸಭೆ, ಸಮಾರಂಭ ಕಛೇರಿ ನೀಡಿರುವ - ಇವರ ಸಂಗೀತ-ಜನಮನ್ನಣೆಗಳಿಸಿದೆ; ಭರವಸೆ ಹುಟ್ಟಿಸುವ ಈ ಯುವ ಕಲಾವಿದನ ಭಾವಪೂರ್ಣ ಗಾಯನದಲ್ಲಿ ಶುದ್ಧ ಶಾಸ್ತ್ರೀಯತೆಯ ಸೊಬಗು ಮೂಲ ರೂಪದಲ್ಲೇ ಉಳಿದಿರುವುದು ವೈಶಿಷ್ಟ್ಯ.

**ಎಂ. ರೂಪಾ**



ಪಿಟೀಲು ವಾದನಕ್ಕೂ, ಮೈಸೂರಿಗೂ ಏನೋ ನಂಟು, ಮೈಸೂರಿನ ಸಭೆಗಳಲ್ಲಿ ಮದ್ರಾಸಿನ ಕಲಾವಿದರನ್ನು ಕರೆಸಿ, ಗೌರವಿಸಿದರೆ, ಮದ್ರಾಸಿನ ಕಲಾರಂಗದಲ್ಲಿ ಮೈಸೂರಿನ ಪಿಟೀಲು ವಾದಕರಿಗೆ ಅಗ್ರಮಾನ್ಯತೆ. ಸಂಗೀತ ಕಲಾನಿಧಿ ಟಿ. ಚೌಡಯ್ಯನವರಿಂದ ಆರಂಭವಾದ ಈ ಶ್ರೇಯಸ್ಸಿಗೆ ಮೈಸೂರಿನ ಎಮ್.ರೂಪಾ ಅವರ ಕಾಣಿಕೆಯೂ ಅಪಾರ.

ಮೈಸೂರಿನ ಸುಪ್ರಸಿದ್ಧ ಪಿಟೀಲು ವಿದ್ವಾಂಸರಾದ ಮಹದೇವಪ್ಪನವರ ಪುತ್ರಿ ರೂಪಾ - ಮನೆತನದಿಂದಲೇ ಸಂಗೀತದ ಒಲವು ಮೂಡಿಸಿಕೊಂಡವರು. ಪಿಟೀಲು ಕಲಿಯಲು 10ನೇ ವಯಸ್ಸಿನಿಂದ ಆರಂಭಿಸಿದ ರೂಪಾ, ಜನಪ್ರಿಯತೆಯನ್ನು ಬಹುಬೇಗ ಗಳಿಸಿಕೊಂಡರು. ಅಣ್ಣ - ಮೈಸೂರು ಎಮ್ ನಾಗರಾಜ್ ಹಾಗೂ ಮೈಸೂರು ಎಮ್.ಮಂಜುನಾಥ್ ಅವರ ಮಾರ್ಗದರ್ಶನ ಬೇರೆ M.Music ಡಿಗ್ರಿಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿದ ರೂಪಾ ಆಕಾಶವಾಣಿಯ BH ಶ್ರೇಣಿಯ ಕಲಾವಿದೆ.

ಶ್ರುತಿಶುದ್ಧ ವಾದನ, ಶಾಸ್ತ್ರೀಯ - ಭಾವಪೂರ್ಣ - ನುಡಿಸಾಣಿಕೆ, ರಾಗ ವಿಸ್ತಾರ ಹಾಗೂ ಸ್ವರ ಕಲ್ಪನೆಯಲ್ಲಿನ ಉತ್ತಮ ಮನೋಧರ್ಮ - ಎಂ. ರೂಪಾರವರು ದೇಶದ ಅಗ್ರಮಾನ್ಯ ಪಿಟೀಲು ವಾದಕರಾಗುವರೆಂಬ ಭರವಸೆ ಮೂಡಿಸುತ್ತದೆ.

**ವಿ. ಶ್ರೀಕಾಂತ್**

ವೆಂಕಟರಾಮನ್ ಶ್ರೀಕಾಂತ್ ಸಂಗೀತ ಕಲಿಯಲು ಆರಂಭಿಸಿದ್ದು ಒಂಭತ್ತನೇ ವಯಸ್ಸಿನಲ್ಲಿ. ಹದಿನೈದನೇ ವಯಸ್ಸಿನಿಂದಲೂ ಕಛೇರಿ ನೀಡುತ್ತಿರುವ ಶ್ರೀಕಾಂತ್ ಇಂಜಿನಿಯರಿಂಗ್ ಪದವೀಧರ. ವಿದ್ವಾನ್ ಎಚ್.ಕೆ. ನರಸಿಂಹಮೂರ್ತಿ ಅವರಲ್ಲಿ ಶಾಸ್ತ್ರೀಯವಾಗಿ ಪಿಟೀಲುವಾದನ ಕಲಿತ ಇವರು ದೇಶದ ಅಗ್ರಮಾನ್ಯ ಕಲಾವಿದರುಗಳೊಂದಿಗೆ ಪಿಟೀಲು ನುಡಿಸಿ ಅವರ ಮೆಚ್ಚುಗೆ ಪಡೆದಿದ್ದಾರೆ.

ಅನೇಕ ಚಿನ್ನದ ಪದಕ, ಪಾರಿತೋಷಕಗಳನ್ನು ಗಳಿಸಿರುವ ಶ್ರೀಕಾಂತ್ ಅವರ ಲಯದ ಮೇಲಿನ ಪ್ರಭುತ್ವ ವಾದ್ಯವನ್ನು ನುಡಿಸುವ, ನಾದ ಹೊರಹೊಮ್ಮಿಸುವ - ವಿಶಿಷ್ಟ ಶೈಲಿಯಿಂದಾಗಿ, ರಾಗ-ತಾನ-ಪಲ್ಲವಿಯ ನಿಖರ ಜ್ಞಾನದಿಂದಾಗಿ ಶ್ರೋತೃಗಳ ಮನ ಗೆದ್ದಿದ್ದಾರೆ. ಪಿಟೀಲು ನುಡಿಸುವುದರಲ್ಲಿ ಪರೂರು ಸುಂದರಂ ಅಯ್ಯರ್ ಪ್ರಶಸ್ತಿ ಗಳಿಸಿರುವ ಇವರದು ಶುದ್ಧ, ಶಾಸ್ತ್ರೀಯ ವಾದನ. ಸಾಧಾರಣವಾಗಿ ಯುವಕರು ಆಕರ್ಷಿತಗೊಳ್ಳುವ ವಾದನದ ಚಮತ್ಕಾರಗಳಲ್ಲಿ ಶ್ರೀಕಾಂತ್‌ಗೆ ಆಸಕ್ತಿಯಿಲ್ಲ. ಶುದ್ಧ, ಶಾಸ್ತ್ರೀಯ ವಾದನದಲ್ಲಿ ಭರವಸೆ ಹುಟ್ಟಿಸಿರುವ ಶ್ರೀಕಾಂತ್ - ಕರ್ನಾಟಕ ಸಂಗೀತದ ಉತ್ತಮ ಕಲಾವಿದ.

ಇವರುಗಳೇ ಅಲ್ಲದೇ ಶಾಸ್ತ್ರೀಯ ಗಾಯನದಲ್ಲಿ ವಸುಧಾ, ಪಿ.ಸುಮನ, ಪಿಟೀಲುವಾದನದಲ್ಲಿ ಎ.ಪಿ.ಶ್ರೀನಿವಾಸ್, ಪದ್ಮಶ್ರೀ, ಎನ್.ಎನ್.ಗಣೇಶ್‌ಕುಮಾರ್, ಕೊಳಲು ವಾದನದಲ್ಲಿ ಎ.ಪಿ.ಕೃಷ್ಣಪ್ರಸಾದ್, ರವಿಚಂದ್ರ, ಹಾಡುಗಾರಿಕೆಯಲ್ಲಿ ಉದಯಕಿರಣ್, ಜಿ.ಕೆ.ಮನಮೋಹನ್, ರಾಜಶ್ರೀ ಜೋಯ್ಸರ್ ಇವರುಗಳು ಮೈಸೂರಿನ ಯುವ ಕಲಾವಿದರಲ್ಲಿ ಪ್ರಮುಖರು; ಬಿ.ಯು.ಗಣೇಶ್‌ಪ್ರಸಾದ್, ನಳಿನಮೋಹನ್, ಎಸ್.ವಿ.ನಾರಾಯಣ್, ವೆಂಕಟರಾಮನ್ - ಈ ಯುವ ಪಿಟೀಲು ಕಲಾವಿದರುಗಳಂತೂ ಕರ್ನಾಟಕ ಸಂಗೀತದ ಸೌರಭವನ್ನು, ರಾಜ್ಯದ ಕೀರ್ತಿಯನ್ನು ವಿದೇಶಗಳಲ್ಲಿ ಹರಡಿದ್ದಾರೆ. ಇನ್ನು ಮೃದಂಗ, ಘಟ, ಪಕ್ಕವಾದ್ಯಗಳು, ಉಪಪಕ್ಕವಾದ್ಯಗಳ ಕ್ಷೇತ್ರದಲ್ಲಂತೂ ಕೇವಲ ಹೆಸರುಗಳ ಪಟ್ಟಿಯೇ ಸುದೀರ್ಘವಾಗಿ ಬೆಳೆಯುತ್ತದೆ. ಬೆಂಗಳೂರಿನಲ್ಲಂತೂ Percussion Arts Centre ಎಂದು ಲಯವಾದ್ಯಗಳ ಒಂದೆರಡು ಸಂಸ್ಥೆಗಳೇ ಬೆಳೆದಿವೆ. ಇಲ್ಲಿ ಎಲ್ಲ ಕಲಾವಿದರ ಪರಿಚಯವಾಗಲೀ, ಹೆಸರಿಸುವುದಾಗಲೀ, ಸಾಧ್ಯವಿಲ್ಲ. ಆದರೆ ನಮ್ಮ ಶಾಸ್ತ್ರೀಯ ಸಂಗೀತದ ರಾಯಭಾರಿಗಳಾಗಿ ನಮ್ಮ ಯುವ ಜನತೆ ಅಸಾಧಾರಣ ಸಾಧನೆ ಮಾಡಿದ್ದಾರೆ/ಮಾಡುತ್ತಿದ್ದಾರೆ. ಆದರೆ ಹೀಗೆ ಪಟ್ಟಿ ಮಾಡುವಾಗ ಕೆಲವು ಆಶ್ಚರ್ಯಕರ ಸಂಗತಿಗಳು ಗೋಚರಿಸುತ್ತವೆ; 'ವೀಣೆಯ ಬೆಡಗಿದು ಮೈಸೂರು' - ಎಂಬ ನಾಣ್ಣುಡಿ ಇದ್ದ ಮೈಸೂರಿನಲ್ಲಿ ವೀಣೆಯ ಪ್ರತಿನಿಧಿಯಾಗಿ ಯುವ ಪ್ರತಿಭೆಗಳು - ಅಷ್ಟಾಗಿ ಕಾಣುವುದಿಲ್ಲ. ರಾಜ್ಯದೆಲ್ಲೆಡೆ ಅತ್ಯುತ್ತಮ ಪಿಟೀಲು ವಾದಕರು ಸಿಗುತ್ತಾರೆ. ಮೊದಲಿಗೆ ಹಿಂದೆಬಿದ್ದಿದ್ದ ಉಪಪಕ್ಕವಾದ್ಯಗಳಲ್ಲೂ ನೂರಾರು ಯುವ ಕಲಾವಿದರು ಸಿಗುವಾಗ, ವೀಣೆಯ ಜನಪ್ರಿಯತೆಯ ಬಗ್ಗೆ ಸಂದೇಹ ಉಂಟಾಗುತ್ತದೆ. ಅನೇಕ ಹೊಸ ಹೊಸ ವಾದ್ಯಗಳು ಆ ಸ್ಥಾನವನ್ನು ಆಕ್ರಮಿಸಿಕೊಳ್ಳುತ್ತಿವೆ. ಮ್ಯಾಂಡಲಿನ್, ಗಿಟಾರ್, ವಾದ್ಯಗಳಲ್ಲಿ ಶಾಸ್ತ್ರೀಯ ಸಂಗೀತ ನುಡಿಸಲು ಯುವಕರು ಪ್ರಯತ್ನಿಸುತ್ತಿದ್ದಾರೆ. ಯಾವುದೇ ಬದಲಾವಣೆಯೂ ಬೆಳವಣಿಗೆಯ ಪ್ರತೀಕ ಅಲ್ಲವೆ? ■

---

## ಸಹಕಾರಿ ಸಿನಿಮಾ

ಸಹಕಾರೀ ತತ್ವದಲ್ಲಿ ತಯಾರಾಗಿ ಯಶಸ್ಸು ಪಡೆದ ಮೊದಲ ಕನ್ನಡ ಚಿತ್ರವೆಂದರೆ 'ರಣಧೀರ ಕಂಠೀರವ'. ಹಲವಾರು ಜನ ಸೇರಿ ಒಟ್ಟಾಗಿ ದುಡ್ಡು ಹಾಕಿ ಚಿತ್ರ ಮಾಡಿದ್ದರು. ಚಿತ್ರಕ್ಕೆ ಹಣ ತೊಡಗಿಸಿದವರೆಲ್ಲ ಕನ್ನಡ ಚಿತ್ರರಂಗದಲ್ಲಿ ನಾನಾ ರೀತಿ ತೊಡಗಿಕೊಂಡಿದ್ದವರು.

# ಇರುವೆಯಂತೆ

ಇರುವೆಯಷ್ಟೇ ಪುಟಾಣಿ ಜಗತ್ತು
ಏನಿದೆ ನನ್ನ ಬಗ್ಗೆ ಹೇಳುವಂಥದ್ದು?
ಗೆಳತಿ ಇರುವೆಯಂತೆ ನಾನೂ
ಹೊರಲಾರದ ಹೊರೆ ಹೊತ್ತೆ
ಕಡಿದು ಕಷ್ಟದ ದಾರಿ ಹಿಡಿದೆ
ಕ್ರೂರ ಕಾಕ ದೃಷ್ಟಿಗೆ ಬಿದ್ದೆ
ಹೆಜ್ಜೆ ಹೆಜ್ಜೆಗೂ ಹೂತು ಹೋದೆ,
ನೆರಳಲ್ಲೂ ನಡುಗಿದೆ
ಆದರೂ -
ಅಚ್ಚರಿಯ ತೀರವಾಗಿಯೇ ಉಳಿದೆ
ನಕ್ಷತ್ರಗಳ ಬೆಳಕು
ಇನ್ನೂ ಹೊಳೆಯುತ್ತಿದೆ ಎಂದೆ?



■ ಎಂ.ಆರ್. ಕಮಲ



# ಗಜಲ್



■ ಅರಸ



ಸತ್ತು ನಾರುತಿವೆ ದೇವರುಗಳೆಲ್ಲ ಹೂಳುವರು ಗತಿಯಿಲ್ಲ
ವಿಕೃತಿಯಿಂದ ಪ್ರಕೃತಿ ಅಳುತಿಹುದು ಕೇಳುವರು ಗತಿಯಿಲ್ಲ

ಸ್ವಾರ್ಥ ಕೋವಿಗಳ ತೊರೆದು ಹೃದಯದಾರತಿ ಬೆಳಗಿ ಹೊಸಯುಗಕೆ
ಹಾಸಿ ಹೂನಗೆಯ ಹಡದಿ ನಲ್ಬರವ ಬಯಸುವರು ಗತಿಯಿಲ್ಲ

ಸಕಲಲೋಕದುಸಿರಾದ 'ಪ್ರೇಮ'ಕ್ಕೆ ಮೈತುಂಬ ಗಾಯಗಳು
ತಂಬೆಳಕಿನಾತ್ಮದ ಮುಲಾಮವನ್ನು ಬಳಿಯುವರು ಗತಿಯಿಲ್ಲ

ಎಲ್ಲೆಡೆಗೂ ವ್ಯಾಪಿಸಿಹ ವೈರಕ್ಕೆ ಸ್ನೇಹದೀಕ್ಷೆಯನಿತ್ತು
ನನ್ನಿ ಮಮತೆಗಳಿಂದ ಎದೆಯೆದೆಗಳ ನೇಯುವರು ಗತಿಯಿಲ್ಲ

ಏನೇನೊ ಕುರೂಪಗಳು ಹದಗೆಡಿಸಿ ಬಂಧಿಸಿವೆ 'ಚೆಲುವ'ನ್ನು
ಮುಕ್ತಗೊಳಿಸುತ್ತ ಅದಕೆ ನಿಜರೂಪ ನೀಡುವರು ಗತಿಯಿಲ್ಲ
ಸುತ್ತಲೂ ಮುತ್ತಿರುವ ಕತ್ತಲೆಯ ಗರ್ಭದಲ್ಲೊಂದು 'ಮಿನುಗು'
ಹೊಸಹುಟ್ಟು ನೋಡರಸ ಅದರಿಂದಲೆ ತರುವವರು ಗತಿಯಿಲ್ಲ

# ಫ್ರೇಮ್‌ನಲ್ಲಿ ಸುಗಮ ಸಂಗೀತ....

**ನವೋದಯಲ್ಲಿ ಸುಂದರವಾದ ಕಲ್ಪನೆ, ರಮ್ಯವಾದ ಕವಿತೆಗಳನ್ನು ಆರಿಸಿಕೊಳ್ತಿದ್ದರು. ನವ್ಯದಲ್ಲಿ ಸಂಕೀರ್ಣವಾದ ವಸ್ತುವನ್ನು ಆರಿಸಿಕೊಂಡರೂ ಅದು ಬುದ್ಧಿಗೆ ಸರಿಸಾಟಿ ಆದರೂ ಭಾವವನ್ನು ಮೀರಿ ಹೋಗಲಿಕ್ಕೆ ಆಗಲಿಲ್ಲ. ಯಾವ ಭಾವ ಭಾವಗೀತೆಯಲ್ಲಿ ಅಡಗಿದೆಯೋ ಅದೇ ಶಾಶ್ವತ ಅಂತ ನಾವು ತಿರುಗಿ ಹಿಂದಕ್ಕೆ ಬರ್ತಿದೀವಿ.**



■ ಜಯಶ್ರೀ ಅರವಿಂದ್

**ಈ**ಗ ಭಾವಗೀತೆ ಟ್ರೆಂಡೇ ಇಲ್ಲ. ಭಾವಗೀತೆ ಕೇಳುವಂಥ ಜನಾಂಗವೇ ಕಡಿಮೆ. 'ಸುಗಮ ಸಂಗೀತ' ಅಂತ ಹೇಳ್ತಾ ಇದಾರಲ್ಲ, ಅದರ ಬಗ್ಗೆನೇ ಡಿಸ್‌ಕಷನ್ ಮಾಡ್ತಿದಾರೆ. 'ಯಾವುದು ಸುಗಮ ಸಂಗೀತ?' ಅಂತಲೇ ತೀರ್ಮಾನ ಮಾಡ್ತಿದಾರೆ. ಕೆಲವರು ಹೇಳ್ತಾರೆ, ಕನ್ನಡ ಸಂಗೀತ ಅಂತ. ಮುಂದೆ ಇದು ತುಳು ಹಾಡಿಗೆ ತುಳು ಸಂಗೀತ, ಕೊಂಕಣಿ ಸಂಗೀತ, ಕೊಡವ ಸಂಗೀತ ಅಂತ ಕರ್ನಾಟಕದಲ್ಲಿ ಯಾವಯಾವ ಬೇರೆ ಭಾಷೆ ಇವೆ ಅವಕ್ಕೆಲ್ಲ ಒಂದೊಂದು ಸಂಗೀತ ಅಂತ ಆಗುತ್ತೆ. ಸಂಗೀತ ಎಲ್ಲರನ್ನೂ ಒಂದುಗೂಡಿಸಬೇಕು. ಅದು ಆಗ್ತಾ ಇಲ್ಲ ಇವಾಗ. ಇನ್ನು ಸುಗಮ ಸಂಗೀತ ಅಂದರೆ ಬರಿ ಭಾವಗೀತೆನೇ ಸುಗಮ ಸಂಗೀತ ಅಂತ ಕೆಲವರು ಹೇಳ್ತಾರೆ. ಗಮಕಿಗಳು ಏನು ಹೇಳ್ತಾರೆ? ನಮ್ಮ ಸಾಹಿತ್ಯದ ಹಳೆಯ ಸಂಪ್ರದಾಯದ ಕಾವ್ಯಗಳ ಆಧುನಿಕ ರೂಪವೇ ಸುಗಮ ಸಂಗೀತ ಅಂತ ಹೇಳ್ತಾರೆ. ನಾನು ಅದನ್ನೇ ಹೇಳ್ತೀನಿ. ಯಾಕೆ ಅಂದರೆ ಭಾಷೆ ಹೇಗಿದೆ ಹಾಗೆ ನಾವು ಸಂಗೀತ ಮಿಕ್ಸ್ ಮಾಡ್ತಾ ಬರ್ತೀವಿ. ಕ್ಲಿಷ್ಟವಾದ ಸಾಹಿತ್ಯ ಆದರೆ ಮ್ಯೂಸಿಕ್ ಹೇಗೆ ಆಗುತ್ತೆ? ಮಾಲೆ, ವೃತ್ತ, ಷಟ್ಪದಿ, ರಗಳೆ.... ಇಲ್ಲಿ ಸಂಗೀತ ಹೇಗೆ ಕೇಳುತ್ತೋ ಹಾಗೆ ಅದರ ಮೂಲಕ ಸಾಹಿತ್ಯ ಹರಿದುಕೊಂಡು ಬರುತ್ತೆ. ಅಂದರೆ ಹಳೆಯ ಗಮಕದ ಆಧುನಿಕ ರೂಪವೇ ಸುಗಮ ಸಂಗೀತ ಅಂತ ಹೇಳಬಹುದು.

ಕೆಲವರು 'ಕವಿ ಬರೆದರೆ ಮಾತ್ರ - ಅದು ಭಾವಗೀತೆ. ಬೇರೆ ಯಾರು ಬರೆದರೂ ಅಲ್ಲ' ಅಂತ ಹೇಳ್ತಾ ಇದಾರೆ. ಅಂದರೆ ಕವಿಯ ರಚನೆಗಳು ಮಾತ್ರ ಸುಗಮ ಸಂಗೀತ ಅಂತ ಹೇಳ್ತಾ ಇದಾರೆ. ಹೀಗಾಗಿ ಜನಗಳಲ್ಲಿ ಯಾವುದು ಸುಗಮ ಸಂಗೀತ? ಯಾವುದು ಬೇಕು? ಯಾವುದು ತಗೊಳ್ಳಬೇಕು? ಅಂತ ಜಿಜ್ಞಾಸೆ ಮೂಡಿದೆ. ಮೊದಲು ಸುಗಮ ಸಂಗೀತ ಅನ್ನೋ ಪದವೇ ಇರಲಿಲ್ಲ. ಭಾವಗೀತೆ, ಲಘುಸಂಗೀತ ಅಂತ ಅಷ್ಟೇ ಹೇಳೋರು. 1984-85 ಸುಮಾರಿಗೆ 'ಸುಗಮ ಸಂಗೀತ' ಅಂತ ಹೆಸರು ಬಂತು. ಕಾಳಿಂಗ ರಾವ್ ಅವರು 'ಮಾಡು ಸಿಕ್ಕದಲ್ಲಾ' ಅನ್ನೋ ದಾಸರ ಕೀರ್ತನೆ ಹಾಡಿದಾರೆ. 'ಅದು ಬೆಟ್ಟ ಇದು ಬೆಟ್ಟವೋ' ಜಾರುವಾ' ಅನ್ನೋ ಜನಪದ ಗೀತೆ ಹಾಡಿದಾರೆ. ಅವರಿಗೆ ವ್ಯಾಕರಣ ಬೇಕಿರಲಿಲ್ಲ. ಅವರು ಒಂದು ಸಮುದಾಯ ಬೆಳೆಸಿಕೊಂಡು ಹೋದರು. ಈಗ ಸುಗಮ ಸಂಗೀತ ಅನ್ನೋ ಫ್ರೇಮ್‌ನಲ್ಲಿ ಇದನ್ನು ತುರುಕೋದಕ್ಕೆ ನೋಡ್ತಾ ಇದಾರೆ. ಭಾವಗೀತೆ ಟ್ರೆಂಡೇ ಈಗ ನಿಂತು ಹೋಗಿದೆ.

1978ನೇ ಇಸವಿಯಿಂದ 'ಕ್ಯಾಸೆಟ್ ಯುಗ' ಶುರುವಾಯ್ತು 'ನಿತ್ಯೋತ್ಸವ' 'ದೀಪಿಕಾ' 'ಮೈಸೂರು ಮಲ್ಲಿಗೆ' 'ಮಾವು-ಬೇವು' ಹೀಗೆ. 'ನವೋದಯ' 'ನಾಕುತಂತಿ'ಯಂಥವನ್ನು ನಾವೂ ಮಾಡಿದೀವಿ. ಆವಾಗ ಇದ್ದಂಥ ಶೈಲಿ, ಬಂಧ ಈಗ ಇಲ್ಲ. ಈಗ ಭಕ್ತಿಗೀತೆಗೆ ಇರೊಂಥ ಮಾರ್ಕೆಟ್ ಭಾವಗೀತೆಗೆ ಇಲ್ದೇ ಇರೋದರಿಂದ ಭಾವಗೀತೆ ಕ್ಯಾಸೆಟ್ ತಯಾರಕರು ಕಡಿಮೆ ಆಗಿದಾರೆ. ಇದು ಕಡಿಮೆ ಆದ ಹಾಗೇ ಕೇಳುಗರೂ ಕಡಿಮೆ ಆಗ್ತಾರೆ. ಇವರು ಕಡಿಮೆ ಆದ ಹಾಗೆ ವಾತಾವರಣ ಪೂರ್ತಿ ಬದಲಾಗುತ್ತೆ.

ಯಾವುದು ಸುಗಮ ಸಂಗೀತ ಅಂತ ಹೇಳಿದರೆ ನನ್ನ ಮಟ್ಟಿಗೆ ನನ್ನ ಅಭಿಪ್ರಾಯದಲ್ಲಿ ಆರು ಲಕ್ಷಣಗಳನ್ನು ನಾನು ಇದಕ್ಕೆ ಗುರುತು ಮಾಡಿಕೊಂಡಿದೀನಿ. 1. ಕಾವ್ಯಗುಣ 2. ಗೇಯತೆ 3. ಲಯಬದ್ಧತೆ 4. ಚುರುಕುತನ (ಕಡಿಮೆ ಅವಧಿಯಲ್ಲಿ ಮುಗಿಯುವಂಥದ್ದು) 5. ಧ್ವನಿ (ಅದಕ್ಕಿರಬೇಕಾದ ವಿಶಿಷ್ಟ ಧ್ವನಿಶಕ್ತಿ) 6. ಉತ್ತಮ ಛಂದಸ್ಸು. ಅಂದರೆ ಕಾವ್ಯಾತ್ಮಕವಾಗಿರಬೇಕು. ಗೇಯತೆಯನ್ನು ಒಳಗೊಂಡಿರಬೇಕು. ಲಯಬದ್ಧತೆ ಇರಬೇಕು. ಜೊತೆಗೆ ಚುರುಕುತನ ಇರಬೇಕು. ಅಂದರೆ ಮೂರರಿಂದ ನಾಲ್ಕು ನಿಮಿಷದಲ್ಲಿ ಮುಗಿಯಬೇಕು. ಒಂದು ಹಾಡನ್ನು ಇಪ್ಪತ್ತೈದು ನುಡಿ ಮಾಡಿ ಹಾಡಿದರೆ ಅದು ಕೇಳುಗರನ್ನಾಗಲಿ, ಶ್ರೋತೃಗಳನ್ನಾಗಲಿ ಹಿಡಿದಿಟ್ಟುಕೊಳ್ಳಕ್ಕೆ ಸಾಧ್ಯ ಆಗಲ್ಲ, ಹೀಗಿದ್ದಾಗ ಅದು ಕೇಳುಗನ ಮನ ಮುಟ್ಟುತ್ತೆ.

'ಕುರಿಗಳು ಸಾರ್' ನವ್ಯ ಕವನವಾದರೂ ಕೂಡ ಅದನ್ನ ಹಾಡಿಕೊಂಡು ಬಂದರು. ಆದರೆ ಅದನ್ನ ಹಾಡು ಅಂತ ಯಾರೂ ಹೇಳಲ್ಲ. ಈಗ ಜನ ತಿರುಗಿ ನವೋದಯಕ್ಕೆ ಮುಗಿ ಬಿದ್ದಿದಾರೆ. ಅಂದರೆ ಹಾಡೋ ಕವಿತೆಗಳಿಗೇ ಜನ ಮೊರೆ ಹೋಗ್ತಿದಾರೆ. ಒಬ್ಬ ಇಂಗ್ಲಿಷ್ ವಿಮರ್ಶಕ ಹೇಳ್ತಾನೆ : 'ಯಾವುದು ಹಾಡಬಲ್ಲಂಥ ಕವಿತೆಯಾಗಿರುತ್ತೋ ಅದು ಒಳ್ಳೆ ಕವಿತೆ' ಅಂತ. ಅಂದರೆ ಮನುಷ್ಯ ತನ್ನ ಮನಸ್ಸಿನ ಭಾವವನ್ನು ಪ್ರಕಟಗೊಳಿಸೋದಕ್ಕೆ ಸಂಗೀತ ಮುಖ್ಯವಾದ ಮಾಧ್ಯಮ. ಇದಕ್ಕೆ ಹೊಂದುವಂಥ ಸಾಹಿತ್ಯಬೇಕು. ನವ್ಯದಲ್ಲಿ 'ಕಲ್ಲು ಮಣ್ಣು ಸಗಣಿ' ಯಾವುಯಾವುದರ ಮೇಲೋ ಕವಿತೆಗಳು ಬಂದವು. ಅಂದರೆ ನವೋದಯಲ್ಲಿ ಸುಂದರವಾದ ಕಲ್ಪನೆ, ರಮ್ಯವಾದ ಕವಿತೆಗಳನ್ನು ಆರಿಸಿಕೊಳ್ತಿದ್ದರು. ನವ್ಯದಲ್ಲಿ ಸಂಕೀರ್ಣವಾದ ವಸ್ತುವನ್ನು ಆರಿಸಿಕೊಂಡರೂ ಅದು ಬುದ್ಧಿಗೆ ಸರಿಸಾಟಿ ಆದರೂ ಭಾವವನ್ನು ಮೀರಿ ಹೋಗಲಿಕ್ಕೆ ಆಗಲಿಲ್ಲ. ಯಾವ ಭಾವ ಭಾವಗೀತೆಯಲ್ಲಿ ಅಡಗಿದೆಯೋ ಅದೇ ಶಾಶ್ವತ ಅಂತ ನಾವು ತಿರುಗಿ ಹಿಂದಕ್ಕೆ ಬರ್ತಿದೀವಿ. ನಾವು ಈಗ ಕೇಳುವ ಹಾಡುಗಳಾಗಲಿ, ಪ್ರೋಗ್ರಾಮುಗಳಾಗಲಿ ಹಳೇ ಹಾಡುಗಳಿಗೇ ಮುಗಿ ಬಿದ್ದಿದ್ದೀವಿ. ಬೇಂದ್ರೆ, ಕುವೆಂಪು, ಕೆ.ಎಸ್.ನ, ಜಿ.ಎಸ್.ಎಸ್, ಲಕ್ಷ್ಮೀನಾರಾಯಣ ಭಟ್ಟರಂಥವರ ಕವಿತೆಗಳೇ ಇವತ್ತು ಉಳಿದಿವೆ. ಬೇರೆಯವರನ್ನ ಸ್ವೀಕಾರ ಮಾಡಿಕೊಳ್ಳೋದಕ್ಕೆ ಕಷ್ಟ ಆಗ್ತಾ ಇದೆ. ಈ ಕವಿಗಳಿಗೆ ಇದ್ದಂಥ ದಟ್ಟವಾದ ನವೋದಯ ಕಾವ್ಯ ಪ್ರಭಾವದ ಗೀತೆ-ಹಾಡುಗಳು ಈಗ ಇಲ್ಲ. ಭಾವಗೀತೆ ಫೈಲ್ಯೂರ್ ಆಗಿರೋದಕ್ಕೆ ಮುಖ್ಯವಾದ ಕಾರಣ ಇದು ಅಂತ ನನಗನಿಸುತ್ತೆ. ಜೊತೆಗೆ ಹಾಡೋರೂ ಮುಖ್ಯ. ಸುಗಮ ಸಂಗೀತದಲ್ಲಿ ಅತಿ ಮಧುರ ಕಂಠ ಇದ್ದವರು ಮಾತ್ರ ಶ್ರೋತೃಗಳನ್ನು ಮೆಚ್ಚಿಸಬಲ್ಲರು. ಶಾಸ್ತ್ರೀಯ ಸಂಗೀತದಲ್ಲಿ ಒಳ್ಳೆಯ ಕಂಠವೇ ಬೇಕು ಅಂತ ಅನ್ನಿಸಲ್ಲ. ಅಲ್ಲಿ ಶಾಸ್ತ್ರ ಇರುತ್ತೆ, ಪಾಂಡಿತ್ಯ ಇರುತ್ತೆ. ಆ ಮನೋಧರ್ಮ, ಲೆಕ್ಕಾಚಾರ, ರಾಗ ಮಾಧುರ್ಯ, ಸ್ವರ ವಿಸ್ತಾರ ಏನಿದೆ ಅನ್ನೋದನ್ನ ಜನ ನೋಡ್ತಾರೆ. ಆ ಸಂಗೀತದಲ್ಲಿ ಕಂಠ-ಧ್ವನಿಯನ್ನು ಅಷ್ಟು ಗಮನಿಸಲ್ಲ. ಧ್ವನಿ ಚೆನ್ನಾಗಿಲ್ಲದಿದ್ದರೂ ನಡೆದು ಹೋಗುತ್ತೆ. ಆದರೆ ಸುಗಮ ಸಂಗೀತದಲ್ಲಿ ಅತ್ಯಂತ ಮಾಧುರ್ಯದಿಂದ ಕೂಡಿದ ಧ್ವನಿ ಇದ್ದರೆ ಮಾತ್ರ ರಂಜಿಸೋದಕ್ಕೆ ಸಾಧ್ಯ. ಇಲ್ಲದಿದ್ದರೆ ಯಾವುದೇ ಹಾಡಾಗಲಿ, ಯಾವುದೇ ಸಾಹಿತ್ಯವಾಗಲಿ, ಸ್ವರಸಂಯೋಜನೆಯಾಗಲಿ, ಅಕ್ಷರ ಚಮತ್ಕಾರವಾಗಲಿ ಸಾಧ್ಯವಾಗಲ್ಲ. ಮುಖ್ಯವಾಗಿ ಗಾಯಕ ನಮಗೆ ಭಾವವನ್ನು ತಲುಪಿಸ್ತಾನೆ. ಒಬ್ಬ ಕವಿ ಏನು ಬರ್ದಿದಾನೆ ಆ ಭಾವನೆಯನ್ನ, ಸಂಯೋಜನಕಾರ ಏನು ಸಂಗೀತ ಸಂಯೋಜಿಸಿರ್ತಾನೆ ಆ ಸ್ವರಸಂಯೋಜನೆ ಸೇರಿ ಅವನು ಅನುಭವಿಸಿ ಅವನ ಕಂಠದ ಮೂಲಕ ವ್ಯಕ್ತಗೊಳಿಸಿ ಪ್ರಕಟಿಸ್ತಾನೆ. ಸುಗಮ ಸಂಗೀತದ ಗಾಯಕನಿದಾನಲ್ಲ-ಇವನೇ ಅತ್ಯಂತ ಮುಖ್ಯವಾದವನು ಇಲ್ಲಿ. ಒಳ್ಳೆ ಮಾಧುರ್ಯತೆ ಇರುವ, ಬುದ್ಧಿವಂತಿಕೆಯಿಂದ ಹಾಡುವ ಯಾವ ಗಾಯಕನಿದ್ದಾನೆ ಅವನು ಹಾಡುವ ಹಾಡುಗಳು ಖಂಡಿತವಾಗಿ ಜನರನ್ನು ಗೆಲ್ಲೋಕೆ ಸಾಧ್ಯ. ಬಹುಮಟ್ಟಿಗೆ ಇಂಥ ಗಾಯಕರು ಕಡಿಮೆ ಆಗ್ತಿರೋದು ಈಗಿನ ಪರಿಸ್ಥಿತಿಗೆ ಕಾರಣವಿರಬಹುದು. ■

# ಮಕ್ಕಳ ಚಿತ್ರಕಲೆಯ ಪರಿಸರ

**ಚಿತ್ರಕಲೆ ಮಗುವಿನ ತೀರಾ ಖಾಸಗಿಯಾದ ಭಾಷೆ. ಮಗು ಚಿತ್ರ ಬರೆಯುವ ಮೂಲಕ ಅಂತರಂಗವಾಗಿ ತನಗೆ ಇಷ್ಟವಾದುದನ್ನು ಇಷ್ಟವಾಗದೇ ಇರುವುದನ್ನೂ ಸಮಾನವಾಗಿ ಅಭಿವ್ಯಕ್ತಗೊಳಿಸುತ್ತಿರುತ್ತದೆ.**













6-7 ವರ್ಷದ ಮಗು ಹಿರಿಯರ ಡೈರಿಯ ಕೈ ಬರಹದ ಸ್ಫೂರ್ತಿಯಿಂದ ಗ್ರಹಿಸಿ ರಚಿಸಿದ ಚಿತ್ರ
ನಾಲ್ಕು ಹಂತದ ಚಿತ್ರಗಳೂ ವಿವಿಧ ಅವಧಿಗಳಲ್ಲಿ ರಚಿಸಿದ್ದು

6-7ನೇ ವಯಸ್ಸಿನಲ್ಲಿ ಶಾಲೆಗೆ ಹೋಗುವಾಗಿನ 'ಬಸ್ಸು' ಮುಖ್ಯ ಆಕರ್ಷಣೆಯಾಗಿದೆ. ಒಂದೇ 'ಚಿತ್ರ ಸಂಯೋಜನೆ'ಯಾಗಿ ಚಿತ್ರಿಸಿರುವುದು

ಒಂದು ದೇಶದ ಬೆಳವಣಿಗೆಯನ್ನು ಸರಿಯಾಗಿ ಅರಿಯಬೇಕಾದರೆ, ಅದರಲ್ಲೂ ಸಾಂಸ್ಕೃತಿಕವಾಗಿ ಆ ದೇಶದ ಸ್ಥಾನ ಗುರುತಿಸಬೇಕೆಂದರೆ ಆಯಾ ದೇಶದ ಮಕ್ಕಳ ಚಿತ್ರಗಳನ್ನು ನೋಡಬೇಕು. ಪ್ರತಿಯೊಂದು ದೇಶದ ಮಕ್ಕಳೂ ಆ ನೆಲದ, ಪರಿಸರದ ಎಲ್ಲ ಬೆಳವಣಿಗೆಗಳನ್ನು, ಬದಲಾವಣೆಗಳನ್ನು ಸೂಕ್ಷ್ಮವಾಗಿ ಸ್ಪಂದಿಸುತ್ತಿರುತ್ತವೆ. ಇಂತಹ ಸ್ಪಂದನದಿಂದಾದ ಅನುಭವವನ್ನು ದೃಶ್ಯ ಭಾಷೆಯ ಮೂಲಕ ವ್ಯಕ್ತಗೊಳಿಸುವುದು ಎಲ್ಲಾ ವರ್ಗದ ಸಣ್ಣ ಮಕ್ಕಳಲ್ಲೂ ಇರುವ ಸಹಜ ಪ್ರವೃತ್ತಿ. ಸ್ಪಷ್ಟವಾಗಿ, ಕಲಾತ್ಮಕವಾಗಿ ಮತ್ತು ವಿಮರ್ಶಾತ್ಮಕವಾಗಿ ಯಾವ ಪೂರ್ವಾಗ್ರಹವಿಲ್ಲದೆ ಸೃಷ್ಟಿಗೊಳ್ಳುವ ಈ ಮಕ್ಕಳ ಚಿತ್ರಗಳು ಆ ದೇಶದ ವಸ್ತುಸ್ಥಿತಿಗೆ ಕನ್ನಡಿ ಹಿಡಿದ ದಾಖಲೆಗಳು. ವಿಚಿತ್ರವೆಂದರೆ ಈ ದಾಖಲೆಗಳು ಚರಿತ್ರೆಯಲ್ಲಿ ಸೇರದಿರುವುದು.

'ದೇಶದ ಭವಿಷ್ಯ ಮಕ್ಕಳು' ಎನ್ನುವಂತೆಯೇ ಆ ಮಕ್ಕಳ ಚಿತ್ರಗಳು ಆ ದೇಶದ ಕಾಲದ ಚರಿತ್ರೆ' ಎಂದು ಯಾವ ಚರಿತ್ರಕಾರನೂ ಇದುವರೆಗೂ ಗುರುತಿಸಿಲ್ಲ. ಚರಿತ್ರೆಯಲ್ಲಿ ದಾಖಲಾಗುವುದು ಕೇವಲ ಪ್ರಜ್ಞಾವಂತ ಕಲಾವಿದರು, ಪ್ರಜ್ಞಾಪೂರ್ವಕವಾಗಿ ರಚಿಸಿದ ನಿರ್ದಿಷ್ಟ ಕಲಾಕೃತಿಗಳು. ವಾಸ್ತವಕ್ಕೆ ಕನ್ನಡಿಯಾಗುವ ಮಕ್ಕಳ ಚಿತ್ರಗಳು ನಮ್ಮ ಕಲಾವಿದರಿಗೂ ಕಾಣದಿರುವುದು ಒಂದು ದುರಂತ.



ಅನಂತರ 5-6ನೇ ವರ್ಷದಲ್ಲಿ ಕೆಲವು ವಸ್ತುಗಳಿಗೆ ತನ್ನ ಅಭಿರುಚಿಯನ್ನು ಸೀಮಿತಗೊಳಿಸಿರುವುದು

ಚಿತ್ರಕಲೆ ಮಗುವಿನ ತೀರಾ ಖಾಸಗಿಯಾದ ಭಾಷೆ. ಮಗು ಚಿತ್ರ ಬರೆಯುವ ಮೂಲಕ ಆಂತರಿಕವಾಗಿ ತನಗೆ ಇಷ್ಟವಾದುದನ್ನು ಇಷ್ಟವಾಗದೇ ಇರುವುದನ್ನೂ ಸಮಾನವಾಗಿ ಅಭಿವ್ಯಕ್ತಗೊಳಿಸುತ್ತಿರುತ್ತದೆ. ಆದರೆ ನಾವು ನಮ್ಮ ಮನೆಯ ಮಗುವಿಗೆ ನಮ್ಮ ಸಿದ್ಧಆಲೋಚನೆಗಳನ್ನು, ನಡಾವಳಿಗಳನ್ನು, ಗ್ರಹಿಕೆಗಳನ್ನು ಮಗುವಿನ ಅಪ್ಪಣೆ ಇಲ್ಲದೆಯೇ ಅದರ ಮನಸ್ಸಿಗೆ ತುರುಕುತ್ತೇವೆ. ಮಗು ತಾನು ಗ್ರಹಿಸಿದ ಯಾವುದರ ಬಗ್ಗೆಯೂ ಮೊದಲ ಅನುಭವದ ಮೂಲಕ ಅರ್ಥೈಸಿಕೊಳ್ಳುವ ನೈಸರ್ಗಿಕ ಸಾಮರ್ಥ್ಯವನ್ನು ನಮಗೆ ಅರಿವಿಲ್ಲದೆಯೇ ಕುಂಠಿತಗೊಳಿಸುತ್ತೇವೆ. ಈ ಹಂತದಲ್ಲೇ ಮಗು ಮಾನಸಿಕವಾಗಿ ಸ್ವನಿಯಂತ್ರಣ ಹೆಚ್ಚಿಸಿಕೊಳ್ಳುವ ಬದಲು ತನ್ನ ಪ್ರತಿ ಹಂತದಲ್ಲೂ ಪರಾವಲಂಬಿತ್ವ ಬೆಳೆಸಿಕೊಳ್ಳುತ್ತದೆ.

ದೀಪಾವಳಿ ಹಬ್ಬದ ಶುಭಾಶಯಗಳು

# ಶ್ರೀ ವ್ಹಿ.ಆಯ್.ಅಂಗಡಿ

**ಗಜೇಂದ್ರಗಡ-582 114**

ವಿತರಕರು : ಹಳಿಪಟ್ಟಿ, ಹರಿತಗಡು, ಸಿಮೆಂಟ್ಸ ಮತ್ತು
ಪಾಲಿಪೈಪ್, ಪಿ.ವಿ.ಸಿ.ಪೈಪ್, ಜಿ.ಆಯ್.ಪೈಪ್
ಫೋನ್ : 22237, 22137, 22437, ಎಸ್.ಟಿ.ಡಿ : 08381.



## VEERAPPA ISHWARAPPA ANGADI

Main Road, Gajendragad-582 114.

*Dealers in : All Kinds of Hardware Materials*
*CR, RP, MS, GI, Sheets, GI, MS, AC,*
*PVC Pipes & Fittings,*
*Asian Paints, Cements, etc.,*





## SHRI VEERABHADRESHWAR STEEL TRADERS

Gajendragad-582 114

**Prop : Manju Angadi**

## SHRISHAIL ELECTRICALS

*Dealers : Electrical Goods, PVC, GI,*
*Poly pips & Fittings, Bearings etc.,*
Main Road, Gajendragad-582 114
Dist. Gadag



## M/s SHILPA TEXTILE

*Suitings, Shirting & Sarees*
Main Road, Gajendragad-582 114.

**Prop : D.I. Angadi**

## *MANJUNATH*
## PIPE INDUSTRIES

*POLYTHIN PIPE MANUFACTURERS*

Near Old K.E.B. GAJENDRAGAD-582 114

**Prop : Basu Angadi**

ಶ್ರೀ ದೊಡ್ಡ ಬಸವರಾಜ ಐ. ಅಂಗಡಿ
ಶ್ರೀ ವೀರಣ್ಣ ಐ. ಅಂಗಡಿ
ಶ್ರೀ ಶ್ರೀಶೈಲ ಐ. ಅಂಗಡಿ
ಶ್ರೀ ಬಸವರಾಜ ಐ. ಅಂಗಡಿ
ಶ್ರೀ ಮಂಜುನಾಥ ಐ. ಅಂಗಡಿ



**ಚಿತ್ರ ರಚಿಸುವಲ್ಲಿ ಸಂಯಮ ಕಳೆದುಕೊಂಡು ಮಗು, ಕೊನೆಯ ಗಳಿಗೆಯಲ್ಲಿ ರಚಿಸಿದ ಚಿತ್ರ. ಇಲ್ಲಿ ಮಗುವಿನ ನಿರಾಸಕ್ತಿ ಮತ್ತು ಏಕಾಗ್ರತೆ ವಿಚಲಿತಗೊಂಡ ಮನಸ್ಸನ್ನೂ ಗಮನಿಸಬಹುದು.**

ನಮ್ಮ ಮಕ್ಕಳ ಮನಸ್ಸನ್ನು ಅರಿಯುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ನೂರಾರು ರೀತಿಯಲ್ಲಿ ಅನೇಕ ವಿದ್ವಾಂಸರು, ಮನೋವಿಜ್ಞಾನಿಗಳು ಸಲಹೆ ನೀಡಿದ್ದಾರೆ. ವೈಜ್ಞಾನಿಕವಾಗಿ ಮಕ್ಕಳನ್ನು ನಿರ್ದಿಷ್ಟ ಆಟ, ಪಾಠಗಳಿಂದ, ಪರೀಕ್ಷೆಗಳಿಂದ ಮತ್ತು ಕೆಲವು ಸಂದರ್ಭಗಳಲ್ಲಿ ಸಮ್ಮೋಹನಗೊಳಿಸುವ ಮೂಲಕ ಮಕ್ಕಳ ಬುದ್ಧಿ ಸಾಮರ್ಥ್ಯವನ್ನು ಅವರ ಮನಸ್ಸನ್ನು ಅರಿಯುವ ಪ್ರಯತ್ನವಾಗಿದೆ. ಇವೆಲ್ಲವೂ ಮಗುವನ್ನು ನಿರ್ದಿಷ್ಟವಾದ ಪರೀಕ್ಷೆಗಳಿಗೆ ಒಳಪಡಿಸುವ ಅನಿವಾರ್ಯತೆಯಿಂದ ಮಗುವಿನ ಮನಸ್ಸು ಜಾಗ್ರತಗೊಂಡು, ಪ್ರಜ್ಞಾಪೂರ್ವಕವಾಗಿ ಸ್ಪಂದಿಸಿದಲ್ಲಿ ಅಂತಹ ಪರೀಕ್ಷೆಗಳಿಂದ, ತಂತ್ರಗಳಿಂದ ಮಗುವಿನ ಸಹಜ ಮನಸ್ಸನ್ನು ಅರಿಯಲು ಸಾಧ್ಯವೆ? ಈ ಪ್ರಶ್ನೆಯೊಂದಿಗೇ ಮಗುವಿನ ಮನಸ್ಸನ್ನು ನಾವು ಅರಿಯಬೇಕೇಕೆ? ಎಂಬ ಪ್ರಶ್ನೆಯನ್ನು ಕೇಳಿಕೊಂಡು ಸೂಕ್ತ ಉತ್ತರ ಪಡೆಯಲು ಪ್ರಯತ್ನ ಮಾಡಬಹುದು.

ಒಂದು ಮಗು ತಾಯ ಮಡಿಲಿನಿಂದ ಹೊರಬಂದು ನಮ್ಮ ಸಮಾಜವನ್ನು ಶಬ್ದ, ದೃಶ್ಯಗಳ ಮೂಲಕ ಗ್ರಹಿಸುತ್ತದೆ. ಇಲ್ಲಿ ಮಗುವಿಗೆ ತಪ್ಪು, ಸರಿ, ಅರಿವು ಮತ್ತು ಪ್ರಜ್ಞೆ ಯಾವುದೂ ತಿಳಿಯದ ಸ್ಥಿತಿಯಲ್ಲಿ 'ಇದಮಿತ್ಥಂ' ಎಂದು ಸೃಷ್ಟಿಸಿರುವ ಈ ಸಮಾಜವನ್ನು ಸ್ವೀಕರಿಸುತ್ತದೆ ಎನ್ನುವುದನ್ನು ಮುಖ್ಯವಾಗಿ ನಾವು ಗಮನಿಸಬೇಕು. ಮಗು ಯಾವುದನ್ನು ಹೇಗೆ ಗ್ರಹಿಸುತ್ತಿದೆ, ಪರಿಸರಕ್ಕೆ ಹೇಗೆ ಪ್ರತಿಕ್ರಿಯಿಸುತ್ತಿದೆ ಎನ್ನುವುದನ್ನು ನಾವು ನಿರ್ದಿಷ್ಟವಾಗಿ ತಿಳಿದುಕೊಂಡಲ್ಲಿ ಮಗುವಿನ ಸಹಜವಾದ ಮಾನಸಿಕ ಬೆಳವಣಿಗೆಗೆ ಸಿದ್ಧಗೊಳಿಸಲು ಸುಲಭವಾಗುತ್ತದೆ. 'ದೃಶ್ಯ ಪ್ರಜ್ಞೆ'ಯ ಮೂಲಕ ಎಲ್ಲಾ ಮಕ್ಕಳು ನಮ್ಮ ಸಮಾಜವನ್ನು, ಪರಿಸರವನ್ನು ಅರಿಯುತ್ತವೆ. ಈ ರೀತಿಯಲ್ಲಿ ಮಗು ಕಂಡು ಅನುಭವಿಸಿದ ಯಾವುದೇ ದೃಶ್ಯಾನುಭವವನ್ನು ತನ್ನ ಸುಪ್ತಚೇತನದಲ್ಲಿ ಅಸಂಖ್ಯಾತ ಉಚಿತ-ಅನುಚಿತ ನೆನಪಿನ ಉಗ್ರಾಣದಲ್ಲಿ ಸಂಗ್ರಹ ಮಾಡಿರುತ್ತದೆ. ಅಮೂರ್ತವಾಗಿರುವ ಈ ದೃಶ್ಯರೂಪಗಳು ಮಗುವಿನ ಮಾನಸಿಕ ಸಾಮರ್ಥ್ಯವನ್ನು ಹೆಚ್ಚಿಸುವಂತಹ ಕೆಲಸ ಮಾಡುತ್ತವೆ.

ಮಗು ತನ್ನ 20 ತಿಂಗಳ ಅವಧಿಯಲ್ಲಿ ತನ್ನ ಮನಸ್ಸಿನ ಚಿತ್ರಪಟಲದ ಮೇಲೆ ಮೂಡಿದ ಆಕಾರಗಳಿಗೆ, ಪ್ರತಿಕ್ರಿಯಿಸುವ ಪ್ರಯತ್ನಕ್ಕೆ ತೊಡಗುತ್ತದೆ. ಕಣ್ಣಲ್ಲಿ ಕಿವಿಗಳ ಮೂಲಕ ಮನಸ್ಸನ್ನು ಪ್ರವೇಶಿಸಿದ ಈ ಎಲ್ಲ ರೀತಿಯ ರೂಹುಗಳಲ್ಲಿ ತೀವ್ರವಾದುದನ್ನು ದಾಖಲಿಸಿಕೊಂಡು ಉಳಿದುದನ್ನು ತನಗೆ ತಾನೆ ಅಳಿಸಿಹೋಗುವ 'ಸ್ವನಿಯಂತ್ರಿತ' ವ್ಯವಸ್ಥೆಯನ್ನು ಮಗು ಹೊಂದಿರುತ್ತದೆ. ಶೈಶವಾವಸ್ಥೆಯ ಹಂತದಿಂದಲೂ ಸುತ್ತಮುತ್ತಲ ಜನರು, ಶಬ್ದ ಆಕಾರಗಳು, ಬಣ್ಣಗಳು ಇತ್ಯಾದಿಗಳು ಅವುಗಳ ತೀವ್ರತೆಯನ್ನು ಅವಲಂಬಿಸಿ ಮಗುವಿನ ಮನಸ್ಸನ್ನು ಸೇರುತ್ತವೆಯಾದರೂ ದಾಖಲೆಯಾಗಿ ಉಳಿಯುವುದು ಕೆಲವೇ ಸಂಕೀರ್ಣ ಚಿತ್ತಾರಗಳು ಮಾತ್ರ. ಮಗು ದಿನ ಕಳೆದಂತೆ ಇವುಗಳನ್ನು ಮಾತಿಗಿಂತಲೂ ಮೊದಲು ಚಿತ್ರಗಳ ಮೂಲಕ ಅಭಿವ್ಯಕ್ತಿಸಿ ಬಾಹ್ಯ ಪ್ರಪಂಚದೊಂದಿಗೆ ಸಂವಾದಿಸುತ್ತದೆ. ಮನಸ್ಸಿನ ಮಾತುಗಳಿಗೆ ಧ್ವನಿ ನೀಡುವ ಈ ಚಿತ್ರಕಲೆ ಮಗುವಿಗೆ ತೀರಾ ಆಪ್ತವಾದ ಭಾಷೆ. 'ಸೌಂದರ್ಯ ಪ್ರಜ್ಞೆ' ಎನ್ನುವ ಶಬ್ದದ ಅರ್ಥವನ್ನು ಮಗುವಿನ ಈ ಚಿತ್ರಗಳ ಮೂಲಕ ನಾವು ತಿಳಿಯಬಹುದು. ಮಗು ಪೂರ್ವಾಗ್ರಹವಿಲ್ಲದೆ





3 ವರ್ಷದ ಮಗು ಒಂದೇ ಸಮಯದಲ್ಲಿ ರಚಿಸುವ ಚಿತ್ರಗಳಲ್ಲಿ ವರ್ಣ ಸಂಯೋಜನೆ, ನಿರೂಪಣೆ ಮತ್ತು ವಸ್ತು ಹೇಗೆ ಹಂತ ಹಂತವಾಗಿ ಹೊಸ ಸ್ವರೂಪ ಪಡೆದುಕೊಳ್ಳುತ್ತದೆ ಎಂದು ಈ ವಿವಿಧ ಚಿತ್ರಗಳಲ್ಲಿ ಗಮನಿಸಬಹುದು.





ಚಿಸುವ ಇಂತಹ ಚಿತ್ರಗಳು ವಸ್ತುವಿನ, ಅನುಭವದ ಸಮಗ್ರವಾದ ಚಿತ್ರಣವನ್ನು ಕಲಾತ್ಮಕವಾಗಿ ಸೆರೆ ಹಿಡಿದಿರುತ್ತವೆ. ಸೂಕ್ಷ್ಮವಾಗಿ ಇಂತಹ ಚಿತ್ರಗಳನ್ನು ನೋಡಿದಾಗ ಮಾತ್ರ ನಮ್ಮ ಮಗುವಿನ ಸುತ್ತಲು ನಾವು ಎಂತಹ ರಿಸರವನ್ನು ಸೃಷ್ಟಿಸಿದ್ದೇವೆ ಎನ್ನುವುದು ತಿಳಿಯುತ್ತದೆ. ಪರಿಸರ ಕುರಿತ ಮಗುವಿನ ಒಂದೊಂದು ಚಿತ್ರಗಳನ್ನು ಅಂಕಿ, ಅಂಶಗಳನ್ನು ನಿರೀಕ್ಷಿತ ನ್ಯೂಸ್ ಪೇಪರ್ ಓದುವಂತೆ ಓದಿದಲ್ಲಿ ಖಂಡಿತಾ ನಿರಾಶೆಯಾಗುತ್ತದೆ. ಇದಕ್ಕೆ ಬದಲು ಮಗು ತನ್ನ ಲಹರಿ ಬಂದಾಗ, ಚಿತ್ರ ಬರೆಯಬೇಕೆನ್ನುವ ಸ್ಫೂರ್ತಿಯಿಂದ ಆಗಾಗ ರಚಿಸುವ ಚಿತ್ರಗಳನ್ನು ಮಗುವಿಗೆ ತಿಳಿಯದಂತೆ ಸಂಗ್ರಹಿಸಿ ನಿರ್ದಿಷ್ಟ ಅವಧಿಯ ಎಲ್ಲ ಚಿತ್ರಗಳನ್ನು ಅವಲೋಕನದಲ್ಲಿ ಖಂಡಿತಾ ಅಲ್ಲಿ ಮಗುವಿನ ಮನಸ್ಸನ್ನು ಅದರ ಪ್ರತಿಭೆಯನ್ನೂ ಕಾಣಬಹುದು.

**ಮಗುವನ್ನು ಪ್ರೀತಿಸುವ ತಂದೆ-ತಾಯಿಗಳಿಗೆ ಕೆಲವು ಸೂಚನೆಗಳು :**

1. ಮಕ್ಕಳು ತಮ್ಮ ಮಾತಿನ ಮೂಲಕ ಹೇಳಲಾಗದ ಅನೇಕ ಅನುಭವಗಳನ್ನು ಚಿತ್ರಗಳ ಮೂಲಕ ಹೊರಚೆಲ್ಲುತ್ತವೆ. ಆದಕಾರಣ ನಾವು ನಮ್ಮ ಮಕ್ಕಳ ಎಲ್ಲಾ ಹಂತದ ಚಿತ್ರಗಳನ್ನು ತಾರೀಕು ನಮೂದಿಸಿ, ಸಂಗ್ರಹಿಸಬೇಕು.

2. ವಸ್ತುವನ್ನು ನಿಷ್ಠುರವಾಗಿ, ವಸ್ತುನಿಷ್ಠವಾಗಿ ನೋಡುವ ಮಕ್ಕಳ ನಿರ್ಮಲ ದೃಷ್ಟಿಕೋನವನ್ನು ಪ್ರೊತ್ಸಾಹಿಸಬೇಕು.

3. ಮಕ್ಕಳ ಉದ್ವೇಗ, ಮುಗ್ಧತೆಯನ್ನು ಚಿತ್ರರಚಿಸುವ ಅವಕಾಶಗಳನ್ನು ಒಲ್ಪಿಸುವ ಮೂಲಕ ನಿಯಂತ್ರಿಸಿ ತಹಬದಿಗೆ ತರಬಹುದು.

4. ಮಕ್ಕಳ ಚಿತ್ರಗಳ ಮೂಲಕ ಇಡೀ ನಮ್ಮ ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಗಳನ್ನು ವ್ಯತ್ಯಾಸಗಳನ್ನು ಗುರುತಿಸಬಹುದು. ಪರಿಸರದ ಕಿಂಚಿತ್ ಬದಲಾವಣೆಯನ್ನು ಮಕ್ಕಳು ತುಂಬಾ ಸೂಕ್ಷ್ಮವಾಗಿ ತಮ್ಮ ಮನಸ್ಸಿನಲ್ಲಿ ದಾಖಲಿಸಿಕೊಂಡು ಸಂಕೀರ್ಣವಾದ ಪ್ರತಿಮೆಗಳ ಮೂಲಕ ಅವುಗಳನ್ನು ಗರಮ್ಮಳವಾದ ಮನಸ್ಥಿತಿಯಲ್ಲಿ ಪ್ರತಿಕ್ರಿಯಿಸುತ್ತವೆ. ಹೀಗೆ ಅನುಭವಗಳನ್ನು ಚಿತ್ರಗಳ ಮೂಲಕ ವ್ಯಕ್ತಗೊಳಿಸುವುದು ಮಕ್ಕಳ ಆರೋಗ್ಯಕರ ಮನಸ್ಸಿನ ಸೂಚಕ. ಮಕ್ಕಳ ದೃಶ್ಯ ಭಾಷೆ ಬೆಳೆಸುವುದಾದಲ್ಲಿ ಪರಿಸರ ನೋಡುವುದನ್ನು ಮಕ್ಕಳಿಗೆ ಮೊದಲು ಕಲಿಸಬೇಕು. ಹಿರಿಯರು ಮಕ್ಕಳಿಗೆ ಚಿತ್ರಬರೆಯುವುದನ್ನು ಹೇಳಿಕೊಡಬಾರದು, ಬಿಳಿ ಕಾಗದ, ಪೆನ್ಸಿಲ್ ಒದಗಿಸಿ ಮಗು ಗೀಚುಗಳನ್ನು ಕಾಗದದ ಮೇಲೆ ರಚಿಸುವ ಸೂಕ್ತ ವಾತಾವರಣ ಸೃಷ್ಟಿಸಬೇಕು ಮತ್ತು ಮಗು ಚಿತ್ರ ಬರೆದು ತಾನಾಗಿ ನಿಲ್ಲಿಸುವವರೆಗೂ ಸಾವಧಾನದಿಂದ ಕಾಯಬೇಕು. ನಂತರ ಅಂದಿನ ದಿನಾಂಕ ಬರೆದು ಸಂಗ್ರಹಿಸಿಡಬೇಕು.

ಕಲಾಸ್ಪರ್ಧೆಗಳಲ್ಲಿ ಮಕ್ಕಳು ಭಾಗವಹಿಸಲು ಪ್ರೋತ್ಸಾಹಿಸಬಾರದು. 2 ವರ್ಷದ ಮಗು ಗೀಚುಗಳ ಮೂಲಕ ಅಭಿವ್ಯಕ್ತಿಯನ್ನು ಪ್ರಾರಂಭಿಸಿ 3 ವರ್ಷದ ಹಂತದಲ್ಲಿ ವೃತ್ತ, ಚೌಕ, ಆಕಾರಗಳನ್ನು ಚಿತ್ರಿಸುವಷ್ಟು ಸಾಮರ್ಥ್ಯ ಹೊರುತ್ತದೆ. ಈ ಹಂತದಲ್ಲಿ ಮಗು ಯಾವುದೇ ರೀತಿಯ ಚಿತ್ರ ರಚಿಸಬಹುದು. ಅದು ಮಗುವಿನ ಆರೋಗ್ಯ ಮತ್ತು ಪರಿಸರಕ್ಕೆ ಅವಲಂಬಿಸಿರುತ್ತದೆ. ಮಗುವಿನ ಈ ಚಿತ್ರಗಳಲ್ಲಿ ಕುಶಲತೆ ಮುಖ್ಯ.

■ ಎಂ.ಎಸ್. ಮೂರ್ತಿ

ಸರ್ವರಿಗೂ ದೀಪಾವಳಿ ಹಬ್ಬದ ಶುಭಾಶಯಗಳು



# ಪಟ್ಟಣ ಪಂಚಾಯತ
# ಜೇವರಗಿ
## ಜಿ. ಗುಲಬರ್ಗಾ



ಅಧ್ಯಕ್ಷರು
ಶ್ರೀಮತಿ ರೇಣುಕಾ ಜಿ. ಹಿರೇಮಠ



ಉಪಾಧ್ಯಕ್ಷರು
ದೊಡ್ಡಪ್ಪ ಕೊಂಬಿನ್

### ಸರ್ವ ಸದಸ್ಯರು

1. ಷಣ್ಮುಖಪ್ಪಾ ಸಾಹುಗೋಗಿ
2. ರಾಮಶೆಟ್ಟಿ ಸಾಹು ಹುಗ್ಗಿ
3. ಶ್ರೀಮತಿ ಅನುಸುಬಾಯಿ ದತ್ತಪ್ಪ ತಳವಾರ
4. ಅಬ್ದುಲ್ ಅಜೀಜ್ ಗಿರಣಿ
5. ಶ್ರೀಮತಿ ಕಮಲಾಬಾಯಿ ಎಂ. ಬಡಿಗೇರ
6. ಶ್ರೀಮತಿ ಅಮೀನಾ ಬೇಗಂ ಗಂಡ ಜಾವಿದ ಹುಸೇನ್
7. ಸುಭಾಸ್ ಮಹೇಂದ್ರಕರ್
8. ನವಾಬಮಿಯಾ ಏಂಟಿ
9. ಶ್ರೀಮತಿ ಜೈನಾಬಿ ಕೂಡಿ
10. ಸೈಯ್ಯದ್ ಮಮತಾಜ್ ಅಲಿ





ಮುಖ್ಯಾಧಿಕಾರಿ
ಅಹ್ಮದ್ ಅಲಿಸಾಬ್



# ವೃತ್ತಿ ರಂಗಭೂಮಿ : ಪ್ರೋತ್ಸಾಹದ ಕೊರತೆ

ಮನೆಯಲ್ಲಿ ನೋಡೋದಕ್ಕೆ ಟಿವಿ ಅಂಥವು ಸಿಕ್ಕಿರುವುದರಿಂದ ಕಷ್ಟಪಟ್ಟು ಮೂರು ಮೂರು ಗಂಟೆ ಈ ವೃತ್ತಿರಂಗದ ನಾಟಕ ನೋಡೋ ಅಷ್ಟು ತಾಳ್ಮೆ ಜನರಲ್ಲಿ ಉಳಿತಾ ಇಲ್ಲ. ಮೊದಲಿನಷ್ಟು ತುಂಬಿ ತುಂಬಿ ಬರುವಂಥ ಜನರ ಸಂಖ್ಯೆಯೂ ಕೊರತೆ ಆಗ್ತಾ ಇದೆ.

**ಈ**ಗ ವೃತ್ತಿರಂಗಭೂಮಿಯಲ್ಲಿ ನಾಟಕ ಕಂಪನಿಗಳೇ ಕಡಿಮೆ ಆಗಿವೆ. ಅಲ್ಲೊಂದು, ಇಲ್ಲೊಂದು ಬೆರಳೆಣಿಕೆಯಷ್ಟೇ ಇವೆ. ಹಳೇ ಹಾಡುಗಳ ಸಾಮರ್ಥ್ಯವನ್ನೂ ಈಗಿನ ಕಲಾವಿದರು ಉಳಿಸಿಕೊಂಡಿಲ್ಲ. ಮೇಲಾಗಿ ಕಲಿಯಬೇಕು ಅನ್ನೋ ಮನೋಭಾವನೆಯೂ ಇಲ್ಲ. ಅಂದಾಗ ಇವರು ಏನು ಕೊಡ್ತಾರೆ? ಮೊನ್ನೆ ರಂಗಗೀತೆಗಳನ್ನು ಹಾಡಿಸುವಾಗ ಅವರಲ್ಲಿ ಆ ಪ್ರಜ್ಞೆ ಮೂಡಲಿ, ಅದರ ಬಗ್ಗೆ ಅವರಲ್ಲಿ ಆಸಕ್ತಿ ಮೂಡಲಿ, ತಾವೇನು ತಪ್ಪು ಮಾಡ್ತಿದೀವಿ ಅಂತ ಅರಿವು ಬರಲಿ ಅಂತ ನಾಲ್ಕು ಜನ ಕಲಾವಿದರನ್ನು ಕರೆದುಕೊಂಡು ಬಂದೆ. ಬರಿ ಅವರು ದುಡ್ಡು ಗಳಿಸೋ ವಿಧಾನಕ್ಕೆ ಹೋದರೆ ವಿನಃ ಇದನ್ನು ಕಲೀಬೇಕು, ನಾವು ಕೊಡಬೇಕು ಅನ್ನೋ ರೀತಿಯಲ್ಲಿ ಅವರು ಮುಂದುವರಿಯಲಿಲ್ಲ. ಹಾಗಾಗಿ ಜನರಿಗೆ ನಾವೇ ಕೊಡದೇ ಇದ್ದಾಗ, ಜನರಿಗೆ ಅರ್ಥ ಆಗೋದಾದರೂ ಹ್ಯಾಗೆ? ಕಲಾವಿದರು ನಾವು ಏನು ಮಾಡ್ತಿದೀವಿ ಅನ್ನೋ ಕೊಡುಗೇನೂ ಬೇಕಲ್ಲ?.... ಇಡೀ ರಂಗಭೂಮಿಗೆ ತಮ್ಮ ಜೀವನ ಅರ್ಪಣೆ ಮಾಡಿಕೊಳ್ಳೋ ಅಂಥವರು ಹೊಸಪೀಳಿಗೆಯಲ್ಲಿ ಕಾಣ್ತಾ ಇಲ್ಲ.

ರಂಗಗೀತೆಗಳನ್ನು ಹಾಡಿಸುವಾಗ, ಸಂಸ್ಕೃತಿ ಇಲಾಖೆಯವರು ವಿದ್ಯಾವಂತರನ್ನು ಕರೆಸಿ ಹಾಡಿಸಿದರು. ಅದೇ ಗೀತೆಗಳನ್ನು ನಮ್ಮ ಕಲಾವಿದರನ್ನು ಕರೆಸಿ, ಅವರಿಗೆ ಬಂದಷ್ಟೆ ಆಗಲಿ, ರಂಗಗೀತೆಗಳನ್ನು ಈ ಥರ ಹಾಡ್ತಾರೆ ಅಂತ ಕಲಾವಿದರಿಂದಲೇ ಹಾಡಿಸಿದ್ದರೆ ನಮಗೊಂದು ಸಮಾಧಾನ ಇರ್ತಿತ್ತಲ್ಲ? ಅದನ್ನು ಮಾಡಲಿಲ್ಲ ಅವರು. ಬಲ್ಲವರು ಹಾಡಬಹುದು. ಬಾರದೇ ಇದ್ದವರು ಏನು ಹಾಡೋಕೆ ಸಾಧ್ಯ ಅನ್ನೋದನ್ನ ತೋರಿಸಿದರೇ ವಿನಃ, ಕಲಿಸೋ ಪ್ರಯತ್ನ ಮಾಡಲಿಲ್ಲ ಇವರು. ನಾವು ರಂಗಗೀತೆ ಹಾಡುವಾಗ ಆ ಗೀತೆಯ ಸಂದರ್ಭ, ಸನ್ನಿವೇಶ, ಭಾವವನ್ನು ತುಂಬಿ ಹಾಡುವ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದೀವಿ. ಈಗಿನವರು ಹಾಗೆ ಹಾಡೋ ಪ್ರಯತ್ನ ಮಾಡ್ತಾ ಇಲ್ಲ. ಆ ಅಭಿಲಾಷೆ ಅವರಿಗೆ ಇಲ್ಲ. 'ಪೌರಾಣಿಕ ನಾಟಕ ಬೋರ್.... ಅವೆಲ್ಲ ಹಾಕಿಕೊಂಡು ಯಾರು ಹಾಡ್ತಾರೆ? ನಮಗೆ ಸುಸ್ತಾಗುತ್ತದೆ. ಸಾಮಾಜಿಕ ನಾಟಕ ಆಡಿ ಯಾವುದೋ ಚಿತ್ರಗೀತೆಯನ್ನು ಹಾಡಿ ಹೋಗ್ತೀವಿ' ಅನ್ನೋ ಕಲಾವಿದರೂ ಇದ್ದಾರೆ.

★ ★ ★

ನನ್ನನ್ನ ಎಲ್ಲ ಕಡೆ ಹಳೆಕಲಾವಿದೆ ಅಂತ ತುಂಬ ಗೌರವದಿಂದ ಕಾಣ್ತಾರೆ. ಆಮೇಲೆ ಇದರಲ್ಲೇ ಈಯಮ್ಮ ತನ್ನ ಜೀವನಾನ ಮುಡಿಪಾಗಿಟ್ಟು ನಡಿತಿದಾರೆ ಅಂತ ಜಾಸ್ತಿ ಗೌರವ ಕೊಡ್ತಿದಾರೆ. ಬಾಕಿಯವರು ತಮ್ಮ ವೈಯಕ್ತಿಕ ಜೀವನಾನ ರಂಗದಿಂದ, ಜನರ ಹತ್ತಿರ ಹೋಲಿಸಿಕೊಂಡು ಹೊಂದಿಕೆ ಮಾಡಿಕೊಂಡಿರೋದರಿಂದ ರಂಗದ ದೃಷ್ಟಿಯಿಂದ ನೋಡಿದಾಗ, ಹೆಣ್ಣು ಅನ್ನೋ ದೃಷ್ಟಿಯಿಂದ ನೋಡ್ತಾ ಇರೋದರಿಂದ ರಂಗಭೂಮಿಗೆ ಅದು ಏಟೇ ಆಗ್ತಾ ಇದೆ. ನಾವು ವೈಯಕ್ತಿಕವಾಗಿ ಏನಾದರೂ ಮಾಡೋಣ. ನಮ್ಮನ್ನು ಸ್ಟೇಜ್‌ನಲ್ಲಿ ಕಲಾವಿದೆ ಅಂತ ಗೌರವಿಸಿ ಕರಕೊಂಡು ಬಂದಿರುವಾಗ ನಾವು ಅದನ್ನು ಉಳಿಸಿಕೊಂಡು ಹೋಗೋ ಅಂಥ ವಿಧಾನ ಕಲಾವಿದರ ಮನೋಭಾವನೇಲಿ ಇಲ್ಲದಿದ್ದರೆ ಅದನ್ನು ಉಳಿಸೋದು ಹ್ಯಾಗೆ?

★ ★ ★

ಮನೆಯಲ್ಲಿ ನೋಡೋದಕ್ಕೆ ಟಿವಿ ಅಂಥವು ಸಿಕ್ಕಿರುವುದರಿಂದ ಕಷ್ಟಪಟ್ಟು ಮೂರು ಮೂರು ಗಂಟೆ ಈ ವೃತ್ತಿರಂಗದ ನಾಟಕ ನೋಡೋ ಅಷ್ಟು ತಾಳ್ಮೆ ಜನರಲ್ಲಿ ಉಳಿತಾ ಇಲ್ಲ. ಮೊದಲಿನಷ್ಟು ತುಂಬಿ ತುಂಬಿ ಬರುವಂಥ ಜನರ ಸಂಖ್ಯೆಯೂ ಕೊರತೆ ಆಗ್ತಾ ಇದೆ - ಇದು ನಿಜ. ಹಳ್ಳಿಗಳಲ್ಲಿ ಬಯಲಿನಲ್ಲಿ ಆಡ್ತೀವಿ ಅಂದಾಗ ದುಡ್ಡೇನೂ ಕೊಡೋ ಹಾಗಿಲ್ಲ ಅಂತ ಭರ್ತಿಯಾಗಿ ಜನ ಬರ್ತಾರೆ ವಿನಃ ಬಳ್ಳಾರಿಯಂಥ ಕಡೆ ವೃತ್ತಿ ನಾಟಕಗಳು ನಡಿತಾ ಇವೆ ಅಂದರೆ ಟಿಕಿಟು ತಗೊಂಡು ಬರೋ ಅಂಥ ಜನಾನೇ ಇಲ್ಲ. ಹವ್ಯಾಸಿಗಳು ಮಾಡ್ತಾ ಇರುವಾಗ ತಮ್ಮ ತಮ್ಮ ಬಂಧುಗಳನ್ನು ಕರೆದು ನೋಡೋವರು ಇರೋ ಹಾಗೆ ಆಗಿದೆ. ಅವರ್ಥವರ 'ಖುಷಿಗಾಗಿ ಬರ್ತಾರೆ' ವಿನಃ ಹವ್ಯಾಸಿಗಳಲ್ಲಿ ಇದನ್ನು ಗಳಿಸಬೇಕು ಅನ್ನೋ ಮನೋಭಾವನೆ ಇಲ್ಲ. ಭವಿಷ್ಯವಂತೂ ವೃತ್ತಿರಂಗದ ಬಗೆಗೆ ಭಯಾನಕವಾಗಿ ಕಾಣಿಸ್ತಾ ಇದೆ. ಅನುಭವಸ್ತರೇ ಇದನ್ನು ಬಿಟ್ಟು ದೂರ ಸರೀತಾ ಇದಾರೆ ಅಂದಮೇಲೆ ಉಳಿದವರು ಏನು ಮಾಡಲಿಕ್ಕೆ ಸಾಧ್ಯ?

■ ಸುಭದ್ರಮ್ಮ ಮನ್ಸೂರ್

ಹೊಸಪೀಳಿಗೆಗೆ ಟಿವಿಯಲ್ಲಿ ನಮ್ಮ ಮುಖ ಕಾಣಿಸಿದರೆ ಸಾಕು, ಸ್ಟೇಜ್‌ನಲ್ಲಿ ನಾವು ಹೆಚ್ಚು ಮಾಡೋದು ಬೇಡ, ಅನ್ನುವವರನ್ನು ಸಾಕಷ್ಟು ಜನರನ್ನು ನೋಡಿದೀನಿ. ನಾನು ಚಿಕ್ಕವಳಿದ್ದಾಗ ಎಷ್ಟೆಷ್ಟೋ ಕಂಪನಿಗಳಿದ್ದವು! ಊರೂರಲ್ಲಿ ಕಂಪನಿಗಳಿದ್ದವು. ಈಗ ಬೆರಳೆಣಿಕೆಯಷ್ಟು ಮಾತ್ರ ಉಳಿದಿವೆ. ಗುಡಿಗೇರಿ, ಚಿಂದೋಡಿ, ಅರಿಶಿನಗೋಡಿ ಅವರಂಥವು. ಇವರ ಕಂಪನಿಗಳು ಬಳ್ಳಾರಿಗೆ ಬಂದಾಗ ಕಲೆಕ್ಷನ್ ಇಲ್ಲ ಅಂದಮೇಲೆ ನೂರಾರು ಜನರನ್ನು ಕಟ್ಟಿಕೊಂಡು ಅವರು ಕಂಪನಿ ನಡೆಸಬೇಕು ಅಂದರೆ ಅದು ಕಷ್ಟ ತಾನೆ? ಜನ ಏನು ಪ್ರೋತ್ಸಾಹ ಕೊಡ್ತಾ ಇದಾರೆ ಅಂತ ಕಂಪೆನಿಗಳು ನಡೀಬೇಕು? ಈಗ ಮುಂದುವರಿದ ಕಾಲದಲ್ಲಿ ನಾವು ಹಿಂದೆ ಎಳೀತಿವಿ ಅಂದರೆ ಬರಲಿಕ್ಕೆ ಸಾಧ್ಯವೇ ಈ ಜನ? ಯಾವುದೇ ಆಗಲಿ ವಿಮರ್ಶೆ ಜಾಸ್ತಿ ಮಾಡ್ತಾರೆ. ಆ ವಿಷಯಾನ ಮನಸಾರೆ ಒಪ್ಪಿಕೊಳ್ಳೋದಕ್ಕೆ ಇಷ್ಟಪಡ್ತಾ ಇಲ್ಲ. ಏನು ಮೂಢ ಭಾವನೆಯಿಂದ ನಾಟಕ ಆಡ್ತಾ ಇದ್ದರು. ನೋಡ್ತಾ ಇದ್ದರು. ಜನರು, ಕಲಾವಿದರು ಸ್ಪಂದಿಸುತಿದ್ದರು ಅನ್ನೋ ಒಂದು ಸಂತೋಷದಲ್ಲಿ ನಾಟಕಗಳ ಮನೋರಂಜನೆ ಹಿಂದೆ ನಡೀತಿತ್ತು. ಇವಾಗ ವಿಮರ್ಶೆಗೆ ನಿಂತ ಮೇಲೆ ನಾಟಕ ಆಡ್ತಾರೆ ಹ್ಯಾಗೆ? ಅಂತೆಕಂತೆ ಆಗಿ ಬಿಡ್ತಾ ಇದೆಯಲ್ಲಾ ವಿಷಯಗಳು. ■



ದೀಪಾವಳಿ ಹಬ್ಬದ ಶುಭಾಶಯಗಳು

# ಶ್ರೀ ಪ್ರೇಮನಾಥ ಖೂಬಾ

## ಮಾಜಿ ಮಹಾಪೌರರು ಹಾಗೂ ಬಿಜೆಪಿ ಧುರೀಣರು



ಅಧ್ಯಕ್ಷರು :
ಗುಲಬರ್ಗಾ ತಾಲ್ಲೂಕಾ
ಕೈಗಾರಿಕಾ ಕಸಬುದಾರರ
ಸಹಕಾರ ಸಂಘ

ಮಾಜಿ ನಿರ್ದೇಶಕರು :
ಬಸವೇಶ್ವರ ಸಹಕಾರಿ ಬ್ಯಾಂಕ್

- ಖೂಬಾ ಕಾಂಪ್ಲೆಕ್ಸ್
- ಸಂಗಮ್ ಬಾರ್



**ನಂ. 1-9/ಬಿ1, ಖೂಬಾ ಕಾಂಪ್ಲೆಕ್ಸ್, ಮುಖ್ಯ ರಸ್ತೆ,**
**ಗುಲಬರ್ಗಾ, ಫೋನ್ : 21830.**



# ಹವ್ಯಾಸಿ ರಂಗಭೂಮಿ ಹೊಸದಾರಿಯತ್ತ

ತುಘಲಕ್ 1964ರಲ್ಲೇ ಬರೆದಿದ್ದರೂ ಅದರ ಸೀರಿಯಸ್ ಪ್ರೊಡಕ್ಷನ್ ಶುರುವಾದದ್ದು 1970ರ ನಂತರ. ಅಲ್ಲಿ ತನಕ ಸರಿಯಾದ ನಿರ್ದೇಶಕರಿರಲಿಲ್ಲ. ಇದೇ ಹೊತ್ತಿಗೆ ನಮ್ಮಲ್ಲಿ ರಂಗಮಂದಿರಗಳ ಕಲ್ಪನೆ ಬೆಳೀತು. ಮೊದಲು ಚಿಕ್ಕ ಕೋಣೆಗಳಲ್ಲಿ ಆಗ್ತಿತ್ತು. ಅದಕ್ಕೆ ಅನುಕೂಲಗಳು ಇರ್ತಿರಲಿಲ್ಲ. ರವೀಂದ್ರ ಕಲಾಕ್ಷೇತ್ರದ ಜೊತೆಯಲ್ಲೇ ರಂಗ ಮಂದಿರ ಕೂಡ ಮುಖ್ಯವಾದದ್ದು ಅನ್ನೋ ಕಲ್ಪನೆ ನಮಗೆ ಬಂತು.



■ ಸುರೇಶ್ ಅನಗಳ್ಳಿ

**ನ**ಮ್ಮ ಹವ್ಯಾಸಿ ರಂಗಭೂಮಿಯನ್ನು ಮೂರು ಘಟ್ಟಗಳಾಗಿ ಒಡೆದುಕೊಳ್ಳೋದಾದರೆ; ಒಂದು 1918ರಿಂದ 70ರವರೆಗಿನ ಒಂದು ಘಟ್ಟ. ಅಂದರೆ ಕಾಲೇಜುಗಳಲ್ಲಿ ಶುರುವಾದಂಥ ನಾಟಕಗಳು; ಕಂಪನಿ ನಾಟಕಗಳಿಗಿಂತ ಪರದೆ-ಸೀನರಿಗಳಿಂದ ಹೊರತಾದಂಥ ಒಂದು ಸಣ್ಣ ಮನೆಯ ಚೌಕಟ್ಟಿನಲ್ಲಿ ನಡೆಯುವಂಥ ನಾಟಕಗಳು. 1918ನ್ನೇ ಯಾಕೆ ಹೇಳ್ತೀದಿನಿ ಅಂದರೆ ಕನ್ನಡದಲ್ಲಿ ಅಮೆಚೂರ್ ಡ್ರಮೆಟಿಕ್ ಅಸೋಸಿಯೆಷನ್‌ನವರು ಕಾರ್ಯಪ್ರವೃತ್ತರಾದಂಥ ವರ್ಷ ಇದು. ಅದನ್ನು ಒಂದು ಮೈಲಿಗಲ್ಲಾಗಿ ಇಟ್ಟುಕೊಂಡು ಮುಂದಿನ ಬೆಳವಣಿಗೆ ಗುರುತಿಸೋದಾದರೆ 1970ರ ತನಕ ಅನೇಕ ತಂಡಗಳು, ಹವ್ಯಾಸಿಯಾಗಿ ಟೈಂ ಇದ್ದಾಗ, ಲೋಲುಪತೆಗೋಸ್ಕರ, ತೆವಲಿಗೋಸ್ಕರ ಮಾಡಿಕೊಳ್ಳುತಿದ್ದಂಥ ಆ ರಂಗಭೂಮಿಯಲ್ಲಿ 'ರವಿ ಕಲಾವಿದರು'. ಅಂಥ ಕೆಲವು ಒಳ್ಳೆ ತಂಡಗಳು.ಬಂದದ್ದಿದೆ. ಅದರ ದೊಡ್ಡ ಡೆವಲಪ್‌ಮೆಂಟ್ ಕೈಲಾಸಂ. ಅವರು ಸಾಂಸಾರಿಕ ನಾಟಕಗಳಿಗೆ, ಕೂಡು ಕುಟುಂಬದ ಒಳಗೆ ನಡೆಯುವಂಥ ಮಧ್ಯಮ ವರ್ಗದ ಕಥೆಗಳನ್ನಿಟ್ಟುಕೊಂಡು ನಾಟಕ ಮಾಡುತ್ತಾ ಇದ್ದರು. ಇದಕ್ಕಿಂತ ಕಳಪೆ ನಾಟಕಗಳೂ ಇವೆ. ಕಾಲೇಜುಗಳ ವಾರ್ಷಿಕೋತ್ಸವ ಸಂದರ್ಭಗಳಲ್ಲಿ 'ಕುರುಕ್ಷೇತ್ರ'ದಂಥವನ್ನು ಮಾಡಕ್ಕೆ ಸಾಧ್ಯ ಇರಲಿಲ್ಲ. ಮತ್ತೆ ಯುರೋಪ್‌ನಲ್ಲಿ ಬರ್ನಾಡ್ ಷಾ ಅಂಥವರು ಫೇಮಸ್ ಆಗಿದ್ದರು. ನಮ್ಮಲ್ಲಿ ಪಕ್ಕಾ ಎಪಿಕ್ ಕಲ್ಪನೆ ನಾಟಕಗಳೇ. ಬಯಲಾಟ, ಯಕ್ಷಗಾನ, ಕಂಪನಿ ಎಲ್ಲರಿಂದ ಎಪಿಕ್ ಸ್ಟ್ರಕ್ಚರ್‌ನಲ್ಲೆ ಇದ್ದಂಥವು. ಆದರೆ ಇದು ಒಂದು ಕೋಣೆಯೊಳಗೆ ನಡೆಯೋ ಅಂಥದು. ಆ ಥರ ನಾಟಕಗಳು ಈ ರಂಗಭೂಮಿ ಒಳಗೆ ಆದವು. ನಾಟಕ ಮೊದಲು ಬರೆದರು ಆಮೇಲೆ ಆಡಿದರು ಅಂತಲ್ಲ. ಈ ಥರದ ಕಾಲೇಜುಗಳಲ್ಲಿ ನಾಟಕ ಆಡುವ ಪ್ರವೃತ್ತಿ ಒಟ್ಟೊಟ್ಟಿಗೇ ಬೆಳೆದುಕೊಂಡು ಬಂತು. ಇದರಲ್ಲಿ ನಗರದಲ್ಲಿ ಇದ್ದಂಥ ರವಿ ಕಲಾವಿದರು ಅಂಥವರು ಸೀರಿಯಸ್ ಆಗಿ ಇದನ್ನು ಶುರು ಮಾಡಿದರು; 1970ರ ಮೊದಲಿನ ಘಟ್ಟ ಇದು.

ಕೈಲಾಸಂ ನಂತರದ ಘಟ್ಟದ ಕೊಂಡಿಯಾಗಿ ಶ್ರೀರಂಗರನ್ನು ಹೆಸರಿಸಬಹುದು ಇವರು ಕೈಲಾಸಂ ಯುಗದ ಜೊತೆಗೂ ಇದ್ದವರು. ಮುಂದೆ ಕನ್ನಡ ರಂಗಭೂಮಿ ಹೊಸ ದಾರಿ ಹುಡುಕಿಕೊಂಡದ್ದಕ್ಕೂ ಕಾರಣೀಭೂತರು. ಅರ್ಥಪೂರ್ಣವಾದ ಸ್ಕ್ರಿಪ್ಟ್‌ಗಳನ್ನು ಪ್ರೊಫೆಷನಲ್ ಆಗಿ ಅದನ್ನು ಪ್ರೆಸೆಂಟ್ ಮಾಡೋ ವಿಧಾನ ಬಂತು. ರಿಹರ್ಸಲ್‌ನಲ್ಲಿ ಒಂದು ಶಿಸ್ತು, ಆಮೇಲೆ ನಟರನ್ನು ಒಳ್ಳೊಳ್ಳೆಯವರನ್ನು ಆಯ್ಕೆ ಮಾಡಿಕೊಂಡು ಒಂದು ಹೊಸ ಟ್ರೆಂಡ್ ಬಂತು. ಅತ್ಯುತ್ತಮ ನಾಟಕಗಳು, ಅತ್ಯುತ್ತಮ ನಟರನ್ನು ತಗೊಂಡು ಅದಕ್ಕೆ ರಿಹರ್ಸಲ್ ಪ್ರೋಸೆಸ್ ಅಂತ ಪಕ್ಕಾ ಮಾಡಿಕೊಂಡು ಹಗಲೂ ರಾತ್ರಿ ರಿಹರ್ಸಲ್ ಮಾಡಿ ಬೆಳೆದುಕೊಂಡ ಹವ್ಯಾಸಿ ರಂಗಭೂಮಿ. ಹವ್ಯಾಸಿ ಅನ್ನೋದಕ್ಕಿಂತ ಅದೆ ಪ್ರೊಫೆಷನಲ್ ಆಟಿಟ್ಯೂಡ್ ಅಂತ ಬೆಳೆಸಿಕೊಂಡರು. ಇಲ್ಲಿ ನಿರ್ದೇಶಕರು ಪ್ರೊಫೆಷನಲ್ ಆಗೇ ಇದ್ದರು. ಆದರೆ ಅದರ ನಟರು ಮಾತ್ರ ಹವ್ಯಾಸಿಗಳೇ. ನಿರ್ದೇಶಕರು ಪ್ರೊಫೆಷನಲ್ ಆಗಿದ್ದರಿಂದ ಎಲ್ಲ ಥರದ ನಾಟಕಗಳನ್ನು ಆಯ್ಕೆ ಮಾಡಿಕೊಂಡರು. ಇವರು ಬಂದ ಮೇಲೆ ಗ್ರೀಕ್, ಷೇಕ್ಸ್‌ಪಿಯರ್, ಬ್ರೆಕ್ಟ್, ಇಂಡಿಯಾದ ಬೇರೆ ಬೇರೆ ಭಾಗದ ನಾಟಕಗಳೂ ಕನ್ನಡಕ್ಕೆ ಬಂದವು. ಇದಕ್ಕೆ ಸಂವಾದಿಯಾಗಿ ನಟರೂ ಕೂಡ ಇಕ್ವ್ಯೇಟ್ ಆದರು. ಅಂದರೆ ಒಬ್ಬನೇ ನಟ ಗೆಲಿಲಿಯೋ ಮಾಡಿದರೆ ಅದೆ ನಟ ಮುಂದೆ ತುಘಲಕ್ ಮಾಡಬಹುದು. 'ಸಂಗ್ಯಾ ಬಾಳ್ಯಾ' ದಲ್ಲಿ ಈರ್ಯಾ ಪಾತ್ರ ಮಾಡೋದು ಬಂತು. ನಟ ಇಷ್ಟೆಲ್ಲದಕ್ಕೂ ತೆರೆದುಕೊಳ್ಳುವಂಥ ಪರಿಸ್ಥಿತಿ ಮುಂದಿನ ಘಟ್ಟದಲ್ಲಿ ಬಂತು. 1970ರ ನಂತರದ ಬೆಳವಣಿಗೆ ಇದು. ವಿಶಾಲವಾಗಿ ತೆರೆದುಕೊಂಡ ಅವಧಿ ಇದು. ನಾಟಕಕ್ಕೆ ಇಂಟರ್‌ಪ್ರಿಟೆಷನ್ ಸಾಧ್ಯ ಅನ್ನೋದನ್ನು ರಂಗಭೂಮಿ ಕಂಡುಕೊಂಡದ್ದು ಈ ಕಾಲದಲ್ಲೇ. ಆರ್ಥಿಕವಾಗಿಯೂ ಟಿಕೆಟ್ ಮೂಲಕ ನಾಟಕ ಮಾಡಬಹುದು ಅನ್ನೋದನ್ನೂ ಈಗಲೇ ಕಂಡುಕೊಂಡರು.

1970ರ ನಂತರದ್ದನ್ನು ಪಕ್ಕಾ ಹವ್ಯಾಸಿ ಅಂತ ಹೇಳಲಿಕ್ಕೆ ಆಗೋದಿಲ್ಲ. ಯಾವುದೋ ಡ್ರೆಸ್, ಮೈಕ್, ಛೇರ್‌ಗಳನ್ನು ಒಂದು ದಿವಸದ ಮಟ್ಟಿಗೆ ಬಾಡಿಗೆ ತಗೊಂಡು ಮುಗಿಸೋ ಅಂಥದಾಗಲಿಲ್ಲ. ರಿಪೀಟ್ ಷೋ ಆಗಬೇಕು ಮತ್ತು ಹೆಚ್ಚು ಕಲಾತ್ಮಕತೆಗೆ ಒತ್ತುಕೊಡಬೇಕಾದ ಅಂಶವನ್ನು ಹುಡುಕಿಕೊಳ್ತು. ಈ ಹೊತ್ತಿನಲ್ಲಿ ನಾಟಕ ರಚನೆಯಲ್ಲಿ ಕೂಡ ಕಾರ್ನಾಡ್, ಕಂಬಾರ, ಲಂಕೇಶ್ ಮುಂತಾಗಿ ಸೀರಿಯಸ್ ಆದ ಅಟೆಂಪ್ಟ್‌ಗಳು ಆದವು. ಕನ್ನಡದ ಮುಂಚೂಣಿ ನಾಟಕಕಾರರೆಲ್ಲ ಬಂದದ್ದು ಈ ಪೀರಿಯಡ್‌ನಲ್ಲಿ. ಯೂನಿವರ್ಸಿಟಿಗಳ ಪ್ರೊಫೆಸರ್ ಇಂಟಲೆಕ್ಚುಯಲ್‌ಗಳೆಲ್ಲ ಈ ಥರದ ಶ್ರೇಷ್ಠ ಕೃತಿಗಳ ಸೃಷ್ಟಿಗೆ ತೊಡಗಿದರೆ ಬಿ.ವಿ.ಕಾರಂತರಂಥವರಿಂದ ಆ ನಾಟಕಗಳನ್ನು ಇಂಟರ್‌ಪ್ರಿಟ್ ಮಾಡೋದು ಹೇಗೆ ಅಂತ ಗೊತ್ತಾಯ್ತು. ತುಘಲಕ್ 1964ರಲ್ಲೇ ಬರೆದಿದ್ದರೂ ಅದರ ಸೀರಿಯಸ್ ಪ್ರೊಡಕ್ಷನ್ ಶುರುವಾದದ್ದು 1970ರ ನಂತರ. ಅಲ್ಲಿ ತನಕ ಸರಿಯಾದ ನಿರ್ದೇಶಕರಿರಲಿಲ್ಲ. ಇದೇ ಹೊತ್ತಿಗೆ ನಮ್ಮಲ್ಲಿ ರಂಗಮಂದಿರಗಳ ಕಲ್ಪನೆ ಬೆಳೀತು. ಮೊದಲು ಚಿಕ್ಕ ಕೋಣೆಗಳಲ್ಲಿ ಆಗ್ತಿತ್ತು. ಅದಕ್ಕೆ ಅನುಕೂಲಗಳು ಇರ್ತಿರಲಿಲ್ಲ. ರವೀಂದ್ರ ಕಲಾಕ್ಷೇತ್ರದ ಜೊತೆಯಲ್ಲೇ ರಂಗ ಮಂದಿರ ಕೂಡ ಮುಖ್ಯವಾದದ್ದು ಅನ್ನೋ ಕಲ್ಪನೆ ನಮಗೆ ಬಂತು.

1970ರ ನಂತರ ದೊಡ್ಡ ಸ್ಪೇಸ್‌ಗಳಿಗೆ ನಿರ್ದೇಶಕರನ್ನು ಮೊದಲುಗೊಂಡು ಎಲ್ಲರೂ ಗಮನ ಕೊಟ್ಟರು. ಕಾರಂತರು ಹೆಗ್ಗೋಡಿಗೆ ಹೋದಾಗ ಅಲ್ಲಿ ರಂಗಮಂದಿರಕ್ಕೆ ಒಂದು ದೊಡ್ಡ ಕಟ್ಟೆ ನಿರ್ಮಾಣ ಮಾಡಿ ಅಲ್ಲಿ ನಾಟಕ ಮಾಡಿದರು. ಹೊಸ ಕೃತಿ ಕೊಡುವಾಗ ಹೊಸ ಸ್ಪೇಸ್ ಕೂಡ ಬೇಕಾಗುತ್ತೆ. ಹೀಗೇ ಉಡುಪಿಯಲ್ಲಿ ರಂಗಮಂದಿರ ನಿರ್ಮಾಣ ಆಯ್ತು. ಇದೇ ಥರ ಅನೇಕ ಕಡೆ ರಂಗಮಂದಿರ ಬೇಕು ಅನ್ನುವ ಕಾನ್ಸೆಪ್ಟ್ ಬಂತು. 1980ರ ನಂತರ ಈ ಟ್ರೆಂಡ್ ಇನ್ನೂ ಹೆಚ್ಚು ಸೀರಿಯಸ್ ಆಗಿ ಮುಂದುವರಿಯಿತು. ಈ ಅವಧಿ ವಿಚಿತ್ರ ಸನ್ನಿವೇಶದ್ದು. ಇಲ್ಲಿ ಡೀ ಸೆಂಟ್ರಲೈಸ್ (ವಿಕೇಂದ್ರಿಕರಣ) ಆಗ್ತಾ ಇದೆ. ಹಳ್ಳಿ ಹಳ್ಳಿಗಳಲ್ಲಿ ಈ ಥರದ ನಾಟಕ ಶುರುವಾದವು. ಜೊತೆಗೆ ಹೆಚ್ಚು ಬಂಡವಾಳ ತೊಡಗಿಸುವ ಪ್ರವೃತ್ತಿಯೂ ಬಂತು. ಅತಿ ಕಡಿಮೆ ಬಜೆಟ್‌ನಲ್ಲಿ ನಾಟಕ ಮಾಡುತ್ತಿದ್ದ ಸಂದರ್ಭದಲ್ಲೇ 'ನೀನಾಸಂ' 'ರಂಗಾಯಣ' ದಂಥವರು ಹೆಚ್ಚು ಹಣವನ್ನು ತೊಡಗಿಸಿ ನಾಟಕ ಮಾಡುವಂಥ ಎರಡು ಥರದ ವಿರುದ್ಧ ದಿಕ್ಕಿನ ನಾಟಕ ರಂಗಭೂಮಿ ಶುರುವಾಯ್ತು. ಇದರಿಂದ ಸಾಧಕವೂ ಇದೆ, ಬಾಧಕವೂ

ಇದೆ. 1980ರ ತನಕ ಲೀಡಿಂಗ್‌ನಲ್ಲಿದ್ದವರು ಹಿಂದೆ ಸರಿದು ಸ್ಪಾನ್ಸರಿಂಗ್ ಹಂತಕ್ಕೆ ನಿಂತರು. ಉಡುಪಿ ರಂಗಭೂಮಿ ಇದಕ್ಕೆ ಒಂದು ದೃಷ್ಟಾಂತ.

1980ರ ಸುಮಾರಿಗೆ ರೆಪರ್ಟರಿ ಆರಂಭವಾದರೆ 1985ರ ಸುಮಾರಿಗೆ ಶಾಲೆಗಳು ಬಂದವು. 1980ರಿಂದ 1990ರವರೆಗೆ ಕಾರ್ನಾಡ, ಕಂಬಾರರಂಥವರು ಹಿಂದೆ ಸರಿದು ಸಿನಿಮಾ ಅಂಥದರಲ್ಲಿ ತೊಡಗಿದ್ದರು. ಇದು ಹೊರಗಿನಿಂದ ನೋಡಿದಾಗ ಹವ್ಯಾಸಿ ರಂಗಭೂಮಿ ಹಿಂದೆ ಸರಿದಿದೆ ಅಂತ ಕಂಡರೂ ನಿಜವಾದ ಅರ್ಥದಲ್ಲಿ ಹಾಗಾಗಿಲ್ಲ. ನಾಲ್ಕೈದು ಶಾಲೆಗಳು ಶುರುವಾದವು. ನಾಲ್ಕೈದು ರೆಪರ್ಟರಿಗಳು ಶುರುವಾದವು. ಹಳ್ಳಿಗಳಲ್ಲಿಯೂ ನಾಟಕಗಳು, ಹೊಸ ರಂಗಮಂದಿರಗಳು ಹುಟ್ಟಿಕೊಂಡವು. ಹೊನ್ನಾವರದಂಥ ಊರಿನಲ್ಲಿ 40 ಅಡಿ ಅಗಲದ ಸ್ಟೇಜ್ ಸಿಗುತ್ತೆ. ಕುಂದಾಪುರದಲ್ಲಿ ಒಂದು ಸ್ಕೂಲೇ ಶುರುವಾಗಿದೆ. ಅಲ್ಲಿ ಕಾಲೇಜಿನಲ್ಲಿ ರಂಗಭೂಮಿಯನ್ನು ಒಂದು ಕೋರ್ಸ್ ಆಗಿ ತಗೊಂಡಿದ್ದಾರೆ. ಮಂಚಿಕೇರಿಯಲ್ಲಿ ಸುಸಜ್ಜಿತವಾದ ಆಡಿಟೋರಿಯಂ ಇದೆ. ತುಮರಿಯಂಥ ಅತಿ ಕಡಿಮೆ ಜನಸಂಖ್ಯೆ ಇರುವಲ್ಲಿಯೂ ಸುಸಜ್ಜಿತ ರಂಗಭೂಮಿಯನ್ನು ಊರಿನವರೇ ಕಟ್ಟಿಕೊಂಡಿದ್ದಾರೆ. ನೀನಾಸಂನಂಥ ಕಡೆಯಿಂದ ಬಂದ ರಂಗ ಕರ್ಮಿಗಳು ನಾನೂರಕ್ಕೂ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಎನ್.ಎಸ್.ಡಿ.ಯಿಂದ ಬಂದವರು ಎಪ್ಪತ್ತಕ್ಕೂ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಇದಲ್ಲದೆ ಬೇರೆ ಬೇರೆ ಕಡೆಯಿಂದ ಬಂದವರೆಲ್ಲ ಸೇರಿ ಒಂದು ಸಾವಿರಕ್ಕಿಂತ ಹೆಚ್ಚಾಗಿ ರಂಗಭೂಮಿಯನ್ನು ಅಭ್ಯಾಸ ಮಾಡಿದವರು ಈಗ ಇದ್ದಾರೆ. ಹಿಂದೆಂದಿಗಿಂತ ಹೆಚ್ಚು ಆತ್ಮೀಯವಾಗಿ ಕನ್ನಡ ರಂಗಭೂಮಿ ಈಗ ಇದೆ ಅನ್ನೋದನ್ನ ಈ ಹಿನ್ನೆಲೆಗಳಿಂದ ಕಾಣಬಹುದು. ಪ್ರಸನ್ನ ಅಂಥವರು ಹಿಂದೆ ಸರಿದಿದ್ದಾಗ ಹೊಸ ನಿರ್ದೇಶಕರು ಬಂದಿದ್ದಾರೆ. ಹೊಸ ನಾಟಕಕಾರರಾಗಿ ಶಿವಪ್ರಕಾಶ್ ಬಂದಿದ್ದಾರೆ. ಈ ಅವಧಿಯಲ್ಲಿ, ಲಿಂಗದೇವರು ಹಳೇಮನೆ ಮತ್ತು ಮಂಗಳೂರಿನಂಥ ಕಡೆಯಿಂದ ಮಹಾಲಿಂಗ ಎಂಬುವವರು ಬಂದಿದ್ದಾರೆ. ಅವರ 'ಕೊಂಬಿನವರು' ನಾಟಕವನ್ನು ಸರಿಯಾಗಿ ಇನ್ನೂ ಗುರುತಿಸಲಾಗಿಲ್ಲ. 'ಕದಡಿದ ನೀರು' ನಂತರದ ಒಂದು ಮೇಜರ್ ನಾಟಕ ಅದು. ಹೀಗೆ ಹವ್ಯಾಸಿ ಹೊಸದಾರಿ ಈಗ ಹುಡುಕಿಕೊಂಡಿರೋದು ನಮ್ಮ ಮುಂದೆ ಇದೆ. ■

---

## ದುಬಾರಿ ಮದುವೆ

ಮನರಂಜನಾ ಜಗತ್ತಿನ ಸಾಮ್ರಾಟ ಕೆರ್ರಿ ಪ್ಯಾಕರ್ ಪುತ್ರನ ಮದುವೆ ಆಸ್ಟ್ರೇಲಿಯಾದಲ್ಲೇ ಇದುವರೆಗೆ ಅತ್ಯಂತ ಶ್ರೀಮಂತ ಮದುವೆ ಎನ್ನಲಾಗಿದೆ. ಮದುವೆಗೆ ಆರೂವರೆ ದಶಲಕ್ಷ ಡಾಲರ್ ಖರ್ಚು ಮಾಡಲಾಯಿತಂತೆ.

ಟಿವಿ ಚಾನೆಲ್ ಒಡೆಯ ಕೆರ್ರಿ ಪ್ಯಾಕರ್ ಒಂದು ದಿನದ ಕ್ರಿಕೆಟ್ ಪಂದ್ಯ, ರಾತ್ರಿ ಹಗಲಿನ ಪಂದ್ಯಗಳನ್ನು ಜಾರಿಗೆ ತಂದಾಗ ಜನ ನಕ್ಕಿದ್ದರು. ಆದರೆ ಅದೇ ಈಗ ಅತ್ಯಂತ ಜನಪ್ರಿಯ, ಲಾಭದಾಯಕ ಕೂಡ.

ಕೆರ್ರಿಯ ಮಗ ಜಾನ್‌ಪ್ಯಾಕರ್ ಮದುವೆ ಸ್ವಿಮಿಂಗ್ ಸೂಟ್ ಮಾಡೆಲ್ ಜೋಡಿ ಮೇಯರ್ಸ್ ಜೊತೆ ನಡೆದು, ರಿಸೆಪ್ಷನ್ನಿಗೆ ಖ್ಯಾತ ಗಾಯಕ ಜಾನ್ ಎಲ್ಟನ್‌ನಿಂದ ಆರ್ಕೆಸ್ಟ್ರಾ ಏರ್ಪಡಿಸಲಾಗಿತ್ತು.

ಪ್ಯಾಕರ್ ಎಷ್ಟೇ ಖರ್ಚು ಮಾಡಿದರೂ ಕೆಟ್ಟ ಹವಾಮಾನದ ಮಳೆ, ಗಾಳಿ ತಡೆಯುವುದು ಸಾಧ್ಯ ಆಗಲಿಲ್ಲವಂತೆ.

---

# ಸಿರಿಯವ್ವ



(ಗೊರವನಹಳ್ಳಿಯ ಅಜ್ಜಿ ಕಮಲಮ್ಮನವರಿಗೆ)

**ಕೆಟ್ಟ ಕನಸೊಂದರಲ್ಲಿ ಊರುತೊರೆದು ಹೊರಟಿರುವ**
**ಸಿರಿಯವ್ವನಿಗೆ ಕವಿಯ ಮೊರೆ :**

ಸಿರಿಯವ್ವ ಈ ಊರ ತೊರೆದ್ಯಾಕ್ಹೊಂಟವ್ವ
ಬರಡು ಜೀವ ನೀನು ಹೊಂಟೋದರೆ;
ಕರದ ತಾವರೆ ದೇವಿ ಸಿರದ ಮಲ್ಲಿಗೆ ದೇವಿ
ಕರುಣ ಇಲ್ಲದೆ ಹಿಂಗ್ಹೊಂಡುವರೆ?

ಸುಡುಗಾಡಲ್ಲಿ ಹೂತ, ಸುಟ್ಟ ದೇಹಗಳೆಲ್ಲ
ಕಡೆಮೊದಲಿಲ್ಲದೆ ಮೊರೆಯಿಕ್ಕಿವೆ;
'ಬಿಡಬ್ಯಾಡ ನಮ್ಮೂರ ಹೇ ಮೃಡಸೋದರಿ
ಗೊಡವೆ ದವಡೆಗೆ ನಮ್ಮನೆಲ್ಲಾ ದೂಡಿ'

ಹೊಂಟು ಹೋದರೆ ನೀನು ರಾಸು ನಾಶನವಾಗಿ
ಕಂಟಕವಾದಾವು ಹೂವು-ಹುಲ್ಲು;
ಸೊಂಟ ಕಡಿದುರುಳ್ಯಾವು ಚಂದದ ಮರಸಾಲು
ಗಂಟಲು ಬತ್ಯಾವು ಹಕ್ಕಿಗಳಿಗೆ

ಮೂಡುಪಡುವಲದ ಹೊನ್ನಯ್ಯ ಚೆಂಬಣ್ಣ
ಬಾಕಿ ಕರುಕಾಗುತ ಕಮರುವುವು;
ಮೋಡಗಳ ಕಪ್ಪೆಲ್ಲ ಬಿಳುಬಿಳುಚಾದಾವು.
ಓಡಿ ಹೋದವು ಮಳೆ ದಿಕ್ಕುಗೆಟ್ಟು

ದೀಪದ ಕುಡಿಯಲ್ಲಿ ಕೋಪ ಝುಗ್ಗೆಂದಾವು;
ಶಾಪ ತಗುಲಿ ಪುಣ್ಯವಂತರಿಗೆ
ಪಾಪದ ಖಂಡಗಳು ಪೊತ ಪೊತನೆ ಪುಟ್ಟಿ,
ಕಾಪಾಡುವೋರಿಲ್ಲ ಸಜ್ಜನರ

ಸುಖಗಳ ಒರತೆಗಳು ಬಾವಿ ಎದೆಯಲಿ ಬತ್ತಿ
ದುಕ್ಕದ ಗರಗಳು ಬಡಿಯುವುವು
ಮೊಕಕೆ ರಾವು ಹಿಡಿದು ಕಂಗಳು ಕುರುಡಾಗಿ
ಸಖಸಖಿ ದೂರ ಬಿರಿಯುವರು

ನೀನಿಲ್ಲವಾದರೆ ಧನವೆ ನಿಧನವು;
ಬೋನವೆ ನಂಜಾಗಿ ಕೊಲ್ಲುವುದು
ಕಾಣೆಯಾಗಿ ಕಿರುಗೂಸುಗಳ ತುಟಿಹವಳ
ಭಾನು ಕಕ್ಕುವ ಕೆಂಡ, ಚಂದ್ರ ಹಿಮ

ಏನು ಲೋಪವಾಯ್ತು ಯಾ ಪಾಪ ಎಸಗಿದೊ
ನೀನು ಶಾಪ ಕೊಟ್ಟು ಹೊಂಟು ನಿಂತೆ;
ಪ್ರಾಣ ಕಾಣುವ ಕೈಲಿ ಕೊಲೆಗಡುಕ ಕೈದುಗಳು
ನಾಣುಗೆಟ್ಹಿಂಗೇಕೆ ಅಂಜಿಸುವೆ?

ತಿದ್ದಿ ತೀಡುವ ತಾಯೆ ಒದ್ದು ಹೋದಾರೇನೆ
ಮುದ್ದಿನ ಮಕ್ಕಳ ಕಸವ ಮಾಡಿ?
ಸದ್ದಿಲ್ಲದ ದಿಗಿಲು ಜೀವಕಾವರಿಸಿದೆ
ದೊಡ್ಡ ಗುಣದ ತಾಯಿ ಮಾಫು ಮಾಡು

ಶಿವಲಿಂಗ ಗುರುವಿನ ಕರುಣದ ಸಿಸು ನಾನು
ಅವನ ಆಣೆಯಿಕ್ಕಿ ಬೇಡುವೆನು
ಶಿವೆ ಶಿರವ ಹರಕೊವ್ವ ಕೊಲ್ಲವ್ವ ಕಡಿಯುವ್ವ
ಬವಣೆಗೀಡಾಗಿಸಿ ಹೋಗಬೇಡ.



■ ಎಚ್.ಎಸ್. ಶಿವಪ್ರಕಾಶ್

ಸರ್ವರಿಗೂ ದೀಪಾವಳಿ ಹಬ್ಬದ ಶುಭಾಶಯಗಳು

# ಮಹಾನಗರ ಪಾಲಿಕೆ ಗುಲಬರ್ಗಾ



ಮಹಾಪೌರರು

ಶ್ರೀ ಜಿ.ಎಸ್. ರೆಹಮತ್





ಉಪ ಮಹಾಪೌರರು

ಶ್ರೀಮತಿ ಶಾರದ ಅಣ್ಣಾರಾವ್ ಕೋಡ್ಲಿ

## ಸರ್ವ ಸದಸ್ಯರು

1. ಧರ್ಮರಾಜ ದೇವಪ್ಪ
   ಅಧ್ಯಕ್ಷರು, ಕರ, ಹಣಕಾಸು ಮತ್ತು ಮೇಲ್ಮನವಿ ಸ್ಥಾಯಿ ಸಮಿತಿ
2. ಎಕ್ಬಾಲ ಅಹ್ಮದ Ex-Dy. Mayor
   ಅಧ್ಯಕ್ಷರು, ಸಾರ್ವಜನಿಕ ಆರೋಗ್ಯ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ
3. ಬಾಬುರಾವ ಚಂದ್ರಪ್ಪ
   ಅಧ್ಯಕ್ಷರು, ನಗರ ಯೋಜನೆ ಮತ್ತು ಅಭಿವೃದ್ಧಿ ಸ್ಥಾಯಿ ಸಮಿತಿ
4. ಶೇಖ್ ಯುನುಸ್ ಅಲಿ
   ಅಧ್ಯಕ್ಷರು, ಲೆಕ್ಕ ಸ್ಥಾಯಿ ಸಮಿತಿ
5. ಶ್ರೀಶೈಲ ರಾಮಚಂದ್ರ ಗುಬ್ಬಿ
6. ಶ್ರೀಮತಿ ತಹಸೀನ ಫಿರೋಜಖಾನ್
7. ಡಾ. ಸೋಮಶೇಖರ ಸಿ. ರೇವಣೆ
8. ನಾಸೀರ ಅಹ್ಮದ ಮಹ್ಮದಸಾಬ
9. ಸೈಯ್ಯದಗೌಸ್ (ಬಾಬಾ)
10. ಶ್ರೀಮತಿ ಕಸ್ತೂರಿಬಾಯಿ ಗೋಪಾಲಸಾ
11. ಶ್ರೀಮತಿ ಶರಣಮ್ಮ ಯಲ್ಲಪ್ಪ
12. ವಿನೋದ ಕೆ ಬಿ ಶಾಣಪ್ಪ
13. ರಯೀಸ ಜಂಹಾ
14. ಮಹ್ಮದ ಅಸ್ಲಮ್ ಎಂ. ಯುನುಸ್
15. ಸಯೀದಾ ಬೇಗಂ
16. ಮಹ್ಮದ ಅಬ್ದುಲ ಸಮದಖಾನ್
17. ಶ್ರೀಮತಿ ಫಹೀಮಬಾನು ಅಬ್ದುಲ ಸಲೀಮ್
18. ಹಬೀಬ್ ಖಾನ್
19. ಮಹಮ್ಮೂದ ಅಹ್ಮದ Ex. Mayor
20. ಮಹ್ಮದ ನಿಜಾಮುದ್ದೀನ್ ಗೋಲಾ
21. ಶಿವಕುಮಾರ ಬಿ. ಗಂಗಸಿರಿ
22. ಸೈಯ್ಯದ್ ಮೊಹಿಯೋದ್ದಿನ್ ಖಾದರಿ
23. ಅಸ್ಲಮ್ ಕಲ್ಯಾಣಕರ
24. ಶ್ರೀಮತಿ ಕಮಲಾಬಾಯಿ ಶಿವಾಜಿ
25. ಶ್ರೀಮತಿ ನಾಗವೇಣಿ ತಿಪ್ಪಣ್ಣಪ್ಪ
26. ಶ್ರೀಮತಿ ಜಗದೇವಿ ಸಿದ್ರಾಮಪ್ಪ ಹುದಲೂರ
27. ಮಿರ್ಜಾ ಕಾಜೇಂಬೇಗ್
28. ಅಸ್ಪಕ ಅಹ್ಮದ ಚುಲಬುಲ್
29. ಧರ್ಮಪ್ರಕಾಶ ಪಾಟೀಲ Ex. Mayor
30. ಶ್ರೀಮತಿ ನಾಗಮ್ಮ ಟೆಂಗಳಿ
31. ಪಿ.ಎಂ.ಮಣ್ಣೂರ
32. ಶ್ರೀಮತಿ ಓಜಾ ಛಾಯಾ
33. ವಜ್ರಕುಮಾರ ಕಿವಡೆ
34. ರಾಜೇಂದ್ರ ಪ್ರಸಾದ ತಿವಾರಿ Ex. Mayor
35. ಕಲ್ಯಾಣರಾವ ಶಿವಲಿಂಗಪ್ಪಾ
36. ಮಹಾಂತಗೌಡ ಕಾಶಿರಾಯ ಪಾಟೀಲ
37. ಸೂರ್ಯಕಾಂತ ಶಾಮರಾವ
38. ಶ್ರೀಮತಿ ಕಸ್ತೂರಿಬಾಯಿ ಶಿವಕುಮಾರ
39. ಸೈಯದ್ ಅಬ್ದುಲ ರಹಮಾನ Ex.Dy.Mayor
40. ವೆಂಕಟೇಶ್ ಬಿ. ಕುಲಕರ್ಣಿ
41. ಶ್ರೀಮತಿ ವಿಜಯಲಕ್ಷ್ಮಿ ನರಸಯ್ಯ
42. ಶ್ರೀಮತಿ ಗಂಗೂಬಾಯಿ ಬಿ. ವಳಕೇರಿ Ex.Mayor
43. ಬಾಬುಷಾ ಎಲ್. ಗಾಯಕವಾಡ
44. ಪೋಪಟಲಾಲ ಆರ್. ಉಪಾಧ್ಯ
45. ಶ್ರೀಮತಿ ಲಲಿತಾಬಾಯಿ ರೇವಣಸಿದ್ದಪ್ಪ
46. ಶ್ರೀಮತಿ ಶ್ರೀದೇವಿ ರಾಜೇಂದ್ರ ಗಿರಣಿ
47. ಶ್ರೀಮತಿ ಮಂಗಳಾ ಬಿ. ಕೊರಳ್ಳಿ
48. ಶರಣಬಸಪ್ಪ ಎಂ. ಕಾಟಾದಿ
49. ಮಹಾದೇವಿ ಸಿದ್ರಾಮಪ್ಪಾ ಕೆಸರಟಗಿ
50. ಮೊಹ್ಮದ ಜಾಹೇದ್ Ex.Mayor
51. ಮಲ್ಲಪ್ಪ ಹಬಿಶಾಳ Ex.Dy.Mayor
52. ಬಲವಂತ ಉದನೂರ
53. ಅವಿನಾಶ ಬಿ. ಕುಲಕರ್ಣಿ

ನಾಮ ನಿರ್ದೇಶಿತ ಸದಸ್ಯರು

1. ದಸ್ತಯ್ಯ ರುಕ್ಮಯ್ಯ ಕಲಾಲ
2. ಮಚ್ಚೇಂದ್ರನಾಥ ಮೂಲಗೆ
3. ದಶರಥ ವಡ್ಡರ
4. ಜ್ಞಾನ ಮಿತ್ರ
5. ಸೈಯ್ಯದ ಸಾಧಿಕ್ ಹುಸೇನ್

ಎಲ್.ಕೆ. ಬೀರಗೌಡರ
ಆಯುಕ್ತರು

# ನನ್ನ ಕಲ್ಪನೆಯಲ್ಲಿ ಸೌಂದರ್ಯ

## ಓದುಗರ ಅನಿಸಿಕೆ



ಸೌಂದರ್ಯ ಕೇವಲ ಬಾಹ್ಯವೇ ಅಥವಾ ಅಂತರಂಗಿಕವೇ? ನೋಡುವ ಕಣ್ಣಲ್ಲಿಯೇ ಸೌಂದರ್ಯವಿದೆ ಎಂದೂ ಹೇಳುವುದು ಕೇಳಿದ್ದೇವೆ. ಹಾಗೆ ನೋಡುವ ಕಣ್ಣು ಇನ್ನೂ ನಮ್ಮಲ್ಲಿ ಉಳಿದಿದೆಯೇ? ಇದೆಲ್ಲ ಜಿಜ್ಞಾಸೆಗೆ ಉತ್ತರ ನೀಡಿದ್ದಾರೆ ಓದುಗರು.

### ಅಂತರಂಗದ ಕಣ್ಣು ನೋಡಿದ್ದು



'ಸೌಂದರ್ಯ ಇರುವುದು ನೋಡುವವರ ಕಣ್ಣಲ್ಲಿ' ಎನ್ನುವ ಮಾತಿದೆ. ಅಂದರೆ ಪ್ರತಿಯೊಬ್ಬರೂ ಕೂಡ ಅವರವರ ದೃಷ್ಟಿಕೋನದಂತೆ ಸೌಂದರ್ಯದ ಸವಿಯನ್ನು ಸವಿಯುತ್ತಾರೆ.

ಕೆಲವರು ಕೇವಲ ಬಾಹ್ಯ ಸೌಂದರ್ಯಕ್ಕಷ್ಟೆ ಮಹತ್ವ ನೀಡುತ್ತಾರೆ. ಆದರೆ ಅದಕ್ಕಿಂತಲೂ ಮಿಗಿಲಾದ ಒಂದು ಸೌಂದರ್ಯವಿದೆ, ಅದು ನಮ್ಮ ಆಂತರ್ಯದಲ್ಲಿ ಹುದುಗಿರುವ ಅಂತರಂಗಿಕ ಸೌಂದರ್ಯ. ಉದಾಹರಣೆಗೆ ಒಂದು ಗುಲಾಬಿ ಹೂವನ್ನು ಕಂಡಾಗ, ಸಾಮಾನ್ಯವಾಗಿ ಆ ಹೂವನ್ನು ಎಲ್ಲರೂ ಇಷ್ಟಪಡುತ್ತಾರೆ. ಏಕೆಂದರೆ ಅದು ತನ್ನ ಬಾಹ್ಯ ಸೌಂದರ್ಯದಿಂದ ಎಲ್ಲರ ಮನಸ್ಸನ್ನೂ ತನ್ನತ್ತ ಸೆಳೆಯುತ್ತದೆ. ಆದರೆ ಅದೇ ಜಾಗದಲ್ಲಿ ಒಬ್ಬ ಕುರೂಪಿ ವ್ಯಕ್ತಿ ನಿಂತಾಗ ಎಲ್ಲರೂ ಆತನಿಂದ ದೂರ ಸರಿಯಲು ಬಯಸುತ್ತಾರೆ. ಏಕೆಂದರೆ ಆತ ಹೊರನೋಟಕ್ಕೆ ಸುಂದರವಾಗಿ ಕಾಣಿಸದಿರುವುದೇ ಅದಕ್ಕೆ ಕಾರಣವಾಗಿದೆ. ಆದರೆ 'ಸೌಂದರ್ಯ ಕಣ್ಣನ್ನು ಸೆಳೆದರೆ ಸಾಮರ್ಥ್ಯ ಆತ್ಮವನ್ನೇ ಸೆಳೆಯುತ್ತದೆ' ಎನ್ನುವಂತೆ ಅದೇ ವ್ಯಕ್ತಿ ಏನಾದರೂ ಮಹಾನ್ ಸಾಧನೆ ಮಾಡಿದರೆ ಆ ಮೂಲಕ ಇಡೀ ರಾಷ್ಟ್ರದ ಜನತೆಯ ಗಮನವನ್ನೇ ತನ್ನತ್ತ ಸೆಳೆದು ಅವರೆಲ್ಲರ ಹೃದಯದಲ್ಲಿ ತಾನು ಆರಾಧಕನ ಸ್ಥಾನವನ್ನು ಪಡೆಯಬಹುದು. ಆಗ ನಮಗೆ ಆತನ ಕುರೂಪವೂ ಸುಂದರವಾಗಿಯೇ ಕಾಣಿಸುತ್ತದೆ.

ಅಷ್ಟೆ ಏಕೆ? ತನ್ನ ಸ್ಫುರದ್ರೂಪಿ ಗಂಡನಾದ ಅರಸ ಯಶೋಧರ ಪಕ್ಕದಲ್ಲಿ ಮಲಗಿದ್ದರೂ, ಆನೆಲಾಯದಲ್ಲಿ ತನ್ನ ರಾತ್ರಿ ಕಳೆಯುವುದಕ್ಕೋಸ್ಕರ ಸಂಗೀತ ನುಡಿಸುತ್ತಿದ್ದ. ಮಾವುತನಾದ ಅಷ್ಟಾವಂಕನ ಸ್ವರ ಮಾಧುರ್ಯಕ್ಕೆ ಮನಸೋತು, ಆತನ ಬಳಿಗೆ ಬಂದ ಅಮೃತಮತಿ ಆತನಲ್ಲಿ ಯಾವ ಸೌಂದರ್ಯವನ್ನು ಕಂಡಳು!? ಅಂದರೆ ಸೌಂದರ್ಯ ಕೇವಲ ಹೊರಗಣ್ಣಿಗೆ ಮಾತ್ರ ಕಾಣಿಸುವಂತಹುದಲ್ಲ. ನಾವು ನಮ್ಮ ಒಳಗಣ್ಣ ದೃಷ್ಟಿಯನ್ನು ತೆರೆದು ನೋಡಿದಾಗ ಇಡೀ ಜಗತ್ತೇ ನಮಗೆ ಸೌಂದರ್ಯಮಯವಾಗಿ ಕಾಣಿಸುವುದಕ್ಕೆ ಸಾಧ್ಯ ಎನ್ನಬಹುದು.

**ನಿವೇದಿತಾ ಕುದ್ಪಾಜೆ**
ಬೆಸೂರು

### ಹೃದಯವಂತಿಕೆ ತರುವ ಅರಿವು



ಅಕ್ಬರ್‌ನ ಆಸ್ಥಾನದಲ್ಲಿದ್ದ ಬೀರಬಲ್ಲನು ''ಸುಳ್ಳು ಮತ್ತು ಸತ್ಯಕ್ಕಿರುವ ದೂರವೆಷ್ಟು?'' ಎಂಬ ಅಕ್ಬರನ ಪ್ರಶ್ನೆಗೆ ''ಕೇವಲ ಒಂದು ಚೋಟು'' ಎಂಬ ಉತ್ತರ ಕೊಟ್ಟಿದ್ದನಂತೆ. ಆತನ ದೃಷ್ಟಿಯಲ್ಲಿ ಕಿವಿ ಮತ್ತು ಕಣ್ಣಿಗೆ ಇರುವ ದೂರ ಸತ್ಯ ಮತ್ತು ಸುಳ್ಳಿಗೂ ಇದೆ ಎಂಬುದು. ಕಿವಿಯಲ್ಲಿ ಕೇಳಿದ್ದು ಸುಳ್ಳು, ಕಣ್ಣಲ್ಲಿ ನೋಡುವುದು ಸತ್ಯ.

ಆದರೆ ಈ ಸೌಂದರ್ಯದ ವಿಷಯದಲ್ಲಿ

ಕಣ್ಣು ಹೇಳುವುದು ಸತ್ಯವೆನ್ನುವುದು ತಪ್ಪು. ಸೌಂದರ್ಯ ಕೇವಲ ಬಣ್ಣದಲ್ಲಿಯಾಗಲೀ ಉಡುಗೆ ತೊಡಿಗೆಗಳಲ್ಲಾಗಲೀ ಇಲ್ಲ. ಇದು ಕೇವಲ ಬಾಹ್ಯ ಸೌಂದರ್ಯ. ಇದು ನಶ್ವರವಾದುದು, ಮನುಷ್ಯನ ಆಂತರಿಕ ಸೌಂದರ್ಯವಷ್ಟೇ ಶಾಶ್ವತವಾದುದು. ನಡೆ, ನುಡಿ, ಆಚಾರ, ವಿಚಾರ, ತಾಳ್ಮೆ, ಸಹನೆ, ಶೀಲ, ಸಚ್ಚಾರಿತ್ರ್ಯ ಇವು ಮಾನವೀಯ ಗುಣಗಳು. ಇವುಗಳನ್ನು ಕೇವಲ ಕಣ್ಣು ಅರಿಯಲಾರದು ಹೃದಯಮಾತ್ರ ಅರಿಯಬಲ್ಲದು. ಜಾನಪದ ಕವಿಗಳು ಹೇಳುವಂತೆ ಅತ್ತಿಯ ಹಣ್ಣು ನೇರಳೆ ಹಣ್ಣುಗಳ ವ್ಯತ್ಯಾಸವನ್ನೂ ಇಲ್ಲಿ ಪರಿಗಣಿಸಬಹುದು. ಸೌಂದರ್ಯವನ್ನು ಅರಿಯಲು ಹೃದಯವಂತಿಕೆಗಿಂತ ಬೇರೊಂದು ವಸ್ತುವಿಲ್ಲ.

**ಸತ್ಯನಾರಾಯಣ ಹೆಚ್.ಎಸ್**
ಹರಿಹಳ್ಳಿ.

## ಅದೊಂದು ದೈವೀ ಸೃಷ್ಟಿ



ಇಂದಿನ ದಿನಗಳಲ್ಲಿ, ಅದರಲ್ಲೂ ನಗರಗಳಲ್ಲಿ ವಿದ್ಯಾವಂತರೆನಿಸಿದ ಹೆಚ್ಚಿನ ಜನರ ದೃಷ್ಟಿಯಲ್ಲಿ 'ಸೌಂದರ್ಯ' ಎಂದರೆ ವಿವಿಧ ಶೃಂಗಾರ ಸಾಧನಗಳಿಂದ ತಮ್ಮ ಶರೀರವನ್ನು ಸಿಂಗರಿಸಿಕೊಳ್ಳುವುದು ಎಂಬ 'ಕಲ್ಪನೆ' ಇದೆ. ಇಲ್ಲಿ, ಈ ದೇಶದ ಸಂಸ್ಕೃತಿ, ಸಭ್ಯತೆ, ಜನರ ವಯೋಮಾನ, ಘನತೆ, ಗೌರವಗಳನ್ನೂ ಮೀರಿದ ಉಡಿಗೆ-ತೊಡಿಗೆಗಳು; ಸ್ತ್ರೀ-ಪುರುಷರೆಂಬ ಭೇದವಿಲ್ಲದೆ ಮನರಂಜನೆಯ ಹೆಸರಿನಲ್ಲಿ ಹೋಟೆಲ್, ಬಾರ್, ಕ್ಲಬ್‌ಗಳಲ್ಲಿ ಕುಡಿದು - ಕುಣಿದಾಡುವುದು; ಅತ್ಯಗತ್ಯಕ್ಕಿಂತ ಹೆಚ್ಚಿನ ಹಣವನ್ನು ದುಂದುವೆಚ್ಚಮಾಡುವುದು; ಇವೇ ಆಧುನಿಕತೆ ಎನಿಸಿವೆ. ಇವೆಲ್ಲವೂ ತಮ್ಮ 'ಸೌಂದರ್ಯ' ಪ್ರದರ್ಶನಕ್ಕೆ ಅಗತ್ಯ ಹಾಗೂ ಪೂರಕ ಸಾಧನಗಳೆಂಬ ಭ್ರಮೆ ಇವರಲ್ಲಿದೆ. ಆದರೆ ಇವು ಪಾಶ್ಚಾತ್ಯ ಸಂಸ್ಕೃತಿಯ ದಾಸರಾದ ಕೆಲವರ ಕಲುಷಿತ ಮನಸ್ಸಿನ ವಿಕೃತರೂಪಗಳಾಗಿವೆ.

ನನ್ನ ದೃಷ್ಟಿಯಲ್ಲಿ 'ಸೌಂದರ್ಯ' ಒಂದು ದೈವೀಶಕ್ತಿ, ನಮ್ಮ ಅಂತರಂಗದಿಂದ ಪುಟಿದೇಳುವ ಸದ್ಭಾವನೆಯ ಚಿಲುಮೆ, ಒಳಗಣ್ಣನ್ನು ತೆರೆಸುವ ಜ್ಞಾನದ ದೀವಿಗೆ, ಮನದ ಮಲಿನ ತೊಳೆದು ಮುದ ನೀಡುವ ಪವಿತ್ರ ಗಂಗಾಜಲ, ಹೃದಯದ ಕದವನ್ನು ತಟ್ಟಿ ಅಂತರಂಗದಲ್ಲಿನ ಪರಮಾತ್ಮನನ್ನು ಕಾಣುವ ಜ್ಞಾನಮಾರ್ಗ, ಜ್ಞಾನ-ಭಕ್ತಿ-ವೈರಾಗ್ಯಗಳ ರಾಜಮಾರ್ಗದಲ್ಲಿ, ಪರಹಿತದೊಂದಿಗೇ ನಮ್ಮ ಹಿತವನ್ನೂ ಕಾಣುತ್ತಾ ಕ್ರಮಿಸುವ ತಪಸ್ಸು, ಇದು ಒಬ್ಬ ವ್ಯಕ್ತಿಗಿಂತ ನೆರೆ-ಹೊರೆಯ ಸಮಾಜದೊಂದಿಗೆ ಸುಖ-ಕಷ್ಟಗಳಲ್ಲಿ ಬೆರೆತು ಬಾಳುವ ಹಾಗೂ ಕೆಲವೊಮ್ಮೆ ಪರರ ಸುಖಕ್ಕಾಗಿ ತಮ್ಮ ಅಲ್ಪ ಸುಖವನ್ನು ತ್ಯಾಗಮಾಡುವ ಒಂದು ಆನಂದಾನುಭವ. ನಮ್ಮನ್ನು ನಮ್ಮ ಸಂಸ್ಕೃತಿ-ಸಭ್ಯತೆಗಳ ಅಲೆಗಳ ಮೇಲೆ ತೇಲಿಸಿ ಪಾರಮಾರ್ಥಿಕದ ದಡವನ್ನು ಮುಟ್ಟಿಸುವ 'ಅಂಬಿಗ'.

ಇಂತಹ ಸದ್ಗುಣಗಳ 'ಸೌಂದರ್ಯ' ನಮ್ಮಲ್ಲಿ ರಕ್ತಗತವಾಗಿದ್ದಾಗ ಮಾತ್ರ ನಮ್ಮ ಹೊರಗಿನ ಸೌಂದರ್ಯದ ವರ್ಚಸ್ಸು ಇನ್ನೂ ಹೆಚ್ಚುತ್ತದೆ. ಇಲ್ಲದಿದ್ದಲ್ಲಿ ಮರಳಿನ ಮನೆಯಂತೆ ಕುಸಿದು ಬೀಳುತ್ತದೆ. ಆದ್ದರಿಂದ ಬಸವಣ್ಣನವರು ಹೇಳಿದಂತೆ ''ಅಂತರಂಗ ಶುದ್ಧಿಯೇ ಬಹಿರಂಗ ಶುದ್ಧಿ''ಯಾಗಬೇಕಾದ್ದು ಅತ್ಯಗತ್ಯವಾಗಿದೆ.

**ಮಾಲತಿ ಎಂ.ಕಾನಿಟ್ಕರ್**
ಭದ್ರಾವತಿ.

**ಸಂತಸಕ್ಕೆ ಮೂಲ ಸೌಂದರ್ಯ**

ಸೌಂದರ್ಯಕ್ಕೆ ಎಲ್ಲಿ ಇದೆಯೇ? ಯಾವುದು ಸುಂದರವೋ ಅದು ಮನಸ್ಸಿಗೆ ಸಂತಸವನ್ನು ನೀಡುತ್ತದಂತೆ! ಹಾಗಿದ್ದರೆ ಸಂತಸವನ್ನು ಕೊಡುವುದು ಏನಿದೆಯೋ ಅದರಲ್ಲಿ ಸೌಂದರ್ಯವಿದೆ ಎಂದಾಯಿತಲ್ಲವೆ?! ಹೂವಿಗೋ ಅದರದೆ ಸೌಂದರ್ಯವಿದೆ; ಮಾವಿಗೆ ಮತ್ತೊಂದು ರೀತಿಯಲ್ಲಿ ಚಂದವಿದೆ. ಹಾಗಿದ್ದರೂ ಮಸಣಕ್ಕೂ ಮಾಸದ ಸೌಂದರ್ಯವಿದೆ ಎನ್ನುವುದನ್ನು ಅಲ್ಲಗಳೆಯಲಾದೀತೆ? ಸೌಂದರ್ಯಕ್ಕೆ ಅಳತೆಗೋಲಿಡುವ ಧೈರ್ಯ ಯಾರಿಗಿದೆ? ಕಣ್ಣಿಗೆ ಸುಂದರವೆನಿಸಿದವು ಅನುಭವದಲ್ಲಿ ಕಹಿಯಾದರೆ ಸೌಂದರ್ಯವಿದೆಯೇ? ಅದಕ್ಕೇ ಹಿರಿಯರು ಹೇಳಿದರು - ''ಸೌಂದರ್ಯ ಆಂತರ್ಯದಲ್ಲಿದೆ'' ಎಂದು, ಓರ್ವ ಪತ್ನಿಯ ಮೊಗದಲ್ಲಿ ಅತ್ಯಂತ ಶ್ರೇಷ್ಠ ಸೌಂದರ್ಯ ಕಂಡರೆ, ವಿರಾಗಿ ವೈರಾಗ್ಯವೇ ಸುಂದರವೆನ್ನುತ್ತಾನೆ. ಹಾಗಿದ್ದರೆ ಸೌಂದರ್ಯವೆನ್ನುವುದು ಕಲ್ಪನಾತೀತವೇ? ಭ್ರಮೆಯೇ? ಹೌದಾದರೆ ಹೌದು! ಅಲ್ಲವಾದರೆ ಅಲ್ಲ!! ಮನುಜ ಶಾಶ್ವತನಲ್ಲವೆಂದ ಮೇಲೆ ಆತನಲ್ಲಿ ಜನ್ಮದಾಳುವ 'ಸೌಂದರ್ಯ' ಹೇಗೆ ಶಾಶ್ವತವಾದೀತು? ಆದುದರಿಂದಲೇ ನಾವು ಅಶಾಶ್ವತೆಯ ಮಿತಿಯೊಳಗೆ ಶಾಶ್ವತತೆಯನ್ನು ಕಂಡುಕೊಳ್ಳಬೇಕು. ಈ ಪ್ರಯತ್ನದ ಫಲವಾಗಿಯೇ 'ಸೌಂದರ್ಯ'ದ ಕಲ್ಪನೆ ಮನುಜನಿಂದ ಮನುಜನಿಗೆ ಬದಲಾಗುತ್ತದೆ. ವ್ಯಕ್ತಿತ್ವದ ಪ್ರತಿಬಿಂಬವೇ ಸೌಂದರ್ಯ. ಸೌಂದರ್ಯ ಎಲ್ಲ ಕಡೆಗಳಲ್ಲೂ, ಎಲ್ಲದರಲ್ಲೂ ಸದ್ದಿಲ್ಲದೆ ವಿರಮಿಸಿಕೊಂಡಿದೆ. ಸುಖ-ದುಃಖಗಳಲ್ಲಿ, ಹುಟ್ಟು-ಸಾವಿನಲ್ಲಿ, ಹೆಣ್ಣು-ಹೊನ್ನಿನಲ್ಲಿ, ಕಣ್ಣು-ಮಣ್ಣಿನಲ್ಲಿ, ಹೂವು ಹಾವಿನಲ್ಲಿ .... ಸರ್ವದರಲ್ಲೂ ಸೌಂದರ್ಯ ಸುಪ್ತವಾಗಿ ಅಡಗಿದೆ. ಆದುದರಿಂದಲೇ, ಇವೆಲ್ಲವುಗಳಲ್ಲಿ ಯಾವುದು ಮನಸ್ಸಿಗೆ, ಹೃದಯಕ್ಕೆ, ಚಿತ್ತಕ್ಕೆ ಆನಂದವನ್ನು ನೀಡುವುದೋ ಅದುವೇ ಸುಂದರವಾದುದು; ವ್ಯಕ್ತಿ ಬಯಸುವ, ಅರಸುವ, ಪಡೆಯುವ ಸೌಂದರ್ಯ ಅಲ್ಲೇ ಎಲ್ಲೋ ಇರುವುದು. ಆನಂದದ ಬೇರಿನಲ್ಲೇ ಸೌಂದರ್ಯದ ಚಿಗುರಿದೆ!

**- ಕೇಶವ ಮುರಳಿ. ಎಂ.**
ಅಡ್ಯನಡ್ಕ, ದ.ಕ.ಜಿಲ್ಲೆ.

## ಒಳಗಣ್ಣ ನೋಟ

ಸೌಂದರ್ಯಕ್ಕೆ ಎರಡು ಮುಖಗಳಿವೆ. ಒಂದು ಬಾಹ್ಯ ಸೌಂದರ್ಯ. ಇನ್ನೊಂದು ಆಂತರಿಕ ಸೌಂದರ್ಯ. ಇವೆರಡರ ವಿಶ್ಲೇಷಣೆಯ ಕೊನೆಯಲ್ಲಿ ಉಳಿಯುವುದು ಆಂತರಿಕ ಸೌಂದರ್ಯ. ಹಾಗೆಂದ ಮಾತ್ರಕ್ಕೆ ಬಾಹ್ಯ ಸೌಂದರ್ಯಕ್ಕೆ ಬೆಲೆಯಿಲ್ಲವೆಂದೇನೂ ಅರ್ಥವಲ್ಲ. ಬಾಹ್ಯ ಸೌಂದರ್ಯವು ಎಲ್ಲ ಜನರಿಗೂ ಎಲ್ಲ ಕಾಲಕ್ಕೂ ಅನಿವಾರ್ಯವಾದುದೇನಲ್ಲ. ಆದರೆ ಆಂತರಿಕ ಸೌಂದರ್ಯ ಸಕಲರಿಗೂ ಸರ್ವಕಾಲಕ್ಕೂ ಅಗತ್ಯವಾದುದು. ಒಬ್ಬ ವ್ಯಕ್ತಿಯನ್ನು ಆತನ ಆಂತರಿಕ ಸೌಂದರ್ಯವನ್ನು ಹೊಂದಿಕೊಂಡು ಅಳೆಯಲಾಗುತ್ತದೆ. ಅದಕ್ಕೆ ತಕ್ಕಂತೆ ಆತ ಸಮಾಜದಲ್ಲಿ ಗೌರವ ಹಾಗೂ ಸ್ಥಾನವನ್ನು ಹೊಂದುತ್ತಾನೆ.

ಈ ಆಂತರಿಕ ಸೌಂದರ್ಯವನ್ನು ನಾನು ಜೀವನಸೌಂದರ್ಯ ಎಂದುಕೊಂಡಿದ್ದೇನೆ. ಜೀವನದಲ್ಲಿ ನಾವು ಅಳವಡಿಸಿಕೊಂಡಿರಬಹುದಾದ ಉತ್ತಮ ಮೌಲ್ಯಗಳು, ನೈತಿಕತೆ, ಶಿಸ್ತು-ಸರಳತೆ, ಅಚ್ಚುಕಟ್ಟುತನ, ಆಚಾರವಿಚಾರಗಳು. ಧ್ಯೇಯಾದರ್ಶವೇ ಮೊದಲಾದುವುಗಳಲ್ಲಿ ತನ್ನದೇ ಆದ ಸೌಂದರ್ಯವನ್ನು ನಾನು ಗುರುತಿಸಿದ್ದೇನೆ. ಮತ್ತು ಅದೇ ನನ್ನ ಪರಿಕಲ್ಪನೆಯ ಸೌಂದರ್ಯವಾಗಿದೆ.

'ಸೌಂದರ್ಯವು ನೋಡುಗನ ಕಣ್ಣಿನಲ್ಲಿದೆ' ಎನ್ನುವವರಿದ್ದಾರೆ. ಆದರೆ ಅದು ಪ್ರತಿಯೊಬ್ಬನ ದೃಷ್ಟಿಕೋನವನ್ನವಲಂಬಿಸಿಕೊಂಡಿರುತ್ತದೆ. ಅರಿಯುವ ಮನಸ್ಸಿನಲ್ಲಿ ಸೌಂದರ್ಯದ ನೈಜ ಪರಿಕಲ್ಪನೆ ಮೂಡಲು ಸಾಧ್ಯ. ಹಾಗಾಗಿ ಜೀವನ ಸೌಂದರ್ಯವೇ ನಿಜವಾದ ನಿತ್ಯನೂತನ, ಸತ್ಯ-ಶಾಶ್ವತ ಸೌಂದರ್ಯ ಬಾಹ್ಯ ಸೌಂದರ್ಯ ಕೃತಕವೂ, ಕ್ಷಣಿಕವೂ ಆಗಿದೆ. ತೆಳ್ಳಗೆ ಬೆಳ್ಳಗಿರುವ ಸುಂದರವೆನಿಸುವ ಚರ್ಮ ಸುಕ್ಕುಗಟ್ಟಲೇಬೇಕು. ಇಂದು ಚಂದವಾಗಿ ಕಂಡ ವಸ್ತು ನಾಳೆ ಮಾಸಬಹುದು. ಆದುದರಿಂದ ಬಾಹ್ಯ ಸೌಂದರ್ಯವು 'ಮಾಯಕ' ಎನಿಸುತ್ತದೆ. ಅಲ್ಲದೆ ಅದರ ಗ್ರಹಿಕೆಯ ಹೊರನೋಟಕ್ಕಷ್ಟೇ ಸೀಮಿತವಾಗಿಬಿಡುತ್ತದೆ.

ಹೃದಯವೈಶಾಲ್ಯ ಹಾಗೂ ಪರಿಪೂರ್ಣ ದೃಷ್ಟಿಕೋನದಿಂದ ಒಳಗಣ್ಣ ನೋಟಕ್ಕೆ ಎಟುಕುವ ಜೀವನ ಸೌಂದರ್ಯದ ಅನುಭವವು ಸುತ್ತ ಪ್ರಕೃತಿಯಷ್ಟೇ ಸಹಜವಾದುದು. ನಮ್ಮ ಉಸಿರಿನಷ್ಟೆ ಸತ್ಯವಾದುದಾಗಿದೆ ಯೆಂದು ನನ್ನ ಭಾವನೆ.

**- ಚಂದ್ರ ಕೆ. ಹೆಮ್ಮಾಡಿ**
ಹೆಮ್ಮಾಡಿ.

# ಪುರಸಭೆ ಕಾರ್ಯಾಲಯ

## ಶಹಾಪೂರ ಜಿ. ಗುಲಬರ್ಗಾ



ಅಧ್ಯಕ್ಷರು
ಮರೆಪ್ಪ ಎನ್ ಹೈಯ್ಯಾಳಕರ್





ಉಪಾಧ್ಯಕ್ಷರು
ಶ್ರೀಮತಿ ಪ್ರೇಮಿಳಾಬಾಯಿ
ಬಸವರಾಜ ಅಲಬನೂರ್

### ಸರ್ವ ಸದಸ್ಯರು

1. ಘೇವರ ಚಂದ ಜೈನ್
2. ವೆಂಕೋಬ ಬಸಣ್ಣ ದಂಡು
3. ಶ್ರೀಮತಿ ಶಶಿಕಲಾ ಸುರೇಶ ಚಿಲ್ಲಾಳ
4. ಶ್ರೀಮತಿ ಅಜೀಮುನ್ನಿಸಾ ಬೇಗಂ
5. ಸುರೇಂದ್ರ ಪಾಟೀಲ ಮಡ್ನಾಳ
6. ಮಹ್ಮದ ಗೌಸ್
7. ಬಸವರಾಜ ಶರಣಪ್ಪಗೌಡ ಹೇರುಂಡಿ
8. ಶ್ರೀಮತಿ ಅನ್ನಪೂರ್ಣ ಚನ್ನಬಸಪ್ಪ ಚೌಧರಿ
9. ಶರಣಪ್ಪ ಸಂಗಪ್ಪ ಮುಂಡಾಸ
10. ಸೋಮಶೇಖರ ತಿಪ್ಪಣ್ಣ ಕಾಂಗ್ರೇಸ್
11. ಗೋವಿಂದಪ್ಪ ಅಮಲಪ್ಪ ಕಟ್ಟಿಮನಿ
12. ಲಾಲ ಅಹ್ಮದ ಮಶಾಖಸಾಬ ಖುರಾಸಿ
13. ಶ್ರೀಮತಿ ಮರೆಂಬಿ ಇಬ್ರಾಹಿಂ ಚಾಂದ
14. ಶ್ರೀಮತಿ ಹಫೀಜಾ ಬೇಗಂ ಮಹ್ಮದ್ ಇಸ್ಮಾಯಿಲ ಕಡಿಮುತ್ತು
15. ಯುಸುಫ್ ಅತೀಕುರ ರಹೆಮಾನ ಸಿದ್ದಿಕಿ
16. ನಸೀರ್ ಅಹ್ಮದ ಮಹ್ಮದ ಹುಸೇನ್
17. ಶ್ರೀಮತಿ ಲಕ್ಷ್ಮಿ ಗಂಡ ಭೀಮಣ್ಣಾ ಚಂಡು
18. ಬಸವರಾಜ ಗದಿಗೆಪ್ಪಾ ದೇಸಾಯಿ
19. ಮಲ್ಲಣ್ಣಗೌಡ ಸಂಗಣ್ಣಗೌಡ
20. ಶ್ರೀಮತಿ ನೀಲಮ್ಮ ಗಂಡ ಯಲ್ಲಪ್ಪ ಚಿಪ್ಪಾರ

### ನಾಮನಿರ್ದೇಶಿತ ಸದಸ್ಯರು

1. ಗೋಪಾಲ ನ್ಯಾಯವಾದಿಗಳು
2. ಬಸಮ್ಮ ಹೊಟ್ಟಿ
3. ಮಲ್ಲಯ್ಯಸ್ವಾಮಿ ಚಿಕ್ಕಮಠ
4. ವೆಂಕಟೇಶ್ ತುಳೇರ
5. ನಜೀರ ಅಹ್ಮದ ದಾದುಲ್ಲಾ

## ಸದ್ಗುಣಗಳೇ ಸುಂದರ

ಕನ್ನಡದಲ್ಲೊಂದು ಗಾದೆ ಮಾತಿದೆ ''ಕಾಣುವ ಸೃಷ್ಟಿ ನೋಡುವ ದೃಷ್ಟಿಯಲ್ಲಿ'' ಎಂದು. ಇದು ನೂರಕ್ಕೆ ನೂರರಷ್ಟು ಸತ್ಯ. ಲೋಕೋಭಿನ್ನ ರುಚಿಃ ಎಂಬಂತೆ ಒಬ್ಬರಿಗೆ ಸರಿ ಕಂಡದ್ದು ಇನ್ನೊಬ್ಬರಿಗೆ ತಪ್ಪೆನಿಸುವಂತೆ ಒಬ್ಬರಿಗೆ ಆಕರ್ಷಕವಾದದ್ದು ಇನ್ನೊಬ್ಬರಿಗೆ ಅನಾಕರ್ಷಕವಾಗಬಹುದು. ಇಲ್ಲಿ ಸೌಂದರ್ಯವೆಂದರೆ ಬೆಳ್ಳನೆಯ ಮೈ ಬಣ್ಣ ಸುಂದರ ಮುಖ ಇವೇ ಆಗಬೇಕೆಂದೇನಿಲ್ಲ. ಈ ಹೊರನೋಟದ ಸೌಂದರ್ಯವನ್ನು ಮೀರಿದ ಒಳಗಣ್ಣನೋಟದ ಸೌಂದರ್ಯವೇ ಮುಖ್ಯ. ''ನಾವು ಆಡುವ ಮಾತು ಹೀಗಿರಲಿ ಗೆಳೆಯ, ಮೃದುವಚನ ಮೂಲೋಕ ಗೆಲ್ಲುವುದು ತಿಳಿಯ'' ಎಂದು ಕವಿಗಳು ಹೇಳಿದಂತೆ ಸಿಹಿನುಡಿಗಳಿಂದ ನಾವು ಮೂರೂ ಲೋಕಗಳನ್ನು ಜಯಿಸಬಹುದು, ಆದರೆ ಬಾಹ್ಯ ಸೌಂದರ್ಯದಿಂದ ಏನೂ ಸಾಧಿಸಲಾಗದು. ನಯ-ವಿನಯ ಸೌಜನ್ಯದ ಮಾತುಗಳಿಂದಲೇ ನಾವು ಆಕರ್ಷಿತರಾಗುತ್ತೇವೆ. ಅವರ ಮಾತಿನಿಂದ ಅವರ ಗುಣ-ಸ್ವಭಾವ ತಿಳಿದು ಬರುತ್ತದೆ. ಆಡಿದ ಮಾತಿಗೆ ತಪ್ಪದವರು, ಸತ್ಯಕ್ಕೆ ಬೆಲೆ ಕೊಡುವವರು, ಮೃದು ಭಾಷಿಗಳು, ಎಲ್ಲಕ್ಕಿಂತ ಹೆಚ್ಚಾಗಿ ನ್ಯಾಯಾನ್ಯಾಯಗಳನ್ನು ವಿವೇಚಿಸಿ ನಡೆಯುವವರು ಇವರೆಲ್ಲ ಹೊರ ಸೌಂದರ್ಯವಿಲ್ಲದಿದ್ದರೂ ತಮ್ಮ ಸದ್ಗುಣಗಳಿಂದ ಎಲ್ಲರ ಮನಸ್ಸನ್ನು ಆಕರ್ಷಿಸುತ್ತಾರೆ. ಹೊರ ಸೌಂದರ್ಯ ಅಲ್ಪಾಯುಷಿ. ಆದರೆ ಒಳಸೌಂದರ್ಯ ಆ ವ್ಯಕ್ತಿಯ ಜೀವಿತ ಕಾಲದವರೆಗೂ ಇರುತ್ತದೆ. ಅವನು ಎಲ್ಲರಿಗೂ ಬೇಕಾಗಿ ಬಾಳುತ್ತಾನೆ. ಕಾರಣ ನನ್ನ ಅಭಿಪ್ರಾಯದಲ್ಲಿ ಸಚ್ಚಾರಿತ್ರ್ಯ, ಸದ್ವಿನಯ, ಸನ್ನಡತೆಗಳ ಸೌಂದರ್ಯವೇ ನಿಜವಾದದ್ದು.

**ಸುನಂದಾ ಹಾಲಭಾವಿ**
ಬೆಳಗಾವಿ.

## ಆತ್ಮಂಗೆ ಅರುಹೆ ಚೆಲುವು

'ಪ್ರಿಯೇಷು ಸೌಭಾಗ್ಯ ಫಲಾಹಿ ಚಾರುತಾ' ಸೌಂದರ್ಯವು ಪ್ರಿಯನ



ಮನಸ್ಸಿಗೆ ಆಕರ್ಷಕವಾಗಿದ್ದರೆ ಮಾತ್ರ ಫಲವಾಗುತ್ತದೆ. ಆದರಿಂದ ಪ್ರಿಯನ ಮೆಚ್ಚಿಗೆ ದೊರೆಯದೇ ಹೋದರೆ ಅದು ಇದ್ದರೂ ವ್ಯರ್ಥವೇ' ಎಂದು ಮಹಾಕವಿ ಕಾಳಿದಾಸ ತನ್ನ 'ಕುಮಾರಸಂಭವ'ದಲ್ಲಿ ಹೇಳಿದ್ದಾನೆ. ಇದು ಬಾಹ್ಯ ಸೌಂದರ್ಯದ ಮಾತಾಗಿದೆ. ಸೌಂದರ್ಯವು ರೂಪ, ವೇಷ, ವಯಸ್ಸಿಗನುಗುಣವಾಗಿ ಶೋಭಿಸುವುದು. ನಿಸರ್ಗ ಸೌಂದರ್ಯದ ಮುಂದೆ ಕೃತ್ರಿಮ ಸೌಂದರ್ಯ ಕ್ಷಣಿಕವಾದುದು, ಶಾಶ್ವತವಲ್ಲದ್ದು. ಸೌಂದರ್ಯ ಸಾಧನಗಳು ಇಂದು ಜಾಹಿರಾತು ಮೂಲಕ ಮಾರುಕಟ್ಟೆಗೆ ಬಂದಿವೆ. ನಮ್ಮ ಯುವಕ ಯುವತಿಯರು ಅವುಗಳಿಗೆ ಮಾರು ಹೋಗಿದ್ದಾರೆ. ತಾತ್ಕಾಲಿಕ ಸುಖದ ಸೌಂದರ್ಯ ಅತ್ತಿಯ ಹಣ್ಣಿನಂತೆ ಸಮಸ್ತ ವಿಶ್ವವೇ ಸೌಂದರ್ಯಮಯವಾಗಿದೆ.

ನನ್ನ ಕಲ್ಪನೆಯಲ್ಲಿ ಸೌಂದರ್ಯವೆಂದರೆ 'ಆತ್ಮಂಗೆ ಅರುಹೆ ಚೆಲುವು' ಎಂಬುದಾಗಿದೆ. ಈಶ್ವರನು ಸುಂದರನು, ಶಿವಸ್ವರೂಪನು. ಸೌಂದರ್ಯವು ಸತ್ಯವಾಗಿರುವಂತೆ ಶಿವಮಯವಾಗಿದೆ. 'ಎಲ್ಲಾ ಶಿವಮಯವೂ, ಈ ಜಗವೆಲ್ಲಾ ಶಿವಮಯವೂ' ಎನ್ನುವಂತೆ ಆನಂದದಾಯಕವೂ ಆಗಿದೆ. ಈ ತೆರನಾಗಿ ಆತ್ಮನು 'ಸತ್ಯಂ ಶಿವಂ ಸುಂದರಂ' ಭಾವನೆಯನ್ನು ಅನುಭವಿಸಿ ನಿತ್ಯಾನಂದದಲ್ಲಿ ಮಗ್ನನಾಗುತ್ತಾನೆ. ದಿವ್ಯ ಭವ್ಯ ಸೌಂದರ್ಯದ ದರ್ಶನ ಹೊಂದಲು ಈ ಚರ್ಮಚಕ್ಷುವಿನಿಂದ ಸಾಧ್ಯವಿಲ್ಲ. ಜ್ಞಾನ (ಅನುಭವ)ದ ಕಣ್ಣು ತೆರೆದಾಗಲೇ ಕಾಣುವೆವು. ದೀನದಲಿತರ ಬದುಕು, ಅವರ ಮಕ್ಕಳ ವಿದ್ಯಾಭ್ಯಾಸ, ಅವರಿಗೆ ಸಮಾಜದಲ್ಲಿದ್ದ ಸ್ಥಾನ ಇವೆಲ್ಲವುಗಳನ್ನು ಅರ್ಥಮಾಡಿಕೊಂಡು ಹೃದಯವು ಪರಿಪಕ್ವವಾಗಬೇಕು. ಆಗ ನಾವು ಪರಮವನ್ನ ಕಾಣಲು ಸಮರ್ಥರಾಗುತ್ತೇವೆ.

ಕೀಟ್ಸ್ ಎಂಬಾತನು 'ಸುಂದರ ವಸ್ತು ಆನಂದದ ಚಿರಸ್ರೋತ್ರ' ಎಂದಿದ್ದಾನೆ. ನಾವು ಸದಾ ಹಸನ್ಮುಖಿಗಳಾಗಬೇಕು. ದುಃಖ, ವ್ಯಸನ, ಚಿಂತೆಗಳು ಯಾರಿಗಿಲ್ಲ? ಎಲ್ಲರಿಗೂ ಒಂದರ ಮೇಲೊಂದು ಸಮುದ್ರದ ತೆರೆಗಳಂತೆ ಬರುತ್ತಿವೆ. ಯಾರು ಸೌಂದರ್ಯಕ್ಕೆ ಅದರಲ್ಲೂ ಆತ್ಮನ ಚೆಲುವಿನ ಸೌಂದರ್ಯಕ್ಕೆ ಮಾರು ಹೋಗಿರುತ್ತಾರೋ ಅವರೇ ಧನ್ಯಾತ್ಮರು, ಪುಣ್ಯಾತ್ಮರು. 'ಆತ್ಮಂಗೆ ಅರುಹೇ ಚೆಲುವು' (ಸೌಂದರ್ಯ) ಎಂದರು ವಚನಕಾರರಾದ ಅಖಂಡೇಶ್ವರರು.

'ಸೌಂದರ್ಯ ಭಾವವು ಪ್ರಜ್ಞೆಗಳಲ್ಲಿ ಸತ್ತಿದೆ. ಸೌಂದರ್ಯದ ಮೇಲೆ ಭಕ್ತಿಯಿರುವುದೆಂದು ಸಹ ಮರೆತು ಹೋಗಿದ್ದಾರೆ. ದೊಡ್ಡ ಕವಿಗಳು, ಕಲಾರಾಧಕರು, ಸೌಂದರ್ಯಗಳಲ್ಲಿ ಸುಂದರವಾದ ಜೀವನದು ಇದಕ್ಕೆ ಸೂತ್ರವು. ಸುಂದರವಾದ ಆತ್ಮ 'ಸತ್ಯಂ ಶಿವಂ ಸುಂದರಂ' ಅಲ್ಲವೆ?

**ನಾ.ಮ. ಬಸವರಾಜಯ್ಯ**
ನಾಗರಹಾಳು.

## ಆಂತರಿಕ ಪ್ರಜ್ಞೆ ಬೇಕು

ಆಂತರಿಕ ಸೌಂದರ್ಯಕ್ಕಿಂತ ಬಾಹ್ಯ ಸೌಂದರ್ಯಕ್ಕೇ ಇಂದು ಮಹತ್ವ ಹೆಚ್ಚು. ಹಾಗಿದ್ದರೆ ನಿಸರ್ಗದ ಹಸಿರು, ಜುಳುಜುಳು ಹರಿವ ನದಿ, ಕಲ್ಲುಬೆಟ್ಟ, ಕಣಿವೆಗಳೇಕೆ ರಮಣೀಯವೆನಿಸುತ್ತವೆ? ಮನಸ್ಸಿಗೇಕೆ ಆಹ್ಲಾದ ನೀಡುತ್ತವೆ? ಇದಕ್ಕೆಲ್ಲ ನಮ್ಮೊಳಗಿನ (ಆಂತರಿಕ) ಸೌಂದರ್ಯ ಪ್ರಜ್ಞೆ ಮುಖ್ಯ. ಭಾವನೆಗಳಿಲ್ಲದ ಅಥವಾ ಅವುಗಳ ಪ್ರಜ್ಞೆಯಿಲ್ಲದ ಪಶುಪಕ್ಷಿಗಳ ಕಲರವವೇ ಚೆಂದ. ನೈಸರ್ಗಿಕ ಗಾಳಿ ನಮಗೆ ಬೇಡ. ಮನೆಯ ಬಾಗಿಲು, ಕಿಟಕಿಗಳನ್ನು ಮುಚ್ಚಿಕೊಂಡು ಫ್ಯಾನು ಹಾಕಿಕೊಳ್ಳುವುದೇ ನಮ್ಮ ಇಂದಿನ ಘನತೆಯನ್ನು ಹೆಚ್ಚಿಸುತ್ತದೆ. ಇದಕ್ಕೆಲ್ಲ ಕಾರಣ ನಗರಗಳಲ್ಲಿಯ ಲೂಟಿ, ದರೋಡೆಗಳ ಇಂದಿನ ಭಯಾನಕ ವಾತಾವರಣ. ಸೌಂದರ್ಯವರ್ಧಕ ವಸ್ತುಗಳನ್ನು ಉಪಯೋಗಿಸಿ ನಾವಿಂದು ಕೃತ್ರಿಮತೆಯತ್ತ ಸಾಗುತ್ತಿದ್ದೇವೆ. ಅವೆಲ್ಲ ಹಲವು ದಿನ ಮಾತ್ರ. ಬೊಚ್ಚು ಬಾಯಿಯ ಮಗುವಿನ ನಗು, ಕೇಕೆಗಳೇ ಚೆಂದ, ಅದು ಅತ್ತರೂ ಚೆಂದವಲ್ಲವೆ! ಅತಿಯಾದ ಬಿಳುಪಿಗಿಂತ ಕೃಷ್ಣವರ್ಣದ ಸೌಂದರ್ಯವೇ ಚೆಂದ. ಒಬ್ಬ ವ್ಯಕ್ತಿಯ ಸದಾಚಾರ, ಸುವಿಚಾರಗಳಿಗೆ ತಲೆಬಾಗುತ್ತೇವೆ, ಅವರನ್ನು ದೇವರೆಂದು ಪೂಜಿಸುತ್ತೇವೆ. ಏಕೆ ಹೀಗೆ? ಸದ್ಗುಣ, ಸದ್ಭಾವಗಳ ಸಂಗಮವೇ ಸೌಂದರ್ಯ. ನಿಮ್ಮ ಒಳಗಣ್ಣು ತೆರೆದು ನೋಡಿದಾಗ ಮಾತ್ರ ಇಂಥ ಸೌಂದರ್ಯಾರಾಧಕರು ನೀವಾಗಬಹುದು.

**ರೇಣುಕಾ ದೇಶಪಾಂಡೆ**
ಹುಬ್ಬಳ್ಳಿ.

---

## ವಿಮರ್ಶಕನಿಗೆ ಬುದ್ಧಿ ಕಲಿಸಿದ್ದು

ಸದಾ ಬುದ್ಧಿಜೀವಿಯಂತೆ ಪೋಸ್ ಕೊಡುತ್ತ ಪ್ರತಿ ಭಾಷಣದಲ್ಲೂ ಹೊಸ ಹೊಸ ಪಾಶ್ಚಾತ್ಯ ವಿಮರ್ಶಾಕೃತಿಗಳನ್ನು ಅರೆದುಕುಡಿದಿರುವಂತೆ ವಿಚಿತ್ರ ಹೆಸರುಗಳನ್ನು ಉದ್ಗರಿಸುತ್ತಿದ್ದ ವಿಮರ್ಶಕನಿಗೆ ಬುದ್ಧಿ ಕಲಿಸಬೇಕೆಂದು ಯೋಚಿಸಿದ ಸಹೋದ್ಯೋಗಿ ಲೇಖಕರೊಬ್ಬರು ಗುಂಡು ಹಾಕಲು ಇವರನ್ನು ಕರೆದೊಯ್ದರು. ಕಾಲ್ಪನಿಕ ಕೃತಿಯೊಂದರ ಊಹಾ ಲೇಖಕನ ಹೆಸರನ್ನು ಉಲ್ಲೇಖಿಸಿ ''ಸಾರ್ ಈ ಪುಸ್ತಕ ಜಸ್ಟ್ ಬಂದಿದೆ ಅದ್ಭುತವಾಗಿದೆ, ತಾವು ಓದಿದೀರಾ?'' ಎಂದು ಕೇಳುತ್ತ ಈ ಪುಸ್ತಕದಲ್ಲಿ ಆ ವಿಷಯವಿದೆ ಈ ವಿಷಯವಿದೆ ಎಂದು ಜಾಣತನದ ಕಸರತ್ತು ನಡೆಸಿದರು. ಎದುರಿನ ಬುದ್ಧಿಜೀವಿ 'ಹೌದು ನಾನು ಓದಿದೆ. ವಂಡರ್‌ಫುಲ್ ಬುಕ್' ಎಂದು ಪ್ರತಿಕ್ರಿಯಿಸತೊಡಗಿದರು. ಒಂದು ಗಂಟೆ ಮಾತಿನ ನಂತರ ಸಹೋದ್ಯೋಗಿ ಹೇಳಿದರು. ''ಏನು ಸಾರ್ ನೀವು ಇಂಥ ಫೂಲ್ ಅಂತ ಗೊತ್ತಿರಲಿಲ್ಲ!'' ಈ ವಿಮರ್ಶಕರು ದಿವಂಗತ ಡಿ.ಆರ್. ನಾಗರಾಜ್ ಇರಬಹುದೇ?



■ ಸುಬ್ರಾಯ ಚೊಕ್ಕಾಡಿ



# ಆ ದಿವ್ಯ ಕ್ಷಣಗಳು

ರೆಕ್ಕೆ ಬಲಿತ ಹಕ್ಕಿಗಳಂತೆ ಹಾರಿಹೋದವು
ನನ್ನ ಬಾಲ್ಯದ ಕನಸುಗಳು
ಇಲ್ಲಿ ಉಳಿದದ್ದೀಗ ನಾನು, ಒಂಟಿ, ಮುಲುಕುಗಳು.

ಬಾಲ್ಯದ ಕಿಲಾಡಿತನ, ಚಿಟ್ಟೆಗಳ ಅಟ್ಟುವಿಕೆ
ನೀರಿನಲಿ ಕಾಗದದ ದೋಣಿಗಳ ತೇಲು
ಮರಳಿನಲಿ ಪುಟ್ಟ ಮನೆ, ಯಕ್ಷಗಾನದ ಧಿಗಿಣ
ಹೊಳೆವ ಸೂರ್ಯನ ಹೊಳಪು, ಚಂದ್ರಕಾಂತಿ
ಹುಣ್ಣಿಮೆಯ ಇರುಳುಗಳ ಮೌನರಾಗ...
ಬೇಗ ಬೇಗನೆ ಸರಿವ ದಿವಸಗಳ ಹಾದಿಯಲಿ
ಕಣ್ಣಾಮುಚ್ಚೇ ಕಾಡೇಗೂಡೇ
ಉದ್ದಿನ ಮೂಟೆ ಉರುಳೇ ಹೋಯ್ತು-

ಒಳಗೆ, ನನ್ನೊಳಗೆ ಕತ್ತಲ ಮೊತ್ತ. ನಡುವೀಗ
ನಡೆಯುತ್ತಲೇ ಇವೆ ಅವ್ಯಾಹತವಾಗಿ ಕೊಲೆಗಳು:
ಸುಕುಮಾರ ಭಾವಗಳು, ಪ್ರೀತಿಯ ಮುಗ್ಧರೂಪಗಳು
ಚೆಲ್ಲಾಪಿಲ್ಲಿ ಬಿದ್ದುಕೊಂಡಿವೆ ಇಲ್ಲಿ
ಒಂದರ ಮೇಲೊಂದರಂತೆ
ಕೊಲೆಗಾರನೂ ನಾನೇ ಕೊಲೆಯಾದವನೂ ನಾನೇ
ಅಸಹಾಯ ಸಾಕ್ಷಿಯೂ ಆಗಿ ನಾನೇ
ನಿಂತಿದ್ದೇನೆ ಈ ದುರಂತದ ಎದುರು.

ಒಳಹೊರಗ ಸಂಚಾರಕ್ಕಾಗಿಯೇ ಇಟ್ಟಿದ್ದ
ಬಾಗಿಲುಗಳೆಲ್ಲ ಮುಚ್ಚಿಹೋಗಿವೆ ಈಗ-
ಒಳಗಿಲ್ಲಿ ಉಳಿದದ್ದು:
ಕಿಟಕಿಯಾಚೆಗೆ ಎಲ್ಲೋ ದೂರದಲಿ ಹೊಳೆವ ತಾರೆಗಳಂತೆ
ಅಡಿಯಲ್ಲೆಲ್ಲೋ ಮಿಡುಕಿ ಆಗೀಗೊಮ್ಮೆ
ಮಿಂಚಿ ಮರೆಯಾಗುತ್ತಿರುವ
ಬಾಲ್ಯದ ದಿವ್ಯಕ್ಷಣಗಳು-
ಕಾಣದೆಯೆ ಕಾಣುವ ದೇವಲೋಕದ ತುಣುಕುಗಳು!



ದೀಪಾವಳಿ ಹಬ್ಬದ ಶುಭಾಶಯಗಳು





**ದೊಡ್ಡಪ್ಪಗೌಡ ಎಸ್. ಪಾಟೀಲ್**

ನರಿಬೋಳ

ಸದಸ್ಯರು,

**ತಾಲ್ಲೂಕಾ ಪಂಚಾಯತ**

ಜೇವರಗಿ,

ಜಿ. ಗುಲಬರ್ಗಾ

ಫೋನ್ ನಂ :

**47525, 47535**

**(ನರಿಬೋಳ)**

**46569**

**(ಜೇವರಗಿ)**

ದೀಪಾವಳಿ ಹಬ್ಬದ ಶುಭಾಶಯಗಳು



**ಶ್ರೀ ಜಗದೇವ ಟಿ. ಗುತ್ತೇದಾರ**

ಬಿ.ಇ.

ಕಾಳಗಿ ತಾ. ಚಿತ್ತಾಪೂರ

ಅಧ್ಯಕ್ಷರು :

ಬ್ಲಾಕ್ ಕಾಂಗ್ರೆಸ್ (ಐ) ಕಮೀಟಿ

ಚಿತ್ತಾಪೂರ (ಗ್ರಾಮೀಣ)

ಭವಾನಿ ವೈನ್ಸ್

ಸುಲೇಪೇಟ್, ತಾ. ಚಿಂಚೋಳಿ

ಭವಾನಿ ವೈನ್ಸ್

ಹೂವಿನಹಳ್ಳಿ, ತಾ. ಚಿಂಚೋಳಿ

ಮನೆ ನಂ. 10-406,

ಬ್ರಹ್ಮಾಪೂರ, ಗುಲಬರ್ಗಾ-3

ಫೋನ್ :

25436 (ಗುಲಬರ್ಗಾ)

67608 (ಕಾಳಗಿ)

ದೀಪಾವಳಿ ಹಬ್ಬದ ಶುಭಾಶಯಗಳು





**ಶ್ರೀ ಸಂಗಯ್ಯ ಕೊಂತನಪಲ್ಲಿ**

ಅಧ್ಯಕ್ಷರು :

**ರಾಜ್ಯ ಸರಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ**

**ತಾಲ್ಲೂಕಾ ಘಟಕ**

**ಸೇಡಂ**

**ಜಿ. ಗುಲಬರ್ಗಾ**

# ಉಂಡದ್ದೇ ಉಗಾದಿ ಮಿಂದದ್ದೇ ದೀವಳಿಗೆ

■ ಡಾ. ಚಕ್ಕೆರೆ ಶಿವಶಂಕರ್

ಜನಸಮುದಾಯದ ನಂಬಿಕೆ, ಶ್ರದ್ಧೆ, ಕ್ರಿಯಾಚರಣೆಗಳ ಮೊತ್ತವೇ ಹಬ್ಬಗಳು. ಯಾವುದೇ ಜನಾಂಗದ ಸಂಕೀರ್ಣ ಸಾಂಸ್ಕೃತಿಕ ಘಟಕವಾದ ಹಬ್ಬಗಳ ಅಧ್ಯಯನವು ಸಂಸ್ಕೃತಿಯನ್ನು ಅಧ್ಯಯನಿಸುವಲ್ಲಿ, ಪರ್ಯಾಯ ಸಂಸ್ಕೃತಿಯನ್ನು ಕಟ್ಟುವಲ್ಲಿ ನೆರವಿಗೆ ಬರುತ್ತದೆ.

ಜನಪದರಿಗೆ ಮಾರ್ನವಮಿ, ಯುಗಾದಿ ಮತ್ತು ದೀಪಾವಳಿಗಳು ಬಹಳ ದೊಡ್ಡ ಹಬ್ಬಗಳು. ಚೆನ್ನಾಗಿ ಮಳೆ ಹೂದು, ಹೊಲಗದ್ದೆಗಳಲ್ಲಿ ಪೈರು ಪಚ್ಚೆಗಳು ತೊನೆದಾಡುವ ಕಾಲದಲ್ಲಿ ದೀವಳಿಗೆ ನಾಡಿಗೆ ಕಾಲಿರಿಸುತ್ತದೆ. ನಿರ್ದಿಷ್ಟವಾಗಿ ವ್ಯವಸಾಯ ಮತ್ತು ಪಶುಪಾಲನೆಗೆ ಸಂಬಂಧಪಟ್ಟ ದೀಪಾವಳಿ ಹಬ್ಬವು ಕೃಷಿನೆಲ ಸಂಸ್ಕೃತಿಯ ಉತ್ಪತ್ತಿ. ನೆಲ-ಮುಗಿಲುಗಳ ಸಂಬಂಧ, ದುಡಿಮೆಗೆ ನೆರವಾಗುವ ಪಶುಪ್ರಾಣಿಗಳ ಬಗೆಗಿನ ಅತೀವವಾದ ಕೃತಜ್ಞತೆಯನ್ನು ಒಳಗೊಂಡ ದನಗಾಹಿ ಸಂಸ್ಕೃತಿಗೆ ಸಂಬಂಧಪಟ್ಟ ದ್ರಾವಿಡ ಹಬ್ಬ, ಕ್ರಮೇಣ ಆರ್ಯ ಪ್ರಣೀತ ಸಂಸ್ಕೃತಿಯಲ್ಲಿ ನರಕ, ಬಲಿ, ಕೃಷ್ಣರಿಗೆ ಸಂಬಂಧಪಟ್ಟ ವೈಯಕ್ತಿಕ ಹಬ್ಬವಾಗಿ ಪರಿಣಮಿಸಿದ ದೀಪಾವಳಿಯು ಮೂಲತಃ ವ್ಯವಸಾಯಕ್ಕೆ, ಪಶುಪಾಲನೆಗೆ ಸಂಬಂಧಪಟ್ಟದ್ದು, ಹಬ್ಬದ ಆಚರಣೆಗಳ ಸ್ವರೂಪವನ್ನು ಪರಿಭಾವಿಸಿದಾಗ ವಿದಿತವಾಗುತ್ತದೆ. ಈ ದಿಸೆಯಲ್ಲಿ ಜನಪದರ ಪ್ರಾದೇಶಿಕ ಸಂಸ್ಕೃತಿಯ ಹಬ್ಬವೆಂದು, ಆರ್ಯಸಂಸ್ಕೃತಿಯ ಹಬ್ಬಕ್ಕೆ ಹಂಬಿನಂತೆ ಹಬ್ಬಿ ಬೆಳೆದಿರುವ ಸಾಧ್ಯತೆಗಳನ್ನು ಗುರುತಿಸಬಹುದು.

ದೀಪಾವಳಿಯು ಸಾಂಘಿಕ ಹಾಗೂ ಸಾಮುದಾಯಿಕವಾದ ಹಬ್ಬ. ಕೇವಲ ಬಂಧು ಬಳಗವಷ್ಟೇ ಅಲ್ಲದೆ ಇಡೀ ಊರಿನ ಸಮಸ್ತರು ಒಟ್ಟಾಗಿ ಸೇರಿ ಸಂಭ್ರಮದಿಂದ ಆಚರಿಸುತ್ತಾರೆ. ಮೂರು ದಿನಗಳ ಕಾಲ ಒಂದಾದ ಮೇಲೊಂದರಂತೆ ನೀರು ತುಂಬುವುದು, ಮೀಯುವುದು, ಗೋಪೂಜೆ, ದನಗಳ ಕಿಚ್ಚು ಹಾಯಿಸುವುದು, ಹೋರಿಗಳ ಮೆರವಣಿಗೆ, ಹಿರಿಯರ ಪೂಜೆ, ಕೆರಕಲು ನೀಡುವುದು ಇತ್ಯಾದಿ ಹತ್ತಾರು ಬಗೆಯ ಸಂಪ್ರದಾಯಗಳು, ಆಚರಣೆಗಳನ್ನು ಒಳಗೊಂಡಿರುವ ವಿಶಿಷ್ಟವಾದ ಹಬ್ಬವಿದು.

ಕನ್ನಡ ನಾಡಿನಾದ್ಯಂತ ದೀಪಾವಳಿ ಹಬ್ಬವನ್ನು ಪ್ರಾದೇಶಿಕವಾಗಿ ಭಿನ್ನ ಭಿನ್ನ ಆಚರಣೆಗಳೊಂದಿಗೆ ಆಚರಿಸುತ್ತಾ ಬಂದಿದ್ದಾರೆ. ಕರ್ನಾಟಕದ ಉತ್ತರ ಭಾಗದಲ್ಲಂತೂ 'ಹಟ್ಟಿ ಹಬ್ಬ' ಎಂದು ವಿಜೃಂಭಣೆಯಿಂದ ಆಚರಿಸುತ್ತಾರೆ. ಹಟ್ಟಿ ಎಂದರೆ ದನಕರುಗಳ ವಾಸಸ್ಥಳ. ದನಕರುಗಳ ಹಬ್ಬವೇ ದೀವಳಿಗೆ ಹಬ್ಬ ಯಾ ಹಟ್ಟಿಹಬ್ಬ. ದೀವಳಿಗೆಯಲ್ಲಿ ಭರಮದೇವನನ್ನು ಹಟ್ಟಿಯ ಪಾಲಕನೆಂದು ಪೂಜಿಸುವುದರಿಂದ 'ಹಟ್ಟಿ ಹಬ್ಬ' ಎಂದೂ ಕರೆಯುತ್ತಾರೆ. ನಾನಿಲ್ಲಿ ಬೆಳವಲ ನಾಡನ್ನು ಹೊರತುಪಡಿಸಿ, ಬಯಲುಸೀಮೆಯಲ್ಲಿ ಆಚರಿಸುವ ದೀವಳಿಗೆ ಹಬ್ಬದ ವಿಶಿಷ್ಟ ಆಚರಣೆಗಳತ್ತ ಗಮನ ಹರಿಸಿದ್ದೇನೆ.

**ನೀರು ತುಂಬುವುದು :** ದೀವಳಿಗೆ ಹಬ್ಬದ ಹಿಂದಿನ ದಿನವೇ ನೀರು ತುಂಬುವ ಸಂಪ್ರದಾಯ ರೂಢಿಯಲ್ಲಿದೆ. ಮನೆಯಲ್ಲಿರುವ ಮಣ್ಣಿನ ಇಲ್ಲವೆ ಹಿತ್ತಾಳೆಯ ಗುಡಾಣ, ಹಂಡೆ-ಕಡಾಯಿಗಳನ್ನು ಚೆನ್ನಾಗಿ ತೊಳೆದು ಅವುಗಳಿಗೆ ಅರಿಶಿಣ-ಕುಂಕುಮ ಹಚ್ಚಿ ಪೂಜಿಸಿದ ನಂತರ ನೀರು ತುಂಬುತ್ತಾರೆ. ಜಿಲ್ಲೆಯಲ್ಲಿ ನೀರು ತುಂಬುವ ದಿನದಂದು ಲಿಂಗದಕಾಯಿ ಬಳ್ಳಿಯನ್ನು ತಂದು ಹಂಡೆ, ಕಡಾಯಿಗಳ ಕೊರಳಿಗೆ ಸುತ್ತುತ್ತಾರೆ. ಶನಿಯು ತನ್ನ ರಾಶಿಗೆ ಕಾಲು ಜಾವವಾದರೂ ಬಂದೇ ಬರುತ್ತೇನೆಂದು ಶಿವನನ್ನು ಒತ್ತಾಯಿಸಿದಾಗ ಅದಕ್ಕೆ ಒಪ್ಪಿದ ಶಿವ, ಶನಿಯಿಂದ ತಪ್ಪಿಸಿಕೊಳ್ಳಲು ಲಿಂಗದ ಕಾಯಿಯಲ್ಲಿ ಅವಿತುಕೊಂಡನೆಂಬ ಕಥೆ ಜನಮನದಲ್ಲಿ ಬೆಳೆದು ಬಂದಿದ್ದು, ಲಿಂಗದಕಾಯಿ ಬಳ್ಳಿಯನ್ನು ಹಂಡೆಗೆ ಕಟ್ಟುವುದರಿಂದ ತಮಗೂ ಸಹ ಶನಿಕಾಟ ತಪ್ಪುತ್ತದೆಂಬ ನಂಬಿಕೆಯಿಂದ ಹೀಗೆ ಮಾಡುತ್ತಾರೆ. ನೀರು ತುಂಬಿದ ನಂತರ ಸ್ನಾನ, ಮಡಿ ಇತ್ಯಾದಿ ಮೈ-ಮನಸ್ಸುಗಳೆರಡೂ ಚೊಕ್ಕಟವಾಗಿರಬೇಕೆಂಬ ಆಶಯ. ಸಾಮಾನ್ಯವಾಗಿ ಹೊಲ-ಗದ್ದೆಗಳಲ್ಲಿ ಹಗಲಿರುಳೆನ್ನದೆ ದುಡಿಯುವ ಜನಪದರಿಗೆ ಮೀಯುವುದೂ ಸಹ ದುಬಾರಿಯಾದ ಸಂಗತಿಯೇ ಆಗಿರುತ್ತದೆ. ಹಬ್ಬಗಳ ಸಂದರ್ಭದಲ್ಲಿ ಬಿಡುವಾಗಿ ಮನದಣಿಯೆ ಮೀಯುವುದರಿಂದ ಜಡತ್ವ ತೊಲಗಿ ಮೈ-ಮನಸ್ಸುಗಳು ಹಗುರಾಗಿ ಮುಂದಿನ ಚಟುವಟಿಕೆಗಳಿಗೆ ಅಣಿಯಾಗುತ್ತಾರೆ. ಆದ್ದರಿಂದಲೇ 'ಮಿಂದದ್ದೇ ದೀವಳಿಗೆ' ಎನ್ನುವ ಗಾದೆ ಹುಟ್ಟಿಕೊಂಡಿರುವ ಸಾಧ್ಯತೆಗಳಿವೆ.

**ಸಗಣಿ ಪಾಂಡವರನ್ನು ಬರಮಾಡಿಕೊಳ್ಳುವುದು :** ಮಿಂದು ಮಡಿಯಾದ ಹೆಂಗಸರು ಮನೆಯಲ್ಲಿ ಹಸುವಿನ ಸಗಣಿಯಿಂದ ಉಂಡೆಗಳನ್ನು ಮಾಡಿ, ಆ ಉಂಡೆಗಳಿಗೆ ಹೂವು, ಪತ್ರೆ, ಪೈರು, ಉತ್ರಾಣಿ ಕಡ್ಡಿ, ರಾಗಿ ತೆನೆ, ಉಚ್ಚೆಳ್ಳು ಹೂವು ಕಿತ್ತು ತಂದು ಸಿಕ್ಕಿಸುತ್ತಾರೆ. ಹೀಗೆ ಅಲಂಕರಿಸಿದ ಸಗಣಿ ಉಂಡೆಗಳನ್ನು ಮನೆಯ ಮುಂಬಾಗಿಲ ಗೋಡೆಯ ಅಕ್ಕಪಕ್ಕದಲ್ಲಿರುವ ದೀಪದ ಮೋಡಗಳು, ಹೊಸ್ತಿಲು, ಒಲೆದಂಡೆ, ತೋಟ, ತಿಪ್ಪೆ ಮೊದಲಾದ ಜಾಗಗಳಲ್ಲಿಟ್ಟು ಪೂಜಿಸುತ್ತಾರೆ. ಸಗಣಿ ಉಂಡೆಗಳನ್ನು ಪೂಜಿಸುವುದರ ಹಿಂದೆ ಉನ್ನತವಾದ ಆಶಯವೊಂದಿದೆ. ಸಗಣಿ ಉಂಡೆಗಳನ್ನು ಸಗಣಿ ಪಾಂಡವರು ಎಂದು ಕರೆದು ಅವರನ್ನು ಬರಮಾಡಿಕೊಳ್ಳುವ ಕ್ರಿಯಾತ್ಮಕ ಆಚರಣೆ ಇದು. ಪಾಂಡವರು ಬದುಕಿನಲ್ಲಿ ಎದುರಿಸಿದ ಕಷ್ಟಕಾರ್ಪಣ್ಯಗಳು ತಮ್ಮ ಬದುಕಿನಲ್ಲಿಯೂ ಸಹ ಮುಂದೆಂದಾದರೂ ಎದುರಾದಲ್ಲಿ ಅವುಗಳನ್ನು ಅನುಭವಿಸಿ ಗೆಲ್ಲುವ ಧೈರ್ಯ ತಮಗೂ ಬರಲೆಂಬ ಉದ್ದೇಶ ಈ ಆಚರಣೆಯ ಹಿಂದಿದೆ.

ಪಾಂಡವರು ಬದುಕಿನಲ್ಲಿ ಎದುರಿಸಿದ ಕಷ್ಟಕಾರ್ಪಣ್ಯಗಳು ತಮ್ಮ ಬದುಕಿನಲ್ಲಿಯೂ ಸಹ ಮುಂದೆಂದಾದರೂ ಎದುರಾದಲ್ಲಿ ಅವುಗಳನ್ನು ಅನುಭವಿಸಿ ಗೆಲ್ಲುವ ಧೈರ್ಯ ತಮಗೂ ಬರಲೆಂಬ ಉದ್ದೇಶ ಈ ಆಚರಣೆಯ ಹಿಂದಿದೆ.

ದೀಪಾವಳಿ ತಿಂಗಳಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರತಿದಿನ ಸಂಜೆ ಮನೆಯ ಮುಂಬಾಗಿಲಲ್ಲಿರುವ ದೀಪದ ಗೂಡುಗಳಲ್ಲಿ 'ತಿಪ್ಪಯ್ಯ'ನನ್ನಿಡುವುದು ರೂಢಿಯಲ್ಲಿದೆ. ಅಂದರೆ ದೀಪದ ಗೂಡುಗಳಲ್ಲಿ ಸಗಣಿ ಮುದ್ದೆ ತಟ್ಟಿ ಅದಕ್ಕೆ ಉಚ್ಚೆಳ್ಳು ಹೂವು, ಪತ್ರೆ ಮೊದಲಾದವನ್ನು ಸಿಕ್ಕಿಸಿ ತಟ್ಟಿದ ಸಗಣಿ ಮುದ್ದೆಯ ಮೇಲೆ ಮಣ್ಣಿನ ಹಣತೆಯನ್ನು ಹಚ್ಚಿಡುತ್ತಾರೆ.

**ಕಿಚ್ಚು ಹಾಯಿಸುವುದು :** ದೀವಳಿಗೆ ಹಬ್ಬದಲ್ಲಿ ದನಕರುಗಳಿಗೇ ಹೆಚ್ಚಿನ ಪ್ರಾಧಾನ್ಯತೆ. ಮನೆಯಲ್ಲಿರುವ ಜಾನುವಾರುಗಳನ್ನು ಚೆನ್ನಾಗಿ ತೊಳೆದು ಅವುಗಳ ಕೊಂಬುಗಳನ್ನು ನಯವಾಗಿ ಹೆರೆದು ಅದಕ್ಕೆ ಸೊಗಸಾದ ಬಣ್ಣವನ್ನು ಬಳಿಯುತ್ತಾರೆ. ಸುಣ್ಣ ಮತ್ತು ಕೆಮ್ಮಣ್ಣುಗಳಿಂದ ಬೆನ್ನಿನ ಮೇಲೆ ಹಂಡಗಳನ್ನು ಹಾಕುತ್ತಾರೆ. ಹೂವಿನ ಸರಗಳಿಂದ ಅಲಂಕರಿಸುತ್ತಾರೆ. ಕೋಡುಗಳಿಗೆ ಗುನ್ನಂಪಟ್ಟೆ ನಕ್ಕಿಗಳಿಂದ ಅಲಂಕರಿಸಿ, ಮೈಮೇಲೆ ಮಿಣಗುಟ್ಟುವ ಕನ್ನಡಿಗಳಿಂದ ಕೂಡಿದ ಜರತಾರಿ ಗೌಸುಗಳನ್ನು ಹೊದಿಸುತ್ತಾರೆ. ಹೀಗೆ ತಂತಮ್ಮ ಶಕ್ತ್ಯಾನುಸಾರ ಅಲಂಕರಿಸಿದ ಜಾನುವಾರುಗಳನ್ನು

ಸಂಜೆಯಾಗುತ್ತಿದ್ದಂತೆ ಊರ ಹೊರಗಿನ ಮಾರಿ ಗುಡಿಯ ಮುಂದಿರುವ ವಿಶಾಲವಾದ ಬಯಲಿನಲ್ಲಾಗಲಿ ಇಲ್ಲವೆ ಗೋಮಾಳದಲ್ಲಾಗಲಿ ಒಟ್ಟುಗೂಡಿಸುತ್ತಾರೆ. ಬೆಂಗಳೂರು, ಮಂಡ್ಯ, ತುಮಕೂರು ಮುಂತಾದ ಜಿಲ್ಲೆಗಳಲ್ಲಿ ಸಂಕ್ರಾಂತಿ ಹಬ್ಬದಲ್ಲಿ ದನಕರುಗಳ ಕಿಚ್ಚು ಹಾಯಿಸುವುದು ರೂಢಿಯಲ್ಲಿದ್ದರೆ, ಶಿವಮೊಗ್ಗ ಜಿಲ್ಲೆಯಲ್ಲಿ ದೀವಳಿಗೆಯಲ್ಲಿ ಕಿಚ್ಚು ಹಾಯಿಸುತ್ತಾರೆ. ದೀವಳಿಗೆಯ ದಿನ ಊರ ಹೊರಗಿನ ಬಯಲಲ್ಲಿ ''ಸೋಗೆ, ಹುಲ್ಲು, ಜೋಳದ ದಂಟು ಇತ್ಯಾದಿಗಳಿಂದ ಒಂದು ಗುಡಿಸಲನ್ನು ಊರ ದನಕಾಯುವವ ನಿರ್ಮಿಸಿರುತ್ತಾನೆ. ಊರ ಜನರೆಲ್ಲಾ ತಮ್ಮ ದೇವರನ್ನು ಹೊರಡಿಸಿಕೊಂಡು ಕುಂಬಾರನಿಂದ ಮಣ್ಣಿನ ಗೊಲ್ಲಕಪ್ಪನನ್ನು ಮಾಡಿಸಿಕೊಂಡು, ಎಡೆ, ಎಣ್ಣೆ, ಬೆಣ್ಣೆ, ಬಾಳೆಹಣ್ಣು, ಹಣ್ಣು ಕಾಯಿ, ಕರ್ಪೂರ, ಹೂ, ಪತ್ರೆಗಳೊಂದಿಗೆ ದನಕಾಯುವವನ ಹತ್ತಿರ ಬಂದು ಆ ಹುಲ್ಲಿನ ಗುಡಿಸಲಿನಲ್ಲಿ ಕುಳ್ಳಿರಿಸಿ ತಲೆಗೆ ಎಣ್ಣೆ ಹಚ್ಚಿ, ಬಾಯಿಗೆ ಬೆಣ್ಣೆ ಹಾಕಿ ತಂಪು ಮಾಡಿ ದೇವತೆಯನ್ನು ಪೂಜಿಸಿ ಗುಡಿಸಲಿಗೆ ಬೆಂಕಿ ಇಡುತ್ತಾರೆ. ಚರಗ ಮತ್ತು ಪಂಜು ಹಿಡಿದ ಇಬ್ಬರು ಯುವಕರು ದನಗಳ ಸುತ್ತ ಚರಗ ಚಲ್ಲುತ್ತಾ ಹೆಚ್ಚಲಿ ಹೋಲಿಗ್ಯ ಎಂದು ಕೂಗುತ್ತಾ ಪ್ರದಕ್ಷಿಣೆ ಹಾಕಿ ಬರುತ್ತಾರೆ. ದನಗಳನ್ನು ಕಿಚ್ಚಿನ ಮೇಲೆ ಹಾಯಿಸುತ್ತಾರೆ.'' (ಬಸವರಾಜ ನೆಲ್ಲೀಸರ : 1987) ಬೆಂಕಿಯನ್ನು ದಾಟಿಕೊಂಡು ಮನೆಗೆ ಹಿಂತಿರುಗುವ ದನಕರುಗಳನ್ನು ಒನಕೆ ದಾಟಿಸಿ ಕೊಟ್ಟಿಗೆಗೆ ಕರೆದುಕೊಳ್ಳುವ ಪದ್ಧತಿ ರೂಢಿಯಲ್ಲಿದೆ.

''ದೀವಳಿಗೆಯಲ್ಲಿ ದನ ಕೆಣಕಬ್ಯಾಡ : ಕಾರ್ತಬ್ಬದಲ್ಲಿ ಜನ ಕೆಣಕಬೇಡ'' ಎಂಬ ಮಾತಿದೆ. ಕಾರ್ತಿಕ ಮಾಸದಲ್ಲಿ ಎಲ್ಲೆಡೆ ಕೆರೆಕಟ್ಟೆ ತುಂಬಿ ಹಸಿರು ಚಲ್ಲಾಡಿರುತ್ತದೆ. ಸೊಂಪಾಗಿ ಮೇದು ದಷ್ಟಪುಷ್ಟವಾಗಿ ಬೆಳೆದ ಜಾನುವಾರುಗಳು ಸುಮ್ಮನೆ ಬೆದರಿಸಿದರೂ ಸಿರ್ರೆಂದು ಮೇಲೆ ಬೀಳುವಂತಿರುತ್ತವೆ. ಜನಪದರ ಆರ್ಥಿಕತೆಯ ಬೆನ್ನೆಲುಬಾದ ಜಾನುವಾರುಗಳ ದುಡಿಮೆಯ ಬಗೆಗೆ ಅವರಿಗಿರುವ ಅತೀವವಾದ ಪ್ರೀತಿ ಮತ್ತು ಕೃತಜ್ಞತೆಗಳು ಗೋಪೂಜೆ ಸಂದರ್ಭದಲ್ಲಿ ಕೋಡಿ ಹರಿಯುತ್ತವೆ.

**ಲಕ್ಕೀ ಲಕ್ಕೀ ಕುಯಾ :** ದೀವಳಿಗೆ ಸಂದರ್ಭದಲ್ಲಿ ಹಾಸನ ಜಿಲ್ಲೆಯಲ್ಲಿ ರೂಢಿಯಲ್ಲಿರುವ ವಿಶಿಷ್ಟವಾದ ಆಚರಣೆಯಿದು. ದೀಪಾವಳಿಯ ದಿನ ಮಬ್ಬಿನಲ್ಲೇ ಎದ್ದ ರೈತರು ಕಿತ್ತಳೆಯ ಎಳೆಯ ಗಿಡಗಳನ್ನು ಕಿತ್ತು ತಂದು ತಂತಮ್ಮ ಮನೆಗಳು, ತಿಪ್ಪೆಗಳ ಮೇಲೆ ಎಸೆಯುತ್ತಾರೆ. ನೆಲ್ಲೀಮರದ ಕೊನೆ, ಲಕ್ಕೀಕೊನೆ, ಗಾಳಿಮರದ ಕೊನೆಗಳನ್ನು ಕಡಿದುಕೊಂಡು ಬಂದು ತಮ್ಮ ಹೊಲಗದ್ದೆಗಳಿಗೆ ತೆಗೆದುಕೊಂಡು ಹೋಗುತ್ತಾರೆ. ಲಕ್ಕೀ ಲಕ್ಕೀ ಕುಯಾ ಎಂದು ಕೂಗುತ್ತಾ ಈ ಮೂರೂ ಕೊನೆಗಳನ್ನು ಹಿಡಿದುಕೊಂಡು ಹೊಲ ಗದ್ದೆಗಳ ಸುತ್ತು ಹಾಕಿಸಿ ಮನೆಗೆ ತಂದು ದಪ್ಪನಾದ ಕಂಬ ಒಂದಕ್ಕೆ ಮೂರು ಕೊನೆಗಳನ್ನು ಸೇರಿಸಿ ಕಟ್ಟಿ ಪೂಜಿಸುತ್ತಾರೆ. ಲಕ್ಕಿ, ನೆಲ್ಲಿ, ಗಾಳಿಮರಗಳು ಔಷಧೀಯ ಸಸ್ಯವರ್ಗಕ್ಕೆ ಸೇರಿದುವು. ತಾವು ಬೆಳೆಯುವ ಪೈರು ಪಚ್ಚೆಗೆ ಹುಳ ಬಿದ್ದು ಹಾಳಾಗದಿರಲಿ, ಯಾವುದೇ ಬಗೆಯ ಸಾಂಕ್ರಾಮಿಕ ರೋಗ ತಗುಲದಿರಲೆಂಬ ವೈದ್ಯಕೀಯ ಪ್ರಜ್ಞೆ ಈ ಆಚರಣೆಯ ಹಿಂದಿರಲೂ ಸಾಕು.

**ಹಾಸ್ಯ ಚೇಷ್ಟೆಗಳು :** ದೀಪಾವಳಿ ಹಬ್ಬದಲ್ಲಿ ಹೊಸದಾಗಿ ಮದುವೆಯಾದ ಅಳಿಯ, ಮಾವನ ಮನೆಗೆ ತಪ್ಪದೆ ಬರಬೇಕು. ಹೀಗೆ ಬಂದ ಅಳಿಯನನ್ನು ಅವನ ನಾದಿನಿಯರು, ಭಾವಮೈದುನಂದಿರು ನಾನಾ ಥರದ ಚೇಷ್ಟೆಗಳಿಂದ ಗೋಳು ಹೊಯ್ದುಕೊಳ್ಳುತ್ತಾರೆ. ಇದೇ ರೀತಿ ಅತ್ತೆ-ಮಾವ, ಅಳಿಯ-ಸೊಸೆ, ಭಾವ-ನಾದಿನಿಯರ ನಡುವೆ ಸಹ ಹಾಸ್ಯಮಯ ಚೇಷ್ಟೆಗಳು ನಡೆಯುತ್ತವೆ. ಶಿವಮೊಗ್ಗ ಜಿಲ್ಲೆಯಲ್ಲಿ ಇದನ್ನು ಕೆರಕಲು ಎಂದು ಕರೆಯುತ್ತಾರೆ. ಕೆರಕಲು ಹಾಕುವಾಗ ಆ ಎಂದರೆ ಆರು ಸಾರಿ, ಓ ಎಂದರೆ ಒಂಬತ್ತು ಸಾರಿ, ಏ ಎಂದರೆ ಎಂಟು ಸಾರಿ ಹಾಗೆಂದವರು ಕೆರೆದುಕೊಳ್ಳಬೇಕು. ಸಂಭಾಷಣೆ ನಡೆಯುವಾಗ ಮಧ್ಯದಲ್ಲಿ ಹೂಂಗುಟ್ಟಿದರೆ 'ಕೆರಕೋ' ಎನ್ನುತ್ತಾರೆ.

**ದೀವಳಿಗೆ ದಂಡು :** ಮಂಡ್ಯ, ತುಮಕೂರು, ಹಾಸನ, ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ದೀಪಾವಳಿ ಹಬ್ಬದಲ್ಲಿ ದೀವಳಿಗೆ ದಂಡು ಊರಾಡುವ ಆಚರಣೆ ರೂಢಿಯಲ್ಲಿದೆ. ಇದನ್ನು 'ಭಾಗವಂತಿಕೆ ಮೇಳ' ಎಂದೂ ಕರೆಯಲಾಗುತ್ತದೆ. ವೈಷ್ಣವ ಸಂಪ್ರದಾಯಕ್ಕೆ ಸೇರಿದ ಈ ಮೇಳದಲ್ಲಿ ಸುಮಾರು ಹತ್ತರಿಂದ ಹದಿನಾಲ್ಕು ಮಂದಿ ಹಳದಿ ಸಮವಸ್ತ್ರವನ್ನು ಧರಿಸಿ ಕೈಯಲ್ಲಿ ಚಿಕ್ಕನಾದ ಹಳದಿ ಬಾವುಟಗಳನ್ನು ಹಿಡಿದು ಕಾಲಿಗೆ ಗೆಜ್ಜೆ ಕಟ್ಟಿ, ಕೈಯಲ್ಲಿ ತಾಳ ಹಿಡಿದು ರಾಮ, ಹನುಮಂತ, ರಂಗಸ್ವಾಮಿ ಮುಂತಾದ ದೇವರ ಪದಗಳನ್ನು ಹಾಡುತ್ತಾ ಕುಣಿಯುತ್ತಾ ಊರು ಸುತ್ತುತ್ತಾರೆ. ಈ ಮೇಳದಲ್ಲಿ ಕೋಡಂಗಿ ಪಾತ್ರಧಾರಿ ಇದ್ದು ಆಕರ್ಷಣೀಯ ಮತ್ತು ಮನರಂಜನಾತ್ಮಕವಾಗಿರುತ್ತದೆ.

**ಪಂಜಿನ ಮೇಳ :** ದೀವಳಿಗೆ ಇನ್ನೆಂಟು ದಿನಗಳಿವೆ ಎನ್ನುವಾಗಲೇ ಊರ ತಳವಾರ ಮನೆಗೊಂದರಂತೆ ಪಂಜುಗಳನ್ನು ಹಂಚುತ್ತಾನೆ. ದೀವಳಿಗೆಯ ಮೊದಲ ರಾತ್ರಿಯಿಂದಲೇ ಊರಿನ ತರುಣರು ತಳವಾರನು ವಿತರಿಸಿದ ಪಂಜುಗಳನ್ನು ಹಚ್ಚಿಕೊಂಡು ಒಟ್ಟಾಗಿ ತೂರಾಡಲು ಊರಾಡಲು ಹೊರಡುತ್ತಾರೆ. ಊರಿನ ಪ್ರತಿಯೊಂದು ಮನೆಯ ಮುಂದೂ ವೃತ್ತಾಕಾರವಾಗಿ ನಿಂತುಕೊಂಡು ಹಚ್ಚಿದ ಪಂಜುಗಳನ್ನು ನಾನಾ ಶೈಲಿಗಳಲ್ಲಿ ತಿರುಗಿಸುತ್ತಾ ಆ ಮನೆಯಲ್ಲಿರುವವರ ಮೇಲೆ ಹಾಡು ಕಟ್ಟಿ ಹೇಳುತ್ತಾರೆ. ಹಾಡಿನ ಆಯ್ಕೆಯಲ್ಲಿ ಸ್ವಾತಂತ್ರ್ಯವಿರುತ್ತದೆ. ಅಂದು ಅಶ್ಲೀಲ ಹಾಡು ಕಟ್ಟಿ ಬಯ್ದರೂ ಸಹ ಯಾರೂ ಆ ತರುಣರನ್ನು ಆಕ್ಷೇಪಿಸುವಂತಿಲ್ಲ.

**ಅಂಟಿಕೆ - ಪಂಟಿಕೆ :** ಶಿವಮೊಗ್ಗ ಜಿಲ್ಲೆಯಲ್ಲಿ ರೂಢಿಯಲ್ಲಿರುವ ತೀರಾ ವಿಶಿಷ್ಟವಾದ ದೀಪಾವಳಿ ಸಂಪ್ರದಾಯವಿದು. ಅಂಟಿಕೆ-ಪಂಟಿಕೆ ಸಂಪ್ರದಾಯಕ್ಕೆ ಸೇರಿದ ಹಾಡಿನ ಭಂಡಾರವೇ ಜಾನಪದದಲ್ಲಿದೆ. ದೀಪಾವಳಿಯ ದಿನ ರಾತ್ರಿ ಊರವರೆಲ್ಲರೂ ದೇವಸ್ಥಾನದಲ್ಲಿ ಸೇರಿ ದೇವರನ್ನು ಪೂಜಿಸಿ, ದೇವರ ಆರತಿಯಿಂದ ಹಣತೆಯನ್ನು ಹಚ್ಚಿಕೊಂಡು ಆ ಹಣತೆಯ ಜ್ಯೋತಿಯನ್ನು ಊರಿನ ಹಾಗೂ ಸುತ್ತಣ ಊರುಗಳ ಪ್ರತಿಯೊಂದು ಮನೆಗೂ ಕೊಂಡೊಯ್ದು ಜ್ಯೋತಿ ನೀಡುತ್ತಾರೆ. ದಾರಿಯುದ್ದಕ್ಕೂ 'ದೀಪ ದೀಪೋಳ್ಗೆ' ಎಂದು ಕೂಗುತ್ತಾ ಹೋಗುತ್ತಾರೆ. ಪಂಜಿನವರು ಜೊತೆಯಲ್ಲಿರುತ್ತಾರೆ. ದೀಪಾವಳಿಯ ಮೂರು ದಿವಸಗಳೂ ಈ ಆಚರಣೆ ರೂಢಿಯಲ್ಲಿರುತ್ತದೆ.

ದೀವಳಿಗೆ ದಂಡು, ಪಂಜಿನ ಮೇಳ, ಅಂಟಿಕೆ ಪಂಟಿಕೆ ಸಂಪ್ರದಾಯಗಳ ಹೆಸರುಗಳು ಬೇರೆಯಾದರೂ ಮೂಲ ಆಶಯ ಒಂದೇ ಆಗಿರುತ್ತದೆ. ಪಂಜು, ಜ್ಯೋತಿ, ದೀವಳಿಗೆಗಳು ಜನಸಮುದಾಯವನ್ನು ಕತ್ತಲಿನಿಂದ ಬೆಳಕಿನ ಕಡೆಗೆ ಕರೆದೊಯ್ಯುವ ಸಾಧನಗಳು.

**ಕೊಂತಿ ಪೂಜೆ :** ಮಂಡ್ಯ ಜಿಲ್ಲೆಯಲ್ಲಿ ದೀಪಾವಳಿ ತಿಂಗಳಿನಲ್ಲಿ ಆಚರಿಸುವ ಕೊಂತಿ ಪೂಜೆಯು ಸಹ ವಿಶಿಷ್ಟವಾದ ಆಚರಣೆಯಾಗಿದೆ. ಈ ಆಚರಣೆಯ ಬಗ್ಗೆ ಪ್ರೊ. ಡಿ. ಲಿಂಗಯ್ಯ ಮತ್ತು ಕ್ಯಾತನಹಳ್ಳಿ ಆಮಣ್ಣನವರು ಸುದೀರ್ಘವಾದ ಅಧ್ಯಯನವನ್ನೇ ನಡೆಸಿದ್ದಾರೆ. ತ್ರಿಕೋನಾಕಾರದ ಕಲ್ಲಿಗೆ ಹರಳೆಣ್ಣೆ ಸವರಿ ಆವರಿಕೆ ಹೂವಿನಿಂದ ಕಣ್ಣು, ಮೂಗು, ಬಾಯಿ ತಿದ್ದಿ ಅದಕ್ಕೆ ಆವರಿಕೆ ಹೂವು, ಹುಚ್ಚೆಳ್ಳು ಹೂವು ಮೊದಲಾದ ಹೂವುಗಳಿಂದ ಅಲಂಕರಿಸಿ ದೀಪ ಹಚ್ಚಿ ಪದಗಳನ್ನು ಹಾಡುತ್ತಾರೆ.

ದೀಪಾವಳಿ ಹಬ್ಬದ ಆಚರಣೆಗಳಿಗೆ ಸಂಬಂಧಪಟ್ಟಂತೆ ಬಯಲುಸೀಮೆಯಲ್ಲಿ ಅನೇಕ ನಂಬಿಕೆಗಳು ರೂಢಿಯಲ್ಲಿವೆ. ದೀಪಾವಳಿಯಲ್ಲಿ, ಮನೆಯಲ್ಲಿರುವ ಗಂಡುಮಕ್ಕಳಿಗೆ ಹೆಣ್ಣುಮಕ್ಕಳು ಆರತಿ ಬೆಳಗಿದರೆ ಆದರಿಂದ ಗಂಡುಮಕ್ಕಳ ಆಯುಷ್ಯ ವೃದ್ಧಿಸುತ್ತದೆ, ದೀಪಾವಳಿ ದಿನ ಕೃಷ್ಣ-ನರಕ ಇಬ್ಬರೂ ಭೂಮಿನೋಡಲು ಬಂದು ಹೋಗುತ್ತಾರೆ, ಇತ್ಯಾದಿ.

ದೀಪಾವಳಿ ಹಬ್ಬವು ಮುಖ್ಯವಾಗಿ ರೈತರ ಆರ್ಥಿಕ ಬೆನ್ನೆಲುಬಾದ ದನಕರುಗಳಿಗೆ ಮತ್ತು ಪೈರುಪಚ್ಚೆಗೆ ಸಂಬಂಧಪಟ್ಟ ಆಚರಣೆ. ದನಕರುಗಳ ಸಗಣಿಯನ್ನು ಗುಡ್ಡೆ ಹಾಕಿ ಮಾಡುವ ತಿಪ್ಪೆಯೂ ಸಹ ಜನಪದರಿಗೆ ಪೂಜ್ಯವಾದುದು. ದೀಪಾವಳಿ ಹಬ್ಬದಲ್ಲಿ ತಿಪ್ಪೆಯ ಮೇಲೆ ಸಗಣಿಯ ಗೂಡು ಮಾಡಿ ಅದನ್ನು ಹುಚ್ಚೆಳ್ಳು, ಪಚ್ಚೆ, ಗರಿಕೆ ಮುಂತಾದವುಗಳಿಂದ ಅಲಂಕರಿಸಿ ಅದರೊಳಗೆ ಮಣ್ಣಿನ ಹಣತೆ ಹಚ್ಚಿಟ್ಟು ಕೈ ಮುಗಿಯುತ್ತಾರೆ. ನಗರದ ನಾಗರಿಕರಿಗೆ ಲಕ್ಷ್ಮೀಪೂಜೆ ಮುಖ್ಯವಾದರೆ, ಜನಪದರಿಗೆ ಅವರ ದನಕರ ತಿಪ್ಪೆ, ಕೊಟ್ಟಿಗೆ, ಮರ ಮುಟ್ಟುಗಳೇ ಲಕ್ಷ್ಮಿ. ದನಗಳ ರಕ್ಷಣೆ ಮತ್ತು ಬೆಳವಣಿಗೆಗೆಂದೇ ಹುಟ್ಟಿಕೊಂಡ ಪಶು ಪ್ರಧಾನ ಆಚರಣಾತ್ಮಕ ಹಬ್ಬವಿದು. ಈ ಹಬ್ಬದಲ್ಲಿ ಪಾಂಡವರನ್ನು ನೆನೆಯುವುದು ಗಮನಾರ್ಹವಾದುದಾಗಿದೆ. ಪಾಂಡವರು ಚಿರಂಜೀವಿಗಳು : ಸತ್ಯ, ನ್ಯಾಯ, ಧರ್ಮದ ಹಾದಿಯಲ್ಲಿ ಬಾಳಿದವರು, ಎಂಬ ಹಾಡಿನ ಸಾಲಿನಂತೆ ಅವರು ಬಿತ್ತಿ ಹೋಗಿರುವ ಧರ್ಮದ ಹಾದಿಯಲ್ಲಿ ತಾವೂ ನಡೆಯಬೇಕೆಂಬ ವಿನಯ ಮತ್ತು ಗುಣವಂತಿಕೆಯನ್ನು ಮೆರೆಯುವ ಔದಾರ್ಯದ ಕುರುಹಾಗಿ ದೀವಳಿಗೆಯಲ್ಲಿ ಜನಪದರು ಸಗಣಿ ಉಂಡೆಗಳ ರೂಪದಲ್ಲಿ ಪಾಂಡವರನ್ನು ಸ್ಮರಿಸಿಕೊಳ್ಳುತ್ತಾರೆ. ■

ದೀಪಾವಳಿಯ ಹಬ್ಬದ ಶುಭಾಶಯಗಳು





# ಶ್ರೀ ಸತೀಶರೆಡ್ಡಿ ಪಾಟೀಲ

## ರಂಜೋಳ

- ಅಧ್ಯಕ್ಷರು :
  ತಾಲ್ಲೂಕಾ ಯುವ ಕಾಂಗ್ರೆಸ್ (ಐ) ಕಮಿಟಿ, ಸೇಡಂ
- ಸದಸ್ಯರು :
  ತಾಲ್ಲೂಕಾ ಪಂಚಾಯತ ಸೇಡಂ
- ಅಧ್ಯಕ್ಷರು :
  ವಾಸವದತ್ತಾ ಕಾರ್ಮಿಕ ಸಂಘ (ವಾಸವದತ್ತಾ ಸಿಮೆಂಟ್ ಕಂಪನಿ, ಸೇಡಂ)
- ನಿರ್ದೇಶಕರು
  ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್, ಸೇಡಂ

ದೀಪಾವಳಿಯ ಹಬ್ಬದ ಶುಭಾಶಯಗಳು





# ಬಸಯ್ಯ ಸಾಬಯ್ಯ ಗುತ್ತೇದಾರ್ ಗಾರಂಪಳ್ಳಿ

## ಗುಲಬರ್ಗಾ

- ಪ್ರಧಾನ ಕಾರ್ಯದರ್ಶಿಗಳು :
  ಕರ್ನಾಟಕ ರಾಜ್ಯ ಜನತಾದಳ [ಜಾತ್ಯಾತೀತ]
- ನಿರ್ದೇಶಕರು :
  ಲಿಡ್ಕರ್, ಬೆಂಗಳೂರು
- ಮಾಲೀಕರು :
  - ನ್ಯೂ ಚೈತನ್ಯ ವೈನ್ಸ್, ಗುಲಬರ್ಗಾ
  - ಚೈತನ್ಯ ಬಾರ್ ಆ್ಯಂಡ್ ರೆಸ್ಟೋರೆಂಟ್, ಬಸವಕಲ್ಯಾಣ (ಬೀದರ್)
  - ಸಂತೋಷ್ ವೈನ್ಸ್, ಬಸವಕಲ್ಯಾಣ (ಬೀದರ್)

# ಮಸ್ತ್ ಮಸ್ತ್ ಹುಡುಗ ಬಂದ



# ಉಪೇಂದ್ರ

ಚಿಟಿಕೆ ಕಾಮನ್‌ಸೆನ್ಸ್, ಎರಡು ಟೀ ಸ್ಪೂನು ಆವೇಶ, ಒಂದು ಮುಟಿಗೆ ತಂತ್ರಜ್ಞಾನ, ಅರಪಾವು ಆತ್ಮವಿಶ್ವಾಸ, ಒಂದು ಬೊಗಸೆ ಹೃದಯಮಿಡಿತ ಅರ್ಧಸೇರು ಅಂತರಾಳ, ಒಂದಿಡೀ ಕಡಾಯಿ ತುಂಬೋಷ್ಟು ಗಿಮಿಕ್ಕು ಇವೆಲ್ಲವನ್ನೂ ಸೇರಿಸಿ ಮಾಡಿದ ಅಡಿಗೆಗೆ 'ಗೊಂದಲಬಾತ್' ಎಂಬ ಹೆಸರಿಡಬಹುದು. ಇಷ್ಟು ಹೇಳಿದ ಮೇಲೆ ಈ 'ಗೊಂದಲಬಾತ್' ಅಡುಗೆಭಟ್ಟನ ಹೆಸರು 'ಉಪೇಂದ್ರ' ಅಂತ ಬೇರೆ ಹೇಳಬೇಕಾಗಿಲ್ಲ.

ಕಾಶೀನಾಥರ ಹತ್ತಿರ ಸಹಾಯಕನಾಗಿ ಸೇರಿದ ಉಪೇಂದ್ರರ ಬೆಳವಣಿಗೆ ನಡಿಗೆ ಅನ್ನುವ ಹಾಗಿಲ್ಲ, ಆ ವೇಗಕ್ಕೆ ಬಿಲ್ಲು ತೊರೆದ ಬಾಣದ ಉಪಮೆ ಕೂಡ ಕಡಿಮೆಯಾಗಬಹುದು.

ಉಪೇಂದ್ರರನ್ನು ಹೇಗಾದರೂ ಗಮನಿಸಿ. ಅವರ ವಿಷಯದಲ್ಲಿ ಮಾತುಕತೆಯೆಂದರೆ ಗೆದ್ದ, ಸೋತ ಸಿನೆಮಾಗಳ ಲೆಕ್ಕಾಚಾರವಲ್ಲ. ಅದು ಆರಿಸಿಕೊಂಡ ಕಥೆ, ಕಥೆ ಹೇಳುವ ರೀತಿ, ರೀತಿಗನುಗುಣವಾದ ಸಂಗೀತ, ಸಂಗೀತಕೊಪ್ಪುವ ಹಾಡು, ಹಾಡು ಹೇಳುವ ಕಥೆ, ಕಥೆಯನ್ನು ರೂಪಿಸಿದ ಉಪೇಂದ್ರ.... ಈ ರೀತಿ ಚರ್ಚೆ ಮೊದಲಾಗುತ್ತದೆ. ಅದಕ್ಕೇ ಉಪೇಂದ್ರರ ಚಿತ್ರ ಸೋತರೂ ಅವರು ಗೆದ್ದಿರುತ್ತಾರೆ.

ಅದಕ್ಕೇ ಉಪೇಂದ್ರರ ಚಿತ್ರ ಎಂದರೆ ಗಾಂಧಿಕ್ಲಾಸಿನ ಪ್ರೇಕ್ಷಕನೂ ಕೂಡಾ ಮೈಯೆಲ್ಲಾ ಕಣ್ಣಾಗಿ ನೋಡುತ್ತಾನೆ. ತಾನೆಲ್ಲೋ ಮನಸ್ಸಿನಾಳದಲ್ಲಿ ಯೋಚಿಸಿದ ವಿಷಯ 'ಉಪೇಂದ್ರ' ಹೇಳುತ್ತಾರೆ ಎಂದು ಕಾಯುತ್ತಾನೆ. ಯೋಚನೆಗೊಂದು ಹೊಸ ಆ್ಯಂಗಲ್ ಕೊಟ್ಟು ಉತ್ತರ ಹೇಳದೇ ಗೊಂದಲಕ್ಕೆ ಸಿಲುಕಿಸುವ 'ಉಪ್ಪಿ' ಯನ್ನು ಮನಸಾರೇ ಮೆಚ್ಚುತ್ತಾನೆ.

ಗಾಂಧೀನಗರದ ಪರಿಭಾಷೆಯಲ್ಲಿ ಹೇಳಬೇಕೆಂದರೆ ಉಪೇಂದ್ರ ಮಾಸ್‌ನಟ. ಯಾರೂ ಹೇಳದ ಕಥೆಯ ಕುದುರೆಯ ಮೇಲೆ ಸಿನಿಮಾ ರಂಗಕ್ಕಿಳಿದಿರುವ ರೇಸ್ ನಟ. ನಿರ್ಮಾಪಕರ ಜೇಬಿಗೆ ಕಾಸು ತರುವ ನಟ. ಪ್ರೇಕ್ಷಕನ ಪಾಲಿಗೆ ಮನಸ್ಸಿಗೂ ನಾಲಿಗೆಗೂ ಮಧ್ಯೆ ಫಿಲ್ಟರ್ ಕಿತ್ತು ಹಾಕಿರುವ ಎಕ್ಸ್‌ಟ್ರಾ ಫೋರ್ಸ್ ನಟ.

ಆದರೆ ಪ್ರೇಕ್ಷಕರಿಗೆ ಮೊದಲು ಪರಿಚಯವಾಗಿದ್ದು ನಿರ್ದೇಶಕ ಉಪ್ಪಿ. 'ತರ್ಲೇ ನನ್ಮಗ' ಡಬ್ಬಲ್ ಮೀನಿಂಗು ಅಂತನ್ನಿಸಿಕೊಂಡರೂ ದುಡ್ಡು ಮಾಡಿತು. 'ಶ್!' ಈತ ಪಕ್ಕಾ ಬೆಳೆಯಬಲ್ಲ 'ಮಸ್ತ್ ಮಸ್ತ್ ಹುಡುಗ' ಅನ್ನುವುದನ್ನು ಪ್ರೂವ್ ಮಾಡಿತು. 'ಆಪರೇಷನ್ ಅಂತ ಭಾಗ-2' ಸೋತರೂ ವಿಭಿನ್ನ ಕಥೆ ಗಮನ ಸೆಳೆಯಿತು. 'ಓಂ' ಅಂತೂ ಇದ್ದಬದ್ದ ದಾಖಲೆಗಳನ್ನು ಚಚ್ಚಿ ಹಾಕಿತು. ಇಡೀ ಚಿತ್ರರಂಗ ಪ್ರೇಕ್ಷಕವರ್ಗ ಉಪೇಂದ್ರರ ಕಡೆ ಕುತೂಹಲದಿಂದ ತಿರುಗಿ ನೋಡುತ್ತಾ, ಮುಂದೇನು ಕೊಡುತ್ತಾನೋ ಎಂಬ ನಿರೀಕ್ಷೆ ಶುರುವಾಗಿದ್ದೇ ಆಗ. ಉಪೇಂದ್ರ ಮಾತ್ರ ಇದ್ಯಾವುದರ ಪರಿವೆಯೇ ಇಲ್ಲದೇ ಮನದಲ್ಲಿ ಹೊಸ ಕನಸಿನ ಸ್ಕೆಚ್ಚು ಹಾಕಲು ಶುರು ಮಾಡಿದ್ದರು.

ಈ ಸಮಯದಲ್ಲೇ ತಯಾರಾದ ಉಪೇಂದ್ರರ ತೆಲುಗಿನ 'ಓಂಕಾರ' ಅಲ್ಲಿನ ಜನರ ಸ್ವೀಕಾರಕ್ಕೆ ಸಿಗಲಿಲ್ಲ. ಸ್ವಲ್ಪ ದೊಡ್ಡದೇ ಎನಿಸುವ ಗ್ಯಾಪ್‌ನಲ್ಲಿ ಉಪೇಂದ್ರರ ಕನಸು 'A' ರೂಪದಲ್ಲಿ ತೆರೆಗೆ ಬಂದಾಗ ಮಾತ್ರ ಉಪ್ಪಿ ಎಲ್ಲ ವಿಭಾಗದಲ್ಲಿ ಮತ್ತೆ ಗೆದ್ದಿದ್ದರು. ತಾವೊಬ್ಬರೇ ಗೆಲ್ಲುವುದಲ್ಲದೇ ಸಂಗೀತ ನಿರ್ದೇಶಕರನ್ನು, ಸಂಕಲನಕಾರರನ್ನು, ಕ್ಯಾಮರಾಮನ್‌ರನ್ನು ಹೀಗೆ ಎಷ್ಟೋ ಹೊಸ ಮುಖಗಳನ್ನೂ ಗೆಲ್ಲಿಸಿದ್ದರು. ನಿಜ ಜೀವನದ ಭೂಗತ ಲೋಕದ ಮಂದಿ ನಟಿಸಿದ್ದು, ಕಥೆ ಹೇಳುವ ರೀತಿಯನ್ನು ಪೂರ್ಣವಾಗಿ ಬದಲಿಸಿದ್ದು, ಮೊತ್ತ ಮೊದಲಿಗೆ ಮುಖ್ಯ ಮಂತ್ರಿಯೊಬ್ಬನ ನಡವಳಿಕೆಯನ್ನು ನೇರವಾಗಿ ಹೀಯಾಳಿಸಿದ್ದು, ಗೊಂದಲವನ್ನೇ ಒಂದು ತಂತ್ರವಾಗಿ ಬಳಸಿದ್ದು, ವಯಸ್ಕರಿಗೆ ಮಾತ್ರ ಎಂಬ ಸಂಕೇತಕ್ಕೆ ಹೊಸ ಅರ್ಥವನ್ನು ಕೊಟ್ಟಿದ್ದು ಎಲ್ಲವೂ ಈ ಚಿತ್ರದಲ್ಲೇ. ನಿರ್ದೇಶಕರಾಗಿದ್ದ ಉಪ್ಪಿ ನಟನಾಗಿ ಜನರ ಮನದಂಗಳಕ್ಕೆ ತಮ್ಮ ಕನಸಿನ ಕೂಸಿನೊಂದಿಗೆ ತಾವೂ ಬಂದು ನಿಂತಿದ್ದರು.



## ಅಭಿಮಾನಿಗಳ ರಿಕ್ವೆಸ್ಟು

- ಒಂದ್ಯಾವ್ದನ್ನಾ confusion ಇಲ್ದೇ ಇರೋ ಕಥೆ ಹೇಳು ಮಾರಾಯ.
- 'ಅವನಲ್ಲೀ ಇವಳಿಲ್ಲೀ ಮಾತಿಲ್ಲ ಕಥೆಯಿಲ್ಲ...'
- ಈ ತರದ ಸೈಲೆಂಟ್ ಸಾಂಗ್ ಒಂದಾದ್ರೂ ನಿನ್ನೆಲ್ಲಾ ಸಿನೆಮಾಗಳಲ್ಲಿರ್ಲಿ.
- ನೀನು ಮಾತಾಡೋ ಜೋರಲ್ಲಿ ಕೆಲವು ಡೈಲಾಗ್‌ಗಳು ಅರ್ಥವಾಗೊಲ್ಲ, ಹುಷಾರಾಗಿರು.
- ಡ್ಯಾನ್ಸ್ ಬರದೇ ಇರೋದನ್ನ ಕ್ಯಾಮೆರಾ ಟ್ರಿಕ್‌ನಲ್ಲಿ ಕವರಪ್ ಮಾಡ್ತಿದ್ದಿಯ. ಚೆನ್ನಾಗಿದೆ, ಆದ್ರೂ ಡ್ಯಾನ್ಸ್ ಕಲಿತ್ರೇ ಬೆಟರ್ರು.
- 'without ಗಿಮಿಕ್ ಒಂದು ಪಿಕ್ಚರ್ ಮಾಡಮ್ಮ...'



ಕನ್ನಡ ಚಿತ್ರರಂಗ ಪರಭಾಷಾ ನಟರನ್ನ ಕರೆಸಿಕೊಂಡಿದೆ. ಪರಭಾಷೆಗೆ ನಮ್ಮ ನಟರನ್ನು ಕಳಿಸಿಕೊಟ್ಟಿದೆ. ಆದರೆ ಪರಭಾಷೆಯಲ್ಲೂ ನಮ್ಮಲ್ಲೂ ಏಕಕಾಲಕ್ಕೆ ಮಿಂಚಿದ ನಟನೆಂದರೆ ಉಪೇಂದ್ರ ಒಬ್ಬರೆ. ಉಪೇಂದ್ರರನ್ನು ಹಾಕಿ ಚಿತ್ರ ಮಾಡಿದರೆ ಬೇರೆ ಭಾಷೆಗಳಿಗೆ ಒಳ್ಳೆ ಬೆಲೆಗೆ ಮಾರಾಟವಾಗುತ್ತದೆಂಬ ನಂಬಿಕೆ ನಿರ್ಮಾಪಕರುಗಳಿಗೆ ಈಗಾಗಲೇ ಬಂದಿದೆ. ನಿರ್ದೇಶಕನಾಗಿ ಬಂದ ಉಪೇಂದ್ರ ತಮ್ಮ ಚಿತ್ರಗಳಲ್ಲಿ ನಟರಾಗಿದ್ದು ಮಾತ್ರವಲ್ಲದೇ 'ಕನ್ಯಾದಾನಂ' ಎಂಬ ತೆಲುಗು ಚಿತ್ರದಲ್ಲಿ ನಟಿಸಿದ್ದಾರೆ. ಈಗ ಶಿವರಾಜ್‌ಕುಮಾರ್ ಜೊತೆಗೆ 'ಪ್ರೀತ್ಸೇ' ಚಿತ್ರದಲ್ಲಿ ನಟಿಸುತ್ತಿದ್ದಾರೆ. ತೆಲುಗಿನ ಮತ್ತೊಂದು ಚಿತ್ರಕ್ಕೆ 'yes' ಎಂದಿದ್ದಾರೆ. ಒಂದು ಕಾಲವಿತ್ತು, ಇಲ್ಲಿದ್ದ ನಟರು ಬೇರೆ ಭಾಷೆಗೆ ಹೋಗಿ ಅಲ್ಲಿ ಮಿಂಚಿ, ಮತ್ತಿಲ್ಲಿ ಬರುತ್ತಿದ್ದರು. ಆದರೆ ಉಪೇಂದ್ರ ಇಲ್ಲಿ ಮಿಂಚಿ ಆ ಬೆಳಕಿಗೆ ಪರಭಾಷಾ ಪಂಡಿತರು ತಿರುಗಿ ನೋಡುವ ಹಾಗೆ ಮಾಡಿದ್ದಾರೆ.

ಆದರೆ 'ಸ್ವಸ್ತಿಕ್'ನ ಸೋಲು ಅವರಿಗಾಗಿ ಕಾಯುತ್ತಿರುವಂತಿತ್ತು. 'A' ಚಿತ್ರದ ಸೂತ್ರಬದ್ಧವಲ್ಲದ ನಿರೂಪಣೆಯನ್ನು ಆತ್ಮೀಯವಾಗಿ ಅರಗಿಸಿಕೊಂಡಿದ್ದ ಪ್ರೇಕ್ಷಕನ ಮನಸ್ಸು, ಸ್ವಸ್ತಿಕ್‌ನ ಗೊಂದಲವನ್ನು ಸಾರಾಸಗಟಾಗಿ ತಿರಸ್ಕರಿಸಿ ಬಿಸಾಡಿತು. ಗೊಂದಲಗಳ ಸಮ್ಮೇಳನವೇ ಆಗಿದ್ದ ಸ್ವಸ್ತಿಕ್ ಸೋಲು ಉಪೇಂದ್ರರ ತಲೆಯ ಓವರ್‌ಡೋಸ್‌ನ ಪ್ರಭಾವ ಎಂದು ಇಂಡಸ್ಟ್ರಿ ಮಾತಾಡಿಕೊಂಡರೂ ಮುಂದೇನು ಮಾಡಬಹುದು ಈ ಉಪ್ಪಿ? ಎಂಬ ಕುತೂಹಲ ಮಾತ್ರ ಹಾಗೇ ಉಳಿಸಿಕೊಂಡಿತ್ತು. ಆ ಕುತೂಹಲಕ್ಕೆ ಪೂರಕವಾಗಿ ಉಪ್ಪಿಯ 'ಉಪೇಂದ್ರ' ಚಿತ್ರದ ಜಾಹೀರಾತುಗಳು ಕಾಣಿಸಿಕೊಳ್ಳತೊಡಗಿದವು.

ಇವೆಲ್ಲದರ ಮಧ್ಯೆ ಪ್ರೇಮಾ ಪ್ರಕರಣ, 'Z' ಎಂಬ ಪ್ರತ್ಯಸ್ತ್ರ ಉಪ್ಪಿಯ ಹೆಸರನ್ನು ಜನರ ನಾಲಿಗೆಯ ಮೇಲೆ ಉಳಿಸುವುದಕ್ಕೆ ಇನ್ ಡೈರೆಕ್ಟಾಗಿ ಸಹಾಯ ಮಾಡಿದವು. ಇವುಗಳೆಲ್ಲಾ ತೀರಿದ ನಂತರ ಉಪೇಂದ್ರರ ವೇವ್ ಹಾಗೇ ಉಳಿಸಿದ್ದು, 'ಉಪೇಂದ್ರ' ಚಿತ್ರದ ಪ್ರಚಾರ, ಆ ಪ್ರಚಾರದ ಪ್ರೀ ಪ್ರಚಾರ.

ಪ್ರತಿವಾರಕ್ಕೊಂದು ಗಿಮಿಕ್ಕು. 'ಉಪ್ಪಿಯನ್ನು ಕಂಡು ಹಿಡಿಯಬಲ್ಲಿರಾ?' ಎಂಬ ಪ್ರಶ್ನೆಯ ಪರುಖಿಲ್ಲು. ಇದು 2-ಡಿ ಚಿತ್ರ ಎಂಬ ಕ್ಯೂರಿಯಾಸಿಟಿ ಪತ್ರಿಕೆಗಳಲ್ಲಿ ರಾರಾಜಿಸತೊಡಗಿದವು. ಇಲ್ಲೆಲ್ಲಾ ಜನರ ಮನದಲ್ಲಿ ಎದ್ದದ್ದು ಒಂದೇ ಪ್ರಶ್ನೆ. ಹೆಚ್ಚು ಪ್ರಚಾರದೊಂದಿಗೆ ಬರುವ ಚಿತ್ರ ತೋಪಾಗುತ್ತದೆ. ಇದು ಹೇಗೋ? ಉಪೇಂದ್ರರಿಗೂ ಹೀಗೇ ಅನ್ನಿಸಿರಬೇಕು. ಹಲವಾರು ಪತ್ರಕರ್ತರ ಹತ್ತಿರ 'ಉಪೇಂದ್ರ' ಎಂಬ ಹೆಸರಿಟ್ಟಿದ್ದು ತಪ್ಪಾಯಿತೇ, ಒಪ್ಪಾಯಿತೇ ಎಂಬ ಗೊಂದಲವನ್ನು ತೋಡಿಕೊಂಡಿದ್ದರು.

ಆದರೆ ಪ್ರೇಕ್ಷಕ ಗೊಂದಲಕ್ಕೆ ತಯಾರಾಗಿದ್ದ, Confusionಗೆ ತಯಾರಾಗೇ ಉಪೇಂದ್ರ ಚಿತ್ರವನ್ನು ನೋಡಿದ. ನೋಡಿ ಈಚೆ ಬಂದಾಗ ನೋಡುಗನ ಮುಖದಲ್ಲಿದ್ದುದು ಗೊಂದಲವೂ ಅಲ್ಲ; ಸಂಭ್ರಮವೂ ಅಲ್ಲ; ಬದಲಿಗೆ ಷಾಕ್. ಆ ಆಘಾತವೇ ಈವತ್ತು ಉಪೇಂದ್ರನನ್ನು ಚರ್ಚೆಯ ವಸ್ತುವನ್ನಾಗಿಸಿದೆ, ಗೆಲ್ಲಿಸಿದೆ. ಈ ಗೆಲುವು ಉಪ್ಪಿಗೆ ಸಂತಸದ ಜೊತೆಗೆ ಇನ್ನೊಂದು ಕನಸು. ಇನ್ನೊಂದು ಗೊಂದಲದ ಕಡೆಗೆ ಹೋಗಲು ಹಸಿರು ನಿಶಾನೆ ತೋರಿಸಿದೆ. ಗೆದ್ದ ಖುಷಿಗೊಂದು ಕಂಗ್ರಾಟ್ಸ್ ಎಲ್ಲರ ಬಾಯಿಂದಲೂ ಹೇಳಿಸಿಕೊಂಡಿದೆ. ■



## 'ಉಪೇಂದ್ರ' ಗೆದ್ದದ್ದು....?

'ಉಪೇಂದ್ರ' ಚಿತ್ರ ಗೆದ್ದದ್ದು ಹೇಗೆ?' ಎಂಬ ಪ್ರಶ್ನೆಯನ್ನು ಒಂದು ಗುಂಪಿಗೆಸೆಯಿರಿ. ಒಬ್ಬೊಬ್ಬರದು ಒಂದೊಂದು ವ್ಯಾಖ್ಯಾನ ಶುರುವಾಗುತ್ತದೆ.

'ಬೆಸ್ಟು ಮ್ಯೂಸಿಕ್ ನೋಡಪ್ಪಾ...'

'ಗಿಮಿಕ್ಕು ಗುರು'

'ಒಂದೂವರೆ ವರ್ಷ ಗ್ಯಾಪಿತ್ತಲ್ಲ ಅದೇ ಮೇನ್ ರೀಸನ್ನು'

'ಉಪ್ಪಿ ಪಿಕ್ಚರ್ ಚೆನ್ನಾಗಿಲ್ಲಾಂತಂದ್ರೇ ಜನ ನಮ್ಮನ್ನ ದಡ್ಡರು ಅಂತಾರೆ ಸಾರ್'

'ಕೊಟ್ಟ ಕಾಸಿಗೆ ಮೋಸ ಮಾಡ್ದಿರೋ ಟೆಕ್ನಿಕ್ ಬಾಸ್'

'ಏನೋ ಇದೇಂತ ಹೋಗ್ತಾರೆ, ಏನಿದೆ ಅಂತ ತಿಳಿಯೊಲ್ಲ, ಏನಿದೆಯೋ ಅದು ಮಜ ಕೊಡುತ್ತೆ. ಇನ್ನೇನರ್ಥ ಇರಬಹುದೂ ಅಂತ ಮತ್ತೊಂದ್ಸರಿ ಹೋಗ್ತಾರೆ. ಆಯ್ತಲ್ಲ ಸಾರ್ ಒಬ್ಬೊಬ್ಬರದು ಎರಡೆರಡು ಟಿಕೇಟು'

'ಮುಖ್ಯವಾಗಿ Screenplay sir'

'ಕಥೇನೇ ಇಲ್ಲ, ಆದ್ರೂ ಕಥೆ ಹೊಸದು'

ಒಟ್ಟಿನಲ್ಲಿ, 'ಉಪೇಂದ್ರ' ಚಿತ್ರದ ಬಗ್ಗೆ ಎಲ್ಲರಿಗೂ ಒಂದೇ ಅಭಿಪ್ರಾಯವಿಲ್ಲ. ಒಬ್ಬೊಬ್ಬರದು ಒಂದೊಂದು. ಬಹುಶಃ ಈ ಅಭಿಪ್ರಾಯಗಳ ಭಿನ್ನತೆಯೇ ಗೆಲುವಿಗೆ ಕಾರಣವಾಗಿರಬಹುದೇ?

---

## ರಾಜಭವನ ರಸ್ತೆ!

**ಕುಡಿದ ಮತ್ತಿನಲ್ಲಿ ನಡುರಾತ್ರಿಯಲ್ಲಿ ನಡುಬೀದಿಯಲ್ಲಿ ಗಲಾಟೆ ಎಬ್ಬಿಸಿದ್ದ ಲೇಖಕರೊಬ್ಬರನ್ನು ಬೀಟ್ ಪೋಲೀಸರು ಸ್ಟೇಷನ್‌ಗೆ ಕರೆದೊಯ್ದರು. ಕೇಸ್ ಬುಕ್ ಮಾಡಿ ಅಡ್ರೆಸ್ ಬರೆಯಲು ಹೇಳಿದರು! ಲೇಖಕರು ರಾಜ್ಯಪಾಲರ ಹೆಸರು ಬರೆದು ರಾಜಭವನ ರಸ್ತೆ ಎಂದು ವಿಳಾಸ ಕೊಟ್ಟರು. ಮರುದಿನ ಡ್ಯೂಟಿಗೆ ಬಂದ ಇನ್ಸ್‌ಪೆಕ್ಟರ್ ''ಈ ಅಡ್ರೆಸ್‌ಗೆ ಕೇಸ್ ಬುಕ್ ಮಾಡಿದಿರಲ್ಲ ಬುದ್ಧಿ ಐತೇನ್ರಯ್ಯಾ!'' ಎಂದು ಪೇದೆಗಳಿಗೆ ಗದರಿಸಿ ಲೇಖಕರನ್ನು ರಿಲೀಸ್ ಮಾಡಿದರು.**

# ನನ್ನ ದಾಂಪತ್ಯ ಜೀವನ

## ಓದುಗರ ಅನಿಸಿಕೆ



ಸಂಸಾರ ರಥದ ಎರಡು ಚಕ್ರ ಗಂಡ-ಹೆಂಡತಿ. ರಥ ಸಾಗುವಾಗ ಉಂಟಾಗುವ ಏರಿಳಿತ, ಇರಿಸು ಮುರಸು, ಅದನ್ನು ಮರೆಸಿ ಸುಖದಲ್ಲಿ ತೇಲಿಸುವ ಪ್ರೀತಿ. ಇದಕ್ಕೆ ಕನ್ನಡಿ ಇಲ್ಲಿದೆ.

### ಮೆಚ್ಚಾದ ರಸಿಕತೆ

ನನ್ನ ದಾಂಪತ್ಯ ಜೀವನದಲ್ಲಿ ಹೊಸದಾಗಿ ಸರಸಕ್ಕಿಂತ ವಿರಸವೇ ಹೆಚ್ಚಾಗಿತ್ತು ಆ ವಿರಸ ಸರಸಕ್ಕೆ ನಾಂದಿಯಾಗಿತ್ತು. ಬೇಕು ಅಂತಾ ಅಳಿಸಿ ಆಮೇಲೆ ಸುಖದ ಸುಪ್ಪತ್ತಿಗೆಯಲ್ಲಿ ತೇಲಿಸುವ ನನ್ನವರ ರಸಿಕತನ ನಾನು ಮನಸಾರೆ ಮೆಚ್ಚಿರುವೆ.

ನನ್ನ ಮದುವೆ ಹಿರಿಯರ ಒಪ್ಪಿಗೆ ಮೇರೆಗೆ ನಡೆದದ್ದು. ಮದುವೆ ಮಾತುಕತೆ ಮುಗಿದು ಒಂಬತ್ತು ತಿಂಗಳಿಗೆ ನಮ್ಮ ಮದುವೆಯಾಗಿದೆ. ಆ ಒಂಬತ್ತು ತಿಂಗಳು ನಮ್ಮಿಬ್ಬರ ನಡುವೆ ನಮ್ಮ ಪ್ರೇಮ ಪತ್ರಗಳೇ ನಮ್ಮ ಪ್ರೀತಿಯ ಉಸಿರಾಗಿದ್ದವು. ಆ ಪ್ರೇಮ ಪತ್ರಗಳಿಂದ ನಮ್ಮಿಬ್ಬರ ಮನಸ್ಸು ಗುಣ ಭಾವನೆ ಹವ್ಯಾಸವನ್ನು ಅರ್ಥ ಮಾಡಿಕೊಳ್ಳುವಂತಿತ್ತು. ಮದುವೆ ಮುಗಿದ ಬಳಿಕ ನಮ್ಮವರು ನನಗೆ ಹೊಸದಾಗಿ ಕಾಣಿಸಲಿಲ್ಲ. ಮದುವೆಗೆ ಮುಂಚಿತವಾಗಿ ನಮ್ಮಿಬ್ಬರ ಭೆಟ್ಟಿ ನಾಲ್ಕೈದು ಸಲ ಆಗಿತ್ತು, ಅಂಥ ಸಂದರ್ಭದಲ್ಲಿ ನಾವಿಬ್ಬರೂ ಸ್ನೇಹಿತರಂತೆ ನಡೆದುಕೊಳ್ಳುತ್ತಿದ್ದೆವು. ಮೊದ ಮೊದಲು ನನ್ನವರನ್ನು ಎಷ್ಟು ತರದಿಂದ ಅರ್ಥಮಾಡಿಕೊಂಡಿದ್ದೆನೆಂದರೂ ಒಂದೊಂದು ಸಲ ಅವರ ಕೋಪ ಕಂಡಾಗ ಭಯವಾಗುತ್ತಿತ್ತು. ಆ ಕೋಪ ಇಳಿದು ನನ್ನನ್ನು ರಮಿಸಿದಾಗ, ಮೊದಲು ಎಷ್ಟು ಭಯವಾಗಿರುತಿತ್ತೋ ಅಷ್ಟೇ ಸಂತೋಷವಾಗುತ್ತಿತ್ತು.

ನಾನು ದೊಡ್ಡ ಮನೆಯಲ್ಲಿ ಹುಟ್ಟಿ ಬೆಳೆದವಳು. ನನ್ನ ಮದುವೆಯಾದಾಗ ನನ್ನವರು ನಿನ್ನ ಅಂದದ ಅರಮನೆ ನೋಡುವೆಯಂತೆ, ನನ್ನ ಹತ್ತಿರ ಬಂದಾಗ ತೋರಿಸುವೆ ಅಂತಾ ತಮಾಷೆ ಮಾಡುತ್ತಿದ್ದರು. ಮದುವೆ ಮುಗಿದ ಮೇಲೆ ಇಪ್ಪತ್ತು ದಿನಕ್ಕೆ ಈಗ ನಾವು ಇರುವ ಊರಿಗೆ ಬಂದೆವು. ಊರ ಹೊರಗಡೆ ಇರುವ ಬಾಡಿಗೆ ಮನೆ. ಸುತ್ತಮತ್ತ ಹೊಲಗಳು. ಮನೆಯಲ್ಲಿ ಕರೆಂಟ್ ಕೂಡ ಇರಲಿಲ್ಲ. ರಾತ್ರಿಯಾದರೆ ಕಂದೀಲ ಬೆಳಕಿನಲ್ಲಿ ಜೀವನ ನಡೆಸುವದು. ರಾತ್ರಿ ಗೋಡೆಯ ಮೇಲೆ ಚೇಳುಗಳು ಹಲ್ಲಿಗಳಂತೆ ಕುಳಿತಿರುತ್ತಿದ್ದವು. ಅಂಥ ವಾತಾವರಣದಲ್ಲಿ ನನ್ನವರ ಪ್ರೀತಿಯಲ್ಲಿ ಸಮಯವನ್ನು ಕಳೆದಿರುವೆ. ಕ್ಷಣಕ್ಷಣಕ್ಕೂ ಭಯದ ವಾತಾವರಣ. ರಾತ್ರಿಯಾದರೆ ಗವ್ ಎನ್ನುವ ಕತ್ತಲು ನನ್ನವರ ಪ್ರೀತಿಯಲ್ಲಿ ಬ್ಾಳಿಗೆ ಬೆಳಕನ್ನು ನೀಡಿದೆ. ಅಂದದ ಅರಮನೆಯಲ್ಲಿ ಬಾಳಿದೆ, ಬಾಳನ್ನು ಬೆಳಗಿದೆ. ಈಗ ನನ್ನವರ ಕೋಪತಾಪ ಎಲ್ಲವೂ ಕರಗಿದೆ. ಮೊದಲಿನ ಹಾಗೇ ಇಲ್ಲ. ಈಗ ನಾನು ಮೂರು ಮಕ್ಕಳ ತಾಯಿ ಆಗಿ ಗಂಡನಿಗೆ ಮುದ್ದಿನ ಮಡದಿಯಾಗಿರುವೆ. ವಿರಸಕ್ಕಿಂತ ಸರಸವೇ ತುಂಬಿದ ನನ್ನ ಬಾಳು ಬಂಗಾರವಾಗಿದೆ.

**ಚನ್ನಮ್ಮ**
ಪೋತ್ನಾಳ್

### ಸರಸ-ವಿರಸದ ಸಮರಸ



ನಮ್ಮಿಬ್ಬರ ದಾಂಪತ್ಯ ಇದುವರೆಗೂ ನಡೆದು ಬಂದದ್ದು ನನಗೆ ಆಶ್ಚರ್ಯವಾಗುತ್ತದೆ. ಅವರು ನನ್ನನ್ನಾಗಲೀ, ನಾನು ಅವರನ್ನಾಗಲೀ ಆರಾಧನಾ ಭಾವದಿಂದ ಕಂಡುದಿಲ್ಲ. ನನ್ನಲ್ಲಿರುವ ತಪ್ಪು ಅವರಿಗೆ ಬೃಹದಾಕಾರವಾಗಿ ಕಂಡರೆ ಅವರಲ್ಲಿರುವ ಚಿಕ್ಕ ತಪ್ಪೂ ನನಗೆ ಬಹಳ ದೊಡ್ಡದಾಗಿ ಕಾಣುತ್ತದೆ. ಒಟ್ಟಿನಲ್ಲಿ ನಮ್ಮಿಬ್ಬರಲ್ಲಿ ಹೊಂದಾಣಿಕೆ ಎಂಬುದೇ ಇಲ್ಲ. ಪರಸ್ಪರ ನಿಂದೆ, ದೋಷಾರೋಪಣೆಯಲ್ಲೇ ಕಾಲ ವ್ಯಯವಾಗುತ್ತಿದೆ. ದಿನಗಳುರುಳಿ, ವರುಷಗಳು ಗತಿಸಿ ನಮ್ಮ ಬಾಳ ಬಳ್ಳಿಯಲ್ಲಿ ಹೂವರಳಿ ಮಕ್ಕಳು ಕಣ್ಮುಂದೆ ಓಡಾಡುತ್ತಿದ್ದರೂ ಪರಸ್ಪರರಲ್ಲಿ ಕಚ್ಚಾಟ ನಿಂತಿಲ್ಲ. ಒಬ್ಬರನ್ನೊಬ್ಬರು ಬಯಸಿ ಪ್ರೀತಿಸಿಯೇ ದಂಪತಿಗಳಾದೆವು. ಅಜರಾಮರ ಪ್ರೇಮಿಗಳಾಗುವ ಕನಸು ಕಂಡೆವು. ಆದರೆ ನಮ್ಮಲ್ಲಿ ಜಗಳ ಪ್ರಾರಂಭವಾದರೆ ಸಾಕು ಇದು ಇನ್ನೇನೊ ಆಗಲಿದೆ ಎಂಬ ಭೀತಿ ಹುಟ್ಟಿಸುತ್ತಿತ್ತು ಎಲ್ಲರಲ್ಲೂ. ಪುನಃ ಒಂದೆರಡು ತಾಸಿನಲ್ಲೆ ಎಲ್ಲಾ ಬೆರಗಾಗಬೇಕು ಹಾಗಿರುತ್ತಿದ್ದೆವು. ವಿರಸದ ನಂತರದ ಸರಸದಲ್ಲಿ ಹಿತವಾದ ಸುಖವಿದೆ. ಊಟಕ್ಕೆ ಉಪ್ಪಿನಕಾಯಿಯಂತೆ ಜಗಳ ಇರಲೇಬೇಕು. ಆಗ ಊಟದ ರುಚಿ ಹೆಚ್ಚುವುದು. ಉಪ್ಪಿನಕಾಯಿಯೇ ಊಟವಾಗಬಾರದು. ಹಾಗಾದಾಗ ಮಾತ್ರ ಊಟವೇ ಬೇಡವೆನಿಸುವುದು.

**ವಿಮಲಾ ಇನಾಮದಾರ**
ಅಳವಂಡಿ.

## ಸಿಹಿ ಸಕ್ಕರೆಯಂತೆ

ದಾಂಪತ್ಯ ಜೀವನವು ಒಂದು ಮುಖ್ಯವಾದ ಸೇತುವೆ. ಅದನ್ನು ತಲುಪುವುದು ತುಂಬಾ ಕಷ್ಟ ಎಂದು ಕೆಲವರು ಹೇಳುತ್ತಾರೆ. ನನ್ನ ದಾಂಪತ್ಯ ಜೀವನವು ಹಾಲಿನಂತೆ ಪವಿತ್ರವಾಗಿದೆ. ನಮ್ಮ ಮದುವೆಯಾಗಿ ಎರಡು ವರ್ಷವಾಯಿತು. ಮದುವೆಯಾದ ದಿನದಿಂದ ಇದುವರೆಗೂ ನನ್ನ ಅಶೋಕ್‌ನ ಪ್ರೇಮ ಶಾಶ್ವತವಾಗಿದೆ. ಅಶೋಕ್ ನನ್ನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಾರೆ. ನಮ್ಮಿಬ್ಬರ ನಡುವೆ ಯಾವ ರಹಸ್ಯವೂ ಇಲ್ಲ. ಇಬ್ಬರಲ್ಲಿಯೂ ಹೊಂದಾಣಿಕೆ ಇದೆ. ನಮ್ಮಿಬ್ಬರ ನಡುವೆ ಯಾವುದೇ ಅನುಮಾನವಿಲ್ಲ. ಜಗಳವಂತೂ ಇಲ್ಲವೇ ಇಲ್ಲ. ನಾನು ಬೇರೆ ಗಂಡಸರ ಜೊತೆ ಮಾತನಾಡಿದರೆ ಅಶೋಕ್ ಅನುಮಾನಪಡುವುದಿಲ್ಲ, ಅವರು ಬೇರೆ ಹೆಂಗಸರ ಜೊತೆ ಮಾತನಾಡಿದರೆ ನಾನು ಅನುಮಾನಪಡುವುದಿಲ್ಲ. ನಮ್ಮಿಬ್ಬರ ಮನಸ್ಸು ಒಂದೇ. ನನ್ನ ಮಾತನ್ನು ಅವರು ಕೇಳುತ್ತಾರೆ. ಅವರ ಮಾತನ್ನು ನಾನು ಚಾಚು ತಪ್ಪದೇ ಕೇಳುತ್ತೇನೆ. ನನ್ನವರಿಗೆ ಯಾವುದೇ ಕೆಟ್ಟ ಅಭ್ಯಾಸಗಳು ಇಲ್ಲ. ನನಗೆ ಅಶೋಕ್‌ನಂಥ ಗಂಡ ಸಿಕ್ಕಿರುವುದು ನನ್ನ ಜನ್ಮಜನ್ಮದ ಅದೃಷ್ಟ ಎಂದು ನಾನು ಭಾವಿಸುತ್ತೇನೆ. "The marrages are made in haven" ಎಂಬ ಮಾತು ಸುಳ್ಳಾಗುವುದಿಲ್ಲ. ಅಶೋಕ್ ನನ್ನೊಂದಿಗೆ ತುಂಟತನ ಮಾಡಿ ನನ್ನ ರೇಗಿಸುತ್ತಾರೆ. ನನ್ನೊಂದಿಗೆ ಜಗಳವಾಡುತ್ತಾರೆ. (ತಮಾಷೆಗಾಗಿ) ನಂತರ ನಮ್ಮ ಜಗಳ ಊಟ ಮಾಡಿ ಮಲಗುವ ತನಕ ಅಷ್ಟೆ, ಅಮೇಲೆ ಇಬ್ಬರೂ ನಗುನಗುತ ಮಾತಾಡುತ್ತೇವೆ. ನಮ್ಮ ಅಕ್ಕ-ಪಕ್ಕದವರು ನಮ್ಮನ್ನು ಹೊಸದಾಗಿ ಮದುವೆಯಾದ ದಂಪತಿಗಳು ಎನ್ನುತ್ತಾರೆ. ನಾನು ಕಾಲೇಜಿನಲ್ಲಿ ಓದುತ್ತಿರುವಾಗ ಅಶೋಕ್‌ನನ್ನು ನೋಡಿದ್ದೆ. ಅವರು ನನಗಿಂತ ಒಂದು ವರ್ಷ ದೊಡ್ಡವರು. ಆಗಲೇ ನನ್ನ ಮತ್ತು ಅಶೋಕ್‌ನ ಮನಸ್ಸಿನಲ್ಲಿ ಪ್ರೇಮದ ಅಲೆಗಳು ಮೂಡಿದ್ದವು. ಆದರೆ ನಾವು ಒಬ್ಬರಿಗೊಬ್ಬರು ಹೇಳಲಿಲ್ಲ. ಹಾಗೇ ನಮ್ಮ ಪ್ರೇಮ ಎರಡು ವರ್ಷಗಳ ಕಾಲ ಸಾಗಿತು. ನಂತರ ಸ್ವಲ್ಪ ದಿವಸಗಳಲ್ಲಿ ನಮ್ಮ ಮತ್ತು ಅಶೋಕ್‌ರ ತಂದೆ, ತಾಯಿ ನಮ್ಮ ಮದುವೆಯ ನಿಶ್ಚಯ ಮಾಡಿದರು. ಆಗ ನಮಗೆ ಆದ ಸಂತೋಷ ಅಷ್ಟಿಷ್ಟಲ್ಲ. ನಮ್ಮ ಜೀವನ ಅನ್ಯೋನ್ಯವಾಗಿದೆ. ಅಶೋಕ್ ಹೊರಗೆ ದುಡಿಯಲು ಹೋದಾಗ ಅವರಿಗೆ ನನ್ನದೇ ಚಿಂತೆ. ನನಗೆ ಅವರದೇ ಚಿಂತೆ. ನಮಗೆ ಒಂದು ಹೆಣ್ಣುಮಗುವಿದೆ ಅದಕ್ಕೆ ಈಗ ಒಂದು ವರ್ಷ. ಈಗಲೂ ನಮ್ಮ ಪ್ರೇಮ ಶಾಶ್ವತವಾಗಿದೆ. ನಾನು ಸಹ ಅಶೋಕ್‌ನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತೇನೆ. ನಾನು ಅಶೋಕ್‌ರ ಕಷ್ಟ ಸುಖಗಳಲ್ಲಿ ಭಾಗಿಯಾಗಿದ್ದೇನೆ. ಸೀತೆ ತನ್ನ ಗಂಡ ರಾಮನೊಂದಿಗೆ ಕಾಡಿಗೆ ಹೋಗಿದ್ದು ಮತ್ತು ಹರಿಶ್ಚಂದ್ರನ ಜೊತೆ ಚಂದ್ರಮತಿಯೂ ಕಾಡಿಗೆ ಹೋಗಿದ್ದು, ಇವೆಲ್ಲ ತನ್ನ ಗಂಡನೊಂದಿಗೆ ಕಷ್ಟಸುಖದಲ್ಲಿ ಹೆಣ್ಣು ಭಾಗಿಯಾಗಿರಬೇಕೆಂದು ಸೂಚಿಸುತ್ತದೆ. ನಮ್ಮ ದಾಂಪತ್ಯ ಜೀವನ ಇನ್ನು ಮುಂದೆಯೂ ಹೀಗೆ ಸಿಹಿಯಾದ ಸಕ್ಕರೆಯಂತೆ ಇರಬೇಕೆಂದು ನನ್ನ ಆಸೆ.

**ನಯನ ಅಶೋಕ್ ಎಸ್.**
ಬೆಂಗಳೂರು.

## ಬಲವಂತದ ಉಣಿಸುವಿಕೆ



ಹಾಗೆ ನೋಡಿದರೆ ನನ್ನದು ಸುಖೀ ದಾಂಪತ್ಯ. ನನ್ನಾಕೆ ಮನವರಿತು ನಡೆಯುವ ಸತಿ. ನಡೆ, ನುಡಿ, ಜಾಣ್ಮೆ ಎಲ್ಲದರಲ್ಲೂ ಚುರುಕು. ಆಕೆಯೊಂದಿಗೆ ವಿರಸಕ್ಕೆ ಕಾರಣವಾಗುವ ಕೆಲವು ಸಂಗತಿಗಳೂ ಇವೆ: ಮೊದಲನೆಯದಾಗಿ ಆಕೆ ನಿರಾಶಾವಾದಿ. ಸದಾ 'ಮನೆ'ಯದೇ ಧ್ಯಾನ. ಯಾವುದೇ ವಿಷಯ ಪ್ರಸ್ತಾಪಿಸಿದರೂ ಕೊಂಕಣ ಸುತ್ತಿ ಮೈಲಾರಕ್ಕೆ ಬರುತ್ತಾಳೆ. ಆಕೆಯದು ಹಟದ ಸ್ವಭಾವ. ಇತರರಿಗೆ ಬಲವಂತದಿಂದ ಉಣಬಡಿಸುತ್ತಾಳೆ.

**ಜಯಸಿಂಹ,**
ಬೆಂಗಳೂರು

## ಅದೆಂಥದೋ ಅಧೈರ್ಯ!

ಮದುವೆಗೆ ಮುಂಚಿನ ಕನಸು ದಾಂಪತ್ಯದ ಶಾಖಕ್ಕೆ ಕರಗಿ ಮಾಯವಾಗುವುದು ಸಹಜ. ಅನನುಭವದ ನಗೆ, ಜವಾಬ್ದಾರಿಯಿಲ್ಲದ ಚೆಲ್ಲಾಟಗಳೆಲ್ಲಾ ಮೌನ ತಾಳಿದಾಗ ದಾಂಪತ್ಯದ ಗಂಭೀರ ಮುಖ ಕಾಣಸಿಕೊಳ್ಳುತ್ತದೆ. ನನ್ನ ಬಾಳಿನಲ್ಲಿ ಆದದ್ದೂ ಅದೇ.



ಮದುವೆಯಾದ ನಂತರ ಮೊದಲ ದಿನ ನನ್ನವಳಿಗೆ ನಾನು ಸಾಕಷ್ಟು ತಿಳಿ ಹೇಳಿದೆ. ಧೈರ್ಯ ತುಂಬಿದೆ. ಅವಳಲ್ಲಿ ತವರಿನ ಅಗಲಿಕೆ ತುಳುಕಿಸಿದ ಕಣ್ಣೀರು ಒರೆಸಿದೆ. ಹೆತ್ತವರ ಕಷ್ಟ, ಅಗಲಿಕೆಯ ನೋವು ಕುರಿತು ಮುಕ್ತವಾಗಿ ಮಾತಾಡಿ ಆಕೆಯ ಮನವೊಲಿಸಿದೆ. ನನ್ನೆಲ್ಲಾ ಸಮಜಾಯಿಷಿ ಕೇಳಿದ ನಂತರ ಅವಳಲ್ಲಿ ಅದೆಂಥದೋ ಅಧೈರ್ಯ ! ಈಗ ಮುಖದಲ್ಲಿ ಗೆಲುವು ತುಂಬಿಕೊಂಡು ಸಂಸಾರ ಬಂಧನದಲ್ಲಿ ಒಂದಾಗಿದ್ದಾಳೆ.

**ಅಕ್ಬರ್**, ಭಾಗ್ಯನಗರ

## ಲೈಂಗಿಕತೆಯ ಕೊರತೆ ಇರಕೂಡದು



ದಾಂಪತ್ಯ ಜೀವನದಲ್ಲಿ ಪ್ರೀತಿ ಎಂಬುದು ಬುನಾದಿ ಇದ್ದಹಾಗೆ. ಗಂಡು ಹೆಣ್ಣು ಪರಸ್ಪರ ಒಪ್ಪಿಕೊಂಡು, ಮದುವೆಯಾದ ಮೇಲೆ ಇಬ್ಬರ ನಡುವೆ ನೈಜವಾದ, ಭಾವನಾತ್ಮಕ ಸಂಬಂಧ ಬೆಸೆದುಕೊಳ್ಳುತ್ತದೆ. ಇದಕ್ಕೆ ಪೂರಕವಾಗಿ ಪ್ರೀತಿ-ವಿಶ್ವಾಸದ ತಳಹದಿಯ ಮೇಲಿರುವ ವೈವಾಹಿಕ ಬದುಕಿನ ಕಟ್ಟಡ ಭದ್ರವಾಗಿರುತ್ತದೆ.

ದಂಪತಿಗಳಲ್ಲಿ ಸಾಮರಸ್ಯದ ಕೊರತೆಯಾಯಿತೆಂದರೆ ಶತ್ರು ಅವರನ್ನು ಆಕ್ರಮಿಸುತ್ತದೆ. ಕ್ಷುಲ್ಲಕ ಕಾರಣಗಳಿಗಾಗಿ ಇಬ್ಬರೂ ಮುನಿಸಿಕೊಳ್ಳುತ್ತಾರೆ, ಕಚ್ಚಾಡುತ್ತಾರೆ, ಆಕಸ್ಮಾತ್ ತಪ್ಪು ಸಂಭವಿಸಿದರೆ ಹೇಳಿಕೊಳ್ಳಬೇಕು, ಪರಸ್ಪರ ಕ್ಷಮಿಸಿ ಮುನ್ನಡೆಯುವುದರಲ್ಲಿ ದೊಡ್ಡತನವಿದೆ. ಉಳಿದ ವಿಷಯಗಳಲ್ಲಿ ಸ್ವಲ್ಪ ಏರುಪೇರಾದರೂ ನಿಭಾಯಿಸಬಹುದು, ಆದರೆ ಪರಸ್ಪರ ಪ್ರೀತಿಭರಿತ ಲೈಂಗಿಕತೆಯ ಕೊರತೆ ಮಾತ್ರ ಇರಲೇಬಾರದು.

ನಮ್ಮ ಸಾಮಾಜಿಕ ಪದ್ಧತಿಯಲ್ಲಿ ವೈವಾಹಿಕ ಬದುಕಿನ ಬಹಳಷ್ಟು ಸಮಸ್ಯೆಗಳನ್ನು ತಂದೊಡ್ಡುವುದು, ಈ ಲೈಂಗಿಕ ಸಾಮರಸ್ಯ ಇಲ್ಲದಿರುವಿಕೆ ಎಂಬುದು ತಜ್ಞರ ಅಭಿಪ್ರಾಯವಾಗಿದೆ.

**ಸಿದ್ರಾಮ ಎಸ್. ವಿದ್ಯಾಸಾಗರ್**
ಬೀದರ್

# ನಾಳೆಗಳನ್ನು ಮಾಡುವವರು

'ಕನ್ನಡ ಸಿನಿಮಾ' ಎಂದೊಡನೆ ಮೂಗು ಮುರಿಯುವವರೇ ಹೆಚ್ಚಾಗುತ್ತಿದ್ದಾರೆ. ಅಂಥ ಹತಾಶೆ ಬೇಕಿಲ್ಲ. ಹಾಗೆಂದು ಇಲ್ಲಿ ಎಲ್ಲವೂ ಸರಿ ಎಂದೇನೂ ಅಲ್ಲ. ಚಲನಶೀಲ ಅಭಿವ್ಯಕ್ತಿ ಮಾಧ್ಯಮಕ್ಕೆ ಏಳುಬೀಳು ಸಹಜ. ಕೆಲವು ಬಾರಿ ತಲೆ ಕೆಡುವಷ್ಟು ಕೆಟ್ಟ ಸಿನಿಮಾ ಬರಬಹುದು. ಅವು ಜನಪ್ರಿಯತೆ ಗಳಿಸುವ ದುರಂತವೂ ಕಾಣಬಹುದು. ಆದರೆ ಚೈತನ್ಯದ ಸೆಲೆ ಪೂರ್ಣ ಬತ್ತುವುದೇ ಇಲ್ಲ. ಕಲ್ಲು ಸಂದಿಯ ನಡುವೆ ಹಸಿರು ಚಿಗುರಿ ನಿಲ್ಲುವ ಹಾಗೆ, ಮುದಗೊಳಿಸುವ ಸಂಗತಿ ನಡೆದೇ ಬಿಡುತ್ತದೆ.



ಡಾ. ರಾಜ್‌ಕುಮಾರ್

ಅಷ್ಟೆಲ್ಲ ವರ್ಷ ಮಂಡಿ ನೋವಿಂದ ಕೈಚೆಲ್ಲಿ ಕುಳಿತಿದ್ದ ಡಾ. ರಾಜ್ ಮೊನ್ನೆ ಇದ್ದಕ್ಕಿದ್ದಂತೆ ಮೈಕೊಡವಿ ಎದ್ದು 'ನಾನು ಮತ್ತೆ ಆಕ್ಟ್ ಮಾಡ್ತೀನಿ' ಅಂದಾಗ ಮೂಡಿದ ಚೈತನ್ಯದ ಕರೆಂಟ್ ಇದೆಯಲ್ಲ, ಅದೊಂದು ಅದ್ಭುತ. ಜಗತ್ತಿನ ಯಾವುದೇ ಭಾಷೆಯಲ್ಲೂ ಇಂಥ ಒಂದು ಪ್ರಚಂಡ ಚೈತನ್ಯ ಕೇಂದ್ರ ಇವತ್ತು ಉಳಿದಿಲ್ಲ. ಕನ್ನಡದ ವಿಶಿಷ್ಟತೆ ಇದು.



ಉಪೇಂದ್ರ, ಡಾಮಿನಿ



ಪ್ರೇಮಾ



ವಿಜಯಲಕ್ಷ್ಮಿ



ರಾಮ್‌ಕುಮಾರ್



ಹಂಸಲೇಖಾ

ಇಂಥ ಮಾತು ಬಂದಾಗೆಲ್ಲ ಮುಖ ಸಿಂಡರಿಸುವ ಸಿನಿಕರೂ ಇರುತ್ತಾರೆ. ಡಾ. ಎಪಿಜೆ ಅಬ್ದುಲ್ ಕಲಾಂಗೆ ದೇಶದ ರಕ್ಷಣಾ ಸಂಶೋಧನೆ ವಹಿಸಿ ನಾವು ನೆಮ್ಮದಿಯಿಂದ ಇರಬಹುದು ಅಂದರೆ ಒಪ್ಪುತ್ತೇವೆ. ಹಿಂದೊಮ್ಮೆ ಒಬ್ಬ ಇದ್ದ. ಆತನ ಹೆಸರು ಸ್ಯಾಂ ಪಿಡ್ರೋಡಾ. ಇವತ್ತು ದೇಶದ ಹಳ್ಳಿ ಹಳ್ಳಿಯಲ್ಲಿ ಟೆಲಿಫೋನ್ ಕ್ರಾಂತಿ ಸಾಧಿಸಿದವನು. ಅವನ ಬಗ್ಗೆ ಮೆಚ್ಚುಗೆ ಮಾತಾಡಿದರೆ ಯಾರೂ ಹುಬ್ಬೇರಿಸುವುದಿಲ್ಲ. ಅವರಿಬ್ಬರಲ್ಲಿ, ಡಾ.ರಾಜ್ ಅವರಲ್ಲಿ ಕಾಣುವುದು ಕರ್ತವ್ಯದಲ್ಲಿನ ಮಗ್ನತೆ. ಅಷ್ಟೇ ಅಲ್ಲ Devotion to duty ಅನ್ನುತ್ತೇವಲ್ಲ ಅದು. ಹಾಗಾಗಿ ಇವತ್ತಿಗೂ ಡಾ. ರಾಜ್ One man industry.

ಲಾಟರಿ ಟಿಕೆಟ್‌ಗೋ, ಕುದುರೆ ಬಾಲಕ್ಕೋ ಹಣ ಕಟ್ಟಿ ಮಜಾ ನಡೆಸುವ ವ್ಯಕ್ತಿಗಳ ಮುಂದೆ ಬಿಸಿಲಲ್ಲಿ ನೇಗಿಲು ಹಿಡಿದು ಉಳುತ್ತಾ, ಬಿತ್ತಿ, ಬೆಳೆಯುವ ರೈತ ತೀರಾ ಅನಾಕರ್ಷಣೀಯವಾಗಿ ಕಾಣುತ್ತಾನೆ. ಆದರೆ ಕ್ರಿಯಾಶೀಲತೆ, ಸೃಜನಶೀಲತೆ ಇರೋದು ರೈತನಲ್ಲಿ. ಮುಖ್ಯವಾಗಿ, ಆತನ ತಾಳ್ಮೆ, ಕಾರ್ಯತತ್ಪರತೆಗಳು ತನ್ನ ಜನಾಂಗಕ್ಕೆ ಜೀವ ತುಂಬುವ ಶಕ್ತಿ. ಇಂಥ ಕೃಷಿ ಮಾಡುವ ಜನ ಸಿನಿಮಾದಲ್ಲಿ ಕಡಿಮೆಯಾಗುತ್ತಿದ್ದಾರೆ. ನಿಜ. ಆದರೆ ಇಲ್ಲವೇ ಇಲ್ಲ ಎಂದು ಹೇಳುವಂತಿಲ್ಲ, ಅದೇ ಆಶಾಕಿರಣ.



ಎಚ್.ಸಿ. ವೇಣು



ಎಚ್.ಎಂ. ರಾಮಚಂದ್ರ

ನಾಯಕರು, ನಟರೇ ಜೀವಾಳ ಎನಿಸಿದ್ದ ಕನ್ನಡದಲ್ಲಿ ನಿರ್ದೇಶಕನಿಗೆ ಸ್ಟಾರ್‌ವ್ಯಾಲ್ಯೂ ತಂದಿತ್ತವರು ಪುಟ್ಟಣ್ಣ ಕಣಗಾಲ್. ಹೊಸದಕ್ಕೆ ತುಡಿಯುವಾಗ ಹಳೆಯದ್ದು ಗುಡಿಸಿ ಹೋಗುತ್ತದೆ. ಹಾಗೇ ಅವರು ಹೊಸದೊಂದು ತಲೆಮಾರಿನ ನಾಯಕ, ನಾಯಕಿಯರನ್ನು ಕಟ್ಟಿಕೊಟ್ಟರು. ಅದು ಮುಂದು ವರಿದಿದ್ದರೆ ಚಿತ್ರರಂಗ ಬೇರೆ ಆಗಬಹುದಿತ್ತು. ಹಾಗೆ ಆಗಲಿಲ್ಲ.



ಇತ್ತೀಚಿನ ದಿನಗಳಲ್ಲಿ ಉಪೇಂದ್ರ ಗಮನ ಸೆಳೆಯುತ್ತಿರುವ ನಿರ್ದೇಶಕ. ಆತನ ಬಗ್ಗೆ ಮಾತಾಡುವಾಗ ಯಶಸ್ಸು ಮುಂತಾದ್ದು ಮುಖ್ಯವಲ್ಲ. ಆತ ಒಂದು ತಲೆಮಾರಿನ ತಳಮಳದ ಅಭಿವ್ಯಕ್ತಿಗೆ ತುಡಿಯುವಾತ. ಇವತ್ತಿನ ತರುಣ ಜನಾಂಗದ ಫ್ಯಾಸಿನೇಷನ್, ಅತಿ ವೇಗದ ಬದುಕಿಗೆ ಹಾತೊರೆಯುವ ಹೊಸ ಪ್ರವೃತ್ತಿ. ಇದೆಲ್ಲದರ ಅಂತರಾಳದಲ್ಲಿ ಇರುವ ವೈಯಕ್ತಿಕ ಪ್ರೀತಿಯ ಕೊರತೆ ಮುಂತಾದುವನ್ನು ಆತ ದೃಶ್ಯ ಮಾಧ್ಯಮದಲ್ಲಿ ಕಟ್ಟಿಕೊಡಲು ಯತ್ನಿಸುತ್ತಿದ್ದಾನೆ.

ಆತ ನಿರ್ದೇಶಿಸಿದ 'ಓಂ'ನಲ್ಲಿ ಇದರ ಸೂಚನೆ ಮೊದಲು ಸಿಕ್ಕಿತ್ತು. ಆದರೆ ಅಲ್ಲಿ ಕಾಣುವ ಹಿಂಸೆ, ರೌಡಿ ಜಗತ್ತಿನ ವೈಭವದ ಎದುರು, ನವಿರಾದ ವೈಯಕ್ತಿಕ ಹೆಣ್ಣುಗಂಡಿನ ಸಂಬಂಧ ತೀರ ಗೌಣವಾಗಿಯೇ ಉಳಿದು ಬಿಟ್ಟಿತು.

ಆ ಕಾರಣಕ್ಕೆ ಏನೋ ಆತ 'A' ಚಿತ್ರದಲ್ಲಿ ರಾಚುವ ಹಾಗೆ ಹೆಣ್ಣು ಗಂಡಿನ ಸಂಬಂಧ ಚಿತ್ರಿಸಿ ಮುಂದಿಟ್ಟ. ಅದರ ಮುಂದುವರಿದ ಭಾಗ ಈಗ ಬಿಡುಗಡೆ ಆಗಿರುವ 'ಉಪೇಂದ್ರ'. ಇವೆರಡರಲ್ಲೂ ಸ್ವತಃ ಉಪೇಂದ್ರ ನಾಯಕ ಕೂಡ. ಬೇರೆಯವರು ಇಂಥದೊಂದು ಪಾತ್ರ Conceive ಮಾಡಿಕೊಂಡು ಅಭಿನಯಿಸಲಾರರೇನೋ ಎಂಬ ಆತಂಕದಿಂದಲೇ ಆತ ನಾಯಕನೂ ಆಗಬೇಕಾಯಿತು.

ಹಲವು ಮಿತಿಗಳಲ್ಲಿ ಹೊಸ ವಿಷಯ ತಿಳಿಸುವ ಮತ್ತು ಸಂವಹನದ ಮಾರ್ಗಕ್ಕೆ ಉಪೇಂದ್ರ ಯತ್ನಿಸುತ್ತಿರುವುದು ಇಲ್ಲಿ ಗಮನಾರ್ಹ. ಮತ್ತು ಆತ ಸಿನಿಮಾದ ಸಾಂಪ್ರದಾಯಿಕ ಜ್ಞಾನ ಮತ್ತು ತಂತ್ರದ ತಿಳುವಳಿಕೆಯೊಡನೆ ಈ ರಂಗಕ್ಕೆ ಕಾಲಿರಿಸಲಿಲ್ಲ. ಇದೆಲ್ಲಕ್ಕಿಂತ ಹೆಚ್ಚಾಗಿ ತಾನು ಹೇಳಬೇಕಾದ್ದು, ಹೇಳಬಹುದಾದ್ದು ಹೀಗೇ ಎಂಬ ಪರಿಜ್ಞಾನವೂ ಆತನಲ್ಲಿದೆ. ಮಾಧ್ಯಮದ ಮತ್ತು ಉದ್ಯಮದ ಚೌಕಟ್ಟಿಗೆ ಒಗ್ಗಿಕೊಳ್ಳುತ್ತಾ, ರಾಜಿ ಮಾಡಿಕೊಳ್ಳುವ ಜನ ಹೆಚ್ಚು. ಅಂಥದರಲ್ಲಿ ಈತ ಇಡೀ ಮಾಧ್ಯಮ ಮತ್ತು ಉದ್ಯಮವನ್ನು ತನಗೆ ಒಗ್ಗಿಸಿಕೊಂಡು ಯಶಸ್ಸು ಸಾಧಿಸುತ್ತಾ ಇರುವುದು ಮರೆಯಬಾರದು.

ಹಾಗೆ ನೋಡಿದರೆ ಉಪೇಂದ್ರ ಸಾಧಿಸಿರುವುದು ಕಡಿಮೆ. ಆದರೆ ಆತ ಮಾಡಬಹುದಾದುದರ ಸೂಚನೆ ಇಲ್ಲಿದೆ. ಇನ್ನೂ ತರುಣ. ಈಗಿನ ಹಸಿ ಹಸಿ ಭಾವ, ಒತ್ತಡಗಳು ಕಳಚಿ, ಮಾಗಿ ನಿಂತಾಗ ಉಪೇಂದ್ರ ತೀರಾ ಮಹತ್ತಾದುದನ್ನು ಕನ್ನಡ ಚಿತ್ರರಂಗಕ್ಕೆ ಕೊಡಬಲ್ಲ. ಆ ಕಾರಣಕ್ಕೇ ಆತ ಅತ್ಯಂತ ಭರವಸೆಯ ವ್ಯಕ್ತಿಯಾಗಿ ಇಂದು ಕಾಣುತ್ತಾನೆ.

ಸ್ವಲ್ಪ ಮಟ್ಟಿಗೆ ಇಂಥ ಭರವಸೆ ಇಡಬಹುದಾದ ಇನ್ನೂ ಹಲವು ಜನ ಕನ್ನಡದಲ್ಲಿ ಇದ್ದಾರೆ. ನಿರ್ದೇಶಕ ಕೆ.ವಿ. ರಾಜು ಅಂಥವರು. ಆದರೆ ಆತ ರಿಸ್ಕ್ ತೆಗೆದುಕೊಳ್ಳಲು ಹೆದರುತ್ತಾರೆ. ಸತ್ವಶಾಲಿ ಸ್ಕ್ರಿಪ್ಟ್ ರಚನೆಯಲ್ಲೂ ಪಳಗಿರುವ ರಾಜು, ರೆಟಾರಿಕ್‌ಗೆ, ಓವರ್ ಎಂಫೆಸಿಸ್‌ಗೆ ನೀಡುತ್ತಿರುವ ಒತ್ತು ಕೈಬಿಟ್ಟು ಇನ್ನಷ್ಟು ಸಹಜವಾದ ಶೈಲಿಗೆ ಹೊರಳುವುದಾದರೆ ಹೆಚ್ಚಿನ ಸಾಧನೆ ಮಾಡಬಹುದು. ಆದರೆ ಬದುಕಿನ ಅವಶ್ಯಕತೆಗಳು ಮತ್ತು ನಿರ್ಬಂಧಗಳು ಹೆಚ್ಚು ಸಂಕೀರ್ಣ. ಹೀಗಾಗಿಯೇ ರಾಜು ಇಂಥ ಒಂದು ತಿರುಗಣೆ ಮಡುವಿಂದ ಹೊರ ಬಂದು ನಿಜಕ್ಕೂ ಮಹತ್ವದ್ದಾದ ಕಾಣಿಕೆ ನೀಡುತ್ತಾರೆ ಎಂದು ಹೇಳುವುದು ಕಷ್ಟ. ಅವರದೇನಿದ್ದರೂ Hit and run case.



ಇದು ವಿಚಿತ್ರ ಅನ್ನಿಸಬಹುದು. ಕನ್ನಡದ ಮಟ್ಟಿಗೆ ನಾಳಿನ ಕ್ಯಾಮೆರಾ ಮನ್‌ಗಳು ಅಂತ ಕಾಣುತ್ತಾ ಇರುವುದು ಇಬ್ಬರು. ಒಬ್ಬರು ಈಗ ಎರಡು ಚಿತ್ರಗಳಿಗೆ ಕ್ಯಾಮೆರಾ ಹಿಡಿದ ವೇಣು. ಇನ್ನೊಬ್ಬರು 'ತಾಯಿ ಸಾಹೇಬ'ದ ಕ್ಯಾಮೆರಾಮನ್ ರಾಮಚಂದ್ರ. ವೇಣು ಕಲಾವಿದ. ಕುಂಚ ಹಿಡಿದ ಕೈಯಲ್ಲಿ ಸ್ಟಿಲ್ ಕ್ಯಾಮೆರಾ ಹಿಡಿದು ಪ್ರಯೋಗಕ್ಕೆ ಮುಂದಾದವನು. ಆನಂತರ ಆತನಿಗೆ ತುಂಬಾ ಪ್ರಿಯವಾದ ಲೈಟಿಂಗ್ ಬಗ್ಗೆ ತಿಳಿಯಲೆಂದು ರಾಜನ್ ಅವರಂಥವರಿಗೆ ಸಹಾಯಕನಾಗಿ ದುಡಿದಿದ್ದು. 'A' ಚಿತ್ರಕ್ಕೆ ಕ್ಯಾಮೆರಾಮನ್ ಆದಾಗ, ಆತ ಮೂವಿ ಕ್ಯಾಮೆರಾ ವಿಚಾರಕ್ಕೆ ಅನನುಭವಿ. ಆದರೆ ಚಿತ್ರ ತೆರೆ ಕಂಡಾಗ ಕ್ಯಾಮೆರಾ ವರ್ಕ್‌ಗೆ ಆತ ಪಡೆದ ಮನ್ನಣೆ ಕಂಡು ಆತನಿಗೇ ಆಶ್ಚರ್ಯ.

ಇದು ತೀರಾ ಅತಿಯಾಯ್ತು' ಎಂದು ಆತನೇ ತಮಾಷೆಯಾಗಿ ಹೇಳುತ್ತಾನೆ. 'ಪ್ರತ್ಯರ್ಥ' ಚಿತ್ರಕ್ಕೆ ಕ್ಯಾಮೆರಾ ಹಿಡಿದಾಗ, ದೇಸಾಯಿ ಅವರಂಥ ನಿರ್ದೇಶಕರ ಬಳಿ ಕೆಲಸ ಮಾಡುವ ಬಗ್ಗೆ ಸಹಜ ಅಳುಕಿತ್ತು. ವೇಣೂಗೆ ಮೂಡ್ಸ್‌ಗಿಂತ ಹೆಚ್ಚಾಗಿ ಮೂಮೆಂಟ್ಸ್ ಸೆರೆ ಹಿಡಿಯುವ ಕಲೆ ಗೊತ್ತಿದೆ. ಅದನ್ನು ದೇಸಾಯಿ ಸರಿಯಾಗಿ ಬಳಸಿಕೊಳ್ಳಲಿಲ್ಲ ಅಂತಲೇ ಹೇಳಬೇಕು. ಉಪೇಂದ್ರ ಗೆದ್ದಲ್ಲಿ ಇವರು ಸೋತರು. ಈಗ 'ಸ್ಪರ್ಶ'ಕ್ಕೆ ಛಾಯಾಗ್ರಹಣ ಮಾಡಲಿರುವ ವೇಣುಗೆ ಅದೊಂದು ಸವಾಲು. ಇಲ್ಲಿ ನವಿರು ಪ್ರೇಮ ಸ್ಥಾಯೀ ಭಾವವಾದ್ದರಿಂದ, ವೇಣೂಗೆ ತುಂಬಾ ಇಷ್ಟವೆನಿಸುವ ಬಾಲುಮಹೇಂದ್ರ ಆತನಿಗೆ ನೆರವಾಗುತ್ತಾರೆ. ಆತನ ವಿಶಿಷ್ಟತೆಯೆಂದರೆ ಆತನ grasping power. ಇದೆಲ್ಲಕ್ಕಿಂತ ಕನ್ನಡ ಚಿತ್ರರಂಗದ ಇತಿಮಿತಿಗಳು ವೇಣೂಗೆ ಚೆನ್ನಾಗಿ ಗೊತ್ತು. ಆ ಚೌಕಟ್ಟಿನಲ್ಲಿ ಚೆನ್ನಾಗಿರುವುದನ್ನಷ್ಟೇ ಪರದೆಯ ಮೇಲೆ ಕಟ್ಟಿಕೊಡಬೇಕೆಂಬ ನಿರಂತರ ಉತ್ಸಾಹ. ಅದನ್ನು ಸದಾ ಕಾಯ್ದುಕೊಳ್ಳುವ ಗುಣವೂ ವೇಣುವಿನಲ್ಲಿದೆ. ಹಾಗಾಗಿಯೇ ನಾವು ನಾಳೆಗಳಿಗಾಗಿ ನೆಚ್ಚಬಹುದಾದ್ದು ಈತನನ್ನು.

'ನಾಗಮಂಡಲ' ಕ್ಕೆ ಭಾಸ್ಕರ್ ಜೊತೆಯಾಗಿ ದುಡಿದ ರಾಮಚಂದ್ರ ಸ್ವತಂತ್ರವಾಗಿ 'ತಾಯಿ ಸಾಹೇಬ' ಚಿತ್ರಕ್ಕೆ ಛಾಯಾಗ್ರಹಣ ಮಾಡಿ ರಾಷ್ಟ್ರ ಮತ್ತು ರಾಜ್ಯಮಟ್ಟ ಎರಡರಲ್ಲೂ ಮನ್ನಣೆ ಪಡೆದುಕೊಂಡರು. ಪುಣೆಯ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಡಿಗ್ರಿ ಪಡೆದು ಬಂದಿರುವ ರಾಮಚಂದ್ರ, ಮೈಸೂರು ವಿಶ್ವವಿದ್ಯಾಲಯದಿಂದ ಪತ್ರಿಕೋದ್ಯಮದಲ್ಲಿ ಸ್ನಾತಕೋತ್ತರ ಪದವಿ ಪಡೆದವರು. ಇವು ಕನ್ನಡದಂಥ ಚಿತ್ರರಂಗಕ್ಕೆ ಅನರ್ಹತೆಗಳಾಗಿಯೇ ಕಾಣುತ್ತವೆ. ಇಂಥವರು ಹೊಸ ಅಲೆಯ, ಬೋರ್ ಹೊಡೆಸುವ ಚಿತ್ರಗಳಿಗೆ ಮಾತ್ರ ಲಾಯಕ್ಕು ಎಂದು ಚಿತ್ರರಂಗ ನಿರ್ಧರಿಸಿ ಬಿಡುತ್ತದೆ.

ರಾಮಚಂದ್ರ ಇವೆಲ್ಲಕ್ಕೆ ಅಪವಾದ. ಯಾವುದೇ ಬಗೆಯ ಸಿನಿಮಾ ಆಗಲಿ, ಅದರ ಮರ್ಮ ಚೆನ್ನಾಗಿ ಅರಿತುಕೊಂಡು, ಒಳ್ಳೆಯದನ್ನು ಕಟ್ಟಿಕೊಡಬಲ್ಲರು. ಯಾವುದನ್ನು ಹೇಗೆ ನಿರ್ವಹಿಸಬೇಕೆಂಬ ವಿವೇಕ ಮತ್ತು ಸ್ಪಷ್ಟ ಪರಿಜ್ಞಾನ ಇರುವ ರಾಮಚಂದ್ರ ಇವತ್ತು ಅಲ್ಲದಿದ್ದರೂ, ಬರುವ ದಿನಗಳಲ್ಲಿ ನಮ್ಮ ಉದ್ದಿಮೆಯ ಬಹು ಮುಖ್ಯ ಸೊತ್ತಾಗಬಲ್ಲ ಪ್ರತಿಭೆ ಹೊಂದಿದವರು.



ನಮ್ಮಲ್ಲಿ ಪ್ರಯೋಗಶೀಲತೆ ಕಡಿಮೆ. ಇಲ್ಲಿ ಭಾರೀ ಮೊತ್ತದ ಹಣ ಹೂಡಲಾಗುತ್ತದೆ. ಹೆಚ್ಚೂ ಕಡಿಮೆ ಆದರೆ ನೆಲಕಚ್ಚಬೇಕಾಗುತ್ತದೆ ಎಂಬ ಕೂಗು ಕೇಳುತ್ತದೆ. ಹೀಗಾಗಿ ಇಲ್ಲಿ ಮೇಲ್ಪದರದ ಬದಲಾವಣೆ ಮಾತ್ರ ಆಗಾಗ್ಗೆ

ಆಗುತ್ತಾ ಇರುತ್ತದೆ. ಸಂಗೀತದ ವಿಷಯದಲ್ಲಿ ಇದು ಹೆಚ್ಚು ಢಾಳಾಗಿ ಕಾಣುತ್ತಾ ಇದೆ. ಒಂದು ಕಾಲಕ್ಕೆ ಮೆಲೋಡಿ ಮುಖ್ಯವಾಗಿದ್ದ ಸಂಗೀತ ಬೇಡವೆಂದು ಲಯಕ್ಕೆ ಒತ್ತುಕೊಟ್ಟು ಹಂಸಲೇಖಾ ಟ್ರೆಂಡ್ ಆರಂಭಿಸಿದರು. ಅದೂ ಕೂಡ ಈಗ ಜಡವಾಗಿದೆ. ಬೇರೊಂದು ಮಾರ್ಗಕ್ಕೆ ಯತ್ನ ನಡೆದಿದೆ. ವಿ. ಮನೋಹರ್ ಜಾನಪದದ ಸಾಧ್ಯತೆ ಬಗ್ಗೆ ಯತ್ನಿಸಿ ಪ್ರಯತ್ನಿಸಿದರಾದರೂ, ಅವರದೇ ಮಿತಿಗಳಿಂದಾಗಿ ಪ್ರಯೋಗ ಮುಂದುವರಿಸಲಿಲ್ಲ.

ತಮಿಳ್ನಾಡಲ್ಲಿ ಲಯ ಮತ್ತು ಮೆಲೋಡಿಯ ಫ್ಯಾಷನ್ ಸಾಧಿಸಿದ ಎ.ಆರ್. ರೆಹಮಾನ್ ಅಂತಾರಾಷ್ಟ್ರೀಯ ಮನ್ನಣೆ ಪಡೆಯುತ್ತಿದ್ದಾರೆ. ಮುಂಬಯಿ ಚಿತ್ರರಂಗ ನಸ್ರತ್ ಫತೇ ಆಲಿ ಖಾನರ ಸೂಫಿ ಸಂಗೀತಕ್ಕೆ ತೆರೆದುಕೊಂಡ ಹಾಗೆಯೇ ಜಾನಪದಕ್ಕೂ ತೆರೆದುಕೊಳ್ಳುತ್ತಿದೆ. ಇಂಥ ಯಾವೊಂದೂ ಕನ್ನಡದಲ್ಲಿ ಬದಲಾವಣೆಗೆ ಪ್ರಚೋದನೆ ನೀಡುತ್ತಿಲ್ಲ. ಇದಕ್ಕೆ ಮುಖ್ಯ ಕಾರಣ ನಮ್ಮಲ್ಲಿನ ಸಂಗೀತ ನಿರ್ದೇಶಕರ ಮಿತಿಗಳು. ಇದ್ದವರು ಜಡ್ಡುಗಟ್ಟಿದ್ದಾರೆ. ಹೊಸದಾಗಿ ಬಂದ ಕಲ್ಯಾಣ್, ಗುರುಕಿರಣ್ ಥರದವರು ಆಗಾಗ ಒಂದಿಷ್ಟು ಹೊಸತು ನೀಡುವ ಹಾಗೆ ಕಂಡರೂ, ಬಹುಪಾಲು ಇಂಥವರ ಸಾಧನೆಯೆಲ್ಲ ಗುಂಪಿನಲ್ಲಿ ಒಂದಾಗುವ ಕ್ರಿಯೆ ಮಾತ್ರ. ಹಾಗಾಗಿಯೇ ರಂಗಭೂಮಿಯ ಪ್ರತಿಭೆ ಜಯಶ್ರೀ ಇಲ್ಲಿ ಬಂದು, 'ರಂಭೆ ನೀ ವಯ್ಯಾರದ ಬೊಂಬೆ' ಎಂಬಂಥ ಹಾಡು ಹೇಳಿ ತೃಪ್ತಿ ಪಡಬೇಕಾಗುತ್ತದೆ.

ಹೀರೋಯಿನ್‌ಗಳ ವಿಚಾರಕ್ಕೆ ಬಂದರೆ, ಅಂಥವರು ಇದ್ದಾರೆಯೇ ಎಂದು ಮೊದಲು ಪ್ರಶ್ನೆ ಕೇಳಿಕೊಳ್ಳುವಂಥ ಪರಿಸ್ಥಿತಿ. ಪ್ರೇಮಾ, ವಿಜಯಲಕ್ಷ್ಮಿ, ಪೂಜಾಲೋಕೇಶ್ ಇತ್ತೀಚೆಗೆ ಅನುಪ್ರಭಾಕರ್ ಎಂದು ನಾಲ್ಕು ಹೆಸರು ಮೊದಲು ಹೊಳೆಯುತ್ತವೆ. ಇವರಲ್ಲಿನ ಕಲಾವಿದೆಯನ್ನು ಸಮರ್ಥವಾಗಿ ಬಳಸಿಕೊಂಡಿದ್ದು ಕಾಣುವುದಿಲ್ಲ. ನರ್ಗೀಸ್, ಮೀನಾಕುಮಾರಿಯ ಕಾಲ ಮುಗಿದ ಮೇಲೆ ಹೀರೋಯಿನ್‌ಗಳು ಪ್ರದರ್ಶನದ ಬೊಂಬೆಗಳು ಎಂಬಂತೆ ಆಗಿದ್ದ ಕಾಲದಲ್ಲಿ ಭಾರತಿ, ಆರತಿ, ಮಂಜುಳಾ, ಕಲ್ಪನಾ ಇಲ್ಲಿ ಹಲವಾರು ವರ್ಷ ಪ್ರಭುತ್ವ ಸ್ಥಾಪಿಸಿದ್ದರು. ಅಂಥ ಕಾಲ ಮತ್ತೆ ಬಂತೆಂದು ಮಾಲಾಶ್ರೀ ಉತ್ತುಂಗದಲ್ಲಿ ಇದ್ದಾಗ ಭಾವಿಸಲಾಗಿತ್ತು. ಅದರ ಸತ್ಯ ಏನೆಂದು ಬಹುಬೇಗ ಗೊತ್ತಾಯಿತು.



ಪ್ರೇಮಾ ಈಗ ಹೆಚ್ಚು ಬೇಡಿಕೆಯ ನಟಿ. ಕನ್ನಡದಲ್ಲಿ ಮಾತ್ರವಲ್ಲದೆ ನೆರೆಯ ತೆಲುಗಿನಲ್ಲೂ ಆಕೆ ಯಶಸ್ಸು ಪಡೆದಿದ್ದಾಳೆ. ಅವಾರ್ಡುಗಳೂ ಬಂದಿವೆ. ಆದರೆ 'ಇದು ಪ್ರೇಮಾನ ಚಿತ್ರ. ಇವಳಲ್ಲದೇ ಬೇರೆ ಯಾರೂ ಇದನ್ನು ಮಾಡೋಕೆ ಸಾಧ್ಯ ಆಗ್ತಾ ಇರಲಿಲ್ಲ' ಎನ್ನುವಂಥ ಚಿತ್ರ ಇನ್ನೂ ಬಂದಿಲ್ಲ. ಸದ್ಯಕ್ಕೆ ಬರುವ ಲಕ್ಷಣ ಕೂಡ ಕಾಣಿಸುತ್ತಾ ಇಲ್ಲ.

ಇವಳಷ್ಟೇ ಎತ್ತರದ ಪೂಜಾಲೋಕೇಶ್ ಸಿನಿಮಾ ಬಿಟ್ಟು ಬೇರೆ ಕಾರಣಕ್ಕೇ ಹೆಚ್ಚು ಸುದ್ದಿಯಾದರು. ಈಗಂತೂ ಆಕೆ ಮದುವೆಯಾಗಿ ಚಿತ್ರರಂಗಕ್ಕೆ ಟಾಟಾ ಹೇಳುವ ಸ್ಥಿತಿಯಲ್ಲಿ ಇದ್ದಾಳೆ.

ವಿಜಯಲಕ್ಷ್ಮಿಯದು ಒಂದು ರೀತಿ ಇದೇ ಗೋಳು. ಅಭಿನಯ ಬಿಟ್ಟು ಬೇರೆಲ್ಲ ಕಾರಣಕ್ಕೆ ಸುದ್ದಿ ಆಗುತ್ತಲೇ ಇರುವ ಈಕೆ, ತಾನಿನ್ನೂ ಚಿಕ್ಕವಳು, ತನ್ನಲ್ಲಿ ಅಪಾರ ಪ್ರತಿಭೆ ಇದೆ ಎಂಬುದನ್ನು ಅರ್ಥಮಾಡಿಕೊಳ್ಳುವವರೆಗೆ ಉದ್ಧಾರ ಸಾಧ್ಯವಿಲ್ಲ. ಆದರೆ ತೀರಾ ತಡವಾಗಿ ಅರಿವು ಮೂಡಿದರೆ ಪ್ರಯೋಜನ ಏನು?

ಆ ದೃಷ್ಟಿಯಿಂದ ಹೆಚ್ಚು ವೃತ್ತಿಪರ ನಿಲುವಿನ ಅನು ಪ್ರಭಾಕರ್ ವಾಸಿ. ಆಕೆಯ ತಾಯಿ ಗಾಯತ್ರಿ ಪ್ರಭಾಕರ್ ರಕ್ಷೆ ಇರುವುದರಿಂದ ಇದು ಸಾಧ್ಯವಾಗಿದೆ. ಎಳೆಯ, ಮುಗ್ಧ ಮುಖ, ಹೊಸತನವಿದೆ. ಅದನ್ನಾಕೆ ಮೊದಲ ಚಿತ್ರದಲ್ಲೇ ಸಾಬೀತು ಮಾಡಿಯಾಗಿದೆ. ಮುಂದಿನ ಹಾದಿ ಕೂಡ ಹೀಗೆ ಸುಗಮವಾಗುವ ಲಕ್ಷಣಗಳೂ ಕಾಣುತ್ತಿವೆ. ಆ ಮಟ್ಟಿಗೆ ಆಕೆ ಇವತ್ತಿನ ಅತ್ಯಂತ ಭರವಸೆಯ ನಟಿ.

ಕನ್ನಡದ ಹೀರೋಗಳ ಮಟ್ಟಿಗೆ ಏನೂ ಹೇಳದೇ ಇರುವುದೇ ವಾಸಿ. ಡಾ. ರಾಜ್ ಇರುವವರೆಗೂ ಅದು ದೊಡ್ಡ ಪ್ರಶ್ನೆಯೂ ಆಗುವುದಿಲ್ಲ ಬಿಡಿ.



ಇಂಥ ಪರಿಸ್ಥಿತಿಯಲ್ಲಿಯೂ, ರಾಮ್‌ಕುಮಾರ್ ಬಗ್ಗೆ ಒಂದೆರಡು ಒಳ್ಳೆಯ ಮಾತು ಹೇಳದೇ ಇದ್ದರೆ ತಪ್ಪಾಗುತ್ತದೆ. ಕಳೆದ ವರ್ಷದ, ನಂಬರ್ ಒನ್, ಹಬ್ಬ ಹಾಗೂ ಜಯಶ್ರೀದೇವಿ ನಿರ್ಮಾಣದ ಹೊಸ ಚಿತ್ರದಲ್ಲಿ ಆತ ಪಡೆದ ಅವಕಾಶ ಗಮನಿಸಿದರೆ, ನಿಧಾನವಾಗಿ ಆದರೂ ಈಗ ಗರಿಗೆದರಿಕೊಳ್ಳುತ್ತಾ ಇದ್ದಾನೆ ಅನ್ನಿಸುತ್ತದೆ. ಅವಸರ ಮಾಡಿಕೊಳ್ಳದೇ, ಉತ್ತಮ ಅವಕಾಶಗಳಿಗೆ ಮಾತ್ರ ಕಾಯ್ದು, ತನ್ನನ್ನು ತೊಡಗಿಸಿಕೊಂಡರೆ ರಾಮ್‌ಕುಮಾರ್ ನಾಳೆಯ ಭರವಸೆಯ ನಾಯಕ ಅನಿಸಬಹುದು. ಇಲ್ಲದಿದ್ದಲ್ಲಿ ಈಗಿನ ನಾಯಕರ ಮಂದೆಯಲ್ಲಿ ಈತನೂ ಒಂದಾಗಿ ಬಿಡುವ ಅಪಾಯ ಇದೆ. ■

## ಲೇಡಿ 'ಜನರಲ್'

ಹೀರೋನೇ ಇಲ್ಲದ ಸಿನಿಮಾ ಒಂದು ಈಗ ಮೈಸೂರಲ್ಲಿ ತಯಾರಾಗುತ್ತಿದೆ. 'ಮಾಚಿಸ್' ಚೆಲುವೆ ಟಬು ಚಿತ್ರದ ಕೇಂದ್ರ ಪಾತ್ರ. ಉಳಿದ ಪಾತ್ರಗಳನ್ನು ನಗ್ಮಾಳ ತಂಗಿ, ಜೂಲೀ ಲಕ್ಷ್ಮಿ, ಕನ್ನಡದ ಉಮಾಶ್ರೀ, ಆಶಾಲತಾ ಮುಂತಾದವರು ಮಾಡುತ್ತಿದ್ದಾರೆ.

'ಜನರಲ್' ಎಂಬ ಈ ಸಿನಿಮಾ ತಮಿಳಲ್ಲಿ ತಯಾರಾಗುತ್ತಿದ್ದು ಮಲಯಾಳಂ, ತೆಲುಗು ಮತ್ತು ಕನ್ನಡದಲ್ಲಿಯೂ ತೆರೆಗೆ ಬರಲಿದೆಯಂತೆ.

ಖ್ಯಾತ ನಿರ್ದೇಶಕ ಪ್ರಿಯದರ್ಶನ್ ಈ ಚಿತ್ರದ ನಿರ್ದೇಶಕರು.

## ವೈ.ಎನ್.ಕೆ. ಗೌಡ

ಲಂಕೇಶ್ ನಿರ್ದೇಶನದ 'ಎಲ್ಲಿಂದಲೋ ಬಂದವರು' ಚಿತ್ರದಲ್ಲಿ ಬರುವ ಸುರೇಶ್ ಹೆಬ್ಳೀಕರ್ ಪಾತ್ರದ ಹೆಸರು ಕೃಷ್ಣೇಗೌಡ.

ಆತ ಬಳಸುವ ಮೋಟಾರ್ ಬೈಕ್‌ನ ಸೈಡ್ ಬಾಕ್ಸ್ ಮೇಲೆ ವೈ.ಎನ್.ಕೆ. ಗೌಡ ಎಂಬ ಹೆಸರು ಬರೆದಿರುತ್ತದೆ.

ವೈ.ಎನ್.ಕೆ. ಹಾಗೂ ಲಂಕೇಶ್ ಅಷ್ಟೇನೂ ಸೌಹಾರ್ದಯುತ ಸಂಬಂಧ ಹೊಂದಿರದ ದಿನಗಳಲ್ಲಿ ಈ ಚಿತ್ರ ತಯಾರಾಗಿತ್ತು. ಹಾಗಾಗಿ ಈ ಮೋಟಾರ್ ಬೈಕ್ ಬರಹಕ್ಕೂ ವಿಶೇಷ ಮಹತ್ವ ಬಂದಿತ್ತು.

## ಗುಡ್‌ಕುಕ್ ಪಾಟೇಕರ್

ಆಗಿನ್ನೂ ನಾನಾ ಪಾಟೇಕರ್ ಜನಪ್ರಿಯ ನಟ ಎನಿಸಿರಲಿಲ್ಲ. ಕನ್ನಡಿಗ ಟಿ.ಎಸ್.ರಂಗಾ ನಿರ್ದೇಶಿಸುತ್ತಿದ್ದ 'ಗಿದ್' ಚಿತ್ರದಲ್ಲಿ ಪಾಟೇಕರ್‌ಗೆ ಬಸ್ಯಾನ ಪಾತ್ರ.

ಆತ ಶೂಟಿಂಗ್ ನಡೆಯುವಷ್ಟು ದಿನ ತಂಡದ ಜೊತೆಯೇ ಇರುತ್ತಿದ್ದರು. ಕುಂದಗೋಳದಲ್ಲಿ ಶೂಟಿಂಗ್. ತಂಡದವರು ಉಳಿಯುತ್ತಿದ್ದುದು ಹುಬ್ಬಳ್ಳಿಯ ಗೆಸ್ಟ್‌ಹೌಸ್ ಒಂದರಲ್ಲಿ. ನಾಯಕಿ ಸ್ಮಿತಾ ಪಾಟೀಲ್ ಮಾತ್ರ ವುಡ್‌ಲ್ಯಾಂಡ್ಸ್ ಹೋಟೆಲಲ್ಲಿ ಇರುತ್ತಿದ್ದರು.

ಬಿಡುವಿದ್ದಾಗೆಲ್ಲ ತಂಡದವರಿಗೆ ಜೋಕ್ ಹೇಳಿ ನಗಿಸುತ್ತಿದ್ದ ಪಾಟೇಕರ್ ಖುಷಿ ಬಂದಾಗ ಒಳ್ಳೊಳ್ಳೆ ಚೈನೀಸ್ ಅಡುಗೆ ತಯಾರಿಸಿ ಬಡಿಸಿ, ಭಾರೀ ಮೆಚ್ಚುಗೆ ಪಡೆಯುತ್ತಿದ್ದ.

### ಜಸ್ಟ್ ಎ ಮಿನಿಟ್

# ಊರ್ಮಿಳಾ

■ 'ಮಸ್ತ್' ಚಿತ್ರದ ಕಿಟ್ಟು ತರಹದ ವ್ಯಕ್ತಿ ಸಿಕ್ಕಿದರೆ?

○ ಕಿಟ್ಟು ಥರ ನನ್ನ ಬಗ್ಗೆ ಪ್ರೀತಿಯ ಗೀಳು ಅಂಟಿಸಿಕೊಂಡ ವ್ಯಕ್ತಿ ಸಿಕ್ಕರೆ ಖಂಡಿತ ನಿಂತ ನಿಲುವಿನಲ್ಲೇ, ಎಲ್ಲಾ ಬಿಟ್ಟು ಅವನ ಬೆನ್ನು ಬೀಳತೀನಿ.





■ ನಿಮ್ಮ ಹೀರೋಗಳ್ಯಾರೂ ನಿಮ್ಮ ಬಗ್ಗೆ ಅಂಥ ಪ್ರೀತಿಯ ಗೀಳು ಹಚ್ಚಿಕೊಂಡಿಲ್ಲವಾ?

○ ಇಲ್ಲ. ನನ್ನ ಜೊತೆ ಅಭಿನಯಿಸ್ತಿರೋ ಹೀರೋಗಳಿಗೆಲ್ಲ ಮದುವೆ ಆಗಿದೆ, ಅಥವಾ ಯಾರನ್ನಾದರೂ ಪ್ರೀತಿಸ್ತಾ ಇದಾರೆ.

■ 'ಮ್ಯಾಕ್ಸಿಂ'ನಂಥ ಪತ್ರಿಕೆ ನಿಮ್ಮನ್ನು ಜಗತ್ತಿನ ಸೆಕ್ಸಿಯಸ್ಟ್ ಮಹಿಳೆಯರಲ್ಲಿ ಒಬ್ಬಳು ಎಂದು ಗುರುತಿಸಿದಾಗ ಏನೆನ್ನಿಸಿತು?

○ ವಿದೇಶೀ ಮ್ಯಾಗಝೀನ್ ಒಂದು ಆ ರೀತಿ ನನ್ನನ್ನು ಗುರುತಿಸಿದ್ದು ಖುಷಿ ಆಯಿತು.

■ ಅದೇನು 'ಮಸ್ತ್'ನಲ್ಲಿ ಅಷ್ಟು ಸೆಕ್ಸಿಯಾಗಿ ಕಾಣಿಸಿಕೊಂಡಿದೀರಾ? ನಿಮ್ಮ ದೃಷ್ಟಿಯಲ್ಲಿ ಸೆಕ್ಸ್ ಅಪೀಲ್ ಯಾವುದು?

○ ಅದೆಲ್ಲ ಒಂದೊಂದು ಮನೋಭಾವ. ಆಯಾ ವ್ಯಕ್ತಿಯಲ್ಲಿನ ಬಣ್ಣಿಸಲಾಗದ ಏನೋ ಒಂದು. ಅಂದರೆ.... ನೀವು ಅಸಹ್ಯವಾಗಿ ಇರದೇನೂ ಆಕರ್ಷಕವಾಗೋಕೆ ಸಾಧ್ಯ.

■ ನೀವು ಸೆಕ್ಸಿಯಾಗಿದೀರ ಅಂತ ನಿಮ್ಮ ಹೀರೋಗಳು ಯಾರಾದರೂ ಹೇಳೀದಾರ?

○ ಇಲ್ಲಪ್ಪ ಇಲ್ಲ. ಯಾವ ಹೀರೋನೂ ನನಗೆ ಹಾಗೆ ಹೇಳೇ ಇಲ್ಲ.

■ ಬೇರೆ ಯಾರಾದರೂ.... ನಿಮ್ಮ ಅಭಿಮಾನಿಗಳು?

○ ಇಲ್ಲ. ಬಹುಷಃ ಹೇಳೋಕ್ಕೆ ಹೆದರಿಕೆ ಅನ್ನಿಸಿರಬೇಕು. ಒಂದು ವೇಳೆ ಯಾರಾದರೂ ಹಾಗೆ ಅಂದರೆ ಕಪಾಳಕ್ಕೆ ಹೊಡೀತೀನಿ.

■ ನಿಮ್ಮ ದೃಷ್ಟಿಯಲ್ಲಿ ಸೆಕ್ಸಿ ಹೀರೋ ಯಾರು?

○ ಮೆಲ್ ಗಿಬ್ಸನ್.

■ ನಾನು ಇಲ್ಲಿನ ಹೀರೋಗಳ ವಿಷಯ ಕೇಳ್ತಾ ಇರೋದು.

○ ಹೀಗೇ ಕೇಳ್ತಾ ಇದ್ದರೆ ನಾನು ನಿಮ್ಮನ್ನು ನಿಜವಾಗಲೂ ಕೊಂದು ಹಾಕ್ತೀನಿ... ಇರಲಿ.... ಕೆಲವರಲ್ಲಿ ಸೆಕ್ಸ್ ಅಪೀಲ್ ಜಾಸ್ತಿ. ಕೆಲವರಲ್ಲಿ ಕಡಿಮೆ. ನಿಜ ಹೇಳಬೇಕು ಅಂದರೆ ನನಗೆ ಅದೆಲ್ಲ ಅರ್ಥವಾಗಲ್ಲ.

■ ನಿಮ್ಮ ಬದುಕಿನಲ್ಲಿ ಈ ಹೊತ್ತಿಗೂ ಒಬ್ಬ ಗಂಡಸೂ ಬಂದಿಲ್ಲ ಅಂತ ಬೇಸರ ಆಗಿದೆಯಾ?

○ ಒಂದು ಕ್ಷಣಕ್ಕೂ ಹಾಗನ್ನಿಸಿಲ್ಲ. ಎಲ್ಲದಕ್ಕೂ ಕಾಲ ಬೇಕು. ಆ ಕಾಲ ಬಂದಾಗ ನಾನೇ ಯಾರದ್ದಾದರೂ ಪ್ರೀತಿಯಲ್ಲಿ ಸಿಕ್ಕಿ ಬೀಳಬಹುದು. ಅಥವಾ ನಾನೇ ಪ್ರೀತಿಸುವವರನ್ನ ಹುಡುಕಿಕೊಳ್ಳಬಹುದು. ನನ್ನೊಳಗೆ ಅಂಥ ಭಾವನಾತ್ಮಕ ಶೂನ್ಯತೆ ಇಲ್ಲ.

ಕೆಲವರಿಗೆ ಇಂಥ ಸಂಬಂಧಗಳು ಇಲ್ಲ ಅಂದರೆ ಬದುಕೇ ಶೂನ್ಯ ಅನ್ನಿಸಿಬಿಡುತ್ತೆ. ಹುಡುಗ ಜೊತೆಗಿದ್ದರೆ ಮಾತ್ರ ಅಂಥವರು ಆರಾಮಾಗಿರ್ತಾರೆ. ನನ್ನ ಎಷ್ಟೋ ಫ್ರೆಂಡ್ಸ್ ಹದಿನಾರು ವರ್ಷದವರಿದ್ದಾಗಿಂದಲೇ ಬಾಯ್‌ಫ್ರೆಂಡ್ಸ್ ಸಂಪಾದಿಸಿದ್ದರು. ಕೆಲವರು ಒಂಟಿಯಾಗಿ ಆರಾಮಾಗಿ ಇರೋರೂ ಇದಾರೆ. ಎರಡೂ ಥರದವರನ್ನ ನಾನು ನೋಡಿದೀನಿ. ಆ ಬಗ್ಗೆ ನಾನು ತೀರ್ಪು ಹೇಳಲಾರೆ.

■ ನಿಮ್ಮ ಸಾಧನೆಗೆ ಪ್ರೇರಣೆ....?

○ ನಾನು ಯಾವತ್ತೂ ಸಾಧನೆ ಮಾಡ್ತಾನೇ ಬಂದಿದೀನಿ. ಎಸ್‌ಎಸ್‌ಸಿನಲ್ಲಿ 82.1 ಸ್ಕೋರ್ ಮಾಡಿದ್ದೆ. ಸ್ಕೂಲ್, ಕಾಲೇಜಲ್ಲಿ ಇದ್ದಾಗ ನಿಜವಾಗ್ಲೂ ಖುಷಿಯಾಗಿದ್ದೆ. ಒಂದು ಹಂತದಲ್ಲಿ.... ನೀವು ನಂಬ್ತೀರೋ ಇಲ್ಲವೋ.... ಜರ್ನಲಿಸ್ಟ್ ಆಗ್ಬೇಕು ಅಂತಿದ್ದೆ... 'ರಂಗೀಲಾ' ಬಂದಾದ ಮೇಲೇ ನನ್ನ ವೃತ್ತಿ ಸಿನಿಮಾ ಅಂತ ಗ್ಯಾರಂಟಿ ಆಯ್ತು. ■

# ಹೈದರಾಬಾದ್ ಹುಡುಗಿಯ ಗುಟ್ಟುಗಳು



**ಈ**ಕೆ ನಮ್ಮೂರ ಹುಡುಗಿ. ಹೆಸರು ತಬಸ್ಸುಂ ಹಷ್ಮಿ. ವಿಚಿತ್ರ ಅನಿಸುತ್ತಿದೆಯೇ? ನಿಮಗೆಲ್ಲ 'ಟಬು' ಅಂದರೇ ಅರ್ಥವಾಗೋದು.

ಹಿಂದಿ, ತೆಲುಗು, ತಮಿಳು, ಮಲಯಾಳಂ ಸಿನಿಮಾಗಳಲ್ಲಿ ಈಕೆ ಅಭಿನಯಿಸಿದ್ದಾಳೆ ಎಂದು ನೆನೆದರೇ ಆಶ್ಚರ್ಯ! ಆಕೆ ಮಹಾ ಪುಕ್ಕಲು ಹುಡುಗಿ. ಸ್ಕೂಲ್ ದಿನಗಳಲ್ಲಿ ಒಬ್ಬರನ್ನೂ ಸೇರುತ್ತಾ ಇರಲಿಲ್ಲ. ಇವಳ ಅಕ್ಕ ಫರಾ ಮಹಾ ಘಾಟಿ. ಸಿನಿಮಾಕ್ಕೆ ಹೋದರೆ, ತನ್ನ ಮೆಚ್ಚಿನ ನಟರು ತೆರೆಯ ಮೇಲೆ ಬಂದರೆ, ಅಷ್ಟೇಕೆ ಅವರ ಹೆಸರು ಸ್ಟಾರ್‌ಕ್ಯಾಸ್ಟ್‌ನಲ್ಲಿ ಕಾಣಿಸಿಕೊಂಡರೆ ಸಾಕು, ಥಿಯೇಟರಲ್ಲೇ ಚೇರು ಹತ್ತಿ ನಿಂತು ಚಪ್ಪಾಳೆ ಹೊಡೆಯುತ್ತಿದ್ದಳು. ಶಿಳ್ಳೆ ಹೊಡೆಯುವುದು ಸಾಧ್ಯವಿದ್ದಿದ್ದರೆ, ಅದನ್ನೂ ಮಾಡುತ್ತಾ ಇದ್ದಳೋ ಏನೋ! ಇದಕ್ಕೆ ತದ್ವಿರುದ್ಧ ಟಬು. ಮಹಾ ಒಂಟಿಬಡಕಿ.

ಅವಳನ್ನು ಸ್ಕೂಲಿಗೆ ತಂದು ಬಿಡಲು, ಮನೆಗೆ ಕರೆದೊಯ್ಯಲು ರಿಕ್ಷಾದವನು ಬರುತ್ತಿದ್ದ. ಅವನು ಬರೋದು ಐದು ನಿಮಿಷ ತಡ ಆದರೆ, ಈಕೆ ಆಕಾಶ ತಲೆಮೇಲೆ ಬಿದ್ದ ಹಾಗೆ ಆಡೋಳು. ಎಷ್ಟು ಪುಕ್ಕಲಿ ಅಂದರೆ, ಇಡೀ ದಿನ ಬಾತ್‌ರೂಂಗೆ ಹೋಗ್ತಾ ಇರಲಿಲ್ಲ. ಬಾತ್‌ರೂಂಗೆ ಹೋದಾಗ ಬಾಗಿಲು ಮುಚ್ಚಿಕೊಂಡು ಅದು ತೆಗೆಯೋದಕ್ಕೆ ಆಗದೆ ಇದ್ದರೆ ಅಂತ ವಿಚಿತ್ರ ಭಯ. ಇವಳು ಬಾತ್‌ರೂಂಗೆ ಹೋಗಬೇಕಾದರೂ ಯಾರಾದರೂ ಜೊತೇಲಿ ಒಬ್ಬರು ಇರಬೇಕು. ಮನೇಲಂತೂ ಸರಿಯೇಸರಿ. ಕೊನೇಮಗಳು ಅಂತ ಮುದ್ದುಮಾಡೋರು. ಜೊತೇಗೆ ಅಜ್ಜಿ ಬೇರೆ. ಅಜ್ಜಿ ಮನೆಗೆ ಹೋದಳು ಅಂದರೆ, ವಾಪಸ್

ಮನೇಗೆ ಕರಕೊಂಡು ಬರಬೇಕಾದರೆ ಹರ ಸಾಹಸ ಮಾಡಬೇಕು. ಮುರಿದು ಬಿದ್ದ ತಾಯಿಯ ಮದುವೆ. ತಂದೇನ ಇವಳು ಹೆಚ್ಚಾಗಿ, ಕಂಡೋಳೂ ಅಲ್ಲ. ತಾಯಿಗೆ ಇಪ್ಪತ್ತೈದು ತುಂಬುವಾಗ ಗಂಡನಿಂದ ಬೇರೆಯಾದಾಗ, ಇವಳಿನ್ನೂ ಚಿಕ್ಕ ಹುಡುಗಿ. ತಂದೇನೇ ಕಾಣದ, ಒಂದು ವಿಚಿತ್ರ ಪರಿಸ್ಥಿತಿಯಲ್ಲಿ ಆಕೆಯ ಮನಸ್ಸು ನಾನಾ ಮಾನಸಿಕ ಒತ್ತಡಗಳಿಗೆ ಸಿಕ್ಕಿರಬಹುದು. ಭಯ, ಆತಂಕ ಎಲ್ಲ ಸಹಜ ಅಂತ ಈಗ ವಿಶ್ಲೇಷಿಸೋದು ಸುಲಭ. ಇನ್ನೊಂದು ವಿಶೇಷ ಗೊತ್ತಾ? ಟಬು ಯಾವತ್ತೂ ಕ್ಲಾಸಲ್ಲಿ ಮ್ಯಾಥ್‌ಮೆಟಿಕ್ಸ್‌ನಲ್ಲಿ ಶುದ್ಧ ದಡ್ಡಿ. ಸಣ್ಣ ಕೂಡು ಕಳೆಯೋ ಲೆಕ್ಕ ಕೂಡ ಅವಳಿಗೆ ದೊಡ್ಡ ಹಿಂಸೆ ಆಗಿಬಿಡೋದು. ಇವತ್ತಿಗೂ ಅವಳಿಗೆ ಸಣ್ಣ ಲೆಕ್ಕಾನೂ ಬರೋದಿಲ್ಲ. ಏನಾದರೂ ಕೊಂಡುಕೊಂಡು ಕೊಟ್ಟ ದುಡ್ಡಿಗೆ ಚಿಲ್ಲರೆ ವಾಪಸ್ ಬರಬೇಕು ಅಂತ ಕೂಡ ಅವಳಿಗೆ ತಿಳಿಯಲ್ಲ. ಅವಳ ಅಪ್ಪ ಯೂನಿವರ್ಸಿಟೀಲಿ ಮ್ಯಾಥ್‌ಮೆಟಿಕ್ಸ್ ಪ್ರೊಫೆಸರ್. ನೀವು ನಂಬ್ತೀರಾ? ಇವಳ ಅಪ್ಪ ಪ್ರೊಫೆಸರ್, ತಾಯಿ ಟೀಚರ್, ಅಜ್ಜಿ ಹೆಡ್ ಮೇಡಂ. ನಾನು ಅಂದುಕೊಂಡಿದ್ದು ಇವಳು ಯಾವುದೋ ಶಾಲೇಲಿ ಟೀಚರ್ ಆಗ್ತಾಳೆ ಅಂತ.... ನೋಡಿ ಏನಾಗಿಬಿಟ್ಟಳು.

ಅದೆಲ್ಲ ಅವರವರ ಹಣೇಬರಹ ಅಂತೀರಾ? ಅದೂ ನಿಜಾನೇ! ಹತ್ತು ವರ್ಷದ ಹುಡುಗಿ ಆಗ. ಇದ್ದಕ್ಕಿದ್ದ ಹಾಗೆ ಇವಳ ಮೇಲೆ ದೇವಾನಂದ್ ಕಣ್ಣು ಬೀಳಬೇಕಾ? 'ಹಂ ನೌಜವಾನ್' ನಲ್ಲಿ ಇವಳಿಗೆ ದೇವಾನಂದ್ ಮಗಳ ಪಾತ್ರ. ಅದೊಂದು ಸೂಪರ್ ವ್ಯಕ್ತಿತ್ವದ ಪಾತ್ರ. ಇವಳಿಗೆ ಅಭಿನಯ ಅಂದರೆ ಏನೂ ಅಂತ ತಿಳೀದು. ಆ ಕಣ್ಣು ಕೋರೈಸೋ ಬೆಳಕಲ್ಲಿ ನಿಂತು, ಈ ಹತ್ತು ವರ್ಷದ ಹುಡುಗಿ ಆಡಿದ ಆಟವೆಲ್ಲ ಸಿನಿಮಾ ಆಯ್ತು. ಅಲ್ಲೊಂದು ಸನ್ನಿವೇಶ, ಇವಳು ಖಳನಾಯಕನ ಕೆನ್ನೆಗೆ ಬಾರಿಸಬೇಕು. ಒಂದೆರಡಲ್ಲ ಇಪ್ಪತ್ತು ಟೇಕ್ ಆಯ್ತು. ಇವಳಿಗೆ ಕೈ ಎತ್ತೋದಕ್ಕೇ ಆಗದೇ 'ಹೋ...' ಅಂತ ಅಳೋದಕ್ಕೆ ಶುರು ಮಾಡಿದಳು.

ದೇವಾನಂದ್ ಬಂದು ತಿಂಡಿ ಕೊಡಿಸಿ ಸಮಾಧಾನ ಮಾಡಬೇಕಾಯಿತು. ಇವಳು ಇನ್ನು ಯಾವ ಸೀಮೆ ನಟಿ ಅಂತೀರಾ?

ಇಂಥ ಹುಡುಗಿ ಹೈದರಾಬಾದ್ ಬಿಟ್ಟು ಕಾಲೇಜ್ ಕಲಿಯಬೇಕೆಂದು ಮುಂಬಯಿಗೆ ಹೊರಟುಬಿಟ್ಟಳು. ಏರ್‌ಹೋಸ್ಟೆಸ್ ಆಗಬೇಕು ಎಂಬ ವಿಚಿತ್ರ ಹಂಬಲ. ಕನಸುಗಳೇ ಹಾಗೆ, ವಿಚಿತ್ರವಾಗಿರುತ್ತವೆ. ಮನೆ ಅಂಧೇರಿಯಲ್ಲಿ, ಇವಳಿಗೆ ಸೆಂಟ್ ಕ್ಸೇವಿಯರ್ಸ್ ಸೇರಬೇಕು ಎಂಬ ಹಟ. ಮನೆಯವರೆಲ್ಲ ಬೇಡವೆಂದರೂ ಕೇಳಲಿಲ್ಲ. ನಿಮಗೂ ಗೊತ್ತು ಕ್ಸೇವಿಯರ್ಸ್ ಎಂದರೆ ಅದೇ ಒಂದು ವಿಚಿತ್ರ ಜಗತ್ತು. ಜಗತ್ತಿನ ಅತ್ಯಾಧುನಿಕ ವಿಚಾರ, ಫ್ಯಾಷನ್‌ಗಳೆಲ್ಲ ಪ್ರದರ್ಶನಕ್ಕಿಟ್ಟ ಕ್ಯಾಂಪಸ್ ಅದು. ಅಂಥ ಕಡೆ ಇವಳೊಬ್ಬ ಮಧ್ಯಮ ವರ್ಗದ, ಎರಡನೇ ದರ್ಜೆ ಸಿಟಿಯಿಂದ ಬಂದ ಹುಡುಗಿಯ ಹಾಗೆ ಕಂಡಿದ್ದರೆ ಆಶ್ಚರ್ಯವೇನಿಲ್ಲ. ಮಿನಿ, ಮಿನಿಮಿನಿ, ಮಿಡಿ ತೊಟ್ಟವರ ನಡುವೆ ಹೈದರಾಬಾದ್‌ನ ಜರಿ ಕುಸುರಿಯ ಸೆಲ್ವಾರ್ ಕಮೀಜ್ ತೊಟ್ಟಿದ್ದ ನಮ್ಮ 'ಟಬು' ಹೇಗೆ ಕಾಣಿಸಿದ್ದಿರಬಹುದು ನೀವೇ ಲೆಕ್ಕ ಹಾಕಿ.

ತನ್ನ ಕಣ್ಣೆದುರಿನ ಕಲ್ಚರ್ ಷಾಕ್‌ನಿಂದ ಆಕೆ ಎಷ್ಟು ತಲ್ಲಣಿಸಿರಬಹುದು! ಬಾಂಬೆಯ ಲೋಕಲ್ ಟ್ರೈನುಗಳಷ್ಟೇ ವಿಚಿತ್ರ ಜಗತ್ತು. ಅಂಥದ್ದರಲ್ಲಿ ನಮ್ಮ ಈ ಟಬು ಅಂಧೇರಿಯ ಮನೆಯಿಂದ ಹೊರಬಿದ್ದು ಕಾಲೇಜು ಮುಟ್ಟುವುದೆಂದರೆ, ಸಂತೆಯಲ್ಲೊ, ಜಾತ್ರೆಯಲ್ಲೋ ತಾಯಿಯ ಕೈಬಿಟ್ಟು ತಪ್ಪಿಸಿಕೊಂಡ ಸಣ್ಣ ಮಗುವಿನ ಹಾಗೆ.

'ಕಾರ್ ಕೊಂಡುಕೊಳ್ಳೋಣ' ಎಂದು ಅಕ್ಕ ಫರಾ ಹೇಳಿದರೂ ಕೇಳಲಿಲ್ಲ. ಕೊನೆಗೆ ತಾಯಿಯೇ ಇವಳನ್ನು ಬೆಳಿಗ್ಗೆ ಎದ್ದರೆ ನರ್ಸರಿ ಸ್ಕೂಲಿಗೆ ಸಣ್ಣ ಮಗುವನ್ನು ಬಿಟ್ಟು, ಶಾಲೆ ಮುಗಿದ ಮೇಲೆ ವಾಪಸ್ ಕರೆದು ತರುವ ಆತಂಕ ಬೆರೆತ ತಾಯಿಯ ಹಾಗೆ, ಕಾಲೇಜಿಗೂ ಕರೆದು ತಂದು ಬಿಡುವ, ವಾಪಸು ಕರೆದು ತರುವ ಕೆಲಸ ಮಾಡಬೇಕಾಯಿತು.

ಹೈದರಾಬಾದ್‌ನಂಥ ಇತಿಹಾಸದ ಮಡಿಲ ನಗರದಿಂದ ಬಂದ ತಾಯಿಗೂ ಮುಂಬಯಿ ಬಹುದೊಡ್ಡ ಒಗಟು. ಮಗಳನ್ನು ಕರೆದುಕೊಂಡು ಕಾಲೇಜಿಂದ ಬಂದ ಆಕೆ ಒಂದು ದಿನ ಅಂಧೇರಿಯ ಬದಲು ಬೋರಿವಿಲಿಯಲ್ಲಿ ಇಳಿದರೆ, ಇನ್ನೊಂದು ದಿನ ಗೋರೆಗಾಂವ್‌ನಲ್ಲಿ ಇಳಿದು ಪರದಾಡುತ್ತಾ ಇನ್ನೊಬ್ಬರ ಸಹಾಯಕ್ಕೆ ಯಾಚಿಸಬೇಕಾಯಿತು.

ಇದರ ಜೊತೆಗೇ, ಕಾಲೇಜಲ್ಲಿ ಇವಳನ್ನು ಕರೆದು ತರಲು, ಮನೆಗೆ ಮತ್ತೆ ಕರೆದೊಯ್ಯಲು ತಾಯಿಯೇ ಬರುತ್ತಿದ್ದಾಳೆಂಬುದೇ ಬಹು ದೊಡ್ಡ ತಮಾಷೆಯ ಸುದ್ದಿ. ಆದರೆ ಇವಳಿಗೆ ಹೇಗನ್ನಿಸಿರಬೇಡ! 'ನೀನು ಬರಬೇಡ' ಅಂದರೆ ತಾಯಿ ಕೇಳುವವಳಲ್ಲ.

ಕೊನೆಗೆ ಈ ಹುಡುಗಿ ಕಾಲೇಜು ಬಿಟ್ಟ ಮೇಲೆ, ಕ್ಸೇವಿಯರ್ಸ್‌ನ ಬಾಗಿಲಲ್ಲಿ ಕಾಯುತ್ತಾ ನಿಂತ ತಾಯಿಯನ್ನು ಕಂಡೇ ಇಲ್ಲವೆಂಬಂತೆ ನಡೆದು ಹೋಗಿ, ಮನೆಗೆ ಬಂದ ಮೇಲೆ 'ನಿನ್ನ ಕಾಲಿಗೆ ಬೇಕಾದರೆ ಬೀಳ್ತೀನಿ. ನೀನು ಮಾತ್ರ ನನ್ನ ಜೊತೆ ಬರಬೇಡ, ಅಂದ ಮೇಲೇ, ಏನಾದರೂ ಹಾಳಾಗಿ ಹೋಗಲಿ ಎಂದು ಅವರು ಸುಮ್ಮನಾಗಿದ್ದು.

ಸ್ಕೂಲಲ್ಲಿ ಇದ್ದಾಗ ಏನಾದರೊಂದು ನೆಪ ಮಾಡಿ ಕ್ಲಾಸಿಗೆ ಚಕ್ಕರ್ ಹೊಡೆದು ಅಜ್ಜಿ ಮನೆಗೆ ಹೋಗುತ್ತಿದ್ದ ಹುಡುಗಿಗೆ ಈಗ ಅಜ್ಜಿಯ ಮನೆಯೂ ಇರಲಿಲ್ಲ. ಹೈಸ್ಕೂಲು ಮುಗಿಸುತ್ತಿದ್ದ ಹಾಗೆ ಅಜ್ಜಿ, ಅಜ್ಜ ಇಬ್ಬರೂ ತೀರಿಕೊಂಡಾಗ 'ಸಾವು' ಎಂಬುದೊಂದಿದೆ ಎಂಬ ಅರಿವು ಮೂಡಿದ್ದು, ಆದರೆ, ಸಾವು ಎಂಬುದೊಂದಿದೆ ಎಂಬ ಸತ್ಯ ಈ ಸಣ್ಣ ಹುಡುಗಿಯನ್ನು ಹಿಡಿದು ಅಲ್ಲಾಡಿಸಿಬಿಟ್ಟಿತ್ತು. ಅದಕ್ಕೋ ಏನೋ! ಶಾಲೆಯಲ್ಲಿ ಸಲೀಸಾಗಿ ಚಕ್ಕರ್ ಹೊಡೆಯುತ್ತಿದ್ದ ಹುಡುಗಿಗೆ ಕಾಲೇಜಲ್ಲಿ ಕ್ಲಾಸು ತಪ್ಪಿಸಿಕೊಳ್ಳಲು ಏನೋ ಭಯ. ಅಜ್ಜಿ ಹೇಳುತ್ತಿದ್ದ 'ನೀನು ಏನಾದರೊಂದು ಸಾಧನೆ ಮಾಡಬೇಕು. ಸಂಗೀತ ಕಲಿ. ಭರತನಾಟ್ಯ ಕಲಿ' ಎಂಬ ಮಾತು ಸದಾ ನೆನಪಾಗುತ್ತಿತ್ತು. ಮುಂಬಯಿನ ದಟ್ಟ ಜೀವನದಲ್ಲಿ ಅದೆಲ್ಲ ಆಗದ ಮಾತು. ಅಷ್ಟೆಲ್ಲ ಪ್ರೀತಿಸುತ್ತಿದ್ದ ಅಜ್ಜಿಯ ಮಾತೊಂದೂ ನಡೆಸಲು ಸಾಧ್ಯವಾಗಲಿಲ್ಲ ಎಂಬ ಪ್ರಜ್ಞೆ ಕಾಡುತ್ತಾ, ಕಾಲೇಜಲ್ಲಿ ಚೆನ್ನಾಗಿ ಕಲಿಯಬೇಕೆಂಬ ಹಟ. ವಿರಾಮ ದೊರೆತಾಗ ಉಳಿದ ಹುಡುಗಿಯರು ಆರಾಮಾಗಿ ಹರಟುತ್ತಾ, ಕ್ಯಾಂಟೀನಿನಲ್ಲಿ ಕೋಕ್ ಹೀರುತ್ತಾ ಫ್ಲರ್ಟ್ ಮಾಡುವಾಗ ಈಕೆ ಕ್ಲಾಸಿನಲ್ಲಿ ಒಂಟಿಯಾಗಿ ಕುಳಿತು ನೋಟ್ಸ್ ಸಿದ್ಧಪಡಿಸುತ್ತಾ ಇದ್ದಳು.

ಈಗಲೂ, ಇಷ್ಟೆಲ್ಲ ಪ್ರಸಿದ್ಧಿ, ಹೆಸರು ಪಡೆದ ಮೇಲೂ ಒಂಟಿಯಾಗೇ ಇರಲು ಇಷ್ಟಪಡುವ ಹುಡುಗಿ ಅವಳು. ದಿನಗಟ್ಟಲೇ ಯಾರೊಬ್ಬರನ್ನೂ ಕಾಣದೇ, ಮನೆಯೊಳಗೇ ಇರಲಿಚ್ಛಿಸುವ ಅವಳಿಗೆ ಸದಾ ಸಂಗೀತ ಇರಬೇಕು. ಬೆಳಿಗ್ಗೆ ಕಣ್ಣು ಬಿಡುತ್ತಿದ್ದ ಹಾಗೆ ರೇಡಿಯೋ ಸ್ವಿಚ್ ಆನ್ ಮಾಡಿದರೆ ಆಯಿತು. ಮತ್ತೆ ಅದರ ಸ್ವಿಚ್ ಆಫ್ ಮಾಡುವುದು ಮತ್ತೆ ಹಾಸಿಗೇಲಿ ಮಲಗಿ ನಿದ್ದೆಗೆ ಜಾರುವಾಗಲೇ.

ಜಗತ್ತಿನಾದ್ಯಂತ ಮಿಲಿಯಾಂತರ ಅಭಿಮಾನಿಗಳಿರುವ ಈ ನಮ್ಮ ಟಬು, ಒಂಟಿಯಾಗಿ ದಿನಗಟ್ಟಲೇ ಮನೆಯಲ್ಲಿ ಒಬ್ಬಳೇ ರೇಡಿಯೋ ಕೇಳುತ್ತಾ ಕಾಲ ಕಳೆಯುತ್ತಾಳೆ, ಆಗೊಮ್ಮೆ ಈಗೊಮ್ಮೆ ಇಂಟರ್‌ನೆಟ್ ಬ್ರೌಸ್ ಮಾಡುತ್ತಾಳೆ. ಕಾಲು ಮಡಚಿ ಕುಳಿತು, ಮನೆಯವರು ಮಾತಾಡುವ ಅವರಿವರ ಬಗೆಗಿನ ಸುದ್ದಿ ಕಿವಿಗೊಟ್ಟು ಕೇಳುತ್ತಾಳೆ. ಮನೆಗೆಲಸದ ಹುಡುಗಿ ಕಾರ್ ಡ್ರೈವರ್ ಜೊತೆ ಓಡಿ ಹೋಗಿದ್ದು, ಸಂಬಂಧದ ಯಾವುದೋ ಹುಡುಗಿಯ ಮದುವೆ ರದ್ದಾಗಿದ್ದು, ಇನ್ಯಾರೋ ನಾಲ್ಕನೇ ಸಲ ಹೆಣ್ಣು ಮಗುವಿಗೆ ಜನ್ಮ ನೀಡಿದ್ದು ಡಿಸ್ಕಸ್ ಆಗುತ್ತಿರುವಾಗ ಕಿವಿ ತೆರೆದು ಕುಳಿತಿರುವ ಸಾಮಾನ್ಯ ಹುಡುಗಿ ಈಕೆ.

ಇಂಥ ಹುಡುಗಿಗೆ 'ಮಾಚಿಸ್' ಚಿತ್ರದಲ್ಲಿನ ಅಭಿನಯಕ್ಕೆ ರಾಷ್ಟ್ರೀಯ ಪ್ರಶಸ್ತಿ ಬಂದಾಗ ಹೇಗನ್ನಿಸಿರಬೇಡ!

ಸುದ್ದಿ ತಿಳಿಯುತ್ತಿದ್ದ ಹಾಗೇ, ನಿರ್ದೇಶಕ ಗುಲ್ಜಾರ್‌ಗೆ ಫೋನ್ ಮಾಡಿ, ಏನು ಹೇಳುವುದು ತಿಳಿಯದಾಗಿ ಜೋರಾಗಿ ಅತ್ತುಬಿಟ್ಟಿದ್ದಳು.

ಇವಳ ನೆರೆಯವರು ಎಷ್ಟು ಖುಷಿ ಪಟ್ಟರೆಂದರೆ, ಇವಳನ್ನು ಹುಡುಕಿ ಆರತಿ ಎತ್ತಿ, ದೃಷ್ಟಿ ತೆಗೆದು ನಿವಾಳಿಸಿ ಹಾಕಿದ್ದರು. ಇಡೀ ಬಿಲ್ಡಿಂಗ್‌ಗೆ ಲೈಟುಗಳನ್ನು ಇಳಿಬಿಟ್ಟು ಸಂಭ್ರಮದಿಂದ, ಅದೊಂದು ಹಬ್ಬ ಎಂಬಂತೆ ಆಚರಿಸಿದ್ದರು.

ಒಡೆದ ಮನೆ, ಮನಸ್ಸಿನಿಂದ ಅರಳಿ ನಿಂತ ಈ ಹುಡುಗಿ ಒಂಟಿಯಾಗಿಯೇ ಮಿಡುಕುತ್ತಾ, ತಡಕುತ್ತಾ ಬದುಕು ಕಟ್ಟಿಕೊಳ್ಳಲು ಯತ್ನಿಸುತ್ತಾ ಇರುವ ಹಾಗೆಯೇ ಎಷ್ಟೊಂದು ಭಾವನೆಗಳನ್ನು, ಎಷ್ಟೊಂದು ಜನರಲ್ಲಿ ಹುಟ್ಟು ಹಾಕುತ್ತಾಳೆ ಅಲ್ಲವೇ!

ಒಬ್ಬ ತಾರೆಯಾಗುವುದೆಂದರೆ, ಅದೇ ಒಂದು ಪವಾಡ. ನಮ್ಮ ಹೈದರಾಬಾದ್‌ನ ಹುಡುಗಿ, ತನ್ನೆಲ್ಲ ಗುಟ್ಟುಗಳನ್ನು ಬಚ್ಚಿಟ್ಟುಕೊಂಡೇ ಇಂಥದೊಂದು ತಾರಾ ಪಟ್ಟ ಗಳಿಸಿದ್ದಾಳಲ್ಲ, ಅದೇ ಬೆಳ್ಳಿ ಬೆಳಕಿನ ಮೋಡಿ.

■ ಭಾವನಾ

# ಹಾಲಿವುಡ್‌ಗೆ ಜಿಗಿದ

# ಚಿರಂಜೀವಿ

'ಚಿರಂಜೀವಿ' ಎಂಬ ಹೆಸರು ವಿಶಿಷ್ಟವಾದುದು. ಏಕೆಂದರೆ ನಮ್ಮ ಸುತ್ತಮುತ್ತಲಿನಲ್ಲಿ ಈ ಹೆಸರಿನವರು ಸಿಗುವುದು ವಿರಳ. ಅಂದ ಹಾಗೆ 'ಚಿರಂಜೀವಿ' ಎಂಬುದು ಚಿರಂಜೀವಿಯ ಸ್ವಂತ ಹೆಸರಲ್ಲ. ಅವರ ಹೆಸರು ಶಿವಶಂಕರ ವರಪ್ರಸಾದ್. ಚಿತ್ರನಟರಾದ ನಂತರ 'ಚಿರಂಜೀವಿ' ಆದರು. ಚಿತ್ರರಂಗದಲ್ಲಿ ಯಾವುದೇ ಗಾಡ್‌ಫಾದರ್‌ಗಳ ನೆರವಿಲ್ಲದೇ ಸ್ವಶಕ್ತಿಯಿಂದ ಹಂತ ಹಂತವಾಗಿ ಮೇಲೇರಿ ಅಗ್ರಗಣ್ಯ ನಟನಾಗಿ ಬೆಳೆದ ಚಿರಂಜೀವಿಗೆ ಈಗ ಆಂಗ್ಲ ಭಾಷೆಯ ಚಿತ್ರವೊಂದರಲ್ಲಿ ನಟಿಸುವ ಅವಕಾಶ ಲಭಿಸುವುದರೊಂದಿಗೆ ತಮ್ಮ ಸಿನಿಮಾ ಬದುಕಿನಲ್ಲಿ ಮತ್ತೊಂದು ಮೈಲಿಗಲ್ಲಿಗೆ ಅಡಿಪಾಯ ಹಾಕಿದಂತಾಗಿದೆ.

'ಚಿರಂಜೀವಿ' ಇಂದು ಆಂಧ್ರಪ್ರದೇಶದಲ್ಲಿ ಮನೆಮಾತು. ಈ ಮಾತು ಹೆಸರಾಂತ ತೆಲುಗು ಚಿತ್ರನಟ ಚಿರಂಜೀವಿಯ ಕುರಿತದ್ದು ಎಂದು ಅರಿಯದವರು ನೀವಲ್ಲ.

ತೆಲುಗು ಚಿತ್ರರಂಗಕ್ಕೆ ಅನಾಮಿಕನಾಗಿ ಪ್ರವೇಶಿಸಿ, ಸಣ್ಣಪುಟ್ಟ ಪಾತ್ರಗಳನ್ನು ನಿರ್ವಹಿಸುವುದರ ಮೂಲಕ ನಟನೆನಿಸಿಕೊಂಡ ಈತ ಇಂದು ಜನಪ್ರಿಯ. ಗಣನೀಯ ಪ್ರಮಾಣದಲ್ಲಿ ಅಭಿಮಾನಿ ವೃಂದವನ್ನು ಹೊಂದಿದ ವ್ಯಕ್ತಿ. ಈ ಅಭಿಮಾನಿ ವೃಂದ ಈತನನ್ನು ಕೇವಲ ವ್ಯಕ್ತಿಯನ್ನಾಗಿ ಉಳಿಸದೇ ಆ ರಾಜ್ಯದಲ್ಲಿ ಒಂದು ಶಕ್ತಿಯನ್ನಾಗಿ ಬೆಳೆಸಿದೆ. ಕೆಲವು ಕನ್ನಡ, ಹಿಂದಿ ಚಿತ್ರಗಳಲ್ಲೂ ನಟಿಸಿರುವ ಚಿರಂಜೀವಿ ಹೆಚ್ಚು ಕಡಿಮೆ ದೇಶದೆಲ್ಲೆಡೆ ಪರಿಚಿತ. ಕರ್ನಾಟಕವೂ ಸೇರಿದಂತೆ ಇತರ ರಾಜ್ಯಗಳಲ್ಲೂ ಈ ನಟನ ಅಭಿಮಾನಿಗಳಿಗೆ ಕೊರತೆಯಿಲ್ಲ. ಆಂಧ್ರಪ್ರದೇಶದಲ್ಲಿ ನೂರಾರು ಅಭಿಮಾನಿ ಸಂಘಗಳನ್ನು ಹೊಂದಿರುವ ಇವರು ತಮ್ಮೊಂದಿಗೆ ಅಭಿಮಾನಿಗಳನ್ನು ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ.

'ಚಿರಂಜೀವಿ' ಎಂಬ ಹೆಸರು ವಿಶಿಷ್ಟವಾದುದು. ಏಕೆಂದರೆ ನಮ್ಮ ಸುತ್ತಮುತ್ತಲಿನಲ್ಲಿ ಈ ಹೆಸರಿನವರು ಸಿಗುವುದು ವಿರಳ. ಅಂದ ಹಾಗೆ 'ಚಿರಂಜೀವಿ' ಎಂಬುದು ಚಿರಂಜೀವಿಯ ಸ್ವಂತ ಹೆಸರಲ್ಲ. ಅವರ ಹೆಸರು ಶಿವಶಂಕರ ವರಪ್ರಸಾದ್. ಚಿತ್ರನಟರಾದ ನಂತರ 'ಚಿರಂಜೀವಿ' ಆದರು.

ಚಿತ್ರರಂಗದಲ್ಲಿ ಯಾವುದೇ ಗಾಡ್‌ಫಾದರ್‌ಗಳ ನೆರವಿಲ್ಲದೇ ಸ್ವಶಕ್ತಿಯಿಂದ ಹಂತ ಹಂತವಾಗಿ ಮೇಲೇರಿ ಅಗ್ರಗಣ್ಯ ನಟನಾಗಿ ಬೆಳೆದ ಚಿರಂಜೀವಿಗೆ ಈಗ ಆಂಗ್ಲ ಭಾಷೆಯ ಚಿತ್ರವೊಂದರಲ್ಲಿ ನಟಿಸುವ ಅವಕಾಶ ಲಭಿಸುವುದರೊಂದಿಗೆ ತಮ್ಮ ಸಿನಿಮಾ ಬದುಕಿನಲ್ಲಿ ಮತ್ತೊಂದು ಮೈಲಿಗಲ್ಲಿಗೆ ಅಡಿಪಾಯ ಹಾಕಿದಂತಾಗಿದೆ.

ಚಿತ್ರರಂಗದಲ್ಲಿ ಗಾಡ್‌ಫಾದರ್‌ಗಳ ನೆರವಿಲ್ಲದೇ ನಟನೊಬ್ಬನ ಬೆಳವಣಿಗೆ ಕಷ್ಟಸಾಧ್ಯ ಎಂಬುದನ್ನು ಅಪವಾದವಾಗಿಸಿ ಬೆಳೆದ ಚಿರಂಜೀವಿಗೆ ಚಿಕ್ಕಂದಿನಿಂದಲೂ ಚಿತ್ರನಟನಾಗಬೇಕೆಂಬ ಬಯಕೆ. ಬಹಳಷ್ಟು ಚಿತ್ರನಟರು ಬೇರೆಯೇನೋ ಆಗಲು ಬಯಸಿ ನಟನಾದೆ ಎಂದು ಹೇಳುತ್ತಿರುತ್ತಾರೆ. ಆದರೆ ಚಿರಂಜೀವಿ ನಟನಾಗಲು ಬಯಸಿ ಜನಪ್ರಿಯ ನಟನಾಗಿದ್ದು ವಿಶೇಷ.

ಚಿರಂಜೀವಿಯ ಚಿತ್ರಜೀವನಕ್ಕೀಗ 21 ವರ್ಷ. 'ಪ್ರಾಣಂ ಖರೀದು' ಅವರ ಮೊದಲ ಚಿತ್ರ, 1978ರಲ್ಲಿ ಬಿಡುಗಡೆಯಾಗಿತ್ತು. ಈ ಚಿತ್ರದಲ್ಲಿ ಪುಟ್ಟ ಪಾತ್ರವನ್ನು ನಿರ್ವಹಿಸಿದ್ದ ಅವರು ಕ್ರಮೇಣ ಖಳನಟ, ನಾಯಕನಟನಾಗಿ ಬಡ್ತಿ ಪಡೆದು ಜನಪ್ರಿಯ ನಟನಾಗಿ ಬೆಳೆದದ್ದು ಇತಿಹಾಸ. ಶಾಲಾ ಕಾಲೇಜು ದಿನಗಳಿಂದಲೇ ನಟನಾಗಬೇಕೆಂಬ ಆಕಾಂಕ್ಷೆ ಇಟ್ಟುಕೊಂಡಿದ್ದ ಅವರು ತಮ್ಮ ವಿದ್ಯಾಭ್ಯಾಸ ಮುಗಿಯುವವರೆಗೂ ತಮ್ಮ ತಂದೆ ತಾಯಿಯೆದುರು ತಮ್ಮ ಆಕಾಂಕ್ಷೆಯನ್ನು ಬಿಚ್ಚಿಟ್ಟಿದ್ದಿಲ್ಲ. ಬಿ.ಕಾಂ. ಡಿಗ್ರಿ ಮುಗಿಸಿದ ನಂತರವೂ ತಮ್ಮನ್ನು Cost Accountant ಆಗಿ ಕಾಣಬೇಕೆಂಬ ತಂದೆಯವರ ಇಚ್ಛೆಯ ಮೇರೆಗೆ ICWA ಕಲಿಯಲು ಯತ್ನಿಸಿದ್ದರು. ನಂತರ ತಮ್ಮ ಗುರಿಯನ್ನು ತಂದೆಯ ಮುಂದಿಟ್ಟು ನಟನೆಯಲ್ಲಿ ಡಿಪ್ಲೋಮಾ ಪಡೆಯಲು ಮುಂದಾದರು. DFA ಕಲಿಯುತ್ತಿದ್ದಾಗಲೇ ಚಿತ್ರದಲ್ಲಿ ನಟಿಸುವ ಅವಕಾಶ ಲಭಿಸಿತು. ಇದು ಚಿರಂಜೀವಿ ನಟನಾದ ಕಥೆ.

ಹೀಗೆ ಅನತಿಕಾಲದಲ್ಲಿ ಶಿವಶಂಕರ್ ವರಪ್ರಸಾದ್, ಚಿರಂಜೀವಿ ಆದದ್ದು, ಅಭಿಮಾನಿಗಳ ಮೆಗಾಸ್ಟಾರ್ ಆಗಿ ಬೆಳೆದದ್ದು, ಈಗ ಹಾಲಿವುಡ್ ಪ್ರವೇಶ, ಇವೆಲ್ಲವನ್ನೂ "ಪ್ರತಿಭೆ, ಅವಕಾಶ ಅದೃಷ್ಟಗಳ ಸಮ್ಮಿಲನವೇ ಚಿರಂಜೀವಿ" ಎಂದು ವಿಶ್ಲೇಷಿಸಬಹುದು.

**ಧನ್ಯಜೀವಿ ಆಗುವತ್ತ ಚಿರಂಜೀವಿ :** ಚಿರಂಜೀವಿ ತನ್ನ ಇಂದಿನ ಉನ್ನತ ಸ್ಥಿತಿಗೆ ಕಾರಣರಾದ ಜನತೆಗೆ ತನ್ನಿಂದ ಏನಾದರೂ ಸಹಾಯವಾಗಬೇಕೆಂಬ ಉದ್ದೇಶದಿಂದ 'ಚಿರಂಜೀವಿ ಚಾರಿಟಬಲ್ ಟ್ರಸ್ಟ್' ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದ್ದಾರೆ. ಈ ಟ್ರಸ್ಟ್ ಮೂಲಕ ಆರ್ಥಿಕವಾಗಿ ದುರ್ಬಲರಾದ ರೋಗಿಗಳಿಗೆ ರಕ್ತ, ನೇತ್ರದಾನ, ಅಂಗವಿಕಲರಿಗೆ ಅವಶ್ಯವಾದ ಹಲವು ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

ಈವರೆಗೆ ಟ್ರಸ್ಟ್‌ನ್ನು ಸಂಪೂರ್ಣವಾಗಿ ತಾವೇ ನಡೆಸುತ್ತಿರುವ ಚಿರಂಜೀವಿ ದಾನಿಗಳಿಂದ ಹಣಕಾಸಿನ ಸಹಾಯ ಪಡೆಯುತ್ತಿಲ್ಲ.

ಕಳೆದ ವರ್ಷ ತಮ್ಮ ಹುಟ್ಟುಹಬ್ಬದಂದು ಮೊದಲು ತಾವೇ ರಕ್ತದಾನ ಮಾಡುವುದರ ಮೂಲಕ ತಮ್ಮ ಅಭಿಮಾನಿಗಳಿಗೆ, ಜನತೆಗೆ ಸ್ಫೂರ್ತಿಯಾದರು ಚಿರಂಜೀವಿ. ಈ ಸ್ಫೂರ್ತಿಯಿಂದ ಕಳೆದ ಒಂದು ವರ್ಷದಲ್ಲಿ ಸಾವಿರಾರು ಚಿರಂಜೀವಿ ಅಭಿಮಾನಿಗಳು ಟ್ರಸ್ಟ್ ಮೂಲಕ ರಕ್ತದಾನ ಮಾಡಿದ್ದಾರೆ. ಸುಮಾರು 1 ಲಕ್ಷ 25 ಸಾವಿರದಷ್ಟು ಜನ ತಮ್ಮ ನೇತ್ರದಾನಕ್ಕೆ ಅಂಗೀಕರಿಸಿದ್ದಾರೆ.

ಮೊನ್ನೆ ತಮ್ಮ ಹುಟ್ಟುಹಬ್ಬದಂದು ಸ್ವತಃ ಚಿರಂಜೀವಿಯವರೇ ಇವೆಲ್ಲಾ ವಿವರಣೆ ನೀಡುತ್ತಿದ್ದರು. ಟ್ರಸ್ಟ್ ಆರಂಭವಾದ ಒಂದು ವರ್ಷದಲ್ಲಿ 36 ಜನರ 72 ಕಣ್ಣುಗಳು ಟ್ರಸ್ಟ್‌ಗೆ ದೊರೆತಿದ್ದು, ಈ ಮೂಲಕ 76 ಜನ ಅಂಧರು ಪ್ರಪಂಚ ಕಾಣಲು ಸಾಧ್ಯವಾಗಿದೆ ಎಂದು ಹೆಮ್ಮೆಯಿಂದ ಹೇಳಿದರು. ಮುಂದಿನ ಒಂದು ವರ್ಷದಲ್ಲಿ 5 ಲಕ್ಷ ಜನರು ನೇತ್ರದಾನಕ್ಕೆ ಅಂಗೀಕಾರ ಪತ್ರಗಳನ್ನು ನೀಡುವಂತೆ ಪ್ರೇರೇಪಿಸುವುದು ನಮ್ಮ ಧ್ಯೇಯವೆಂದು ಹೇಳಿದರು.

ಟ್ರಸ್ಟ್‌ಗಾಗಿ ಹೈದರಾಬಾದಿನ ಜೂಬ್ಲಿಹಿಲ್ಸ್‌ನಲ್ಲಿ ಸರ್ಕಾರ ನಿವೇಶನ ನೀಡಿದೆ. ಒಟ್ಟಾರೆ ಚಿರಂಜೀವಿ ಭಾರಿ ಪ್ರಮಾಣದಲ್ಲಿ ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಶ್ಲಾಘನೀಯ.

**ಚಿರಂಜೀವಿ ಮತ್ತು ರಾಜಕೀಯ :** ಚಿರಂಜೀವಿ ರಾಜಕೀಯ ಪ್ರವೇಶಿಸುವರೆಂಬ ಸುದ್ದಿಗೆ ಆಗಾಗ್ಗೆ ರೆಕ್ಕೆ ಪುಕ್ಕ ಹುಟ್ಟಿಕೊಳ್ಳುತ್ತಿವೆ. ಆದರೆ ಅವರ ಮನದಾಳ ಇನ್ನೂ ಹೊರಬಿದ್ದಿಲ್ಲ. ಅಭಿಮಾನಿಗಳನ್ನು ಸಂಘಟಿಸಿ ಜನಪರ ಕಾರ್ಯಗಳನ್ನು ಹಮ್ಮಿಕೊಳ್ಳುತ್ತಿರುವುದನ್ನು



ಗಮನಿಸಿದರೆ ಮುಂದೊಂದು ದಿನ ರಾಜಕೀಯ [illegible] ಎನಿಸದಿರದು.

ಈಗಾಗಲೇ ಅವರಿಗಿರುವ ಶಕ್ತಿ ಸಾಮರ್ಥ್ಯಗಳನ್ನು ಗಮನಿಸಿರುವ ಹಲವು ರಾಜಕೀಯ ಪಕ್ಷಗಳು ಅವರನ್ನು ತಮ್ಮತ್ತ ಸೆಳೆಯುವ ಯತ್ನ ಆರಂಭಿಸಿದ್ದು, ಈ ವಿಷಯದಲ್ಲಿ ಅವುಗಳಿನ್ನೂ ಸಫಲವಾಗಿಲ್ಲ.

ತೆಲುಗು ಚಿತ್ರರಂಗದ ಬಹುತೇಕ ಜನ ಒಂದಿಲ್ಲ ಒಂದು ರಾಜಕೀಯ ಪಕ್ಷದೊಂದಿಗೆ ತಮ್ಮನ್ನು ಗುರುತಿಸಿಕೊಂಡಿದ್ದು, ಬಹುತೇಕ ಪ್ರಮುಖರು ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಚಂದ್ರಬಾಬು ನಾಯ್ಡು ಅವರ ತೆಲುಗುದೇಶಂ ಪಕ್ಷದೊಂದಿಗೆ ಇದ್ದಾರೆ.

ಚಿರಂಜೀವಿಯವರ ಮಾತು ಕೃತಿಗಳನ್ನು ಗಮನಿಸಿದರೆ ಸದ್ಯ ಅವರು ನಾಯ್ಡು ತೆಲುಗುದೇಶಂ ಪರ ಇದ್ದಂತೆ ಕಾಣುತ್ತಿದೆ. ಭವಿಷ್ಯವನ್ನು ಬಲ್ಲವರಾರು ಎಂದುಹೇಳುವುದರ ಮೂಲಕ ಅವರು ತಮ್ಮ ರಾಜಕೀಯ ಪ್ರವೇಶವನ್ನು ಅಲ್ಲಗಳೆದಿಲ್ಲ.

**ಹಾಲಿವುಡ್‌ನತ್ತ ಚಿರಂಜೀವಿ :** ತೆಲುಗು ಚಿತ್ರನಟ ಚಿರಂಜೀವಿ ಹಾಲಿವುಡ್ ಚಿತ್ರವೊಂದರಲ್ಲಿ ನಟಿಸುವ ಮೂಲಕ ಭಾರಿ ಸುದ್ದಿ ಮಾಡಿದ್ದಾರೆ.

ದಕ್ಷಿಣ ಭಾರತದಲ್ಲಿ ರಜನಿಕಾಂತ್ ನಂತರ ಇಂತಹುದೊಂದು ಅವಕಾಶ ಚಿರಂಜೀವಿಯವರಿಗೆ ಲಭಿಸಿದೆ. ರಜನಿಕಾಂತ್ ಈ ಹಿಂದೆ Blood stone ಎಂಬ ಆಂಗ್ಲ ಚಿತ್ರದಲ್ಲಿ ನಟಿಸಿದ್ದರು. ಈಗ ಚಿರಂಜೀವಿ ಸರದಿ.

ಚಿರಂಜೀವಿ ನಟಿಸುತ್ತಿರುವ ಹಾಲಿವುಡ್ ಚಿತ್ರದ ಹೆಸರು The return of the Thief Bagdad. ಚಿತ್ರವು ತೆಲುಗು ಮತ್ತು ಆಂಗ್ಲಭಾಷೆಗಳಲ್ಲಿ ಏಕಕಾಲದಲ್ಲಿ ಚಿತ್ರಿತಗೊಳ್ಳುತ್ತಿದ್ದು ನಂತರ ಇತರ ಭಾಷೆಗಳಲ್ಲಿ ಡಬ್ ಮಾಡಲಾಗುತ್ತಿದೆ. ಅಮೆರಿಕಾದಲ್ಲಿ ನೆಲೆ ಕಂಡಿರುವ ಭಾರತೀಯರು - ಸುಂದರ್‌ಸ್ವಾಮಿ, ಗಣೇಶ್ ಮಹದೇವನ್, ಕೆ.ರಮೇಶ್ ಕೃಷ್ಣಮೂರ್ತಿ ಈ ಚಿತ್ರದ ನಿರ್ಮಾಪಕರು. ಚಿತ್ರದ ಬಜೆಟ್ ಸುಮಾರು 10 ಮಿಲಿಯನ್ ಡಾಲರ್ (43 ಕೋಟಿ)ಗಳೆಂದು ಅಂದಾಜಿಸಲಾಗಿದೆ.

ಹಾಲಿವುಡ್‌ನಲ್ಲಿ ಹಲವಾರು ಸಾಕ್ಷ್ಯಚಿತ್ರಗಳನ್ನು ನಿರ್ದೇಶಿಸಿದ ಅನುಭವವಿರುವ ಡೂಷನ್‌ಗೆರ್ಸಿ ಚಿತ್ರದ ನಿರ್ದೇಶಕರು. ತೆಲುಗು ಅವತರಣಿಕೆಗೆ ತಮಿಳಿನ ಸುರೇಶ್‌ಕೃಷ್ಣ ನಿರ್ದೇಶನದ ಹೊಣೆ ಹೊತ್ತಿದ್ದಾರೆ. ಎ.ಆರ್.ರೆಹಮಾನ್ ಚಿತ್ರಕ್ಕೆ ಸಂಗೀತವನ್ನೊದಗಿಸುತ್ತಿದ್ದಾರೆ.

ಚಿತ್ರಕ್ಕೆ ಬಹುತೇಕ ಹಾಲಿವುಡ್ ನಟರು, ತಂತ್ರಜ್ಞರ ದುಡಿಮೆಯಿದ್ದು, ಬೆರಳೆಣಿಕೆಯಷ್ಟು ಜನರು ಭಾರತೀಯರಿರುತ್ತಾರೆ. pepsi Fame ಸಾಷಾ, ಜೇಮ್ಸ್‌ಬಾಂಡ್ ಖ್ಯಾತಿ ಷಿಂಟಾ, ಐಶ್ವರ್ಯರಾಯ್, ಸಿನ್‌ಕಾನರಿ ಪುತ್ರ ಜೆಸಿನ್ ಕಾನರಿ, ಪ್ರಮುಖ ಹಾಲಿವುಡ್ ನಟ ಯಮಿ ಮುಂತಾದವರ ತಾರಾಗಣ ಹೊಂದಿರುವ ಈ ಚಿತ್ರದ ಚಿತ್ರೀಕರಣ ಸಂಪೂರ್ಣವಾಗಿ ಭಾರತದಲ್ಲೇ - ಅಜಂತಾ, ಎಲ್ಲೋರ, ಜೈಪುರ, ಜೋಧ್‌ಪುರ್, ಹೈದರಾಬಾದ್‌ನ ರಾಮೋಜಿ ಫಿಲ್ಮ್ ಸಿಟಿಯಲ್ಲಿ ನಡೆಯಲಿದೆ.

ಚಿತ್ರವು ಇಂಗ್ಲಿಷಿನಲ್ಲಿ ಸುಮಾರು 90 ನಿಮಿಷ, ತೆಲುಗಿನಲ್ಲಿ ಎರಡೂವರೆ ತಾಸಿನಷ್ಟು ಕಾಲ ಸಾಗುತ್ತದೆ. ಡಿಸೆಂಬರ್‌ನೊಳಗೆ ಚಿತ್ರವನ್ನು ಮುಗಿಸಿ, ಬರುವ ಮಾರ್ಚ್ ತಿಂಗಳಲ್ಲಿ ನಡೆಯುವ ಕೆನ್ಸ್ ಫಿಲ್ಮ್ ಫೆಸ್ಟಿವಲ್ ನಲ್ಲಿ ಚಿತ್ರವನ್ನು ಪ್ರದರ್ಶಿಸಬೇಕೆಂಬ ಯೋಜನೆ ನಿರ್ಮಾಪಕರದ್ದು. ತೆಲುಗು ಚಿತ್ರವನ್ನು ಮೇ ತಿಂಗಳಲ್ಲಿ ಬಿಡುಗಡೆ ಮಾಡಲಿದ್ದಾರೆ.

ನಿರ್ಮಾಪಕರು ಈ ಹಾಲಿವುಡ್ ಚಿತ್ರಕ್ಕೆ ಚಿರಂಜೀವಿಯನ್ನೇ ಆಯ್ಕೆ ಮಾಡಿದ್ದರ ಉದ್ದೇಶ ಅವರ ಮಾತಿನಲ್ಲಿ:

ಹಾಲಿವುಡ್‌ನಲ್ಲಿ Bagdad Thief ಕಥೆ ಜನಪ್ರಿಯವಾದದ್ದು. ಈ ಕಥೆಯನ್ನು ಆಧರಿಸಿ 1924ರಲ್ಲಿ ಒಂದು ಚಿತ್ರ ಮತ್ತು 1940ರಲ್ಲಿ Bagdad Thief ಎಂಬ ಹೆಸರಿನಲ್ಲಿ ಮತ್ತೊಂದು ಚಿತ್ರ ಬಿಡುಗಡೆಯಾಗಿದ್ದವು. ಈ ಎರಡನೇ ಚಿತ್ರದಲ್ಲಿ ಭಾರತೀಯ ನಟ 'ಸಾಬೂ' ಎಂಬುವವರು ನಾಯಕರಾಗಿ ನಟಿಸಿದ್ದರು. ಆಗ ಆ ಚಿತ್ರ ಯಶಸ್ವಿಯಾಗಿತ್ತು. ಈಗ "The Return of the Thief Bagdad" ಕಥೆಯನ್ನು 'ಸಾಬೂ' ಅವರ ಮಗಳು ಜಾಸ್ಮಿನ್ ಸಾಬೂ ಬರೆದಿದ್ದಾರೆ.

'ಈ ಕಥೆಯನ್ನು ಚಿತ್ರವನ್ನಾಗಿಸುವ ಉದ್ದೇಶವಿರುವ ನಮಗೆ ಈ ಚಿತ್ರದಲ್ಲೂ ಭಾರತೀಯ ನಟರೊಬ್ಬರನ್ನು ನಾಯಕ ನಟನನ್ನಾಗಿ ತೆಗೆದುಕೊಳ್ಳಬೇಕೆಂಬ ಆಲೋಚನೆ ಮೂಡಿತು. ಆಗ ಚಿರಂಜೀವಿ ನಮ್ಮ ಗಮನ ಸೆಳೆದರು. ಈ ಚಿತ್ರಕ್ಕೆ ಚಿರಂಜೀವಿಯವರನ್ನು ನಾಯಕರನ್ನಾಗಿ ಆಯ್ಕೆ ಮಾಡಿದೆವು' ಎಂಬುದು ನಿರ್ಮಾಪಕರ ವಿವರಣೆ.

ಹಂತ ಹಂತವಾಗಿ ಬೆಳೆದ ನಟ ಚಿರಂಜೀವಿ ಈ ಚಿತ್ರದ ಮೂಲಕ ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡುತ್ತಿರುವುದು ಸಂತಸ ತರುವ ಸಂಗತಿ.

■ ಕೆ.ಎಂ. ಚಂದ್ರಮೌಳಿ

